|| ಶ್ರೀ ||

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯಾ ೩೩



ಶ್ರೀಮದ್ದ್ವೈಪಾಯನಮುನಿಪ್ರಣೀತಂ

# ಶ್ರೀಮತ್ಸ್ಯಮಹಾಪುರಾಣಂ

(ಕನ್ನಡ ಅನುವಾದಸಹಿತ)

ಸಂಪುಟ ೧

ಅಧ್ಯಾಯ ೧–೫೦

ಅನುವಾದಕ :

ವಾಜಪೇಯಂ ಶ್ರೀರಂಗಾಚಾರ್

ಸಾಹಿತ್ಯವಿದ್ವಾನ್, ಕನ್ನಡ ಪಂಡಿತ

ಮೈಸೂರು

ಶ್ರೀನಿವಾಸ್ ಎಲೆಕ್ಟ್ರಿಕ್ ಪ್ರೆಸ್

೧೯೫೬

|| ಶ್ರೀ ||

# ಮುನ್ನುಡಿ

ವೇದದ ಮಾತು ಅರಸನ ಅಪ್ಪಣೆಯಂತೆ. ಹೇಳಿದ ಹಾಗೆ ಕೇಳುವುದು ಹೊರತು ಏಕೆ, ಎಲ್ಲಿ, ಎಂದು ಮುಂತಾದ ಪ್ರಶ್ನೆಗಳಿಗೆ ಅಲ್ಲಿ ಎಡೆಯಿಲ್ಲ. ಪುರಾಣವಾದರೋ ಹಾಗಲ್ಲ. ವೇದವು ಹೇಳುವ ಧರ್ಮರಹಸ್ಯಗಳನ್ನೇ ಅದೂ ತಿಳಿಸುತ್ತದೆ ನಿಜ. ಆದರೆ ಆಪ್ತಮಿತ್ರನಂತೆ ಸಾಧಕಬಾಧಕಗಳನ್ನು ಚರ್ಚಿಸಿ, ಕೆಟ್ಟವರ ಮತ್ತು ಒಳ್ಳೆಯವರ ನಿದರ್ಶನಗಳನ್ನು ಮುಂದಿಟ್ಟು, ಮನಸ್ಸನ್ನು ಒಲಿಸಿಕೊಂಡು ಕರ್ತವ್ಯ ಕಾರ್ಯದಲ್ಲಿ ಮಾನವನನ್ನು ಪ್ರೇರಿಸುತ್ತದೆ. ಮನುಷ್ಯನನ್ನು ಉನ್ನತಿಗೆ ಒಯ್ಯುವುದೇ ಒಟ್ಟಿನಲ್ಲಿ ಇವೆರಡರ ಗುರಿ. ಆದರೆ ಉಪದೇಶದ ಕ್ರಮದಲ್ಲಿ ಮಾತ್ರ ಭೇದವಿದೆ.

"ಇಂದ್ರಿಯಗಳಿಗೆ ದಾಸನಾಗಬಾರದು; ಅವುಗಳನ್ನು ಗೆಲ್ಲುವುದೇ ನಿಜವಾದ ಸುಖಕ್ಕೆ ಮಾರ್ಗ." "ಪಿತೃಕಾರ್ಯವನ್ನೂ ದೇವಕಾರ್ಯವನ್ನೂ ತಪ್ಪದೆ ನಡೆಸಬೇಕು." "ಎಷ್ಟು ತಂತ್ರವನ್ನು ಹೂಡಿದರೂ ಮೃತ್ಯುವಿನ ಹಿಡಿತದಿಂದ ಪಾರಾಗುವುದು ಅಸಾಧ್ಯ." ಮುಂತಾದ ನೀತಿಗಳು ವೇದದಲ್ಲಿ ಉಕ್ತವಾಗಿರುವುವಷ್ಟೆ! ಇವು ಮನಸ್ಸಿನಲ್ಲಿ ಬೇರುಬಿಟ್ಟು ನಿಂತು ಕಾರ್ಯರೂಪಕ್ಕೆ ತಿರುಗುವ ರೀತಿಯಲ್ಲಿ ಪುರಾಣಕಾರರು ಇವುಗಳನ್ನು ಬೋಧಿಸುತ್ತಾರೆ. ಮುಪ್ಪು ಬಂದರೂ ಇಂದ್ರಿಯಸುಖದಲ್ಲಿ ಆಸೆ ತೀರದೆ, ತನ್ನ ಮಗನಿಂದ ಯೌವನವನ್ನು ಬೇಡಿ ತೆಗೆದುಕೊಂಡು, ಬಗೆಬಗೆಯ ಸುಖಗಳನ್ನು ಅನುಭವಿಸಿ, ಹಾಗೂ ತೃಪ್ತಿ ಹುಟ್ಟದೆ ಹೋಗಲು ಯಯಾತಿ ಮಹಾರಾಜನು "ಕಾಮವನ್ನು ಅಡಗಿಸುವ ಔಷಧವೆಂದರೆ ಶಾಂತಿ; ಸುಖಾನುಭವವಲ್ಲ" ಎಂಬ ತತ್ವವನ್ನು ತಾನೇ ಅರಿತನು. ಹೊಟ್ಟೆಗಿಲ್ಲದೆ ಕ್ಷಾಮಪೀಡಿತನಾಗಿ ಬಳಲಿದ್ದ ಪಿತೃವರ್ತಿಯೆಂಬ ಬ್ರಾಹ್ಮಣಕುಮಾರನು ತನಗೆ ಸಿಕ್ಕಿದ ಯಾವುದೋ ದುರಾಹಾರವನ್ನೇ ಶ್ರಾದ್ಧರೂಪವಾಗಿ ಪಿತೃಗಳಿಗೆ ಅರ್ಪಿಸಿ ಆ ಶೇಷವನ್ನು ಭಕ್ಷಿಸಿದ ಕಾರಣ, ಮರುಹುಟ್ಟಿನಲ್ಲಿ ಅವನು ಪಾಂಚಾಲದೇಶದ ಅರಸನಾಗಿ ಜನಿಸಿ ಸಕಲ ಶಾಸ್ತ್ರವಿಶಾರದನಾದನು. ಹಿರಣ್ಯಕಶಿಪು, ಅಂಧಕ, ತಾರಕ ಮುಂತಾದ ಅಸುರರು ಮೃತ್ಯುವಿನ ದವಡೆಯಿಂದ ಪಾರಾಗಬೇಕೆಂದು ಎಷ್ಟೆಷ್ಟೋ ವರಗಳನ್ನು ಪಡೆದುಕೊಂಡರು. ಆದರೂ ಅವರ ಗತಿಯೇನಾಯಿತು? ಒಂದಲ್ಲ ಒಂದುದಿನ ಅವರೆಲ್ಲರ ಬಾಳೂ ಮುಗಿದೇ ಮುಗಿಯಿತು. ಹೀಗೆ ಭಿನ್ನಭಿನ್ನ ಸ್ವಭಾವದ ವ್ಯಕ್ತಿಗಳ ಜೀವನದ

ಹೋರಾಟದ ಚಿತ್ರವನ್ನು ಪ್ರದರ್ಶಿಸಿ, ತನ್ಮೂಲಕ ಜನರಿಗೆ ನೀತಿಯನ್ನು ಬೋಧಿಸುವುದೇ ಪುರಾಣಗಳ ವೈಶಿಷ್ಟ್ಯ. ಕೆಲವು ಕಡೆಗಳಲ್ಲಿ ನಂಬಿಕೆಗೆ ಸುಲಭವಲ್ಲದ ವಿಷಯಗಳು ವರ್ಣಿತವಾಗಿರಬಹುದು. ಅಂತಹ ಸನ್ನಿವೇಶಗಳಲ್ಲಿ ಪುರಾಣಕಾರರಿಗೆ ವಾಚ್ಯಾರ್ಥದಲ್ಲಿ ತಾತ್ಪರ್ಯವಿಲ್ಲವೆಂದೂ, ಅದರ ಹಿಂದೆ ಅಡಗಿರುವ ತತ್ವದಲ್ಲೋ ಅಥವಾ ನೀತಿಯಲ್ಲೋ ಅವರ ಗಮನವಿರುವುದೆಂದೂ ತಿಳಿಯಬೇಕು.

ಪುರಾಣಗಳನ್ನು ಭಾರತೀಯಸಂಸ್ಕೃತಿಯ ವಿಶ್ವಕೋಶವೆನ್ನಬಹುದು. ಅವುಗಳಲ್ಲಿ ಪ್ರತಿಪಾದ್ಯವಾಗದ ವಿಷಯವಿಲ್ಲ. ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗ, ವ್ರತ, ದಾನ, ದಂಡನೀತಿ, ವಾಸ್ತುಶಿಲ್ಪ, ಧರ್ಮಶಾಸ್ತ್ರ, ವೈದ್ಯ, ಜ್ಯೋತಿಷ, ಇತಿಹಾಸ ಮುಂತಾದ ಇಹಪರಜೀವನಗಳಿಗೆ ಸಾಧಕವಾದ ಎಷ್ಟೋ ಸಂಗತಿಗಳು ಅವುಗಳಲ್ಲಿ ಅಡಕವಾಗಿವೆ. ಒಂದು ಪುರಾಣದಲ್ಲಿ ಸಂಗ್ರಹವಾಗಿರುವ ವಿಚಾರವು ಮತ್ತೊಂದರಲ್ಲಿ ವಿಸ್ತೃತವಾಗಿರುವುದು. ಒಂದುಕಡೆ ಬಿಟ್ಟುಹೋದ ವಿಷಯಕ್ಕೆ ಇನ್ನೊಂದು ಕಡೆ ಸ್ಥಳ ಸಿಕ್ಕಿರುವುದು.

ಬ್ರಾಹ್ಮ, ಪಾದ್ಮ, ವೈಷ್ಣವ, ಶೈವ, ಭಾಗವತ, ನಾರದೀಯ, ಮಾರ್ಕಂಡೇಯ, ಆಗ್ನೇಯ, ಭವಿಷ್ಯ, ಬ್ರಹ್ಮವೈವರ್ತ, ಲೈಂಗ, ವಾರಾಹ, ಸ್ಕಾಂದ, ವಾಮನ, ಕೌರ್ಮ, ಮಾತ್ಸ್ಯ, ಗಾರುಡ, ಬ್ರಹ್ಮಾಂಡ ಎಂದು ಮಹಾಪುರಾಣಗಳು ಹದಿನೆಂಟಿವೆ. ಇವುಗಳ ಒಟ್ಟು ಪರಿಮಿತಿ ನಾಲ್ಕು ಲಕ್ಷ ಗಂಥ. (ಶ್ಲೋಕ) ಇವುಗಳಲ್ಲದೆ ನಾರಸಿಹ್ಮ, ಸೌರ, ಸಾಂಬ ಮುಂತಾದ ಕೆಲವು ಉಪಪುರಾಣಗಳೂ ಉಂಟು. ಇವು ಮೇಲೆ ಹೇಳಿದ ಮಹಾಪುರಾಣಗಳಲ್ಲಿಯೇ ಅಂತರ್ಗತವಾಗುವುವು. ಸೃಷ್ಟಿ, ಪ್ರತಿಸೃಷ್ಟಿ, ವಂಶ, ಮನ್ವಂತರ ವರ್ಣನ ಮತ್ತು ವಂಶಾನುಚರಿತಗಳೆಂಬ ಐದೂ ಪುರಾಣಗಳ ಸಾಮಾನ್ಯಲಕ್ಷಣ.

ಮತ್ಸ್ಯರೂಪವನ್ನೆತ್ತಿದ ಮಹಾವಿಷ್ಣುವು ವೈವಸ್ವತಮನುವಿಗೆ ಉಪದೇಶಿಸಿದ ಪುರಾಣಕ್ಕೆ ಮತ್ಸ್ಯಪುರಾಣವೆಂಬ ಹೆಸರು ಬಂದಿದೆ. ಇದರಲ್ಲಿ ೨೯೧ ಅಧ್ಯಾಯಗಳೂ ೧೪,೦೦೦ ಶ್ಲೋಕಗಳೂ ಇವೆ. ಉಳಿದ ಸಾಮಾನ್ಯವಿಷಯಗಳಲ್ಲದೆ ಶ್ರಾದ್ಧ ಮಾಹಾತ್ಮ್ಯ, ಯಯಾತಿಚರಿತ, ರಾಜನೀತಿ ಮತ್ತು ಷೋಡಶಮಹಾದಾನಗಳು ಬಹು ಹೃದಯಂಗಮವಾಗಿಯೂ ವಿಸ್ತಾರವಾಗಿಯೂ ಇದರಲ್ಲಿ ವರ್ಣಿತವಾಗಿವೆ.

ಮಹಾಸ್ವಾಮಿಯವರ ಅಪ್ಪಣೆಯಂತೆ ನಾನು ಈ "ಮಳಲ ಸೇವೆ" ಯನ್ನು ಸಲ್ಲಿಸಿದ್ದೇನೆ. ಕನ್ನಡದೇವಿಯ ಅಡಿದಾವರೆಯಲ್ಲಿ ಈ ಕಿರಿಯ ಹೂವನ್ನು ಅರ್ಪಿಸಿದ್ದೇನೆ. ಮತ್ಸ್ಯಪುರಾಣದ ಕನ್ನಡ ಅನುವಾದರೂಪವಾದ ಈ ಗ್ರಂಥವು ಆರೇಳು

ಸಂಪುಟಗಳಲ್ಲಿ ಪ್ರಕಾಶವಾಗುತ್ತದೆ. ಪ್ರತಿಯೊಂದು ಅಧ್ಯಾಯದ ಕೊನೆಯಲ್ಲಿಯೂ ಅದರ ಸಾರಾಂಶವು ಸೂಚಿತವಾಗಿದೆ.

ಆಳುವ ನಮ್ಮ ಮಹಾಪ್ರಭುಗಳಾದ ಶ್ರೀಮಜ್ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ., ರವರ ಔದಾರ್ಯವು ಅಳತೆಯಿಲ್ಲದುದು. ನಾಡಿನ ಎಲ್ಲ ಜನರಿಗಾಗಿ ಅವರು ವಾಗ್ದೇವಿಯ ಭಂಡಾರದ ಬಾಗಿಲನ್ನು ತೆಗೆದು ಬಿಟ್ಟಿದ್ದಾರೆ. ತಿಳಿವಿನ ಕೆರೆಯ ತೂಬನ್ನೆತ್ತಿ ಅರಿವಿನ ಹೊನಲನ್ನು ಹರಿಸಿದ್ದಾರೆ. ಸಂಸ್ಕೃತವನ್ನು ಬಲ್ಲ ಕೆಲವರಿಗೆ ಮಾತ್ರವೇ ಮೀಸಲಾಗಿದ್ದ ಜ್ಞಾನಾಮೃತದಲ್ಲಿ ಕನ್ನಡಿಗರೆಲ್ಲರಿಗೂ ಭಾಗವನ್ನು ಕೊಡಿಸಿದ್ದಾರೆ. ಅವರ ಕೃಪಾವೃಷ್ಟಿಯಿಂದ ಕನ್ನಡನುಡಿಬಳ್ಳಿಯು ಸೊಂಪಾಗಿ ಬೆಳೆದು, ಹೊಸಹೊಸ ಹೂವನ್ನು ಬಿಟ್ಟು ನಾಲ್ಕು ಕಡೆಗೂ ಪರಿಮಳವನ್ನು ಬೀರುತ್ತಿದೆ. ಈ ಮಹೋಪಕಾರಕ್ಕಾಗಿ ಕನ್ನಡನಾಡು ಅವರಿಗೆ ಚಿರಋಣಿಯಾಗಿದೆ. ಜಗದೀಶ್ವರನು ಅವರಿಗೆ ಸಕಲ ಸನ್ಮಂಗಳವನ್ನೂ ಕರುಣಿಸಲಿ.

ಆಷಾಢ ಬಹುಳ ಷಷ್ಠಿ,
ಮೈಸೂರು.

**ವಾಜಪೇಯಂ ಶ್ರೀರಂಗಾಚಾರ್,**
ಅನುವಾದಕ.

# ವಿಷಯ ಸೂಚಿಕೆ

## ವಿಷಯ ಸೂಚಿಕೆ

## ವಿಷಯ ಸೂಚಿಕೆ

## ವಿಷಯ ಸೂಚಿಕೆ

॥ ಶ್ರೀಃ ॥

ಓಂ ತತ್ಸದ್ಬ್ರಹ್ಮಣೇ ನಮಃ

# ಶ್ರೀಮದ್ದ್ವೈಪಾಯನಮುನಿಪ್ರಣೀತಂ

# ಶ್ರೀ ಮ ತ್ಸ್ಯ ಮ ಹಾ ಪು ರಾ ಣಂ

## ಅಥ ಪ್ರಥಮೋಽಧ್ಯಾಯಃ

ಪ್ರಚಂಡತಾಂಡವಾಟೋಪೇ ಪ್ರಕ್ಷಿಪ್ತಾ ಯೇನ ದಿಗ್ಗಜಾಃ ।
ಭವಂತು ವಿಘ್ನಭಂಗಾಯ ಭವಸ್ಯ ಚರಣಾಂಬುಜಾಃ ॥ ॥ ೧ ॥

ಪಾತಾಲಾದುತ್ಪತಿಷ್ಣೋರ್ಮಕರವಸತಯೋ ಯಸ್ಯ ಪುಚ್ಛಾಭಿಘಾತಾ ।
ದೂರ್ಧ್ವಂ ಬ್ರಹ್ಮಾಂಡಖಂಡವ್ಯತಿಕರವಿಹಿತವ್ಯತ್ಯಯೇನಾಪತಂತಿ ॥
ವಿಷ್ಣೋರ್ಮತ್ಸ್ಯಾವತಾರೇ ಸಕಲವಸುಮತೀಮಂಡಲಂ ವ್ಯಶ್ನುವಾನ ।
ಸ್ತಸ್ಯಾಸ್ಯೋದೀರಿತಾನಾಂ ಧ್ವನಿರಪಹರತಾದಶ್ರಿಯಂ ವಃ ಶ್ರುತೀನಾಮ್ ॥
ನಾರಾಯಣಂ ನಮಸ್ಕೃತ್ಯ ನರಂಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥ ೩ ॥

---

೧. ಪ್ರಚಂಡವಾದ ತಾಂಡವನರ್ತನದ ರಭಸದಲ್ಲಿ ದಿಗ್ಗಜಗಳನ್ನು ಎತ್ತಿ ಬಿಸಾಡಿದ ಪರಮೇಶ್ವರನ ಅಡಿದಾವರೆಗಳು ವಿಘ್ನಗಳನ್ನು ಪರಿಹರಿಸಲಿ.

೨. ಮತ್ಸ್ಯಾವತಾರವೆತ್ತಿದ ಮಹಾವಿಷ್ಣುವು ಪಾತಾಲದಿಂದ ಮೇಲಕ್ಕೆ ನೆಗೆಯುವಾಗ ಬಾಲದ ಬಡಿತದಿಂದ ಸಮುದ್ರಗಳು ಮೇಲಕ್ಕೆ ಚಿಮ್ಮಿ, ಬ್ರಹ್ಮಾಂಡದ ತುದಿಯ ಚಿಪ್ಪಿಗೆ ಬಡಿದು, ಅವರ ಅಡ್ಡಿಯಿಂದ ಕೆಳಕ್ಕೆ ಬೀಳುತ್ತಿರಲು, ಆತನ ಮುಖದಿಂದ ಹೊರಟು ಭೂಮಂಡಲವೆಲ್ಲವನ್ನೂ ತುಂಬಿದ ವೇದ ಧ್ವನಿಯು ನಿಮ್ಮ ಅಮಂಗಲವನ್ನು ಕಳೆಯಲಿ.

೩. ನಾರಾಯಣನನ್ನೂ, ಮನುಜರಲ್ಲಿ ಉತ್ತಮನಾದ ನರಮುನಿಯನ್ನೂ, ಸರಸ್ವತೀ ದೇವಿಯನ್ನೂ, ವ್ಯಾಸಮಹರ್ಷಿಯನ್ನೂ ನಮಿಸಿ ಬಳಿಕ ಮತ್ಸ್ಯಪುರಾಣ ವನ್ನು ಪಠಿಸಬೇಕು.

**ಅಜೋಽಪಿ ಯಃ ಕ್ರಿಯಾಯೋಗಾನ್ನಾರಾಯಣ ಇತಿ ಸ್ಮೃತಃ ।**
**ತ್ರಿಗುಣಾಯ ತ್ರಿವೇದಾಯ ನಮಸ್ತಸ್ಮೈ ಸ್ವಯಂಭುವೇ ॥ ೧ ॥**

**ಸೂತಮೇಕಾಗ್ರಮಾಸೀನಂ ನೈಮಿಷಾರಣ್ಯವಾಸಿನಃ ।**
**ಮುನಯೋ ದೀರ್ಘಸತ್ರಾಂತೇ ಪಪ್ರಚ್ಛುರ್ದೀರ್ಘಸಂಹಿತಾಮ್ ॥ ೨ ॥**

**ಪ್ರವೃತ್ತಾಸು ಪುರಾಣೇಷು ಧರ್ಮ್ಯಾಸು ಲಲಿತಾಸು ಚ ।**
**ಕಥಾಸು ಶೌನಕಾದ್ಯಾಸ್ತು ಅಭಿನಂದ್ಯ ಮುಹುರ್ಮುಹುಃ ॥ ೩ ॥**

**ಕಥಿತಾನಿ ಪುರಾಣಾನಿ ಯಾನ್ಯಸ್ಮಾಕಂ ತ್ವಯಾನಘ ।**
**ತಾನ್ಯೇವಾಮೃತಕಲ್ಪಾನಿ ಶ್ರೋತುಮಿಚ್ಛಾಮಹೇ ಪುನಃ ॥ ೪ ॥**

**ಕಥಂ ಸಸರ್ಜ ಭಗವಾನ್ ಲೋಕನಾಥಶ್ಚರಾಚರಮ್ ।**
**ಕಸ್ಮಾಚ್ಚ ಭಗವಾನ್ವಿಷ್ಣುರ್ಮತ್ಸ್ಯರೂಪತ್ವಮಾಶ್ರಿತಃ ॥ ೫ ॥**

**ಭೈರವತ್ವಂ ಭವಸ್ಯಾಪಿ ಪುರಾರಿತ್ವಂ ಚ ಕೇನ ಹಿ ।**
**ಕಸ್ಯ ಹೇತೋಃ ಕಪಾಲಿತ್ವಂ ಜಗಾಮ ವೃಷಭಧ್ವಜಃ ॥ ೬ ॥**

---

೧. ಕರ್ಮವಶವಾಗಿ ಬಂದ ಜನ್ಮವಿಲ್ಲದಿದ್ದರೂ ಸ್ವೇಚ್ಛೆಯಿಂದ ವಿಧವಿಧವಾದ ರೂಪಗಳನ್ನು ಧರಿಸಿ, ಸ್ಥಾವರಜಂಗಮಾತ್ಮಕವಾದ ಜಗತ್ತನ್ನು ನಿರ್ಮಿಸಿ, ಅದರ ಅಂತರಾತ್ಮನೂ ಧಾರಕನೂ ಆಗಿ ಯಾವನು ನಾರಾಯಣನೆನಿಸಿಕೊಂಡಿರುವನೋ ಅಂತಹ ಸತ್ವರಜಸ್ತಮಸ್ಸುಗಳೆಂಬ ಗುಣತ್ರಯಾತ್ಮಕನೂ, ಋಗ್ಯಜುಸ್ಸಾಮಗಳೆಂಬ ವೇದತ್ರಯರೂಪನೂ ಆದ ವಿಷ್ಣುವಿಗೆ ನಮಸ್ಕಾರ.

೨. ಬಹುಕಾಲ ನಡೆದ ಯಾಗವು ಸಮಾಪ್ತವಾದ ಬಳಿಕ ಏಕಾಗ್ರಚಿತ್ತನಾಗಿ ಕುಳಿತಿದ್ದ ಸೂತಪೌರಾಣಿಕನನ್ನು ನೈಮಿಶಾರಣ್ಯವಾಸಿಗಳಾದ ಮುನಿಗಳು ದೀರ್ಘವಾದ ವೃತ್ತಾಂತವನ್ನು ಪ್ರಶ್ನಿಸಿದರು.

೩-೬. ಮನೋಹರವೂ ಧರ್ಮಮಯವೂ ಆದ ಪುರಾಣಕಥೆಗಳು ನಡೆಯುತ್ತಿರಲು, ಶೌನಕಾದಿಗಳು ಸೂತಪೌರಾಣಿಕನನ್ನು ಅಡಿಗಡಿಗೆ ಶ್ಲಾಘಿಸಿ, “ಪವಿತ್ರನಾದ ಓ ಸೂತಾ, ನೀನು ಹೇಳಿದ ಅಮೃತಸಮಾನವಾದ ಪುರಾಣಗಳನ್ನೇ ಮತ್ತೆ ಕೇಳಲು ಬಯಸುತ್ತೇವೆ. ಜಗದೀಶ್ವರನು ಚರಾಚರಗಳನ್ನು ಹೇಗೆ ಸೃಷ್ಟಿಸಿದನು? ಪೂಜ್ಯನಾದ ವಿಷ್ಣುವು ಮತ್ಸ್ಯರೂಪವನ್ನೇಕೆ ತಳೆದನು? ಪರಮೇಶ್ವರನು ಭೈರ

**ಸರ್ವಮೇತತ್ಸಮಾಚಕ್ಷ್ವ ಸೂತ ವಿಸ್ತರಶಃ ಕ್ರಮಾತ್ ।**
**ತ್ವದ್ವಾಕ್ಯೇನಾಮೃತಸ್ಯೇವ ನ ತೃಪ್ತಿರಿಹ ಜಾಯತೇ ॥ ೭ ॥**

**॥ ಸೂತ ಉವಾಚ ॥**

**ಪುಣ್ಯಂ ಪವಿತ್ರಮಾಯುಷ್ಯಮಿದಾನೀಂ ಶೃಣುತ ದ್ವಿಜಾಃ ।**
**ಮಾತ್ಸ್ಯಂ ಪುರಾಣಮಖಿಲಂ ಯಜ್ಜಗಾದ ಗದಾಧರಃ ॥ ೮ ॥**

**ಪುರಾ ರಾಜಾ ಮನುರ್ನಾಮ ಚೀರ್ಣವಾನ್ವಿಪುಲಂ ತಪಃ ।**
**ಪುತ್ರೇ ರಾಜ್ಯಂ ಸಮಾರೋಪ್ಯ ಕ್ಷಮಾವಾನ್ರವಿನಂದನಃ ॥ ೯ ॥**

**ಮಲಯಸ್ಯೈಕದೇಶೇ ತು ಸರ್ವಾತ್ಮಗುಣಸಂಯುತಃ ।**
**ಸಮದುಃಖಸುಖೋ ವೀರಃ ಪ್ರಾಪ್ತವಾನ್ ಯೋಗಮುತ್ತಮಂ ॥೧೦॥**

**ಬಭೂವ ವರದಶ್ಚಾಸ್ಯ ವರ್ಷಾಯುತಶತೇ ಗತೇ ।**
**ವರಂ ವೃಣೀಷ್ವ ಪ್ರೋವಾಚ ಪ್ರೀತಃ ಸ ಕಮಲಾಸನಃ ॥೧೧॥**

---

ವನೂ ಪುರಾರಿಯೂ ಎನಿಸುದುದು ಏಕೆ? ವೃಷಭಧ್ವಜನಾದ ಅವನಿಗೆ ಕಪಾಲಿತ್ವವು ಬರಲು ಕಾರಣವೇನು? ಇವೆಲ್ಲವನ್ನೂ ಕ್ರಮವಾಗಿ ವಿಸ್ತರಿಸಿ ಹೇಳು. ಅಮೃತವನ್ನು ಸವಿದಂತೆ ನಿನ್ನ ವಾಕ್ಯವನ್ನೆಷ್ಟು ಕೇಳಿದರೂ ತೃಪ್ತಿಹುಟ್ಟುವುದಿಲ್ಲ" ಎಂದರು.

೮. ಸೂತಪೌರಾಣಿಕನು ಹೇಳಿದನು:—ಎಲೈ ಬ್ರಾಹ್ಮಣರೇ, ಮಹಾವಿಷ್ಣುವು ಹೇಳಿದ ಪುಣ್ಯಪ್ರದವೂ, ಪರಿಶುದ್ಧವೂ, ಆಯುರ್ವರ್ಧನವೂ ಆದ ಮತ್ಸ್ಯಪುರಾಣವೆಲ್ಲವನ್ನೂ ಕೇಳಿರಿ.

೯. ಹಿಂದೆ ಕ್ಷಮಾಯುಕ್ತನೂ, ಸೂರ್ಯಪುತ್ರನೂ ಆದ ಮನುವೆಂಬ ರಾಜನು ತನ್ನ ಮಗನಿಗೆ ರಾಜ್ಯವನ್ನು ವಹಿಸಿ, ಬಳಿಕ ತಾನು ಉಗ್ರವಾದ ತಪಸ್ಸನ್ನು ಮಾಡಿದನು.

೧೦. ಅಹಿಂಸಾದಿ ಸಮಸ್ತಾತ್ಮಗುಣಗಳಿಂದ ಕೂಡಿದ ಆ ರಾಜನು ಸುಖದುಃಖಗಳಲ್ಲಿ ಸಮಾನನಾಗಿ, ವೀರನೆನಿಸಿ ಮಲಯಪರ್ವತದಲ್ಲೊಂದು ಕಡೆ ಉತ್ತಮಧ್ಯಾನದಲ್ಲಿದ್ದನು.

೧೧. ಹತ್ತುಲಕ್ಷ ವರ್ಷಗಳು ಕಳೆಯಲು ಅವನ ತಪಸ್ಸಿಗೆ ಮೆಚ್ಚಿದ ಬ್ರಹ್ಮನು ವರವನ್ನೀಯಲೆಳಸಿ "ರಾಜಾ, ಬೇಕಾದ ವರವನ್ನು ಕೇಳು" ಎಂದನು.

**ಏವಮುಕ್ತೋಽಬ್ರವೀದ್ರಾಜಾ ಪ್ರಣಮ್ಯ ಸ ಪಿತಾಮಹಂ ।**
**ಏಕಮೇವಾಹಮಿಚ್ಛಾಮಿ ತ್ವತ್ತೋ ವರಮನುತ್ತಮಂ ॥೧೨॥**

**ಭೂತಗ್ರಾಮಸ್ಯ ಸರ್ವಸ್ಯ ಸ್ಥಾವರಸ್ಯ ಚರಸ್ಯ ಚ ।**
**ಭವೇಯಂ ರಕ್ಷಣಾಯಾಲಂ ಪ್ರಲಯೇ ಸಮುಪಸ್ಥಿತೇ ॥೧೩॥**

**ಏವಮಸ್ತ್ವಿತಿ ವಿಶ್ವಾತ್ಮಾ ತತ್ರೈವಾಂತರಧೀಯತ ।**
**ಪುಷ್ಪವೃಷ್ಟಿಃ ಸುಮಹತೀ ಖಾತ್ಪಪಾತ ಸುರಾರ್ಪಿತಾ ॥೧೪॥**

**ಕದಾಚಿದಾಶ್ರಮೇ ತಸ್ಯ ಕುರ್ವತಃ ಪಿತೃತರ್ಪಣಮ್ ।**
**ಪಪಾತ ಪಾಣ್ಯೋರುಪರಿ ಶಫರೀ ಜಲಸಂಯುತಾ ॥೧೫॥**

**ದೃಷ್ಟ್ವಾ ತಚ್ಛಫರೀರೂಪಂ ಸ ದಯಾಲುರ್ಮಹೀಪತಿಃ ।**
**ರಕ್ಷಣಾಯಾಕರೋದ್ಯತ್ನಂ ಸ ತಸ್ಮಿನ್ಕರಕೋದರೇ ॥೧೬॥**

**ಅಹೋರಾತ್ರೇಣ ಚೈಕೇನ ಷೋಡಶಾಂಗುಲವಿಸ್ತೃತಃ ।**
**ಸೋಽಭವನ್ಮತ್ಸ್ಯರೂಪೇಣ ಪಾಹಿ ಪಾಹೀತಿ ಚಾಬ್ರವೀತ್ ॥೧೭॥**

---

೧೨-೧೩. ಬ್ರಹ್ಮನು ಇಂತೆನಲು ಆ ರಾಜನು ನಮಸ್ಕರಿಸಿ "ಪ್ರಲಯ ಕಾಲವು ಬಂದಾಗ ಚರಾಚರಾತ್ಮಕವಾದ ಸಮಸ್ತಜೀವವರ್ಗವನ್ನೂ ರಕ್ಷಣ ಮಾಡಲು ನಾನು ಶಕ್ತನಾಗಬೇಕೆಂಬ ಒಂದೇ ವರವನ್ನು ನಿನ್ನಿಂದ ಬಯಸುತ್ತೇನೆ" ಎಂದುತ್ತರವಿತ್ತನು.

೧೪. "ಹಾಗೆಯೇ ಆಗಲಿ" ಎಂದು ಹೇಳಿ ಬ್ರಹ್ಮನು ಅಲ್ಲೇ ಅದೃಶ್ಯ ನಾದನು. ಅಂತರಿಕ್ಷದಿಂದ ದೇವತೆಗಳು ದೊಡ್ಡ ಹೂವಿನ ಮಳೆಯನ್ನು ಸುರಿಸಿದರು.

೧೫. ಆ ರಾಜನು ಆಶ್ರಮದಲ್ಲೊಮ್ಮೆ ಪಿತೃತರ್ಪಣವನ್ನು ಮಾಡುತ್ತಿರಲು ನೀರಿನೊಡನೆ ಹೆಣ್ಣುಮೀನೊಂದು ಅವನ ಕೈಗೆ ಬಂದು ಸೇರಿತು.

೧೬. ದಯಾಳುವಾದ ಆ ರಾಜನು ಆ ಮೀನನ್ನು ಕಂಡು ತನ್ನ ಕಮಂಡಲು ವಿನಲ್ಲಿ ಅದನ್ನು ರಕ್ಷಿಸಬೇಕೆಂದು ಯತ್ನಿಸಿದನು.

೧೭. ಅದು ಒಂದೇ ದಿನದಲ್ಲಿ ಹದಿನಾರಂಗುಲ ಉದ್ದವಾಗಿ ಬೆಳೆದು, "ನನ್ನನ್ನು ಸಲಹು; ಸಲಹು" ಎಂದು ಮತ್ಸ್ಯರೂಪದಿಂದಲೇ ಹೇಳಿತು.

ಸ ತಮಾದಾಯ ಮಣಿಕೇ ಪ್ರಾಕ್ಷಿಪಜ್ಜಲಚಾರಿಣಂ ।
ತತ್ರಾಪಿ ಚೈಕರಾತ್ರೇಣ ಹಸ್ತತ್ರಯಮವರ್ಧತ ॥೧೮॥

ಪುನಃ ಪ್ರಾಹಾರ್ತನಾದೇನ ಸಹಸ್ರಕಿರಣಾತ್ಮಜಂ ।
ಸ ಮತ್ಸ್ಯಃ ಪಾಹಿ ಪಾಹೀತಿ ತ್ವಾಮಹಂ ಶರಣಂ ಗತಃ ॥೧೯॥

ತತಃ ಸ ಕೂಪೇ ತಂ ಮತ್ಸ್ಯಂ ಪ್ರಾಹಿಣೋದ್ರವಿನಂದನಃ ।
ಯದಾ ನ ಮಾತಿ ತತ್ರಾಪಿ ಕೂಪೇ ಮತ್ಸ್ಯಃ ಸರೋವರೇ ॥೨೦॥

ಕ್ಷಿಪ್ತೋಽಸೌ ಪೃಥುತಾಮಾಗಾತ್ಪುನರ್ಯೋಜನಸಮ್ಮಿತಾಂ ।
ತತ್ರಾಪ್ಯಾಹ ಪುನರ್ದೀನಃ ಪಾಹಿ ಪಾಹಿ ನೃಪೋತ್ತಮ ॥೨೧॥

ತತಃ ಸ ಮನುನಾ ಕ್ಷಿಪ್ತೋ ಗಂಗಾಯಾಮಪ್ಯವರ್ಧತ ।
ಯದಾ ತದಾ ಸಮುದ್ರೇ ತಂ ಪ್ರಾಕ್ಷಿಪನ್ಮೇದಿನೀಪತಿಃ ॥೨೨॥

ಯದಾ ಸಮುದ್ರಮಖಿಲಂ ವ್ಯಾಪ್ಯಾಸೌ ಸಮುಪಸ್ಥಿತಃ ।
ತದಾ ಪ್ರಾಹ ಮನುರ್ಭೀತಃ ಕೋಽಪಿ ತ್ವಮಸುರೇಶ್ವರಃ ॥೨೩॥

ಅಥವಾ ವಾಸುದೇವಸ್ತ್ವಮನ್ಯ ಈದೃಕ್ಕಥಂ ಭವೇತ್ ।
ಯೋಜನಾಯುತವಿಂಶತ್ಯಾ ಕಸ್ಯ ತುಲ್ಯಂ ಭವೇದ್ವಪುಃ ॥೨೪॥

---

೧೮. ಅವನು ಆ ಜಲಚರವನ್ನು ಎತ್ತಿ ಹಂಡೆಯಲ್ಲಿರಿಸಿದನು. ಅಲ್ಲೂ ಅದು ಒಂದು ರಾತ್ರಿಗೆ ಮೂರು ಮೊಳದಷ್ಟು ಬೆಳೆಯಿತು.

೧೯. "ನಿನ್ನನ್ನು ಮರೆಹೊಕ್ಕಿರುವೆನು; ಸಲಹು, ಸಲಹು" ಎಂದು ಆ ಮೀನು ಸೂರ್ಯಪುತ್ರನಾದ ಆ ರಾಜನಿಗೆ ಮತ್ತೆ ಹೇಳಿತು.

೨೦–೨೧. ಬಳಿಕ ಅವನು ಆ ಮೀನನ್ನು ಬಾವಿಗೊಯ್ದನು. ಅಲ್ಲೂ ಹಿಡಿಸದಿರಲು ಸರೋವರದಲ್ಲಿ ಬಿಟ್ಟನು. ಅಲ್ಲಿ ಅದು ಒಂದು ಯೋಜನದಷ್ಟು ದೊಡ್ಡದಾಗಿ "ರಾಜಶ್ರೇಷ್ಠನೇ, ರಕ್ಷಿಸು; ರಕ್ಷಿಸು" ಎಂದು ಹೇಳಿತು.

೨೨. ತರುವಾಯ ಅದನ್ನು ಗಂಗಾನದಿಯಲ್ಲಿ ಬಿಡಲು ಅದು ಅಲ್ಲಿಯೂ ಬೆಳೆಯಿತು. ಆಗ ಆ ರಾಜನು ಅದನ್ನು ಸಮುದ್ರದಲ್ಲಿ ಬಿಟ್ಟನು.

೨೩–೨೫. ಅದು ಸಮುದ್ರಜಲವೆಲ್ಲವನ್ನೂ ವ್ಯಾಪಿಸಿರಲು, ಮನುವು ಹೆದರಿ, "ನೀನು ಯಾರೋ ದೈತ್ಯರಾಜನು; ಅಥವಾ ವಾಸುದೇವನೇ ಆಗಿರಬೇಕು;

ಜ್ಞಾತಸ್ತ್ವಂ ಮತ್ಸ್ಯರೂಪೇಣ ಮಾಂ ಖೇದಯಸಿ ಕೇಶವ ।
ಹೃಷೀಕೇಶ ಜಗನ್ನಾಥ ಜಗದ್ಧಾಮ ನಮೋಽಸ್ತು ತೇ ॥೨೫॥

ಏವಮುಕ್ತಃ ಸ ಭಗವಾನ್ಮತ್ಸ್ಯರೂಪೀ ಜನಾರ್ದನಃ ।
ಸಾಧು ಸಾಧ್ವಿತಿ ಚೋವಾಚ ಸಮ್ಯಗ್ಜ್ಞಾತಸ್ತ್ವಯಾನಘ ॥೨೬॥

ಅಚಿರೇಣೈವ ಕಾಲೇನ ಮೇದಿನೀ ಮೇದಿನೀಪತೇ ।
ಭವಿಷ್ಯತಿ ಜಲೇ ಮಗ್ನಾ ಸಶೈಲವನಕಾನನಾ ॥೨೭॥

ನೌರಿಯಂ ಸರ್ವದೇವಾನಾಂ ನಿಕಾಯೇನ ವಿನಿರ್ಮಿತಾ ।
ಮಹಾಜೀವನಿಕಾಯಸ್ಯ ರಕ್ಷಣಾರ್ಥಂ ಮಹೀಪತೇ ॥೨೮॥

ಸ್ವೇದಾಂಡಜೋದ್ಭಿದೋ ಯೇ ವೈ ಯೇ ಚ ಜೀವಾ ಜರಾಯುಜಾಃ ।
ಅಸ್ಯಾಂ ನಿಧಾಯ ಸರ್ವಾಂಸ್ತಾನನಾಥಾನ್ಪಾಹಿ ಸುವ್ರತ ॥೨೯॥

ಯುಗಾಂತವಾತಾಭಿಹತಾ ಯದಾ ಭವತಿ ನೌ ನೃಪ ।
ಶೃಂಗೇಽಸ್ಮಿನ್ಮಮ ರಾಜೇಂದ್ರ ತದೇಮಾಂ ಸಂಯಮಿಷ್ಯಸಿ ॥೩೦॥

---

ಮತ್ತಾವನು ಹೀಗೆ ಆದಾನು? ಯಾರ ದೇಹವು ಲಕ್ಷಗಟ್ಟಲೆ ಯೋಜನವಾದೀತು? ಓ ಕೇಶವಾ, ಮತ್ಸ್ಯ ರೂಪದಿಂದ ನನಗೆ ಗೋಚರನಾಗಿ ನನ್ನನ್ನು ಆಯಾಸ ಪಡಿಸುವೆ; ಹೃಷೀಕೇಶಾ, ಜಗದೀಶ್ವರಾ, ವಿಶ್ವವ್ಯಾಪಕಾ, ನಿನಗೆ ನಮಸ್ಕಾರ" ಎಂದು ಸ್ತುತಿಸಿದನು.

೨೬-೩೨. ಇಂತೆನಲು ಷಡ್ಗುಣಪರಿಪೂರ್ಣನೂ, ಮತ್ಸ್ಯರೂಪಿಯೂ ಆದ ಜನಾರ್ದನನು ಇಂತೆಂದನು. "ಎಲೈ ನಿರ್ಮಲನೇ, ನೀನು ಚೆನ್ನಾಗಿ ತಿಳಿವೆ; ಸರಿ, ಸರಿ. ಓ ರಾಜಾ, ಸ್ವಲ್ಪಕಾಲದಲ್ಲೇ ಬೆಟ್ಟ, ತೋಟ, ಕಾಡು ಇವುಗಳಿಂದ ಕೂಡಿದ ಭೂಮಿಯು ನೀರಿನಲ್ಲಿ ಮುಳುಗಿಹೋಗುವುದು. ದೇವವರ್ಗವೆಲ್ಲವೂ ಸೇರಿ ಸರ್ವ ಜೀವರಾಶಿಯ ರಕ್ಷಣೆಗಾಗಿ ಈ ದೋಣಿಯನ್ನು ನಿರ್ಮಿಸಿದೆ. ಎಲೈ ಸುವ್ರತಾ, ಬೆವರಿನಿಂದ ಹುಟ್ಟಿದ ಹೇನು ಮುಂತಾದವು, ಮೊಟ್ಟೆಯಿಂದ ಬಂದ ಪಕ್ಷಿಗಳು, ನೆಲವನ್ನು ಸೀಳಿ ಮೇಲಕ್ಕೆದ್ದ ಸಸ್ಯಗಳು, ಮತ್ತು ಗರ್ಭದಿಂದ ಹುಟ್ಟಿದ ಪ್ರಾಣಿಗಳು, ಹೀಗೆ ನಾಲ್ಕು ಬಗೆಯಾದ ಜೀವರಾಶಿಗಳನ್ನೂ ಈ ದೋಣಿಯಲ್ಲಿರಿಸು. ದಿಕ್ಕಿಲ್ಲದ ಅವುಗಳನ್ನು ರಕ್ಷಿಸು. ಯುಗಾಂತದ ಬಿರುಗಾಳಿಯ ಹೊಡೆತಕ್ಕೆ ದೋಣಿ ಸಿಕ್ಕಿದಾಗ

**ತತೋ ಲಯಾಂತೇ ಸರ್ವಸ್ಯ ಸ್ಥಾವರಸ್ಯ ಚರಸ್ಯ ಚ ।**
**ಪ್ರಜಾಪತಿಸ್ತ್ವಂ ಭವಿತಾ ಜಗತಃ ಪೃಥಿವೀಪತೇ ॥೩೧॥**
**ಏವಂ ಕೃತಯುಗಸ್ಯಾದೌ ಸರ್ವಜ್ಞೋ ಧೃತಿವಾನ್ನೃಪಃ ।**
**ಮನ್ವಂತರಾಧಿಪಶ್ಚಾಪಿ ದೇವಪೂಜ್ಯೋ ಭವಿಷ್ಯಸಿ ॥೩೨॥**

**ಇತಿ ಶ್ರೀಮತ್ಸ್ಯೇ ಮಹಾಪುರಾಣೇ ಆದಿಸರ್ಗೇ ಮನುವಿಷ್ಣುಸಂವಾದೇ ಪ್ರಥಮೋಽಧ್ಯಾಯಃ**

---

ಅದನ್ನು ನನ್ನ ಕೊಂಬಿಗೆ ಕಟ್ಟಿಹಾಕು. ಓ ಭೂಪಾ, ಪ್ರಲಯಾಂತದಲ್ಲಿ ಚರಾಚರಾತ್ಮಕವಾದ ಜಗತ್ತಿಗೆಲ್ಲ ನೀನು ಪ್ರಜಾಪತಿಯಾಗುವೆ. ಹೀಗೆ ಕೃತಯುಗದ ಆದಿಯಲ್ಲಿ ಸರ್ವಜ್ಞನೂ, ಧೈರ್ಯಶಾಲಿಯೂ, ನರಪತಿಯೂ ಆದ ನೀನು ಮನ್ವಂತರಾಧಿಪನೆನಿಸಿ ದೇವತೆಗಳಿಗೆ ಮಾನ್ಯನಾಗುವೆ.''

## ಅಧ್ಯಾಯದ ಸಾರಾಂಶ

ನೈಮಿಶಾರಣ್ಯವಾಸಿಗಳಾದ ಶೌನಕಾದಿ ಮುನಿಗಳು ದೀರ್ಘಸತ್ರಾಂತದಲ್ಲಿ ಭಗವಾನ್ ವಿಷ್ಣುವು ಮತ್ಸ್ಯರೂಪವನ್ನೆತ್ತಲು ಕಾರಣವೇನೆಂದು ಸೂತಪೌರಾಣಿಕನನ್ನು ಕೇಳಲು, ಅವನು ಅದರ ವಿವರವನ್ನು ತಿಳಿಸಿ, ವೈವಸ್ವತಮನುವಿಗೂ ಮತ್ಸ್ಯರೂಪವನ್ನೆತ್ತಿದ ವಿಷ್ಣುವಿಗೂ ನಡೆದ ಸಂವಾದವನ್ನು ಹೇಳಿದನು.

ವೈವಸ್ವತ ಮನುವು ಒಂದು ದಿನ ಪಿತೃತರ್ಪಣವನ್ನು ಮಾಡುತ್ತಿರುವಾಗ ಒಂದು ಮೀನನ್ನು ಕಂಡನು. ಅದರ ಅತ್ಯದ್ಭುತವ್ಯಾಪಾರವನ್ನು ನೋಡಿ, ಸಾಕ್ಷಾದ್ವಿಷ್ಣುವೇ ಆ ರೂಪದಿಂದ ಬಂದಿರಬೇಕೆಂದು ನಿಶ್ಚಯಿಸಿ ಸ್ತೋತ್ರಮಾಡಿದನು. ಭಗವಂತನು ಪ್ರತ್ಯಕ್ಷನಾಗಿ, '' ಶೀಘ್ರದಲ್ಲಿಯೇ ಪ್ರಳಯವು ನಡೆಯುವುದು. ಜಗತ್ತೆಲ್ಲ ನೀರಿನಲ್ಲಿ ಮುಳುಗಿಹೋಗುವುದು. ಓ ರಾಜಾ, ನೀನು ಸಕಲ ಜೀವರಾಶಿಗಳೊಡನೆ ವೇದಮಯವಾದ ದೋಣಿಯಲ್ಲಿ ಕುಳಿತು, ಮಹಾಸಮುದ್ರದಲ್ಲಿ ಕೊಚ್ಚಿಹೋಗದಂತೆ ಅದನ್ನು ನನ್ನ ಕೊಂಬಿಗೆ ಕಟ್ಟಿಹಾಕು. ಮುಂದೆ ನೀನು ಮನ್ವಂತರಾಧಿಪತಿಯಾಗುವೆ'' ಎಂದು ಅಪ್ಪಣೆಯಿತ್ತನು.

ಶ್ರೀ ಮತ್ಸ್ಯಮಹಾಪುರಾಣದಲ್ಲಿ ಒಂದನೆಯ ಅಧ್ಯಾಯವು ಮುಗಿಯಿತು.

## ಅಥ ಶ್ರೀಮತ್ಸ್ಯಮಹಾಪುರಾಣೇ ದ್ವಿತೀಯೋಽಧ್ಯಾಯಃ

॥ ಸೂತ ಉವಾಚ ॥

ಏವಮುಕ್ತೋ ಮನುಸ್ತೇನ ಪಪ್ರಚ್ಛ ಮಧುಸೂದನಂ ।
ಭಗವನ್ ಕಿಯದ್ಭಿರ್ವರ್ಷೈರ್ಭವಿಷ್ಯತ್ಯಂತರಕ್ಷಯಃ ॥ ೧ ॥

ಸತ್ವಾನಿ ಚ ಕಥಂ ನಾಥ ರಕ್ಷಿಷ್ಯೇ ಮಧುಸೂದನ ।
ತ್ವಯಾ ಸಹ ಪುನರ್ಯೋಗಃ ಕಥಂ ವಾ ಭವಿತಾ ಮಮ ॥ ೨ ॥

॥ ಮತ್ಸ್ಯ ಉವಾಚ ॥

ಅದ್ಯಪ್ರಭೃತ್ಯನಾವೃಷ್ಟಿರ್ಭವಿಷ್ಯತಿ ಮಹೀತಲೇ ।
ಯಾವದ್ವರ್ಷಶತಂ ಸಾಗ್ರಂ ದುರ್ಭಿಕ್ಷಮಶುಭಾವಹಂ ॥ ೩ ॥

ತತೋಽಲ್ಪಸತ್ವಕ್ಷಯದಾ ರಶ್ಮಯಃ ಸಪ್ತ ದಾರುಣಾಃ ।
ಸಪ್ತಸಪ್ತೇರ್ಭವಿಷ್ಯಂತಿ ಪ್ರತಪ್ತಾಂಗಾರವರ್ಣಿನಃ ॥ ೪ ॥

ಔರ್ವಾನಲೋಽಪಿ ವಿಕೃತಿಂ ಗಮಿಷ್ಯತಿ ಯುಗಕ್ಷಯೇ ।
ವಿಷಾಗ್ನಿಶ್ಚಾಪಿ ಪಾತಾಲಾತ್ಸಂಕರ್ಷಣಮುಖಚ್ಯುತಃ ॥ ೫ ॥

---

೧-೨. ಸೂತಪೌರಾಣಿಕನು ಹೇಳಿದನು:—ಹಿಂದೆ ವಿವರಿಸಿದಂತೆ ಮಧುಸೂದನನು ಹೇಳಲು ಮನುಚಕ್ರವರ್ತಿಯು ಅವನನ್ನು ಕೇಳಿದನು. "ಪೂಜ್ಯನೇ, ಎಷ್ಟು ವರ್ಷಗಳಿಗೆ ಅವಾಂತರ ಪ್ರಳಯವಾಗುವುದು? ಜೀವರಾಶಿಗಳನ್ನು ನಾನು ಹೇಗೆ ರಕ್ಷಿಸಲಿ? ಮರಳಿ ನಿನ್ನೊಡನೆ ನನಗೆ ಸಮಾಗಮವು ಹೇಗಾದೀತು?"

೩. ಮತ್ಸ್ಯರೂಪನಾದ ಭಗವಂತನು ಹೇಳಿದನು:—ಇಂದಿನಿಂದ ನೂರು ವರ್ಷಗಳು ಪೂರ್ತಿಯಾಗಿ ಜಗತ್ತಿನಲ್ಲಿ ಅನಾವೃಷ್ಟಿಯೊದಗುವುದು. ಕ್ಷಾಮವನ್ನೂ ಅಮಂಗಲವನ್ನೂ ಅದು ತರುವುದು.

೪. ಸೂರ್ಯನು ಕೆಂಗೆಂಡದ ಬಣ್ಣವನ್ನು ಪಡೆಯುವನು. ಅವನ ಕಿರಣಗಳು ಅತಿ ತೀವ್ರವಾಗಿ ಪ್ರಾಣಿಗಳನ್ನು ನಿರ್ವೀರ್ಯಮಾಡಿ ಒತ್ತಿಸುವುವು.

೫-೬. ಆ ಪ್ರಳಯದಲ್ಲಿ ಬಡಬಾಗ್ನಿಯೂ ಕೂಡ ಉಗ್ರರೂಪವನ್ನು ತಾಳುವುದು. ಸಂಕರ್ಷಣನ ಮುಖದಿಂದ ಹೊರಬಿದ್ದು ಪಾತಾಳದಿಂದೆದ್ದ ವಿಷಾಗ್ನಿಯೂ,

ಭವಸ್ಯಾಪಿ ಲಲಾಟೋತ್ಥತೃತೀಯನಯನಾನಲಃ ।
ತ್ರಿಜಗನ್ನಿರ್ದಹನ್ಕ್ಷೋಭಂ ಸಮೇಷ್ಯತಿ ಮಹಾಮುನೇ ॥ ೬ ॥

ಏವಂ ದಗ್ಧಾ ಮಹೀ ಸರ್ವಾ ಯದಾ ಸ್ಯಾದ್ಭಸ್ಮಸನ್ನಿಭಾ ।
ಆಕಾಶಮೂಷ್ಮಣಾ ತಪ್ತಂ ಭವಿಷ್ಯತಿ ಪರಂತಪ ॥
ತತಃ ಸದೇವನಕ್ಷತ್ರಂ ಜಗದ್ಯಾಸ್ಯತಿ ಸಂಕ್ಷಯಂ ॥ ೭ ॥

ಸಂವರ್ತೋ ಭೀಮನಾದಶ್ಚ ದ್ರೋಣಶ್ಚಂಡೋ ಬಲಾಹಕಃ ।
ವಿದ್ಯುತ್ಪತಾಕಃ ಶೋಣಸ್ತು ಸಪ್ತೈತೇ ಲಯವಾರಿದಾಃ ॥
ಅಗ್ನಿಪ್ರಸ್ವೇದಸಂಭೂತಾಂ ಪ್ಲಾವಯಿಷ್ಯಂತಿ ಮೇದಿನೀಂ ॥ ೮ ॥

ಸಮುದ್ರಾಃ ಕ್ಷೋಭಮಾಗತ್ಯ ಚೈಕತ್ವೇನ ವ್ಯವಸ್ಥಿತಾಃ ।
ಏತದೇಕಾರ್ಣವಂ ಸರ್ವಂ ಕರಿಷ್ಯಂತಿ ಜಗತ್ರಯಂ ॥ ೯ ॥

ವೇದನಾವಮಿಮಾಂ ಗೃಹ್ಯ ಸತ್ವಬೀಜಾನಿ ಸರ್ವಶಃ ॥೧೦॥
ಆರೋಪ್ಯ ರಜ್ಜುಯೋಗೇನ ಮತ್ಪ್ರದತ್ತೇನ ಸುವ್ರತ ॥
ಸಂಯಮ್ಯ ನಾವಂ ಮಚ್ಛೃಂಗೇ ಮತ್ಪ್ರಭಾವಾಭಿರಕ್ಷಿತಃ ॥೧೧॥

---

ಈಶ್ವರನ ಹಣೆಯ ಮೂರನೆಯ ಕಣ್ಣಿನಿಂದ ಹೊರಟ ಉರಿಯೂ ಮೂರು ಲೋಕವನ್ನೂ ಸುಡುತ್ತಾ ಕ್ಷೋಭವನ್ನುಂಟುಮಾಡುವುವು.

೭. ಶತ್ರುನಾಶಕನಾದ ರಾಜನೇ, ಹೀಗೆ ಭೂಮಿಯೆಲ್ಲಾ ಸುಟ್ಟು ಬೂದಿಯಾಗಲು, ಆಕಾಶವು ಹಬೆಯಿಂದ ಕಾಯುವುದು. ದೇವನಕ್ಷತ್ರಸಹಿತವಾದ ಜಗತ್ತು ನಾಶವಾಗುವುದು.

೮. ಸಂವರ್ತ, ಭೀಮನಾದ, ದ್ರೋಣ, ಚಂಡ, ಬಲಾಹಕ, ವಿದ್ಯುತ್ಪತಾಕ ಮತ್ತು ಶೋಣ ಎಂಬ ಏಳು ಪ್ರಲಯ ಮೇಘಗಳು ಅಗ್ನಿದಗ್ಧವಾದ ಭೂಮಿಯನ್ನು ಜಲಮಯವಾಗಿ ಮಾಡುವುವು.

೯. ಸಮುದ್ರಗಳು ಅಲ್ಲೋಲಕಲ್ಲೋಲವಾಗಿ ಒಂದುಗೂಡಿ ಈ ಮೂರು ಲೋಕವನ್ನೂ ಸಮುದ್ರಮಯವಾಗಿ ಮಾಡುವುವು.

೧೦-೧೧. ಎಲೈ ವ್ರತನಿಷ್ಠನೇ, ಶತ್ರು ಸಂತಾಪಕನೇ, ವೇದರೂಪವಾದ ಈ ದೋಣಿಯನ್ನು ತೆಗೆದುಕೊಂಡು, ಜೀವರಾಶಿಯ ಬೀಜಗಳನ್ನು ಅದರಲ್ಲಿರಿಸಿ, ನಾನು

**ಏಕಃ ಸ್ಥಾಸ್ಯಸಿ ದೇವೇಷು ದಗ್ಧೇಷ್ವಪಿ ಪರಂತಪ ||**
**ಸೋಮಸೂರ್ಯಾವಹಂ ಬ್ರಹ್ಮಾ ಚತುರ್ಲೋಕಸಮನ್ವಿತಃ | ||೧೨||**

**ನರ್ಮದಾ ಚ ನದೀ ಪುಣ್ಯಾ ಮಾರ್ಕಂಡೇಯೋ ಮಹಾನೃಷಿಃ |**
**ಭವೋ ವೇದಾಃ ಪುರಾಣಾನಿ ವಿದ್ಯಾಭಿಃ ಸರ್ವತೋವೃತಂ ||೧೩||**

**ತ್ವಯಾ ಸಾರ್ಧಮಿದಂ ವಿಶ್ವಂ ಸ್ಥಾಸ್ಯತ್ಯಂತರಸಂಕ್ಷಯೇ |**
**ಏವಮೇಕಾರ್ಣವೇ ಜಾತೇ ಚಾಕ್ಷುಷಾಂತರಸಂಕ್ಷಯೇ ||೧೪||**

**ವೇದಾನ್ಪ್ರವರ್ತಯಿಷ್ಯಾಮಿ ತ್ವತ್ಸರ್ಗಾದೌ ಮಹೀಪತೇ |**
**ಏವಮುಕ್ತ್ವಾ ಸ ಭಗವಾಂಸ್ತತ್ರೈವಾಂತರಧೀಯತ ||೧೫||**

**ಮನುರಪ್ಯಾಸ್ಥಿತೋ ಯೋಗಂ ವಾಸುದೇವಪ್ರಸಾದಜಂ |**
**ಅಭ್ಯಸನ್ಯಾವದಾಭೂತಸಂಪ್ಲವಂ ಪೂರ್ವಸೂಚಿತಂ ||೧೬||**

---

ಕೊಟ್ಟ ಹಗ್ಗವನ್ನು ಸೇರಿಸಿ ಅದನ್ನು ನನ್ನ ಕೋಡಿಗೆ ಕಟ್ಟಿಹಾಕು. ನನ್ನ ಪ್ರಭಾವದಿಂದ ರಕ್ಷಿತನಾಗಿ ದೇವತೆಗಳು ಸುಟ್ಟುಹೋದರೂ ನೀನೊಬ್ಬನು ಮಾತ್ರ ಉಳಿಯುವೆ.

೧೨-೧೩. ಚಂದ್ರಸೂರ್ಯರು, ನಾನು, ಹದಿನಾಲ್ಕು ಲೋಕಸಹಿತನಾದ ಬ್ರಹ್ಮ, ಪುಣ್ಯನದಿಯಾದ ನರ್ಮದೆ, ಮಹರ್ಷಿಮಾರ್ಕಂಡೇಯ, ಈಶ್ವರ, ವೇದಗಳು, ಪುರಾಣಗಳು, ಮತ್ತು ಸಮಸ್ತ ವಿದ್ಯಾವೃತವಾದ ಈ ಜಗತ್ತು ಇವೆಲ್ಲವೂ ಅವಾಂತರ ಪ್ರಳಯಕಾಲದಲ್ಲಿ ನಿನ್ನೊಡನೆ ಇರುವುವು.*

೧೪-೧೫. ಹೀಗೆ ಚಾಕ್ಷುಷ ಮನ್ವಂತರದ ಪ್ರಲಯದಲ್ಲಿ ಜಗತ್ತೆಲ್ಲ ಜಲಮಯವಾದ ಬಳಿಕ, ಓ ರಾಜಾ, ವೈವಸ್ವತ ಮನ್ವಂತರದ ಆದಿಯಲ್ಲಿ ವೇದಗಳನ್ನು ಪ್ರಚಾರಮಾಡುವೆನು" ಹೀಗೆ ಹೇಳಿ ಭಗವಂತನು ಅಲ್ಲಿಯೇ ಮಾಯವಾದನು.

೧೬. ಮನುಚಕ್ರವರ್ತಿಯೂ ಕೂಡ ವಾಸುದೇವಾನುಗ್ರಹದಿಂದ ಲಬ್ಧವಾದ ಧ್ಯಾನಯೋಗದಲ್ಲಿ ತೊಡಗಿ ಪ್ರಳಯಕಾಲದವರೆಗೂ ಅದರಲ್ಲಿ ಮಗ್ನನಾಗಿದ್ದನು.

---

* ಪ್ರಳಯದಲ್ಲಿ ದೈನಂದಿನಪ್ರಳಯ, ಅವಾಂತರಪ್ರಳಯ ಮತ್ತು ಮಹಾಪ್ರಳಯವೆಂದು ಮೂರು ಭೇದಗಳು. ರೋಗಾದ್ಯುಪದ್ರವಗಳಿಂದ ಆಗುವ ಪ್ರಾಣನಾಶವು ಮೊದಲನೆಯದು. ಎರಡು ಮನ್ವಂತರಗಳ ಸಂಧಿಕಾಲದಲ್ಲಿ ಆಗತಕ್ಕುದು ಎರಡನೆಯದು. ಬ್ರಹ್ಮನ ಆಯುರ್ಮಾನದ ಅವಸಾನದಲ್ಲಿ ಬರುವುದೇ ಮಹಾಪ್ರಳಯ. ಇದರಲ್ಲಿ ಪಂಚಭೂತಗಳೂ ಅವುಗಳ ತನ್ಮಾತ್ರಗಳೂ ಸಹ ಲಯವಾಗುವುವು.

ಕಾಲೇ ಯಥೋಕ್ತೇ ಸಂಜಾತೇ ವಾಸುದೇವಮುಖೋದ್ಗತೇ ।
ಶೃಂಗೀ ಪ್ರಾದುರ್ಬಭೂವಾಥ ಮತ್ಸ್ಯರೂಪೀ ಜನಾರ್ದನಃ ॥೧೭॥

ಭುಜಂಗೋ ರಜ್ಜುರೂಪೇಣ ಮನೋಃ ಪಾರ್ಶ್ವಮುಪಾಗಮತ್ ।
ಭೂತಾನ್ ಸರ್ವಾನ್ ಸಮಾಕೃಷ್ಯ ಯೋಗೇನಾರೋಪ್ಯ ಧರ್ಮವಿತ್ ॥೧೮॥

ಭುಜಂಗರಜ್ಜ್ವಾ ಮತ್ಸ್ಯಸ್ಯ ಶೃಂಗೇ ನಾವಮಯೋಜಯತ್ ।
ಉಪರ್ಯುಪಸ್ಥಿತಸ್ತಸ್ಯಾಃ ಪ್ರಣಿಪತ್ಯ ಜನಾರ್ದನಂ ॥೧೯॥

ಆಭೂತಸಂಪ್ಲವೇ ತಸ್ಮಿನ್ನತೀತೇ ಯೋಗಶಾಯಿನಾ ।
ಪೃಷ್ಟೇನ ಮನುನಾ ಪ್ರೋಕ್ತಂ ಪುರಾಣಂ ಮತ್ಸ್ಯರೂಪಿಣಾ ।
ತದಿದಾನೀಂ ಪ್ರವಕ್ಷ್ಯಾಮಿ ಶೃಣುಧ್ವಮೃಷಿಸತ್ತಮಾಃ ॥೨೦॥

ಯದ್ಭವದ್ಭಿಃ ಪುರಾ ಪೃಷ್ಟಃ ಸೃಷ್ಟ್ಯಾದಿಕಮಹಂ ದ್ವಿಜಾಃ ।
ತದೇವೈಕಾರ್ಣವೇ ತಸ್ಮಿನ್ಮನುಃ ಪಪ್ರಚ್ಛ ಕೇಶವಂ ॥೨೦॥

---

೧೭. ಬಳಿಕ ವಾಸುದೇವನು ಹೇಳಿದ್ದ ಕಾಲವು ಬಂದಿತು. ಮಹಾವಿಷ್ಣುವು ಕೊಂಬುಮೀನಿನ ರೂಪದಿಂದ ಪ್ರತ್ಯಕ್ಷನಾದನು.

೧೮–೧೯. ಮಹಾಸರ್ಪವು ಹಗ್ಗದರೂಪದಿಂದ ಮನುವಿನ ಬಳಿಗೆ ಬಂದಿತು. ಧರ್ಮಜ್ಞನಾದ ಆ ರಾಜನು ಯೋಗಪ್ರಭಾವದಿಂದ ಸರ್ವಜೀವಗಳನ್ನೂ ಆಕರ್ಷಿಸಿ, ದೋಣಿಯಲ್ಲಿರಿಸಿ, ಅದನ್ನು ಆ ಸರ್ಪರೂಪವಾದ ಹಗ್ಗದಿಂದ ಮತ್ಸ್ಯದ ಕೋಡಿಗೆ ಬಿಗಿದನು. ಜನಾರ್ದನನನ್ನು ನಮಸ್ಕರಿಸಿ ಆ ದೋಣಿಯಮೇಲೆ ಕುಳಿತನು.

೨೦. ಋಷಿವರ್ಯರೇ, ಕಳೆದ ಆ ಅವಾಂತರ ಪ್ರಳಯದಲ್ಲಿ ಮನುವು ಪ್ರಶ್ನೆ ಮಾಡಲು ಯೋಗಶಾಯಿಯೂ, ಮತ್ಸ್ಯರೂಪನೂ ಆದ ಭಗವಂತನು ಅವನಿಗೆ ಹೇಳಿದ ಪುರಾಣವನ್ನು ಈಗ ನಿಮಗೆ ಹೇಳುವೆನು, ಕೇಳಿರಿ.

೨೧. ಎಲೈ ದ್ವಿಜರೇ, ಹಿಂದೆ ನೀವು ನನ್ನನ್ನು ಕೇಳಿದ ಸೃಷ್ಟ್ಯಾದಿ ವಿಚಾರ ಗಳನ್ನು ಮನುವು ಪ್ರಳಯಕಾಲದಲ್ಲಿ ವಿಷ್ಣುವನ್ನು ಪ್ರಶ್ನಿಸಿದನು.

|| ಮನುರುವಾಚ ||

ಉತ್ಪತ್ತಿಂ ಪ್ರಲಯಂ ಚೈವ ವಂಶಾನ್ಮನ್ವಂತರಾಣಿ ಚ ।
ವಂಶ್ಯಾನುಚರಿತಂ ಚೈವ ಭುವನಸ್ಯ ಚ ವಿಸ್ತರಂ ||೨೨||

ದಾನಧರ್ಮವಿಧಿಂ ಚೈವ ಶ್ರಾದ್ಧಕಲ್ಪಂ ಚ ಶಾಶ್ವತಂ ।
ವರ್ಣಾಶ್ರಮವಿಭಾಗಂ ಚ ತಥೇಷ್ಟಾಪೂರ್ತಸಂಜ್ಞಿತಂ ||೨೩||

ದೇವತಾನಾಂ ಪ್ರತಿಷ್ಠಾದಿ ಯಚ್ಚಾನ್ಯದ್ವಿದ್ಯತೇ ಭುವಿ ।
ತತ್ಸರ್ವಂ ವಿಸ್ತರೇಣ ತ್ವಂ ಧರ್ಮಂ ವ್ಯಾಖ್ಯಾತುಮರ್ಹಸಿ ||೨೪||

|| ಮತ್ಸ್ಯ ಉವಾಚ ||

ಮಹಾಪ್ರಲಯಕಾಲಾಂತ ಏತದಾಸೀತ್ತಮೋಮಯಂ ।
ಪ್ರಸುಪ್ತಮಿವ ಚಾತರ್ಕ್ಯಮಪ್ರಜ್ಞಾತಮಲಕ್ಷಣಂ ||೨೫||

ಅವಿಜ್ಞೇಯಮವಿಜ್ಞಾತಂ ಜಗತ್ ಸ್ಥಾಸ್ನು ಚರಿಷ್ಣು ಚ ।
ತತಃ ಸ್ವಯಂಭೂರವ್ಯಕ್ತಃ ಪ್ರಭವಃ ಪುಣ್ಯಕರ್ಮಣಾಂ ||೨೬||

---

೨೨-೨೪. ಮನು ಹೇಳಿದನು:—ವಿಶ್ವದ ಉತ್ಪತ್ತಿ, ಪ್ರಲಯ, ಬೇರೆಬೇರೆ ವಂಶಗಳು, ಮನ್ವಂತರಗಳು, ಆಯಾ ವಂಶದವರ ಚರಿತ್ರೆ, ಪ್ರಪಂಚದ ವಿಸ್ತಾರ, ದಾನಧರ್ಮಗಳ ವಿಧಿ, ಶ್ರಾದ್ಧಕ್ರಮ, ವರ್ಣಾಶ್ರಮವಿಭಾಗ, ಸ್ವರ್ಗಪ್ರದವಾದ ವಾಪೀ ಕೂಪತಟಾಕನಿರ್ಮಾಣರೂಪವಾದ ಧರ್ಮಕಾರ್ಯಗಳು, ದೇವತಾಮೂರ್ತಿಗಳ ಪ್ರತಿಷ್ಠೆ ಮತ್ತು ಭೂಮಿಯಲ್ಲಿ ಪ್ರಸಿದ್ಧವೆನಿಸಿದ ಇನ್ನೂ ಇತರ ವಿಷಯಗಳು ಇವೆಲ್ಲವನ್ನೂ ನೀನು ವಿವರಿಸಬೇಕು.

೨೫. ಮತ್ಸ್ಯರೂಪನಾದ ಭಗವಂತನು ಹೇಳಿದನು:—ಮಹಾಪ್ರಲಯದ ಕೊನೆಯಲ್ಲಿ ಚರಾಚರಾತ್ಮಕವಾದ ಈ ಜಗತ್ತು ಕಗ್ಗತ್ತಲಿಂದ ತುಂಬಿತ್ತು. ಅದು ಗಾಢನಿದ್ರೆಯಲ್ಲಿದ್ದಂತೆ ತೋರುತ್ತ, ಇಂತೆಂಬ ಊಹೆಗೆ ಮೀರಿ, ಪ್ರಜ್ಞಾಶೂನ್ಯವಾಗಿ, ಲಕ್ಷಣರಹಿತವಾಗಿತ್ತು. ಯಾರ ಅರಿವಿಗೂ ಅದು ಸಿಕ್ಕುವಂತಿರಲಿಲ್ಲ. ಆದುದರಿಂದ ಅದನ್ನು ಯಾರೂ ಅರಿಯಲಿಲ್ಲ.

೨೬-೨೭. ಬಳಿಕ ಅವ್ಯಕ್ತನೂ, ಪುಣ್ಯಕರ್ಮಗಳ ಉತ್ಪತ್ತಿಕಾರಣನೂ ಆದ ವಿಷ್ಣುವು ಕತ್ತಲೆಯನ್ನೋಡಿಸಿ, ಇವೆಲ್ಲವನ್ನೂ ಪ್ರಕಾಶಗೊಳಿಸುತ್ತಾ ಉದ್ಭವಿಸಿದನು.

ವ್ಯಂಜಯನ್ನೇತದಖಿಲಂ ಪ್ರಾದುರಾಸೀತ್ತಮೋನುದಃ ।
ಯೋಽತೀಂದ್ರಿಯಃ ಪರೋಽವ್ಯಕ್ತಾದಣುರ್ಜ್ಯಾಯಾನ್ಸನಾತನಃ ।
ನಾರಾಯಣ ಇತಿ ಖ್ಯಾತಃ ಸ ಏಕಃ ಸ್ವಯಮುದ್ಬಭೌ ॥೨೭॥

ಯಃ ಶರೀರಾದಭಿಧ್ಯಾಯ ಸಿಸೃಕ್ಷುರ್ವಿವಿಧಂ ಜಗತ್ ।
ಅಪ ಏವ ಸಸರ್ಜಾದೌ ತಾಸು ಬೀಜಮವಾಸೃಜತ್ ॥೨೮॥

ತದೇವಾಂಡಂ ಸಮಭವದ್ಧೇಮರೂಪ್ಯಮಯಂ ಮಹತ್ ।
ಸಂವತ್ಸರಸಹಸ್ರೇಣ ಸೂರ್ಯಾಯುತಸಮಪ್ರಭಂ ॥೨೯॥

ಪ್ರವಿಶ್ಯಾಂತರ್ಮಹಾತೇಜಾಃ ಸ್ವಯಮೇವಾತ್ಮಸಂಭವಃ ।
ಪ್ರಭಾವಾದಪಿ ತದ್ವ್ಯಾಪ್ಯ ವಿಷ್ಣುತ್ವಮಗಮತ್ಪುನಃ ॥೩೦॥

ತಪಂತರ್ಭಗವಾನೇಷ ಸೂರ್ಯಃ ಸಮಭವತ್ಪುರಾ ।
ಆದಿತ್ಯಶ್ಚಾದಿಭೂತತ್ವಾದ್ಬ್ರಹ್ಮಾ ಬ್ರಹ್ಮ ಪಠನ್ನಭೂತ್ ॥೩೧॥

---

ಅವನು ಇಂದ್ರಿಯಗಳಿಗೆ ಅಗೋಚರನು; ಸೂಕ್ಷ್ಮಪ್ರಕೃತಿಗಿಂತ ಬೇರೆಯಾದವನು; ಸೂಕ್ಷ್ಮರೂಪನು; ಹಿರಿಯವನು; ಶಾಶ್ವತನು; ನಾರಾಯಣನೆಂದು ಪ್ರಸಿದ್ಧನು. ಅವನು ಅದ್ವಿತೀಯನಾಗಿ ತಾನೇ ಮೈದೋರಿದನು.

೨೮. ಅವನು ಚೆನ್ನಾಗಿ ಚಿಂತಿಸಿ, ತನ್ನ ಶರೀರದಿಂದಲೇ ವಿವಿಧವಾದ ಜಗತ್ತನ್ನು ಸೃಷ್ಟಿಮಾಡಲಿಚ್ಛಿಸಿ ಮೊದಲು ನೀರನ್ನೇ ನಿರ್ಮಿಸಿದನು. ಅದರಲ್ಲಿ ವೀರ್ಯವನ್ನು ಬಿಟ್ಟನು.

೨೯. ಆ ಬೀಜವೇ ಸಾವಿರ ವರ್ಷಗಳ ತರುವಾಯ ಹತ್ತುಸಾವಿರಸೂರ್ಯರಷ್ಟು ಪ್ರಕಾಶಿಸುತ್ತ ಚಿನ್ನ ಬೆಳ್ಳಿಗಳಿಂದಾದ ದೊಡ್ಡ ಮೊಟ್ಟೆಯಾಯಿತು.

೩೦. ಮಹಾತೇಜಸ್ವಿಯೂ ಸ್ವಯಂ ಸಂಭೂತನೂ ಆದ ಆ ಪರಮಾತ್ಮನು ಆ ಮೊಟ್ಟೆಯೊಳಗೆ ಹೊಕ್ಕು ತನ್ನ ಮಹಿಮೆಯಿಂದ ಅದೆಲ್ಲವನ್ನೂ ವ್ಯಾಪಿಸಿ ಪುನಃ ವಿಷ್ಣುವೆನಿಸಿಗೊಂಡನು. ವಿಷ್ಣುವೆಂದರೆ ಎಲ್ಲೆಡೆಯಲ್ಲೂ ವ್ಯಾಪಿಸಿರುವವನು ಎಂಬರ್ಥ.

೩೧. ಅದರೊಳಗೆ ಈ ಭಗವಂತನು ಮೊದಲು ಸೂರ್ಯನಾದನು. ಆದಿಭೂತ–ಎಂದರೆ ಮೊತ್ತಮೊದಲನೆಯ ಜೀವನಾದುದರಿಂದ ಆದಿತ್ಯನೆಂದೂ, ಬ್ರಹ್ಮ–ಎಂದರೆ ವೇದವನ್ನು ಹೇಳುವಕಾರಣ ಬ್ರಹ್ಮನೆಂದೂ ಪ್ರಸಿದ್ಧನಾದನು.

**ದಿವಂ ಭೂಮಿಂ ಸಮಕರೋತ್ತದಂಡಶಕಲದ್ವಯಂ ।**
**ಸ ಚಾಕರೋದ್ದಿಶಃ ಸರ್ವಾ ಮಧ್ಯೇ ವ್ಯೋಮ ಚ ಶಾಶ್ವತಂ ॥೩೨॥**

**ಜರಾಯುರ್ಮೇರುಮುಖ್ಯಾಶ್ಚ ಶೈಲಾಸ್ತಸ್ಯಾಭವಂಸ್ತದಾ ।**
**ಯದುಲ್ಬಂ ತದಭೂನ್ಮೇಘಸ್ತಡಿತ್ಸಂಘಾತಮಂಡಲಂ ॥೩೩॥**

**ನದ್ಯೋಽಂಡನಾಮ್ನಃ ಸಂಭೂತಾಃ ಪಿತರೋ ಮನವಸ್ತಥಾ ।**
**ಸಪ್ತ ಯೇಽಮೀ ಸಮುದ್ರಾಶ್ಚ ತೇಽಪಿ ಚಾಂತರ್ಜಲೋದ್ಭವಾಃ ॥೩೪॥**

**ಲವಣೇಕ್ಷುಸುರಾದ್ಯಾಶ್ಚ ನಾನಾರತ್ನ ಸಮನ್ವಿತಾಃ ।**
**ಸ ಸಿಸೃಕ್ಷುರಭೂದ್ದೇವಃ ಪ್ರಜಾಪತಿರರಿಂದಮ ।**
**ತತ್ತೇಜಸಶ್ಚ ತತ್ರೈಷ ಮಾರ್ತಂಡಃ ಸಮಜಾಯತ ॥೩೫॥**

**ಮೃತೇಂಡೇ ಜಾಯತೇ ಯಸ್ಮಾನ್ಮಾರ್ತಂಡಸ್ತೇನ ಸಂಸ್ಮೃತಃ ।**
**ರಜೋಗುಣಮಯಂ ಯತ್ತದ್ರೂಪಂ ತಸ್ಯ ಮಹಾತ್ಮನಃ ॥೩೬॥**

---

೩೨. ಆ ಅಂಡದ ಎರಡು ಹೋಳುಗಳಲ್ಲಿ ಒಂದನ್ನು ಸ್ವರ್ಗಲೋಕವನ್ನಾಗಿಯೂ, ಇನ್ನೊಂದನ್ನು ಭೂಲೋಕವನ್ನಾಗಿಯೂ ಮಾಡಿ, ಮಧ್ಯದಲ್ಲಿ ಶಾಶ್ವತವಾದ ಅಂತರಿಕ್ಷವನ್ನೂ, ಮತ್ತು ಎಲ್ಲಾ ದಿಕ್ಕುಗಳನ್ನು ನಿರ್ಮಿಸಿದನು.

೩೩. ಮೇರು ಮೊದಲಾದ ಪರ್ವತಗಳು ಅದರ ಗರ್ಭಕೋಶವಾದವು. ಮಿಂಚು ಬಳ್ಳಿಗಳಿಂದ ಬೆಳಗುವ ಮೇಘವು ಗರ್ಭಾವರಣವಾಯಿತು.

೩೪. ನದಿಗಳೂ, ಪಿತೃಗಳೂ, ಮನ್ವಂತರಾಧಿಪಗಳೂ ಆ ಅಂಡದಿಂದ ಹುಟ್ಟಿದರು. ಅದರ ಒಳಗಡೆಯ ನೀರಿನಿಂದ ಬಗೆಬಗೆಯ ರತ್ನಗಳೊಡಗೂಡಿದ ಲವಣ, ಇಕ್ಷು, ಸುರಾ, ಸರ್ಪಿ, ದಧಿ, ಕ್ಷೀರ, ಸ್ವಾದೂದಕಗಳೆಂಬ ಸಪ್ತಸಮುದ್ರಗಳೂ ಉತ್ಪನ್ನವಾದವು.

೩೫. ಶತ್ರುಗಳನ್ನು ಅಡಗಿಸುವ ಎಲೈ ರಾಜನೇ, ಆ ಸ್ವಾಮಿಯು ಸೃಷ್ಟಿ ಕಾರ್ಯವನ್ನು ಮಾಡಲೆಳಸಿ ಬ್ರಹ್ಮನಾದನು. ಅವನ ತೇಜಸ್ಸಿನಿಂದ ಅಲ್ಲಿ ಈ ಸೂರ್ಯನು ಹುಟ್ಟಿದನು.

೩೬. ಮೃತವಾದ ಎಂದರೆ ನಿರ್ಜೀವವಾದ ಅಂಡದಲ್ಲಿ ಹುಟ್ಟಿದಕಾರಣ ಅವನು ಮಾರ್ತಾಂಡನೆನಿಸಿದನು. ಆ ಮಹಾತ್ಮನ ರೂಪವು ರಜೋಗುಣಮಯವಾದುದು.

**ಚತುರ್ಮುಖಃ ಸ ಭಗವಾನಭೂಲ್ಲೋಕಪಿತಾಮಹಃ ।**
**ಯೇನ ಸೃಷ್ಟಂ ಜಗತ್ಸರ್ವಂ ಸದೇವಾಸುರಮಾನುಷಂ ।**
**ತಮವೇಹಿ ರಜೋರೂಪಂ ಮಹತ್ಸತ್ವಮುದಾಹೃತಂ ॥೩೭॥**

**ಇತಿ ಶ್ರೀ ಮಾತ್ಸ್ಯೇ ಮಹಾಪುರಾಣೇ ಆದಿಸರ್ಗೇ ಬ್ರಹ್ಮಾಂಡದಲನಂ ನಾಮ ದ್ವಿತೀಯೋಽಧ್ಯಾಯಃ**

---

೩೭. ಸುರರು, ಅಸುರರು ಮತ್ತು ಮನುಷ್ಯರಿಂದೊಡಗೂಡಿದ ಎಲ್ಲ ಲೋಕಗಳನ್ನೂ ಸೃಷ್ಟಿಮಾಡಿದ ಪೂಜ್ಯನಾದ ಬ್ರಹ್ಮದೇವನಿಗೆ ನಾಲ್ಕು ಮುಖಗಳು ಆದುವು. ರಜೋಗುಣಮಯನೆಂದೂ, ಪ್ರಸಿದ್ಧನಾದ ಮಹಾಪುರುಷನೆಂದೂ ಆತನನ್ನು ತಿಳಿ.

## ಅಧ್ಯಾಯದ ಸಾರಾಂಶ

ಭಗವಂತನು ಅಪ್ಪಣೆಮಾಡಿದಂತೆ ಮನುಚಕ್ರವರ್ತಿ ದೋಣಿಯನ್ನು ಸರ್ಪವೆಂಬ ಹಗ್ಗದಿಂದ ಮಹಾಮತ್ಸ್ಯದ ಕೋಡಿಗೆ ಕಟ್ಟಿ, ಭಗವಧ್ಯಾನಮಾಡುತ್ತ ಅದರಲ್ಲಿ ನಿಂತುಕೊಂಡನು. ಅವನು ಪ್ರಳಯಾಂತದಲ್ಲಿ ಮತ್ಸ್ಯಾವತಾರಿಯಾದ ಕೇಶವನನ್ನು ವಿಶ್ವದ ಸೃಷ್ಟಿಲಯಾದಿವೃತ್ತಾಂತಗಳನ್ನು ಕೇಳಿದನು. ನಾರಾಯಣನಿಂದ ಬ್ರಹ್ಮಾಂಡದ ಉತ್ಪತ್ತಿಯನ್ನೂ, ಅದು ಒಡೆದು ಸೂರ್ಯಾದಿಗಳು ಸೃಷ್ಟರಾದುದನ್ನೂ ಮತ್ಸ್ಯಮೂರ್ತಿ ತಿಳಿಸಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಎರಡನೆಯ ಅಧ್ಯಾಯವು ಮುಗಿದುದು



## ಅಥ ಶ್ರೀಮತ್ಸ್ಯಮಹಾಪುರಾಣೇ ತೃತೀಯೋಽಧ್ಯಾಯಃ

|| ಮನುರುವಾಚ ||

ಚತುರ್ಮುಖತ್ವಮಗಮತ್ಕಸ್ಮಾಲ್ಲೋಕಪಿತಾಮಹಃ ।
ಕಥಂ ತು ಲೋಕಾನಸೃಜದ್ಬ್ರಹ್ಮಾ ಬ್ರಹ್ಮವಿದಾಂ ವರಃ || ೧ ||

|| ಮತ್ಸ್ಯ ಉವಾಚ ||

ತಪಶ್ಚಚಾರ ಪ್ರಥಮಮಮರಾಣಾಂ ಪಿತಾಮಹಃ ।
ಆವಿರ್ಭೂತಾಸ್ತತೋ ವೇದಾಃ ಸಾಂಗೋಪಾಂಗಪದಕ್ರಮಾಃ || ೨ ||

ಪುರಾಣಂ ಸರ್ವಶಾಸ್ತ್ರಾಣಾಂ ಪ್ರಥಮಂ ಬ್ರಹ್ಮಣಾ ಸ್ಮೃತಂ ।
ನಿತ್ಯಂ ಶಬ್ದಮಯಂ ಪುಣ್ಯಂ ಶತಕೋಟಿಪ್ರವಿಸ್ತರಂ || ೩ ||

---

೧. ಮನು ಹೇಳಿದನು :—ಲೋಕಗಳಿಗೆಲ್ಲಾ ಪಿತಾಮಹನೂ, ವೇದಜ್ಞರಲ್ಲಿ ಶ್ರೇಷ್ಠನೂ ಆದ ಬ್ರಹ್ಮನಿಗೆ ನಾಲ್ಕು ಮುಖಗಳೇಕೆ ಬಂದುವು? ಅವನು ಲೋಕಗಳನ್ನು ಸೃಷ್ಟಿಸಿದುದೆಂತು?

೨. ಮತ್ಸ್ಯರೂಪನಾದ ಭಗವಂತನು ಹೇಳಿದನು :—ಬ್ರಹ್ಮನು ಮೊದಲು ತಪಸ್ಸನ್ನು ಮಾಡಿದನು. ಅಂಗ, ಉಪಾಂಗ, ಪದ, ಕ್ರಮ ಇವುಗಳಿಂದ ಕೂಡಿದ ವೇದಗಳು ಪ್ರತ್ಯಕ್ಷವಾದುವು.*

೩. ಬ್ರಹ್ಮನು ಸರ್ವಶಾಸ್ತ್ರಗಳಿಗೂ ಮೂಲವೆನಿಸಿ ಅನಾದಿಯೂ, ನಿತ್ಯವೂ, ಶಬ್ದರೂಪವೂ, ಪುಣ್ಯಪ್ರದವೂ, ನೂರಾರು ಕೋಟಿ ಗ್ರಂಥವಿಸ್ತೃತವೂ ಆದ ಪುರಾಣ ರಾಶಿಯನ್ನು ಮನಸಲ್ಲಿ ಸ್ಮರಿಸಿದನು.

---

* ವೇದಾರ್ಥಜ್ಞಾನಕ್ಕೆ ಅತ್ಯಾವಶ್ಯಕಗಳಾದ ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪ ಎಂಬ ಆರು ಶಾಸ್ತ್ರಗಳಿಗೆ ವೇದಾಂಗಗಳೆಂದು ಹೆಸರು. ಪುರಾಣಗಳು, ಧರ್ಮಶಾಸ್ತ್ರಗಳು, ನ್ಯಾಯಶಾಸ್ತ್ರ, ಮೀಮಾಂಸಾಶಾಸ್ತ್ರ ಇವು ಉಪಾಂಗಗಳು. ಅರ್ಥಕ್ಕನುಸಾರವಾಗಿ ಸಂಹಿತಾರೂಪವಾದ ವೇದವನ್ನು ಪದವಿಭಾಗ ಮಾಡುವುದೇ ಪದ. ಗೊತ್ತಾದ ರೀತಿಯಲ್ಲಿ ಈ ಪದಗಳ ಆವೃತ್ತಿಯು ಕ್ರಮವೆನಿಸುವುದು.

**ಅನಂತರಂ ಚ ವಕ್ತ್ರೇಭ್ಯೋ ವೇದಾಸ್ತಸ್ಯ ವಿನಿಃಸೃತಾಃ ।**
**ಮೀಮಾಂಸಾ ನ್ಯಾಯವಿದ್ಯಾಶ್ಚ ಪ್ರಮಾಣಾಷ್ಟಕಸಂಯುತಾಃ ॥ ೪ ॥**

**ವೇದಾಭ್ಯಾಸರತಸ್ಯಾಸ್ಯ ಪ್ರಜಾಕಾಮಸ್ಯ ಮಾನಸಾಃ ।**
**ಮನಸಃ ಪೂರ್ವಸೃಷ್ಟಾ ವೈ ಜಾತಾ ಯತ್ತೇನ ಮಾನಸಾಃ ॥ ೫ ॥**

**ಮರೀಚಿರಭವತ್ಪೂರ್ವಂ ತತೋಽತ್ರಿರ್ಭಗವಾನೃಷಿಃ ।**
**ಅಂಗಿರಾಶ್ಚಾಭವತ್ಪಶ್ಚಾತ್ಪುಲಸ್ತ್ಯಸ್ತದನಂತರಂ ॥ ೬ ॥**

**ತತಃ ಪುಲಹನಾಮಾ ವೈ ತತಃ ಕ್ರತುರಜಾಯತ ।**
**ಪ್ರಚೇತಾಶ್ಚ ತತಃ ಪುತ್ರೋ ವಸಿಷ್ಠಶ್ಚಾಭವತ್ಪುನಃ ॥ ೭ ॥**

**ಪುತ್ರೋ ಭೃಗುರಭೂತ್ತದ್ವನ್ನಾರದೋಽಪ್ಯಚಿರಾದಭೂತ್ ।**
**ದಶೇಮಾನ್ಮಾನಸಾನ್ ಬ್ರಹ್ಮಾ ಮುನೀನ್ ಪುತ್ರಾನಜೀಜನತ್ ॥ ೮ ॥**

---

೪. ಬಳಿಕ ಅವನ ಮುಖಗಳಿಂದ ವೇದಗಳೂ, ಕರ್ಮಕಾಂಡವನ್ನೂ, ಜ್ಞಾನಕಾಂಡವನ್ನೂ ಪ್ರತಿಪಾದಿಸುವ ಪೂರ್ವೋತ್ತರ ಮೀಮಾಂಸಾ ಶಾಸ್ತ್ರಗಳೂ, ಪ್ರತ್ಯಕ್ಷ, ಅನುಮಾನ, ಶಬ್ದ, ಉಪಮಾನ, ಅರ್ಥಾಪತ್ತಿ, ಅನುಪಲಬ್ಧಿ, ಸಂಭವ, ಐತಿಹ್ಯಗಳೆಂಬ ಎಂಟು ಪ್ರಮಾಣಗಳಿಂದ ಕೂಡಿದ ನ್ಯಾಯಶಾಸ್ತ್ರವೂ ಹೊರಟವು.

೫. ವೇದಾಭ್ಯಾಸದಲ್ಲಿ ಆಸಕ್ತನಾಗಿ ಪ್ರಜಾಸೃಷ್ಟಿಯಲ್ಲಿ ಅಭಿಲಾಷೆಯುಳ್ಳ ಬ್ರಹ್ಮನು ಮಾನಸಪುತ್ರರನ್ನು ಮೊದಲು ಸೃಷ್ಟಿಸಿದನು. ಮನಸ್ಸಿನಿಂದ ಹುಟ್ಟಿದವರಾದ ಕಾರಣ ಅವರಿಗೆ ಮಾನಸರೆಂದು ಹೆಸರು ಬಂದಿತು.

೬–೮. ಮೊದಲು ಮರೀಚಿಯು ಹುಟ್ಟಿದನು. ಬಳಿಕ ಷಡ್ಗುಣಪರಿಪೂರ್ಣನಾದ ಅತ್ರಿಮುನಿಯೂ, ಅನಂತರ ಅಂಗಿರಸನೂ, ತರುವಾಯ ಪುಲಸ್ತ್ಯನೂ, ಅಲ್ಲಿಂದ ಮುಂದೆ ಕ್ರಮವಾಗಿ ಪುಲಹ, ಕ್ರತು, ಪ್ರಚೇತಸ, ವಸಿಷ್ಠ, ಭೃಗು ಮತ್ತು ನಾರದ ಎಂಬ ಮಕ್ಕಳೂ ಜನಿಸಿದರು. ಈ ಹತ್ತು ಜನ ಮುನಿಗಳೂ ಬ್ರಹ್ಮನ ಮಾನಸಪುತ್ರರಾದರು:

**ಶಾರೀರಾನಥ ವಕ್ಷ್ಯಾಮಿ ಮಾತೃಹೀನಾನ್ ಪ್ರಜಾಪತೇಃ ।**
**ಅಂಗುಷ್ಠಾದ್ದಕ್ಷಿಣಾದ್ದಕ್ಷಃ ಪ್ರಜಾಪತಿರಜಾಯತ ॥ ೯ ॥**

**ಧರ್ಮಃ ಸ್ತನಾಂತಾದಭವದ್ಧೃದಯಾತ್ಕುಸುಮಾಯುಧಃ ।**
**ಭ್ರೂಮಧ್ಯಾದಭವತ್ಕ್ರೋಧೋ ಲೋಭಶ್ಚಾಧರ ಸಂಭವಃ ॥೧೦॥**

**ಬುದ್ಧೇರ್ಮೋಹಃ ಸಮುಭವದಹಂಕಾರಾದಭೂನ್ಮನಃ ।**
**ಪ್ರಮೋದಶ್ಚಾಭವತ್ಕಂಠಾನ್ಮೃತ್ಯುರ್ಲೋಚನತೋ ನೃಪ ॥**
**ಭರತಃ ಕರಮಧ್ಯಾತ್ತು ಬ್ರಹ್ಮಸೂನುರಭೂತ್ತತಃ ॥೧೧॥**

**ಏತೇ ನವ ಸುತಾ ರಾಜನ್ಕನ್ಯಾ ಚ ದಶಮೀ ಪುನಃ ।**
**ಅಂಗಜಾ ಇತಿ ವಿಖ್ಯಾತಾ ದಶಮೀ ಬ್ರಹ್ಮಣಃ ಸುತಾ ॥೧೨॥**

**॥ ಮನುರುವಾಚ ॥**

**ಬುದ್ಧೇರ್ಮೋಹೋ ಹ್ಯಹಂಕಾರಾನ್ಮನೋಽಭೂದಿತಿ ಕೀರ್ತಿತಂ ।**
**ಅಹಂಕಾರಸುತಃ ಕೋ ವಾ ಬುದ್ಧಿರ್ನಾಮ ಕಿಮುಚ್ಯತೇ ॥೧೩॥**

---

೯-೧೧. ಇನ್ನು ಮುಂದೆ ತಾಯಿಯಿಲ್ಲದೆ ಪ್ರಜಾಪತಿಯ ಶರೀರದಿಂದಲೇ ಹುಟ್ಟಿದವರನ್ನು ಹೇಳುವೆನು. ಬಲಗೈಯ ಹೆಬ್ಬೆರಳಿನಿಂದ ದಕ್ಷಪ್ರಜಾಪತಿಯು ಜನಿಸಿದನು. ಸ್ತನದಿಂದ ಧರ್ಮನೂ, ಹೃದಯದಿಂದ ಮನ್ಮಥನೂ ಹುಟ್ಟಿದರು. ಹುಬ್ಬಿನಮಧ್ಯದಿಂದ ಕ್ರೋಧ, ತುಟಿಯಿಂದ ಲೋಭ, ಬುದ್ಧಿಯಿಂದ ಮೋಹ, ಅಹಂಕಾರದಿಂದ ಮನ ಇವರು ಉದ್ಭವಿಸಿದರು. ಓ ರಾಜಾ, ಕಂಠದಿಂದ ಸಂತೋಷವೂ, ಕಣ್ಣಿನಿಂದ ಮೃತ್ಯುವೂ ಮೈವೆತ್ತರು. ಬಳಿಕ ಅಂಗೈಯ ಮಧ್ಯದಿಂದ ಬ್ರಹ್ಮಪುತ್ರನಾದ ಭರತನು ಸಂಭವಿಸಿದನು.

೧೨. ಎಲೈ ದೊರೆಯೇ, ಈ ಒಂಬತ್ತು ಜನರೂ ಗಂಡುಮಕ್ಕಳು; ಹತ್ತನೆಯವಳಾದರೋ ಮಗಳು. ಅವಳು ಅಂಗಜೆಯೆಂದು ಪ್ರಸಿದ್ಧಳಾದಳು.

೧೩. ಮನು ಹೇಳಿದನು:—ಬುದ್ಧಿಯಿಂದ ಮೋಹವೂ, ಅಹಂಕಾರದಿಂದ ಮನಸ್ಸೂ ಹುಟ್ಟಿದುವೆಂದು ಹೇಳಿದೆಯಷ್ಟೆ. ಅಹಂಕಾರಕ್ಕೆ ಪುತ್ರನೆಂದರೇನು? ಬುದ್ಧಿಯೆಂಬುದಾವುದು?

॥ ಮತ್ಸ್ಯ ಉವಾಚ ॥

ಸತ್ವಂ ರಜಸ್ತಮಶ್ಚೈವ ಗುಣತ್ರಯಮುದಾಹೃತಂ ।
ಸಾಮ್ಯಾವಸ್ಥಿತಿರೇತೇಷಾಂ ಪ್ರಕೃತಿಃ ಪರಿಕೀರ್ತಿತಾ ॥೧೪॥

ಕೇಚಿತ್ಪ್ರಧಾನಮಿತ್ಯಾಹುರವ್ಯಕ್ತಮಪರೇ ಜಗುಃ ।
ಏತದೇವ ಪ್ರಜಾಸೃಷ್ಟಿಂ ಕರೋತಿ ವಿಕರೋತಿ ಚ ॥೧೫॥

ಗುಣೇಭ್ಯಃ ಕ್ಷುಭ್ಯಮಾಣೇಭ್ಯಸ್ತ್ರಯೋ ದೇವಾ ವಿಜಜ್ಞಿರೇ ।
ಏಕಾ ಮೂರ್ತಿಸ್ತ್ರಯೋ ಭಾಗಾ ಬ್ರಹ್ಮವಿಷ್ಣುಮಹೇಶ್ವರಾಃ ॥೧೬॥

ಸವಿಕಾರಾತ್ಪ್ರಧಾನಾತ್ತು ಮಹತ್ತತ್ವಂ ಪ್ರಜಾಯತೇ ।
ಮಹಾನಿತಿ ಯತಃ ಖ್ಯಾತಿರ್ಲೋಕಾನಾಂ ಜಾಯತೇ ಸದಾ ॥೧೭॥

ಅಹಂಕಾರಶ್ಚ ಮಹತೋ ಜಾಯತೇ ಮಾನವರ್ಧನಃ ।
ಇಂದ್ರಿಯಾಣಿ ತತಃ ಪಂಚ ವಕ್ಷ್ಯೇ ಬುದ್ಧಿವಶಾನಿ ತು ॥
ಪ್ರಾದುರ್ಭವಂತಿ ಚಾನ್ಯಾನಿ ತಥಾ ಕರ್ಮವಶಾನಿ ತು ॥೧೮॥

---

೧೪-೧೫. ಮತ್ಸ್ಯರೂಪನಾದ ಭಗವಂತನು ಹೇಳಿದನು:—ಸತ್ವಗುಣ, ರಜೋಗುಣ, ತಮೋಗುಣವೆಂದು ಮೂರು ಗುಣಗಳಿವೆ. ಇವುಗಳ ಸಾಮ್ಯಸ್ಥಿತಿಯು ಪ್ರಕೃತಿಯೆನಿಸುವುದು. ಇದನ್ನು ಕೆಲವರು ಪ್ರಧಾನವೆಂದೂ, ಮತ್ತೆ ಕೆಲವರು ಅವ್ಯಕ್ತವೆಂದೂ ಹೇಳುವರು. ಪ್ರಜಾಸೃಷ್ಟಿಯನ್ನು ಮಾಡುವುದೂ ಇದೇ; ಅದರಲ್ಲಿ ವ್ಯತ್ಯಾಸವನ್ನು ಹುಟ್ಟಿಸುವುದೂ ಇದೇ.

೧೬. ಗುಣಗಳು ಸಾಮ್ಯಸ್ಥಿತಿಯನ್ನು ಬಿಟ್ಟು ಕ್ಷೋಭವನ್ನು ಪಡೆಯಲು ಅವುಗಳಿಂದ ಮೂವರು ದೇವತೆಗಳು ಹುಟ್ಟಿದರು. ಶರೀರವೊಂದೇ; ಬ್ರಹ್ಮವಿಷ್ಣು ಮಹೇಶ್ವರರೆಂಬವರು ಅದರ ಮೂರು ಭಾಗಗಳು.

೧೭. ವಿಕಾರವನ್ನೈದಿದ ಪ್ರಧಾನತತ್ವದಿಂದ ಮಹತ್ತೆಂಬ ತತ್ವವು ಹುಟ್ಟುತ್ತದೆ. ಈ ತತ್ವದಿಂದಲೇ ಲೋಕದಲ್ಲಿ ಹಿರಿಯದು ಎಂಬ ಖ್ಯಾತಿಬರುತ್ತದೆ. ಬುದ್ಧಿ ಎಂಬುದೂ ಇದೆ.

೧೮. ಮಹತ್ತತ್ವದಿಂದ ಅಭಿಮಾನವನ್ನು ಬೆಳೆಸುವ ಅಹಂಕಾರವೆಂಬುದು ಹುಟ್ಟುತ್ತದೆ. ಅದರಿಂದ ಐದು ಜ್ಞಾನೇಂದ್ರಿಯಗಳೂ ಐದು ಕರ್ಮೇಂದ್ರಿಯಗಳೂ ಉತ್ಪನ್ನವಾಗುವುವು. ಅವುಗಳನ್ನು ಹೇಳವೆನು ಕೇಳು.

**ಶ್ರೋತ್ರಂ ತ್ವಕ್ಚಕ್ಷುಷೀ ಜಿಹ್ವಾ ನಾಸಿಕಾ ಚ ಯಥಾಕ್ರಮಂ ।**
**ಪಾಯೂಪಸ್ಥಂ ಹಸ್ತಪಾದಂ ವಾಕ್ಚೇತೀಂದ್ರಿಯಸಂಗ್ರಹಃ ॥೧೯॥**

**ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋ ಗಂಧಶ್ಚ ಪಂಚಮಃ ।**
**ಉತ್ಸರ್ಗಾನಂದನಾದಾನಗತ್ಯಾಲಾಪಾಶ್ಚ ತತ್ಕ್ರಿಯಾಃ ॥೨೦॥**

**ಮನ ಏಕಾದಶಂ ತೇಷಾಂ ಕರ್ಮಬುದ್ಧಿಗುಣಾನ್ವಿತಂ ।**
**ಇಂದ್ರಿಯಾವಯವಾಸ್ಸೂಕ್ಷ್ಮಾಯಾನ್ಯಂಛಂತಿ ಮನೀಷಿಣಃ ॥೨೧॥**

**ಶ್ರಯಂತಿ ಯಸ್ಮಾತ್ತನ್ಮಾತ್ರಾಃ ಶರೀರಂ ತೇನ ಸಂಸ್ಮೃತಂ ।**
**ಶರೀರಯೋಗಾಜ್ಜೀವೋಽಪಿ ಶರೀರೀ ಗದ್ಯತೇ ಬುಧೈಃ ॥೨೨॥**

**ಮನಃ ಸೃಷ್ಟಿಂ ವಿಕುರುತೇ ಚೋದ್ಯಮಾನಂ ಸಿಸೃಕ್ಷಯಾ ।**
**ಆಕಾಶಂ ಶಬ್ದತನ್ಮಾತ್ರಾದಭೂಚ್ಛಬ್ದಗುಣಾತ್ಮಕಂ ॥೨೩॥**

---

೧೯. ಕಿವಿ, ಚರ್ಮ, ಕಣ್ಣು, ನಾಲಗೆ, ಮೂಗು ಇವು ಜ್ಞಾನೇಂದ್ರಿಯಗಳು. ಗುದ, ಗುಹ್ಯ, ಕೈ, ಕಾಲು, ಮಾತು ಈ ಐದೂ ಕರ್ಮೇಂದ್ರಿಯಗಳು.

೨೦. ಜ್ಞಾನೇಂದ್ರಿಯಗಳೈದೂ ಕ್ರಮವಾಗಿ ಶಬ್ದ, ಸ್ಪರ್ಶ, ರೂಪ, ರುಚಿ ಮತ್ತು ವಾಸನೆ ಇವನ್ನು ತಿಳಿಸುವುವು. ದೇಹದ ಕಶ್ಮಲವನ್ನು ಹೊರಕ್ಕೆ ಬಿಡುವುದು, ಆನಂದಪಡಿಸುವುದು, ತೆಗೆದುಕೊಳ್ಳುವುದು, ನಡೆಯುವುದು, ನುಡಿಯುವುದು ಇವು ಕರ್ಮೇಂದ್ರಿಯಗಳೈದರಿಂದ ಕ್ರಮವಾಗಿ ನಡೆಯುವ ಕೆಲಸಗಳು.

೨೧-೨೨. ಮನಸ್ಸು ಆ ಕರ್ಮೇಂದ್ರಿಯಜ್ಞಾನೇಂದ್ರಿಯಗಳ ಗುಣದಿಂದ ಕೂಡಿದ ಹನ್ನೊಂದನೆಯ ಇಂದ್ರಿಯ. ಇಂದ್ರಿಯಗಳ ಅವಯವಗಳು ಬಹು ಸೂಕ್ಷ್ಮವಾದುವು. ಜ್ಞಾನಿಗಳು ಅವುಗಳನ್ನು ನಿಗ್ರಹವಲ್ಲಿಟ್ಟಿರುವರು. ಇಂದ್ರಿಯಗಳೂ, ತನ್ಮಾತ್ರಗಳೂ ಆಶ್ರಯಿಸಿರುವ ಕಾರಣ ದೇಹಕ್ಕೆ ಶರೀರವೆಂಬ ಹೆಸರಾಯಿತು. ಶರೀರದ ಸಂಬಂಧದಿಂದ ಜೀವನನ್ನೂ ಸಹ ಪ್ರಾಜ್ಞರು ಶರೀರಿ ಎನ್ನುವರು.

೨೩-೨೭. ಸಾತ್ವಿಕಾಹಂಕಾರದಿಂದ ಮನಸ್ಸು ಹುಟ್ಟಿದಬಳಿಕ, ಸೃಷ್ಟಿಕಾರ್ಯವನ್ನು ಮುಂದುವರಿಸಲೆಳಸಿದ ತಾಮಸಾಹಂಕಾರದಿಂದ ಶಬ್ದತನ್ಮಾತ್ರವು ಜನಿಸಿತು. ಶಬ್ದತನ್ಮಾತ್ರದಿಂದ ಆಕಾಶವು ಹುಟ್ಟಿತು. ಇದರ ಗುಣ ಶಬ್ದ. ಆಕಾಶವು ವಿಕಾರ ಹೊಂದಿ ವಾಯುವು ಜನಿಸಿತು. ಇದರಲ್ಲಿ ಶಬ್ದ ಮತ್ತು ಸ್ಪರ್ಶಗಳೆಂಬ ಎರಡು ಗುಣಗಳಿವೆ. ಸ್ಪರ್ಶತನ್ಮಾತ್ರವುಳ್ಳ ವಾಯುವಿನಿಂದ ತೇಜಸ್ಸು ಉದ್ಭವಿಸಿತು. ಇದಕ್ಕೆ

**ಆಕಾಶವಿಕೃತೇರ್ವಾಯುಃ ಶಬ್ದಸ್ಪರ್ಶಗುಣೋಽಭವತ್ ।**
**ವಾಯೋಶ್ಚ ಸ್ಪರ್ಶತನ್ಮಾತ್ರಾತ್ತೇಜಶ್ಚಾವಿರಭೂತ್ತತಃ ॥೨೪॥**

**ತ್ರಿಗುಣಂ ತದ್ವಿಕಾರೇಣ ತಚ್ಛಬ್ದಸ್ಪರ್ಶರೂಪವತ್ ।**
**ತೇಜೋವಿಕಾರಾದಭವದ್ವಾರಿ ರಾಜಂಶ್ಚತುರ್ಗುಣಂ ॥೨೫॥**

**ರಸತನ್ಮಾತ್ರಸಂಭೂತಂ ಪ್ರಾಯೋ ರಸಗುಣಾತ್ಮಕಂ ।**
**ಭೂಮಿಸ್ತು ಗಂಧತನ್ಮಾತ್ರಾದಭೂತ್ಪಂಚಗುಣಾನ್ವಿತಾ ॥೨೬॥**

**ಪ್ರಾಯೋ ಗಂಧಗುಣಾ ಸಾ ತು ಬುದ್ಧಿರೇಷಾ ಗರೀಯಸೀ ।**
**ಏಭಿಃ ಸಂಪಾದಿತಂ ಭುಙ್ಕ್ತೇ ಪುರುಷಃ ಪಂಚವಿಂಶಕಃ ॥೨೭॥**

**ಈಶ್ವರೇಚ್ಛಾವಶಃ ಸೋಽಪಿ ಜೀವಾತ್ಮಾ ಕಥ್ಯತೇ ಬುಧೈಃ ।**
**ಏವಂ ಷಡ್ವಿಂಶಕಂ ಪ್ರೋಕ್ತಂ ಶರೀರಮಿಹ ಮಾನವಂ ॥೨೮॥**

**ಸಾಂಖ್ಯಂ ಸಂಖ್ಯಾತ್ಮಕತ್ವಾಚ್ಚ ಕಪಿಲಾದಿಭಿರುಚ್ಯತೇ ।**
**ಏತತ್ತತ್ವಾತ್ಮಕಂ ಕೃತ್ವಾ ಜಗದ್ವೇಧಾ ಅಜೀಜನತ್ ॥೨೯॥**

---

ಶಬ್ದ, ಸ್ಪರ್ಶ, ರೂಪಗಳೆಂಬ ಮೂರು ಗುಣಗಳುಂಟು. ಇದು ರೂಪತನ್ಮಾತ್ರಕವಾದುದು. ಈ ತೇಜಸ್ಸಿನ ವಿಕಾರದಿಂದ ಶಬ್ದ, ಸ್ಪರ್ಶ, ರೂಪ, ರಸಗಳೆಂಬ ಚತುರ್ಗುಣವುಳ್ಳ ರಸತನ್ಮಾತ್ರಕವಾದ ಜಲವು ಜನಿಸಿತು. ಇದರಿಂದ ಗಂಧತನ್ಮಾತ್ರವೂ, ಅದರಿಂದ ಶಬ್ದಾದಿಪಂಚಗುಣಾತ್ಮಕವಾದ ಭೂಮಿಯೂ ಉತ್ಪನ್ನವಾದುವು. ಇದರ ಮುಖ್ಯ ಗುಣವು ಗಂಧ. ಹೀಗೆ ಜಗತ್ಸೃಷ್ಟಿಗೆ ಕಾರಣವಾದ ಆ ಬುದ್ಧಿ ಅಥವಾ ಮಹತ್ತತ್ವವೇ ಶ್ರೇಷ್ಠವಾದುದು.

ಮೇಲೆ ಹೇಳಿದ ಇಪ್ಪತ್ತನಾಲ್ಕು ತತ್ವಗಳಿಗಿಂತ ಬೇರೆಯವನಾಗಿ ಎಂದರೆ ಇಪ್ಪತ್ತೈದನೆಯವನಾಗಿರುವ ಜೀವನು ಈ ಇಂದ್ರಿಯಾದಿಗಳಿಂದ ಲಬ್ಧವಾದ ಸುಖ ದುಃಖಗಳನ್ನು ಅನುಭವಿಸುತ್ತಾನೆ.

೨೮. ಆ ಜೀವಾತ್ಮನೂ ಕೂಡ ಈಶ್ವರನ ಇಚ್ಛಾಧೀನನೆಂದು ಜ್ಞಾನಿಗಳು ಹೇಳುತ್ತಾರೆ. ಹೀಗೆ ಮನುಷ್ಯ ಶರೀರವು ಇಪ್ಪತ್ತಾರು ತತ್ವಗಳ ನೆಲೆಯೆಂದು ಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿದೆ.

೨೯. ಕಪಿಲಾದಿ ಮಹರ್ಷಿಗಳು ಸಂಖ್ಯಾರೂಪಗಳಾದುದರಿಂದ ಈ ತತ್ವಗಳನ್ನು ಸಾಂಖ್ಯವೆನ್ನುತ್ತಾರೆ. ಬ್ರಹ್ಮನು ಜಗತ್ತನ್ನು ಈ ತತ್ವರೂಪವಾಗಿ ನಿರ್ಮಿಸಿದನು.

**ಸಾವಿತ್ರೀಂ ಲೋಕಸೃಷ್ಟ್ಯರ್ಥಂ ಹೃದಿ ಕೃತ್ವಾ ಸಮಾಸ್ಥಿತಃ ।**
**ತತಃ ಸಂಜಪತಸ್ತಸ್ಯ ಭಿತ್ವಾ ದೇಹಮಕಲ್ಮಷಂ** ||೩೦||

**ಸ್ತ್ರೀರೂಪಮರ್ಧಮಕರೋದರ್ಧಂ ಪುರುಷರೂಪವತ್ ।**
**ಶತರೂಪಾ ಚ ಸಾ ಖ್ಯಾತಾ ಸಾವಿತ್ರೀ ಚ ನಿಗದ್ಯತೇ** ||೩೧||

**ಸರಸ್ವತ್ಯಥ ಗಾಯತ್ರೀ ಬ್ರಹ್ಮಾಣೀ ಚ ಪರಂತಪ ।**
**ತತಃ ಸ್ವದೇಹಸಂಭೂತಾಮಾತ್ಮಜಾಮಿತ್ಯಕಲ್ಪಯತ್** ||೩೨||

**ದೃಷ್ಟ್ವಾ ತಾಂ ವ್ಯಥಿತಸ್ತಾವತ್ಕಾಮಬಾಣಾರ್ದಿತೋ ವಿಭುಃ ।**
**ಅಹೋ ರೂಪಮಹೋ ರೂಪಮಿತಿ ಚಾಹ ಪ್ರಜಾಪತಿಃ** ||೩೩||

**ತತೋ ವಸಿಷ್ಠಪ್ರಮುಖಾ ಭಗಿನೀಮಿತಿ ಚುಕ್ರುಶುಃ ।**
**ಬ್ರಹ್ಮಾ ನ ಕಿಂಚದ್ದದೃಶೇ ತನ್ಮುಖಾಲೋಕನಾದೃತೇ** ||೩೪||

---

೩೦-೩೨. ಬಳಿಕ ಬ್ರಹ್ಮನು ಲೋಕಸೃಷ್ಟಿಗಾಗಿ ಮನಸ್ಸಿನಲ್ಲಿ ಸಾವಿತ್ರಿಯನ್ನು ಏಕಾಗ್ರದಿಂದ ಧ್ಯಾನಿಸಿದನು. ಮಂತ್ರಜಪಮಾಡುತ್ತಿರುವ ಅವನ ನಿಷ್ಕಲ್ಮಷವಾದ ದೇಹವನ್ನು ಸೀಳಿಕೊಂಡು ಅರ್ಧ ಸ್ತ್ರೀರೂಪವೂ, ಅರ್ಧ ಪುರುಷರೂಪವೂ ಆದ ಕನ್ಯೆಯೊಬ್ಬಳು ಹುಟ್ಟಿದಳು. ಅವಳು ಶತರೂಪೆಯೆಂದು ಪ್ರಸಿದ್ಧಳಾಗಿರುವಳು. ಸಾವಿತ್ರಿ, ಸರಸ್ವತಿ, ಗಾಯತ್ರಿ ಮತ್ತು ಬ್ರಹ್ಮಾಣಿಯೆಂದೂ ಅವಳಿಗೆ ಹೆಸರು. ಶತ್ರುಸಂತಾಪಕನಾದ ಓ ರಾಜಾ, ತನ್ನ ದೇಹದಲ್ಲಿ ಹುಟ್ಟಿದ ಅವಳನ್ನು ಬ್ರಹ್ಮನು ತನ್ನ ಮಗಳೆಂದು ತಿಳಿದನು.

೩೩. ಮನ್ಮಥಬಾಣಪೀಡಿತನಾದ ಬ್ರಹ್ಮದೇವನಾದರೋ, ಅವಳನ್ನು ನೋಡಿ ತಳಮಳಗೊಂಡು, "ಅಹೋ! ಎಂತಹ ರೂಪವು! ಅಹೋ! ಇದೆಂತಹ ರೂಪವು!" ಎಂದು ಹೇಳಿದನು.

೩೪. ಬಳಿಕ ವಸಿಷ್ಠಾದಿಮುನಿಗಳು "ನಮ್ಮ ಸಹೋದರಿಯನ್ನು ನೋಡಿ ಹೀಗೆ ಹೇಳಬಹುದೇ?" ಎಂದು ಕೂಗಿಕೊಂಡರು. ಅವಳ ಮುಖವನ್ನು ನೋಡುವುದು ಹೊರತು ಬ್ರಹ್ಮನಿಗೆ ಮತ್ತೇನೂ ತೋರಲಿಲ್ಲ.

**ಅಹೋ ರೂಪಮಹೋ ರೂಪಮಿತಿ ಪ್ರಾಹಪುನಃ ಪುನಃ ।**
**ತತಃ ಪ್ರಣಾಮನಮ್ರಾಂ ತಾಂ ಪುನರೇವಾಭ್ಯಲೋಕಯತ್ ॥೩೫॥**

**ಅಥ ಪ್ರದಕ್ಷಿಣಂ ಚಕ್ರೇ ಸಾ ಪಿತುರ್ವರವರ್ಣಿನೀ ।**
**ಪುತ್ರೇಭ್ಯೋ ಲಜ್ಜಿತಸ್ಯಾಸ್ಯ ತದ್ರೂಪಾಲೋಕನೇಚ್ಛಯಾ ॥೩೬॥**

**ಆವಿರ್ಭೂತಂ ತತೋ ವಕ್ತ್ರಂ ದಕ್ಷಿಣಂ ಪಾಂಡುಗಂಡವತ್ ।**
**ವಿಸ್ಮಯಸ್ಫುರದೋಷ್ಠಂ ಚ ಪಾಶ್ಚಾತ್ಯಮುದಗಾತ್ತತಃ ॥೩೭॥**

**ಚತುರ್ಥಮಭವತ್ಪಶ್ಚಾದ್ವಾಮಂ ಕಾಮಶರಾತುರಂ ।**
**ತತೋಽನ್ಯದಭವತ್ತಸ್ಯ ಕಾಮಾತುರತಯಾ ತಥಾ ॥೩೮॥**

**ಉತ್ಪತಂತ್ಯಾಸ್ತದಾಕಾಶ ಆಲೋಕನಕುತೂಹಲಾತ್ ।**
**ಸೃಷ್ಟ್ಯರ್ಥಂ ಯತ್ಕೃತಂ ತೇನ ತಪಃ ಪರಮದಾರುಣಂ ॥೩೯॥**

---

೩೫. ಎಂತಹ ಅದ್ಭುತರೂಪವು! ಎಂತಹ ಅದ್ಭುತರೂಪವು!'' ಎಂದು ಮತ್ತೆ ಮತ್ತೆ ಹೇಳಿದನು. ಅನಂತರ ನಮಸ್ಕಾರಮಾಡಲು ಬಗ್ಗಿದ ಅವಳನ್ನು ತಿರುಗಿ ನೋಡಿದನು.

೩೬-೩೮. ಬಳಿಕ ಆ ಸುಂದರಿಯು ತಂದೆಗೆ ಪ್ರದಕ್ಷಿಣೆಮಾಡಿದಳು. ಅವಳ ಸೌಂದರ್ಯವನ್ನು ನೋಡ ಬಯಸಿ, ಮಕ್ಕಳೆದುರಿಗೆ ಹಾಗೆ ಮಾಡಲು ನಾಚಿಕೊಳ್ಳುತ್ತಿದ್ದ ಆ ಬ್ರಹ್ಮನಿಗೆ ಬಲಗಡೆ ಬಿಳಿಯ ಕುಪ್ಪಿನಂತೆ ಒಂದು ಮುಖವು ತಲೆದೋರಿತು. ಅನಂತರ ಆಶ್ಚರ್ಯದಿಂದ ತುಟಿಗಳು ನಡುಗುತ್ತಿರಲು, ಮತ್ತೊಂದು ಮುಖವು ಹಿಂದುಗಡೆ ಮೂಡಿತು. ಕೊನೆಗೆ ನಮಸ್ಕಾರಮಾಡಿ ಮೇಲಕ್ಕೇಳುವ ಅವಳ ರೂಪವನ್ನು ನೋಡಬೇಕೆಂಬ ಕುತೂಹಲದಿಂದ ಮನ್ಮಥಶರಪೀಡಿತವಾಗಿ ಆತುರದಿಂದ ಕೂಡಿದ ಇನ್ನೊಂದು ಮುಖವು ಎಡಗಡೆ ಹುಟ್ಟಿತು. ಇದು ನಾಲ್ಕನೆಯದು.

೩೯-೪೦. ಜಗತ್ತಿನ ಸೃಷ್ಟಿಗಾಗಿ ಪಿತಾಮಹನು ಆಚರಿಸಿದ ಅತಿ ಘೋರವಾದ ತಪಸ್ಸೆಲ್ಲವೂ ತನ್ನ ಮಗಳನ್ನೇ ಮೋಹಿಸಿದ ಕಾರಣ ನಷ್ಟವಾಯಿತು. ವೇದ

**ತತ್ಸರ್ವಂ ನಾಶಮಗಮತ್ಸ್ವಸುತೋಪಗಮೇಚ್ಛಯಾ ।**
**ತೇನೋರ್ಧ್ವಂ ವಕ್ತ್ರಮಭವತ್ಪಂಚಮಂ ತಸ್ಯ ಧೀಮತಃ ।**
**ಆವಿರ್ಭವಜ್ಜಟಾಭಿಶ್ಚ ತದ್ವಕ್ತ್ರಂ ಚಾವೃಣೋತ್ಪ್ರಭುಃ** ॥೪೦॥

**ತತಸ್ತಾನಬ್ರವೀದ್ಬ್ರಹ್ಮಾ ಪುತ್ರಾನಾತ್ಮಸಮುದ್ಭವಾನ್ ।**
**ಪ್ರಜಾಃ ಸೃಜಧ್ವಮಭಿತಃ ಸದೇವಾಸುರಮಾನುಷೀಃ** ॥೪೧॥

**ಏವಮುಕ್ತಾಸ್ತತಸ್ಸರ್ವೇ ಸಸೃಜುರ್ವಿವಿಧಾಃ ಪ್ರಜಾಃ ।**
**ಗತೇಷು ತೇಷು ಸೃಷ್ಟ್ಯರ್ಥಂ ಪ್ರಣಾಮಾವನತಾಮಿಮಾಂ** ॥೪೨॥

**ಉಪಯೇಮೇ ಸ ವಿಶ್ವಾತ್ಮಾ ಶತರೂಪಾಮನಿಂದಿತಾಂ ।**
**ಸಂಬಭೂವ ತಯಾ ಸಾರ್ಧಮತಿಕಾಮಾತುರೋ ವಿಭುಃ ।**
**ಸಲಜ್ಜಾಂ ಚಕಮೇ ದೇವಃ ಕಮಲೋದರಮಂದಿರೇ** ॥೪೩॥

**ಯಾವದಬ್ದಶತಂ ದಿವ್ಯಂ ಯಥಾನ್ಯಃ ಪ್ರಾಕೃತೋ ಜನಃ ।**
**ತತಃ ಕಾಲೇನ ಮಹತಾ ತಸ್ಯಾಃ ಪುತ್ರೋಽಭವನ್ಮನುಃ** ॥೪೪॥

**ಸ್ವಾಯಂಭುವ ಇತಿ ಖ್ಯಾತಃ ಸ ವಿರಾಡಿತಿ ನಃ ಶ್ರುತಂ ।**
**ತದ್ರೂಪಗುಣಸಾಮಾನ್ಯಾದಧಿಪೂರುಷ ಉಚ್ಯತೇ** ॥೪೫॥

---

ಶಾಸ್ತ್ರಜ್ಞನಾದ ಅವನ ತಲೆಯ ಮೇಲ್ಗಡೆ ಐದನೆಯ ತಲೆ ಹುಟ್ಟಲು, ಆ ಪ್ರಭುವು ಹುಟ್ಟಿ ಬೆಳೆಯುತ್ತಿರುವ ಜಟೆಗಳಿಂದ ಅದನ್ನು ಮುಚ್ಚಿದನು.

೪೧. ಬಳಿಕ ಬ್ರಹ್ಮನು “ದೇವಾಸುರಮನುಷ್ಯರೂಪರಾದ ಪ್ರಜೆಗಳನ್ನು ಎಲ್ಲ ಕಡೆಯಲ್ಲೂ ಸೃಷ್ಟಿಸಿರಿ” ಎಂದು ತನ್ನ ಮಕ್ಕಳಿಗೆ ಹೇಳಿದನು.

ಅವನು ಹೇಳಿದಂತೆ ಅವರೆಲ್ಲರೂ ಬಗೆಬಗೆಯ ಪ್ರಜೆಗಳನ್ನು ಸೃಷ್ಟಿಸಿದರು.

೪೨-೪೩. ಸೃಷ್ಟಿಕಾರ್ಯಕ್ಕಾಗಿ ಅವರುಹೋಗಲು, ಮಹಾಮಹಿಮನಾದ ಬ್ರಹ್ಮದೇವನು ಕೈಮುಗಿದು ತಲೆಬಾಗಿ ನಿಂತಿದ್ದ ಸುಂದರಿಯಾದ ಆ ಶತರೂಪೆಯನ್ನು ಮದುವೆಯಾದನು. ಅತಿಕಾಮಾತುರನಾಗಿ ಸಾಮಾನ್ಯನಾದ ಪ್ರಾಕೃತ ಮನುಷ್ಯನಂತೆ ತನ್ನ ಕಮಲಮಂದಿರದೊಳಗೆ ದೇವಮಾನದ ನೂರು ವರ್ಷಗಳ ಕಾಲ ಲಜ್ಜಾಯುಕ್ತೆಯಾದ ಅವಳೊಡನೆ ರಮಿಸುತ್ತಿದ್ದನು.

೪೪-೪೫. ಬಳಿಕ ಬಹುಕಾಲದಮೇಲೆ ಅವಳಿಗೆ ಮನುವೆಂಬ ಮಗನಾದನು. ಅವನನ್ನು ಸ್ವಾಯಂಭುವನೆಂದೂ, ವಿರಾಟ್ ಎಂದೂ, ಗುಣದಲ್ಲಿ ಬ್ರಹ್ಮನಿಗೆ ಸಮಾನನಾದುದರಿಂದ ಅಧಿಪೂರುಷನೆಂದೂ ಹೇಳುತ್ತಾರೆ.

**ವೈರಾಜಾ ಯತ್ರ ತೇ ಜಾತಾ ಬಹವಃ ಶಂಸಿತವ್ರತಾಃ ।**
**ಸ್ವಾಯಂಭುವಾ ಮಹಾಭಾಗಾಃ ಸಪ್ತ ಸಪ್ತ ತಥಾಪರೇ ॥೪೬॥**
**ಸ್ವಾರೋಚಿಷಾದ್ಯಾಃ ಸರ್ವೇ ತೇ ಬ್ರಹ್ಮತುಲ್ಯಸ್ವರೂಪಿಣಃ ।**
**ಔತ್ತಮಿಪ್ರಮುಖಾಸ್ತದ್ವದ್ಯೇಷಾಂ ತ್ವಂ ಸಪ್ತಮೋಽಧುನಾ ॥೪೭॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಆದಿಸರ್ಗೇ ಮುಖೋತ್ಪತ್ತಿರ್ನಾಮ ತೃತೀಯೋಽಧ್ಯಾಯಃ**

---

೪೬-೪೭. ಅವನ ವಂಶದಲ್ಲಿ ಹುಟ್ಟಿದವರು ಹಲವರು. ಅವರಿಗೆ ವೈರಾಜರೆಂದು ಹೆಸರು. ಅವರು ಶ್ಲಾಘ್ಯವಾದ ವ್ರತದವರು. ಹಾಗೆಯೇ ಸ್ವಯಂಭುವಿನ ಎಂದರೆ ಬ್ರಹ್ಮನ ಮಿಕ್ಕ ಮಕ್ಕಳಾದ ಸ್ವಾರೋಚಿಷನೇ ಮೊದಲಾದವರು ಹದಿನಾಲ್ಕು ಜನ, ಅವರೆಲ್ಲರೂ ಬ್ರಹ್ಮನಿಗೆ ಸದೃಶವಾದ ರೂಪವುಳ್ಳವರು. ಔತ್ತಮಿ ಮುಂತಾದ ಆ ಮಕ್ಕಳಲ್ಲಿ ನೀನು ಏಳನೆಯವನು.*

**ಅಧ್ಯಾಯದ ಸಾರಾಂಶ**

ಬ್ರಹ್ಮನಿಗೆ ವೇದಗಳು ಗೋಚರಿಸಿದುವು. ಆವನು ಮರೀಚಿ ಮೊದಲಾದ ಹತ್ತು ಜನ ಮಾನಸಪುತ್ರರನ್ನೂ, ದಕ್ಷಬ್ರಹ್ಮನೇ ಮುಂತಾದ ಹತ್ತು ಜನ ಶಾರೀರ ಪುತ್ರರನ್ನೂ ಸೃಷ್ಟಿಸಿದನು. ಶತರೂಪೆಯ ಸೌಂದರ್ಯವನ್ನು ನೋಡುವುದಕ್ಕಾಗಿ ಅವನಿಗೆ ನಾಲ್ಕು ಹೊಸಮುಖಗಳು ಮೂಡಿದುವು. ಅವಳನ್ನು ಮದುವೆಯಾಗಿ ಹದಿನಾಲ್ಕು ಜನ ಮನುಗಳೆಂಬ ಮಕ್ಕಳನ್ನು ಪಡೆದನು.

ಶ್ರೀ ಮತ್ಸ್ಯಮಹಾಪುರಾಣದಲ್ಲಿ ಮೂರನೆಯ ಅಧ್ಯಾಯವು ಮುಗಿಯಿತು.

---

* ಬ್ರಹ್ಮನಿಗೆ ಶತರೂಪೆಯಲ್ಲಿ ಹದಿನಾಲ್ಕು ಜನ ಮಕ್ಕಳು ಹುಟ್ಟಿದರು. ಅವರೆಲ್ಲರಿಗೂ ಮನುಗಳೆಂದು ಹೆಸರು. ಅವರು ಯಾರೆಂದರೆ (೧) ಸ್ವಾಯಂಭುವ (೨) ಸ್ವಾರೋಚಿಷ (೩) ಔತ್ತಮಿ. (೪) ತಾಮಸ (೫) ರೈವತ (೬) ಚಾಕ್ಷುಷ. (೭) ವೈವಸ್ವತ (೮) ಸಾವರ್ಣಿ (೯) ದಕ್ಷಸಾವರ್ಣಿ (೧೦) ಬ್ರಹ್ಮಸಾವರ್ಣಿ (೧೧) ಧರ್ಮಸಾವರ್ಣಿ (೧೨) ರುದ್ರಸಾವರ್ಣಿ (೧೩) ದೇವ ಸಾವರ್ಣಿ (೧೪) ಇಂದ್ರಸಾವರ್ಣಿ.

ಇವರಲ್ಲೊಬ್ಬೊಬ್ಬರ ಆಧಿಪತ್ಯಕಾಲಕ್ಕೂ ಮನ್ವಂತರವೆಂದು ಹೆಸರು. ಈಗ ನಡೆಯುತ್ತಿರುವುದು ವೈವಸ್ವತ ಮನ್ವಂತರ.

## ಅಥ ಶ್ರೀಮತ್ಸ್ಯಮಹಾಪುರಾಣೇ ಚತುರ್ಥೋಽಧ್ಯಾಯಃ

॥ ಮನುರುವಾಚ ॥

ಅಹೋ ಕಷ್ಟತರಂ ಚೈತದಂಗಜಾಗಮನಂ ವಿಭೋ ।
ಕಥಂ ನ ದೋಷಮಗಮತ್ಕರ್ಮಣಾನೇನ ಪದ್ಮಭೂಃ ॥ ೧ ॥

ಪರಸ್ಪರಂ ಚ ಸಂಬಂಧಃ ಸಗೋತ್ರಾಣಾಮಭೂತ್ಕಥಂ ।
ವೈವಾಹಿಕಸ್ತತ್ಸುತಾನಾಂ ಛಿಂಧಿ ಮೇ ಸಂಶಯಂ ವಿಭೋ ॥ ೨ ॥

॥ ಮತ್ಸ್ಯ ಉವಾಚ ॥

ದಿವ್ಯೇಯಮಾದಿಸೃಷ್ಟಿಸ್ತು ರಜೋಗುಣಸಮುದ್ಭವಾ ।
ಅತೀಂದ್ರಿಯೇಂದ್ರಿಯಾ ತದ್ವದತೀಂದ್ರಿಯಶರೀರಿಕಾ ॥ ೩ ॥

ದಿವ್ಯತೇಜೋಮಯೀ ಭೂಪ ದಿವ್ಯಜ್ಞಾನಸಮುಧ್ಭವಾ ।
ನ ಮರ್ತ್ಯೈರಭಿತಃ ಶಕ್ಯಾ ವಕ್ತುಂ ವೈ ಮಾಂಸಚಕ್ಷುಭಿಃ ॥ ೪ ॥

---

೧-೨. ಮನು ಹೇಳಿದನು :—ಓ ದೇವಾ, ಹೊಟ್ಟೆಯಲ್ಲಿ ಹುಟ್ಟಿದ ಮಗಳೊಡನೆ ರಮಿಸುವುದು ಎಂತಹ ಹೀನ ಕೃತ್ಯ ! ಅಯ್ಯೋ ! ಈ ಕಾರ್ಯದಿಂದ ಬ್ರಹ್ಮನಿಗೆ ದೋಷವೇತಕ್ಕೆ ಬರಲಿಲ್ಲ ? ಒಂದೇ ಗೋತ್ರದವರಾದ ಅವನ ಮಕ್ಕಳಿಗೆ ಪರಸ್ಪರ ವಿವಾಹಸಂಬಧವು ಹೇಗೆ ಏರ್ಪಟ್ಟಿತು ? ಸ್ವಾಮೀ, ನನ್ನ ಈ ಸಂದೇಹವನ್ನು ಪರಿಹಾರಮಾಡು.

೩-೪. ಮತ್ಸ್ಯರೂಪನಾದ ಭಗವಂತನು ಹೇಳಿದನು :—ರಾಜಾ, ಬ್ರಹ್ಮನು ರಚಿಸಿದ ಈ ಆದಿಸೃಷ್ಟಿಯು ಅಮಾನುಷವಾದುದು. ಅದನ್ನು ಅರಿಯುವುದು ಇಂದ್ರಿಯಗಳಿಗೆ ಮೀರಿದ ಕಲಸ ; ಹಾಗೆಯೇ ಆ ಶರೀರಗಳೂ ಇಂದ್ರಿಯಜ್ಞಾನಕ್ಕೆ ನಿಲುಕದಂತಹವು. ಆ ಸೃಷ್ಟಿಯು ದಿವ್ಯತೇಜೋಮಯವಾಗಿ ದಿವ್ಯಜ್ಞಾನದಿಂದ ಆದುದು. ಅದನ್ನು ವಿವರಿಸುವುದಕ್ಕೆ ಮಾಂಸದ ಕಣ್ಣುಗಳುಳ್ಳ ಮನುಷ್ಯರಿಗೆ ಸಾಧ್ಯವಿಲ್ಲ.

**ಯಥಾ ಭುಜಂಗಾಃ ಸರ್ಪಾಣಾಮಾಕಾಶಂ ವಿಶ್ವಪಕ್ಷಿಣಾಂ ।**
**ವಿದಂತಿ ಮಾರ್ಗಂ ದಿವ್ಯಾನಾಂ ದಿವ್ಯಾ ಏವ ನ ಮಾನವಾಃ ॥ ೫ ॥**

**ಕಾರ್ಯಾಕಾರ್ಯೇ ನ ದೇವಾನಾಂ ಶುಭಾಶುಭಫಲಪ್ರದೇ ।**
**ಯಸ್ಮಾತ್ತಸ್ಮಾನ್ನ ರಾಜೇಂದ್ರ ತದ್ವಿಚಾರೋ ನೃಣಾಂ ಶುಭಃ ॥ ೬ ॥**

**ಅನ್ಯಚ್ಚ ಸರ್ವವೇದಾನಾಮಧಿಷ್ಠಾತಾ ಚತುರ್ಮುಖಃ ।**
**ಗಾಯತ್ರೀ ಬ್ರಹ್ಮಣಸ್ತದ್ವದಂಗಭೂತಾ ನಿಗದ್ಯತೇ ॥ ೭ ॥**

**ಅಮೂರ್ತಂ ಮೂರ್ತಿಮದ್ವಾಪಿ ಮಿಥುನಂ ತತ್ಪ್ರಚಕ್ಷತೇ ।**
**ವಿರಿಂಚಿರ್ಯತ್ರ ಭಗವಾಂಸ್ತತ್ರ ದೇವೀ ಸರಸ್ವತೀ ॥**
**ಭಾರತೀ ಯತ್ರ ಯತ್ರೈವ ತತ್ರ ತತ್ರ ಪ್ರಜಾಪತಿಃ ॥ ೮ ॥**

**ಯಥಾ ರವೇಶ್ಚ ರಹಿತಾ ಛಾಯಾ ನೋ ದೃಶ್ಯತೇ ಕ್ವಚಿತ್ ।**
**ಗಾಯತ್ರೀ ಬ್ರಹ್ಮಣಃ ಪಾರ್ಶ್ವಂ ತಥೈವ ನ ವಿಮುಂಚತಿ ॥ ೯ ॥**

---

೫. ಸರ್ಪಗಳ ಮಾರ್ಗವನ್ನು ಸರ್ಪಗಳೂ, ಆಕಾಶಮಾರ್ಗವನ್ನು ಪಕ್ಷಿಗಳೂ ಅರಿಯುವಂತೆ ದಿವ್ಯಪುರುಷರ ಚರಿತ್ರವು ದಿವ್ಯಪುರುಷರಿಗೇ ಗೊತ್ತು. ಮಾನವರಿಗಲ್ಲ.

೬. ದೇವತೆಗಳು ಮಾಡುವ ವಿಹಿತವಾದ ಅಥವಾ ನಿಷಿದ್ಧವಾದ ಕರ್ಮಗಳು ಅವರಿಗೆ ಶುಭಾಶುಭಫಲವನ್ನು ಕೊಡತಕ್ಕುವಲ್ಲ. ಆದುದರಿಂದ, ಓ ರಾಜಾ, ಆ ವಿಷಯದ ವಿಮರ್ಶೆಯು ಮನುಷ್ಯರಿಗೆ ಹಿತವಲ್ಲ.

೭. ಮತ್ತು ಚತುರ್ಮುಖಬ್ರಹ್ಮನು ವೇದಗಳಿಗೆಲ್ಲ ಅಧಿದೇವತೆ. ಅವನ ಅಂಗಜಾತೆಯಾದ ಗಾಯತ್ರಿಯೂ ಹಾಗೆಯೇ ಸರಿ. ಆದುದರಿಂದ ವೇದಾಭಿಮಾನ ದೇವತೆಗಳಿಬ್ಬರು ಒಟ್ಟುಗೂಡಿದಂತಾಯಿತು.

೮. ಬ್ರಹ್ಮಸರಸ್ವತಿಯರು ಸಾಕಾರರಾಗಿ ಇರಲಿ, ನಿರಾಕಾರರಾಗಿ ಇರಲಿ ಅವಿನಾಭಾವಸಂಬಂಧದ ದಂಪತಿಗಳೆನಿಸಿಕೊಳ್ಳುವರು. ಪೂಜ್ಯನಾದ ಬ್ರಹ್ಮನು ಎಲ್ಲಿರುವನೋ ಸರಸ್ವತೀದೇವಿಯೂ ಅಲ್ಲೇ ಇರುವಳು. ಸರಸ್ವತಿಯು ಎಲ್ಲೆಲ್ಲಿರುವಳೋ ಅಲ್ಲಲ್ಲೇ ಬ್ರಹ್ಮನೂ ಇರುವನು.

೯. ಹೇಗೆ ಛಾಯಾದೇವಿಯು ಸೂರ್ಯನನ್ನು ಅಗಲದೆ ಇರುವಳೋ ಹಾಗೆಯೇ ಗಾಯತ್ರಿಯೂ ಕೂಡ ಬ್ರಹ್ಮನ ಸಮೀಪವನ್ನು ಬಿಟ್ಟು ಕದಲದೆ ಇರುವಳು.

ವೇದರಾಶಿಃ ಸ್ಮೃತೋ ಬ್ರಹ್ಮಾ ಸಾವಿತ್ರೀ ತದಧಿಷ್ಠಿತಾ ।
ತಸ್ಮಾನ್ನ ಕಶ್ಚಿದ್ದೋಷಃ ಸ್ಯಾತ್ಸಾವಿತ್ರೀಗಮನೇ ವಿಭೋಃ ॥೧೦॥

ತಥಾಪಿ ಲಜ್ಜಾವನತಃ ಪ್ರಜಾಪತಿರಭೂತ್ಪುರಾ ।
ಸ್ವಸುತೋಪಗಮಾದ್ಬ್ರಹ್ಮಾ ಶಶಾಪ ಕುಸುಮಾಯುಧಂ ॥೧೧॥

ಯಸ್ಮಾನ್ಮಮಾಪಿ ಭವತಾ ಮನಃ ಸಂಕ್ಷೋಭಿತಂ ಶರೈಃ ।
ತಸ್ಮಾತ್ತ್ವದ್ದೇಹಮಚಿರಾದ್ರುದ್ರೋ ಭಸ್ಮೀಕರಿಷ್ಯತಿ ॥೧೨॥

ತತಃ ಪ್ರಸಾದಯಾಮಾಸ ಕಾಮದೇವಶ್ಚತುರ್ಮುಖಂ ।
ನ ಮಾಮಕಾರಣೇ ಶಪ್ತುಂ ತ್ವಮಿಹಾರ್ಹಸಿ ಮಾನದ ॥೧೩॥

ಅಹಮೇವಂವಿಧಃ ಸೃಷ್ಟಸ್ತ್ವಯೈವ ಚತುರಾನನ ।
ಇಂದ್ರಿಯಕ್ಷೋಭಜನಕಃ ಸರ್ವೇಷಾಮೇವ ದೇಹಿನಾಂ ॥೧೪॥

---

೧೦. ಬ್ರಹ್ಮನು ವೇದರಾಶಿಯೆಂದೆನಿಸುವನು. ಸಾವಿತ್ರಿಯು ಅದರ ಅಧಿದೇವತೆ. ಆದುದರಿಂದ ಸಾವಿತ್ರೀಸಮಾಗಮದಿಂದ ಬ್ರಹ್ಮನಿಗೆ ಯಾವ ದೋಷವೂ ಇಲ್ಲ.

೧೧-೧೨. ಆದರೂ ಕೂಡ ಪಿತಾಮಹನು ಸ್ವಪುತ್ರೀಗಮನಕ್ಕಾಗಿ ಲಜ್ಜೆಯಿಂದ ತಲೆ ಬಗ್ಗಿಸಿಕೊಂಡು "ನನ್ನ ಮನಸ್ಸನ್ನೂ ಕೂಡ ಬಾಣಗಳಿಂದ ವಿಕಾರಗೊಳಿಸಿದೆಯಾದಕಾರಣ, ಬೇಗನೆ ನಿನ್ನ ದೇಹವನ್ನು ಈಶ್ವರನು ಸುಟ್ಟು ಬೂದಿ ಮಾಡುವನು." ಎಂದು ಮನ್ಮಥನಿಗೆ ಶಾಪವಿತ್ತನು.

೧೩. ಬಳಿಕ ಕಾಮದೇವನು ಬ್ರಹ್ಮನನ್ನು ಪ್ರಸನ್ನಗೊಳಿಸಿದನು. "ನನಗೆ ಲೋಕದಲ್ಲಿ ಗೌರವವನ್ನು ಗಳಿಸಿಕೊಟ್ಟ ಓ ಬ್ರಹ್ಮನೇ, ನಿಷ್ಕಾರಣವಾಗಿ ನನ್ನನ್ನು ನೀನು ಶಪಿಸುವುದು ಸರಿಯಲ್ಲ.

೧೪. ಓ ಚತುರ್ಮುಖಾ, ಎಲ್ಲಾ ಪ್ರಾಣಿಗಳಿಗೂ ಇಂದ್ರಿಯವಿಕಾರವನ್ನುಂಟುಮಾಡುವುದಕ್ಕಾಗಿಯೇ ನನ್ನನ್ನು ನೀನು ಸೃಷ್ಟಿಸಿದ್ದೀಯೆ.

ಸ್ತ್ರೀಪುಂಸೋರವಿಚಾರೇಣ ಮಯಾ ಸರ್ವತ್ರ ಸರ್ವದಾ ।
ಕ್ಷೋಭ್ಯಂ ಮನಃ ಪ್ರಯತ್ನೇನ ತ್ವಯೈವೋಕ್ತಂ ಪುರಾ ವಿಭೋ ॥೧೫॥

ತಸ್ಮಾದನಪರಾಧೋಽಹಂ ತ್ವಯಾ ಶಪ್ತಸ್ತಥಾ ವಿಭೋ ।
ಕುರು ಪ್ರಸಾದಂ ಭಗವನ್ ಸ್ವಶರೀರಾಪ್ತಯೇ ಪುನಃ ॥೧೬॥

॥ ಬ್ರಹ್ಮೋವಾಚ ॥

ವೈವಸ್ವತೇಽಂತರೇ ಪ್ರಾಪ್ತೇ ಯಾದವಾನ್ವಯಸಂಭವಃ ।
ರಾಮೋ ನಾಮ ಯದಾ ಮರ್ತ್ಯೋ ಮತ್ಸತ್ವಬಲಮಾಶ್ರಿತಃ ॥೧೭॥

ಅವತೀರ್ಯಾಸುರಧ್ವಂಸೀ ದ್ವಾರಕಾಮಧಿವತ್ಸ್ಯತಿ ।
ತದ್ಭ್ರಾತುಸ್ತತ್ಸಮಸ್ಯ ತ್ವಂ ತದಾ ಪುತ್ರತ್ವಮೇಷ್ಯಸಿ ॥೧೮॥

ಏವಂ ಶರೀರಮಾಸಾದ್ಯ ಭುಕ್ತ್ವಾ ಭೋಗಾನಶೇಷತಃ ।
ತತೋ ಭರತವಂಶಾಂತೇ ಭೂತ್ವಾ ವತ್ಸನೃಪಾತ್ಮಜಃ ॥೧೯॥

ವಿದ್ಯಾಧರಾಧಿಪತ್ಯಂ ಚ ಯಾವದಾಭೂತಸಂಪ್ಲವಂ ।
ಸುಖಾನಿ ಧರ್ಮತಃ ಪ್ರಾಪ್ಯ ಮತ್ಸಮೀಪಂ ಗಮಿಷ್ಯಸಿ ॥೨೦॥

---

೧೫. ಪ್ರಭೂ, ಕಾಲದೇಶಗಳ ವಿಚಾರವಿಲ್ಲದೆ ಪ್ರಯತ್ನದಿಂದ ಗಂಡು ಹೆಣ್ಣುಗಳ ಮನಸ್ಸನ್ನು ವಿಕಾರಗೊಳಿಸಬೇಕೆಂದು ನೀನೇ ಹೇಳಿರುವೆ.

೧೬. ನಿರಪರಾಧಿಯಾದ ನನಗೆ ಹೀಗೆ ಶಾಪವನ್ನು ಕೊಟ್ಟಿರುವೆ. ಪೂಜ್ಯನೇ, ಮತ್ತೆ ನಾನು ಶರೀರವನ್ನು ಪಡೆಯುವಂತೆ ಅನುಗ್ರಹಮಾಡು.

೧೭-೧೮. ಬ್ರಹ್ಮನು ಹೇಳಿದನು:—ವೈವಸ್ವತಮನ್ವಂತರವು ಬಂದಾಗ ಯಾದವವಂಶದಲ್ಲಿ ರಾಮನೆಂಬ ಮಾನವಶ್ರೇಷ್ಠನು ಹುಟ್ಟಿ, ನನ್ನ ಬಲಪೌರುಷಗಳನ್ನು ಪಡೆದು, ದಾನವಧ್ವಂಸಕನಾಗಿ ದ್ವಾರಕಾಪಟ್ಟಣದಲ್ಲಿ ವಾಸಿಸುವನು. ಬುದ್ಧಿ ಪೌರುಷಗಳಲ್ಲಿ ಅವನಿಗೆ ಸಮಾನನಾದ ಅವನ ಸೋದರನಿಗೆ ನೀನು ಆಗ ಪುತ್ರನಾಗುವೆ.

೧೯-೨೦. ಹೀಗೆ ದೇಹವನ್ನು ಪಡೆದು ಸಕಲಭೋಗಗಳನ್ನೂ ಅನುಭವಿಸಿ, ಬಳಿಕ ಭರತವಂಶದ ಕೊನೆಯಲ್ಲಿ ವತ್ಸರಾಜನ ಮಗನೆನಿಸಿ, ಅನಂತರ ಪ್ರಲಯದ ವರೆಗೆ ವಿದ್ಯಾಧರರ ಒಡೆತನವನ್ನೂ ಪಡೆದು, ಧರ್ಮದಿಂದ ಸುಖಗಳನ್ನು ಹೊಂದಿ ನನ್ನ ಬಳಿಗೈದುವೆ.

**ಏವಂ ಶಾಪಪ್ರಸಾದಾಭ್ಯಾಮುಪೇತಃ ಕುಸುಮಾಯುಧಃ ।**
**ಶೋಕಪ್ರಮೋದಾಭಿಯುತೋ ಜಗಾಮ ಸ ಯಥಾಗತಂ ॥೨೧॥**

**॥ ಮನುರುವಾಚ ॥**

**ಕೋಽಸೌ ಯದುರಿತಿ ಪ್ರೋಕ್ತೋ ಯದ್ವಂಶೇ ಕಾಮಸಂಭವಃ ।**
**ಕಥಂ ಚ ದಗ್ಧೋ ರುದ್ರೇಣ ಕಿಮರ್ಥಂ ಕುಸುಮಾಯುಧಃ ॥೨೨॥**

**ಭರತಸ್ಯಾನ್ವಯೇ ತಸ್ಯ ಕಾ ಚ ಸೃಷ್ಟಿಃ ಪುರಾಽಭವತ್ ।**
**ಏತತ್ಸರ್ವಂ ಸಮಾಚಕ್ಷ್ವ ಮೂಲತಃ ಸಂಶಯೋ ಹಿ ಮೇ ॥೨೩॥**

**॥ ಮತ್ಸ್ಯ ಉವಾಚ ॥**

**ಯಾ ಸಾ ದೇಹಾರ್ಧಸಂಭೂತಾ ಗಾಯತ್ರೀ ಬ್ರಹ್ಮವಾದಿನೀ ।**
**ಜನನೀ ಯಾ ಮನೋರ್ದೇವೀ ಶತರೂಪಾ ಶತೇಂದ್ರಿಯಾ ॥೨೪॥**

**ರತಿರ್ಮನಸ್ತಪೋಬುದ್ಧಿರ್ಮಹಾನ್ದಿಕ್ಸಂಭ್ರಮಸ್ತಥಾ ।**
**ತತಃ ಸ ಶತರೂಪಾಯಾಂ ಸಪ್ತಾಪತ್ಯಾನ್ಯಜೀಜನತ್ ॥೨೫॥**

---

೨೧. ಹೀಗೆ ಬ್ರಹ್ಮನಿಂದ ಶಾಪವನ್ನೂ ಅನುಗ್ರಹವನ್ನೂ ಪಡೆದು, ಮನ್ಮಥನು ದುಃಖ ಮತ್ತು ಸಂತೋಷಗಳಿಂದ ಕೂಡಿ ತನ್ನಿಷ್ಟದಂತೆ ತೆರಳಿದನು.

೨೨-೨೩. ಮನು ಹೇಳಿದನು :—ಯಾರ ವಂಶದಲ್ಲಿ ಮನ್ಮಥನು ಹುಟ್ಟಬೇಕಾಯಿತೋ ಆ ಯದುವೆಂಬವನು ಯಾರು? ಈಶ್ವರನು ಕಾಮನನ್ನು ಏಕೆ ಎಂತು ಸುಟ್ಟನು? ಭರತನ ವಂಶದಲ್ಲಿ ಯಾರುಯಾರು ಜನಿಸಿದರು? ಅವರ ವಿವರವೇನು? ಇದೆಲ್ಲವನ್ನೂ ನನಗೆ ತಿಳಿಯಹೇಳು. ನನಗೆ ಈ ಮೂಲ ವಿಷಯದಲ್ಲಿಯೇ ಸಂದೇಹವಾಗಿದೆ.

೨೪-೨೫. ಮತ್ಸ್ಯರೂಪನಾದ ಭಗವಂತನು ಹೇಳಿದನು :—ಬ್ರಹ್ಮದೇವನು ತನ್ನ ದೇಹಾರ್ಧದಲ್ಲಿ ಹುಟ್ಟಿದ, ವೇದಗಳ ಅಧಿದೇವಿಯೂ, ಗಾಯತ್ರಿಯೂ, ಮನುವಿನ ತಾಯಿಯೂ, ಅಧಿಕವಾದ ಇಂದ್ರಿಯಶಕ್ತಿಯುಳ್ಳವಳೂ ಆದ ಶತರೂಪೆಯಲ್ಲಿ ರತಿ, ಮನ, ತಪಸ್ಸು, ಬುದ್ಧಿ, ಮಹತ್ತು, ದಿಕ್ಕು, ಸಂಭ್ರಮಗಳೆಂಬ ಏಳು ಮಕ್ಕಳನ್ನು ಪಡೆದನು.

ಯೇ ಮರೀಚ್ಯಾದಯಃ ಪುತ್ರಾ ಮಾನಸಾಸ್ತಸ್ಯ ಧೀಮತಃ ।
ತೇಷಾಮಯಮಭೂಲ್ಲೋಕಃ ಸರ್ವಜ್ಞಾನಾತ್ಮಕಃ ಪುರಾ ॥೨೬॥

ತತೋಽಸೃಜದ್ವಾಮದೇವಂ ತ್ರಿಶೂಲವರಧಾರಿಣಂ ।
ಸನತ್ಕುಮಾರಂ ಚ ವಿಭುಂ ಪೂರ್ವೇಷಾಮಪಿ ಪೂರ್ವಜಂ ॥೨೭॥

ವಾಮದೇವಸ್ತು ಭಗವಾನಸೃಜನ್ಮುಖತೋ ದ್ವಿಜಾನ್ ।
ರಾಜನ್ಯಾನಸೃಜದ್ಬಾಹ್ವೋರ್ವಿಟ್ಛೂದ್ರಾನೂರುಪಾದಯೋಃ ॥೨೮॥

ವಿದ್ಯುತೋಽಶನಿಮೇಘಾಂಶ್ಚ ರೋಹಿತೇಂದ್ರಧನೂಂಷಿ ಚ ।
ಛಂದಾಸಿ ಚ ಸಸರ್ಜಾದೌ ಪರ್ಜನ್ಯಂ ಚ ತತಃ ಪರಂ ॥೨೯॥

ತತಃ ಸಾಧ್ಯಗಣಾನೀಶಸ್ತ್ರಿನೇತ್ರಾನಸೃಜತ್ಪುನಃ ।
ಕೋಟೀಶ್ಚ ಚತಾರಾಶೀತಿಂಜರಾಮರಣವರ್ಜಿತಾಃ ॥೩೦॥

---

೨೬. ಈ ಲೋಕವು ಮಹಾಮೇಧಾವಿಗಳಾದ, ಆ ಬ್ರಹ್ಮನ ಮಾನಸಪುತ್ರರೆನಿಸಿದ ಮರೀಚ್ಯಾದಿಮಹರ್ಷಿಗಳ ಜ್ಞಾನವೈಭವದಿಂದ ಉತ್ಪನ್ನವಾಯಿತು.

೨೭. ಬಳಿಕ ಬ್ರಹ್ಮನು ಶ್ರೇಷ್ಠವಾದ ತ್ರಿಶೂಲಾಯುಧವನ್ನು ಧರಿಸಿದ ಮಹೇಶ್ವರನನ್ನೂ, ಹಿರಿಯವನಿಗಿಂತ ಹಿರಿಯವನೆನಿಸಿ ವಿಭುವಾದ ಸನತ್ಕುಮಾರನನ್ನೂ ಸೃಷ್ಟಿಸಿದನು.

೨೮. ಭಗವಂತನಾದ ಪರಮೇಶ್ವರನಾದರೋ ಮುಖದಿಂದ ಬ್ರಾಹ್ಮಣರನ್ನೂ, ಬಾಹುಗಳಿಂದ ಕ್ಷತ್ರಿಯರನ್ನೂ, ತೊಡೆಗಳಿಂದ ವೈಶ್ಯರನ್ನೂ, ಪಾದಗಳಿಂದ ಶೂದ್ರರನ್ನೂ ನಿರ್ಮಿಸಿದನು.

೨೯. ಅವನು ಮಿಂಚು, ಸಿಡಿಲು, ಮೋಡ, ಕಾಮನಬಿಲ್ಲು, ಮತ್ತು ಛಂದಸ್ಸು ಇವುಗಳನ್ನು ಮೊದಲು ಸೃಷ್ಟಿಸಿದನು. ಬಳಿಕ ಇಂದ್ರನನ್ನು ನಿರ್ಮಿಸಿದನು.

೩೦. ಈಶ್ವರನು ಅನಂತರ ಮೂರು ಕಣ್ಣುಗಳಿಂದ ಕೂಡಿದ, ಮುಪ್ಪು ಸಾವುಗಳಿಲ್ಲದ ಎಂಬತ್ತನಾಲ್ಕು ಕೋಟಿಲೆಕ್ಕದ ಸಾಧ್ಯರ ಸಮೂಹವನ್ನು ಸೃಷ್ಟಿಸಿದನು.

**ವಾಮೋಽಸೃಜನ್ಮಮರ್ತ್ಯಾಂಸ್ತಾನ್ ಬ್ರಹ್ಮಣಾ ವಿನಿವಾರಿತಃ ।**
**ನೈವಂವಿಧಾ ಭವೇತ್ಸೃಷ್ಟಿರ್ಜರಾಮರಣವರ್ಜಿತಾ ॥೩೧॥**

**ಶುಭಾಶುಭಾತ್ಮಿಕಾ ಯಾ ತು ಸೈವ ಸೃಷ್ಟಿಃ ಪ್ರಶಸ್ಯತೇ ।**
**ಏವಂ ಸ್ಥಿತಃ ಸ ತೇನಾದೌ ಸೃಷ್ಟೇಃ ಸ್ಥಾಣುರತೋಽಭವತ್ ॥೩೨॥**

**ಸ್ವಾಯಂಭುವೋ ಮನುರ್ಧೀಮಾಂಸ್ತಪಸ್ತಪ್ತ್ವಾ ಸುದುಶ್ಚರಂ ।**
**ಪತ್ನೀಮವಾಪ ರೂಪಾಢ್ಯಾಮನಂತೀಂ ನಾಮ ನಾಮತಃ ॥೩೩॥**

**ಪ್ರಿಯವ್ರತೋತ್ತಾನಪಾದೌ ಮನುಸ್ತಸ್ಯಾಮಜೀಜನತ್ ।**
**ಧರ್ಮಸ್ಯ ಕನ್ಯಾ ಚತುರಾ ಸೂನೃತಾ ನಾಮ ಭಾಮಿನೀ ॥೩೪॥**

**ಉತ್ತಾನಪಾದಾತ್ತನಯಾನ್ಪ್ರಾಪ ಮಂಥರಗಾಮಿನೀ ।**
**ಅಪಸ್ಯತಿಮಪಸ್ಯಂತಂ ಕೀರ್ತಿಮಂತಂ ಧ್ರುವಂ ತಥಾ ॥೩೫॥**

---

೩೧-೩೨. ವಾಮದೇವನು ತಾನು ಸೃಷ್ಟಿಸಿದವರನ್ನು ಮರಣರಹಿತರನ್ನಾಗಿ ಮಾಡಲು, ಬ್ರಹ್ಮನು "ಸೃಷ್ಟಿಯು ಹೀಗೆ ಮುಪ್ಪು ಸಾವುಗಳಿಲ್ಲದಿರಬಾರದು. ಸುಖದುಃಖ ರೂಪವಾಗಿಯೇ ಇರಬೇಕು. ಅದೇ ಸೃಷ್ಟಿಯ ಲಕ್ಷಣ" ಎಂದು ಹೇಳಿ ಅವನನ್ನು ತಡೆದನು. ಸೃಷ್ಟಿಯ ಪ್ರಾರಂಭದಲ್ಲಿ ಇಂತು ಜರಾಮರಣಗಳಿಲ್ಲದೆ ಅವನು ಉಳಿದುದರಿಂದ ಅವನಿಗೆ ಸ್ಥಾಣು ಅಂದರೆ ಸ್ಥಿರವಾಗಿರತಕ್ಕವನೆಂದು ಹೆಸರು ಬಂದಿತು.

೩೩. ಮಹಾಪ್ರಾಜ್ಞನಾದ ಸ್ವಾಯಂಭುವ ಮನುವು ತೀವ್ರವಾದ ತಪಸ್ಸನ್ನು ಮಾಡಿ ರೂಪಸಂಪನ್ನಳಾದ ಅನಂತಿಯೆಂಬ ಪತ್ನಿಯನ್ನು ಪಡೆದನು.

೩೪-೩೫. ಅವಳಲ್ಲಿ ಅವನು ಪ್ರಿಯವ್ರತ ಮತ್ತು ಉತ್ತಾನಪಾದರೆಂಬ ಇಬ್ಬರು ಮಕ್ಕಳನ್ನು ಪಡೆದನು. ಧರ್ಮನ ಮಗಳೂ; ಚತುರೆಯೂ, ಮಂದ ಗಮನೆಯೂ ಆದ ಸೂನೃತೆಯೆಂಬ ನಾರೀಮಣಿಯು ಪ್ರಜಾಪತಿಯಾದ ಉತ್ತಾನ ಪಾದರಾಜನಿಂದ ಅಪಸ್ಯತಿ, ಅಪಸ್ಯಂತ, ಕೀರ್ತಿಮಂತ ಮತ್ತು ಧ್ರುವರೆಂಬ ಮಕ್ಕಳನ್ನು ಹೊಂದಿದಳು.

**ಉತ್ತಾನಪಾದೋಽಜನಯತ್ಸೂನೃತಾಯಾಂ ಪ್ರಜಾಪತಿಃ ।**
**ಧ್ರುವೋ ವರ್ಷಸಹಸ್ರಾಣಿ ತ್ರೀಣಿ ಕೃತ್ವಾ ತಪಃ ಪುರಾ ॥೩೬॥**

**ದಿವ್ಯಮಾಪ ತತಃ ಸ್ಥಾನಮಚಲಂ ಬ್ರಹ್ಮಣೋ ವರಾತ್ ।**
**ತಮೇವ ಪುರತಃ ಕೃತ್ವಾ ಧ್ರುವಂ ಸಪ್ತರ್ಷಯಃ ಸ್ಥಿತಾಃ ॥೩೭॥**

**ಧನ್ಯಾ ನಾಮ ಮನೋಃ ಕನ್ಯಾ ಧ್ರುವಾಚ್ಛಿಷ್ಟಮಜೀಜನತ್ ।**
**ಅಗ್ನಿಕನ್ಯಾ ತು ಸುಚ್ಛಾಯಾ ಶಿಷ್ಟಾತ್ಸಾ ಸುಷುವೇ ಸುತಾನ್ ॥೩೮॥**

**ಕೃಪಂ ರಿಪುಂಜಯಂ ವೃತ್ತಂ ವೃಕಂ ಚ ವೃಕತೇಜಸಂ ।**
**ಚಕ್ಷುಷಂ ಬ್ರಹ್ಮದೌಹಿತ್ರ್ಯಾಂ ವೀರಿಣ್ಯಾಂ ಸ ರಿಪುಂಜಯಃ ॥೩೯॥**

**ವೀರಣಸ್ಯಾತ್ಮಜಾಯಾಂ ತು ಚಕ್ಷುರ್ಮನುಮಜೀಜನತ್ ।**
**ಮನುರ್ವೈ ರಾಜಕನ್ಯಾಯಾಂ ನಡ್ವಲಾಯಾಂ ಸ ಚಾಕ್ಷುಷಃ ॥೪೦॥**

**ಜನಯಾಮಾಸ ತನಯಾನ್ ದಶ ಶೂರಾನಕಲ್ಮಷಾನ್ ।**
**ಊರುಃ ಪೂರುಃ ಶತದ್ಯುಮ್ನಸ್ತಪಸ್ವೀ ಸತ್ಯವಾಗ್ಘವಿಃ ॥೪೧॥**

---

೩೬-೩೭. ಧ್ರುವನು ಮೂರುಸಾವಿರವರ್ಷಗಳ ಕಾಲ ತಪಸ್ಸುಮಾಡಿ ಬ್ರಹ್ಮನ ವರದಿಂದ ಶಾಶ್ವತವಾದ ದಿವ್ಯಪದವಿಯನ್ನು ಪಡೆದನು. ಸಪ್ತರ್ಷಿಗಳು ಅವನನ್ನೇ ಮುಂದುಮಾಡಿಕೊಂಡು ನೆಲಸಿದರು.

೩೮-೩೯. ಧ್ರುವನಿಗೆ ಮನುವಿನ ಮಗಳಾದ ಧನ್ಯೆಯೆಂಬವಳಲ್ಲಿ ಶಿಷ್ಟನು ಹುಟ್ಟಿದನು. ಅಗ್ನಿಸುತೆಯಾದ ಸುಚ್ಛಾಯೆಯು ಶಿಷ್ಟನಿಂದ ಕೃಪ, ರಿಪು, ರಿಪುಂಜಯ, ವೃತ್ತ, ವೃಕ, ವೃಕತೇಜಸರೆಂಬವರನ್ನು ಪ್ರಸವಿಸಿದಳು. ಬ್ರಹ್ಮನ ಮೊಮ್ಮಗಳಾದ ವೀರಿಣಿಯಲ್ಲಿ ರಿಪುಂಜಯನಿಗೆ ಚಕ್ಷುವೆಂಬ ಮಗನಾದನು.

೪೦-೪೧. ಚಕ್ಷುವು ವೀರಣನ ಮಗಳಲ್ಲಿ ಮನುವೆಂಬ ಮಗನನ್ನು ಪಡೆದನು. ಆ ಚಾಕ್ಷುಷ ಮನುವಿಗೆ ರಾಜಕನ್ಯೆಯಾದ ನಡ್ವಲೆಯಲ್ಲಿ ಶೂರರೂ, ಪಾಪರಹಿತರೂ ಆದ ಊರು, ಪುರು, ಶತದ್ಯುಮ್ನ, ತಪಸ್ವಿ, ಸತ್ಯವಾಕ್, ಹವಿ,

ಅಗ್ನಿಷ್ಟುದತಿರಾತ್ರಶ್ಚ ಸುದ್ಯುಮ್ನಶ್ಚಾಪರಾಜಿತಃ ।
ಅಭಿಮನ್ಯುಸ್ತು ದಶಮೋ ನಡ್ವಲಾಯಾಮಜಾಯತ ॥೪೨॥

ಊರೋರಜನಯತ್ಪುತ್ರಾನ್ ಷಡಾಗ್ನೇಯೀ ತು ಸುಪ್ರಭಾನ್ ।
ಅಗ್ನಿಂ ಸುಮನಸಂ ಖ್ಯಾತಿಂ ಕ್ರತುಮಂಗಿರಸಂ ಗಯಂ ॥೪೩॥

ಪಿತೃಕನ್ಯಾ ಸುನೀಥಾ ತು ವೇನಮಂಗಾದಜೀಜನತ್ ।
ವೇನಮನ್ಯಾಯಿನಂ ವಿಪ್ರಾ ಮಮಂಥುಸ್ತತ್ಕರಾದಭೂತ್ ।
ಪೃಥುರ್ನಾಮ ಮಹಾತೇಜಾಃ ಸ ಪುತ್ರೌ ದ್ವಾವಜೀಜನತ್ ॥೪೪॥

ಅಂತರ್ಧಾನಸ್ತು ಮಾರೀಚಂ ಶಿಖಂಡಿನ್ಯಾಮಜೀಜನತ್ ।
ಹವಿರ್ಧಾನಾತ್ಷಡಾಗ್ನೇಯೀ ಧಿಷಣಾಜನಯತ್ಸುತಾನ್ ।
ಪ್ರಾಚೀನಬರ್ಹಿಷಂ ಸಾಂಗಂ ಯಮಂ ಶುಕ್ರಂ ಬಲಂ ಶುಭಂ ॥೪೫॥

---

ಅಗ್ನಿಷ್ಟುತ್, ಅತಿರಾತ್ರ, ಸುದ್ಯುಮ್ನ, ಅಪರಾಜಿತ ಮತ್ತು ಅಭಿಮನ್ಯುವೆಂಬ ಹತ್ತು ಜನ ಮಕ್ಕಳು ಜನಿಸಿದರು.

೪೩. ಅಗ್ನಿಪುತ್ರಳಾದ ಆಗ್ನೇಯಿಯು ಊರುವಿನಿಂದ ಕಾಂತಿಯುಕ್ತರಾದ ಅಗ್ನಿ, ಸುಮನಸ, ಖ್ಯಾತಿ, ಕ್ರತು, ಅಂಗಿರಸ ಮತ್ತು ಗಯರೆಂಬ ಆರುಜನ ಮಕ್ಕಳನ್ನು ಹೆತ್ತಳು.

೪೪. ಪಿತೃದೇವತೆಗಳ ಮಗಳಾದ ಸುನೀಥೆಯೆಂಬವಳು ಅಂಗನೆಂಬ ರಾಜನನ್ನು ಮದುವೆಯಾಗಿ ವೇನನನ್ನು ಹೆತ್ತಳು. ನ್ಯಾಯಮಾರ್ಗವನ್ನು ಬಿಟ್ಟಿದ್ದ ಈ ವೇನನನ್ನು ಬ್ರಾಹ್ಮಣರು ಕಡೆದರು. ಅವನ ಕೈಯಿಂದ ಮಹಾತೇಜಸ್ವಿಯೂ ಪ್ರಸಿದ್ಧನೂ ಆದ ಪೃಥುವು ಹುಟ್ಟಿದನು. ಅವನಿಗೆ ಇಬ್ಬರು ಮಕ್ಕಳಾದರು.

೪೫. ಅಂತರ್ಧಾನನಾದರೋ ಶಿಖಂಡಿನಿಯಲ್ಲಿ ಮಾರೀಚನನ್ನು ಪಡೆದನು. ಅಗ್ನಿಪುತ್ರಿಯಾದ ಧಿಷಣೆಗೆ ಹವಿರ್ಧಾನನಿಂದ ಪ್ರಾಚೀನಬರ್ಹಿ, ಸಾಂಗ, ಯಮ, ಶುಕ್ರ, ಬಲ ಮತ್ತು ಶುಭರೆಂಬ ಆರುಜನ ಪುತ್ರರಾದರು.

ಪ್ರಾಚೀನಬರ್ಹಿರ್ಭಗವಾನ್ಮಹಾನಾಸೀತ್ಪ್ರಜಾಪತಿಃ ।
ಹವಿರ್ಧಾನಾಃ ಪ್ರಜಾಸ್ತೇನ ಬಹವಃ ಸಂಪ್ರವರ್ತಿತಾಃ ॥೪೬॥

ಸವರ್ಣಾಯಾಂ ತು ಸಾಮುದ್ರ್ಯಾಂ ದಶಾಧತ್ತ ಸುತಾನ್ಪ್ರಭುಃ ।
ಸರ್ವೇ ಪ್ರಚೇತಸೋ ನಾಮ ಧನುರ್ವೇದಸ್ಯ ಪಾರಗಾಃ ॥೪೭॥

ತತ್ತಪೋರಕ್ಷಿತಾ ವೃಕ್ಷಾ ಬಭುರ್ಲೋಕೇ ಸಮಂತತಃ ।
ದೇವಾದೇಶಾಚ್ಚ ತಾನಗ್ನಿರದಹದ್ರವಿನಂದನ ॥೪೮॥

ಸೋಮಕನ್ಯಾಭವತ್ಪತ್ನೀ ಮಾರಿಷಾ ನಾಮ ವಿಶ್ರುತಾ ।
ತೇಭ್ಯಸ್ತು ದಕ್ಷಮೇಕಂ ಸಾ ಪುತ್ರಮಗ್ರ್ಯಮಜೀಜನತ್ ॥೪೯॥

---

೪೬. ಪೂಜ್ಯನಾದ ಪ್ರಾಚೀನಬರ್ಹಿಯು ಪ್ರಜಾಸೃಷ್ಟಿಯನ್ನು ಮಾಡಿ ಶ್ರೇಷ್ಠನೆನಿಸಿಕೊಂಡನು. ಅವನಿಂದ ಹವಿರ್ಧಾನರೆಂಬ ಹಲವರು ಪ್ರಜೆಗಳು ಆದರು.

೪೭. ಆ ಪ್ರಭುವು ಸಮುದ್ರಪುತ್ರಿಯಾದ ಸವರ್ಣೆಯಲ್ಲಿ ಹತ್ತು ಜನ ಮಕ್ಕಳನ್ನು ಪಡೆದನು. ಅವರೆಲ್ಲರೂ ಧನುರ್ವೇದದಲ್ಲಿ ನಿಪುಣರಾಗಿ ಪ್ರಚೇತಸರೆಂದು ಪ್ರಸಿದ್ಧರಾದರು.

೪೮. ಅವರ ತಪೋಬಲದಿಂದ ರಕ್ಷಿಸಲ್ಪಟ್ಟ ಮರಗಳು ಲೋಕದಲ್ಲೆಲ್ಲೆಲ್ಲೂ ಮೆರೆದುವು. ಸೂರ್ಯಪುತ್ರನಾದ ಮನುರಾಜನೇ, ದೇವತೆಗಳ ಅಪ್ಪಣೆಯಿಂದ ಅಗ್ನಿಯು ಅವನ್ನು ಸುಟ್ಟನು.

೪೯. ಮಾರಿಷೆಯೆಂದು ಪ್ರಸಿದ್ಧಳಾದ ಸೋಮಕನ್ಯೆಯು ಆ ಪ್ರಚೇತಸರಿಗೆ ಪತ್ನಿಯಾಗಿ, ಅವರಿಂದ ಶ್ರೇಷ್ಠನಾದ ದಕ್ಷನೆಂಬ ಮಗನೊಬ್ಬನನ್ನು ಪಡೆದಳು.

**ದಕ್ಷಾದನಂತರಂ ವೃಕ್ಷಾನೌಷಧಾನಿ ಚ ಸರ್ವಶಃ ।**
**ಅಜೀಜನತ್ಸೋಮಕನ್ಯಾ ನದೀಂ ಚಂದ್ರವತೀಂ ತಥಾ ॥೩೦॥**

**ಸೋಮಾಂಶಸ್ಯ ಚ ತಸ್ಯಾಪಿ ದಕ್ಷಸ್ಯಾಶೀತಿಕೋಟಯಃ ।**
**ತಾಸಾಂ ತು ವಿಸ್ತರಂ ವಕ್ಷ್ಯೇ ಲೋಕೇ ಯಃ ಸುಪ್ರತಿಷ್ಠಿತಃ ॥೩೧॥**

**ದ್ವಿಪದಶ್ಚಾಭವನ್ ಕೇಚಿತ್ಕೇಚಿದ್ಬಹುಪದಾ ನರಾಃ ।**
**ವಲೀಮುಖಾಃ ಶಂಕುಕರ್ಣಾಃ ಕರ್ಣಪ್ರಾವರಣಾಸ್ತಥಾ ॥೩೨॥**

**ಅಶ್ವಋಕ್ಷಮುಖಾಃ ಕೇಚಿತ್ಕೇಚಿತ್ಸಿಂಹಾನನಾಸ್ತಥಾ ।**
**ಶ್ವಸೂಕರಮುಖಾಃ ಕೇಚಿತ್ಕೇಚಿದುಷ್ಟ್ರಮುಖಾಸ್ತಥಾ ॥೩೩॥**

**ಜನಯಾಮಾಸ ಧರ್ಮಾತ್ಮಾ ಮ್ಲೇಚ್ಛಾನ್ ಸರ್ವಾನನೇಕಶಃ ।**
**ಸ ಸೃಷ್ಟ್ವಾ ಮನಸಾ ದಕ್ಷಃ ಸ್ತ್ರಿಯಃ ಪಶ್ಚಾದಜೀಜನತ್ ॥೩೪॥**

---

೩೦. ದಕ್ಷನ ತರುವಾಯ ಸೋಮಕನ್ಯೆಯು ಮರಗಳನ್ನೂ, ಮೂಲಿಕೆಗಳನ್ನೂ, ಚಂದ್ರವತಿಯೆಂಬ ನದಿಯನ್ನೂ ಪಡೆದಳು.

೩೧-೩೩. ಚಂದ್ರಾಂಶನಾದ ಆ ದಕ್ಷನ ಸೃಷ್ಟಿಗಳು ಎಂಬತ್ತು ಕೋಟಿ ಲೆಕ್ಕದವು. ಲೋಕದಲ್ಲಿ ಸ್ಥಿರವಾಗಿ ನೆಲಸಿರುವ ಅವುಗಳ ವಿವರವನ್ನು ಹೇಳುವೆನು. ಕೆಲವು ಎರಡು ಕಾಲಿನವು, ಕೆಲವು ಹಲವು ಕಾಲಿನವು; ಮನುಷ್ಯರು, ಕಪಿಗಳು, ಕತ್ತೆಗಳು, ಕಿವಿಮುಚ್ಚಿಕೊಂಡಿರುವ ಹಾವು ಮುಂತಾದುವು, ಕುದುರೆಯ ಮತ್ತು ಕರಡಿಗಳ ಮುಖದವು; ಸಿಂಹದ ಮುಖದವು; ನಾಯಿ, ಹಂದಿಗಳ ಮತ್ತು ಒಂಟೆಯ ಮುಖದವು; ಹೀಗೆ ನಾನಾವಿಧವಾಗಿರುವುವು.

೩೪-೩೫. ಧರ್ಮಾತ್ಮನಾದ ಅವನು ಬಗೆಬಗೆಯಿಂದ ಮ್ಲೇಚ್ಛರನ್ನೂ ಸೃಷ್ಟಿಸಿದನು. ಹೀಗೆ ಮನಸ್ಸಿನಿಂದ ಎಲ್ಲವನ್ನೂ ಸೃಷ್ಟಿಸಿದ ತರುವಾಯ ಹೆಂಗಸರನ್ನು ನಿರ್ಮಿಸಿದನು. ಅವರಲ್ಲಿ ಹತ್ತು ಜನರನ್ನು ಧರ್ಮನಿಗೂ, ಹದಿಮೂರು ಮಂದಿಯನ್ನು ಕಶ್ಯಪನಿಗೂ, ನಕ್ಷತ್ರವೆಂಬ ಹೆಸರಿನ ಇಪ್ಪತ್ತೇಳುಜನರನ್ನು ಚಂದ್ರ

**ದದೌ ಸ ದಶ ಧರ್ಮಾಯ ಕಶ್ಯಪಾಯ ತ್ರಯೋದಶ ।**
**ಸಪ್ತವಿಂಶತಿ ಸೋಮಾಯ ದದೌ ನಕ್ಷತ್ರಸಂಜ್ಞಿತಾಃ ।**
**ದೇವಾಸುರಮನುಷ್ಯಾದಿ ತಾಭ್ಯಸ್ಸರ್ವಮಭೂಜ್ಜಗತ್** ॥೫೫॥

**ಇತಿ ಶ್ರೀ ಮಾತ್ಸ್ಯೇ ಮಹಾಪುರಾಣೇ ಆದಿಸರ್ಗೇ ಚತುರ್ಥೋಽಧ್ಯಾಯಃ**

---

ನಿಗೂ ಕೊಟ್ಟನು. ದೇವತೆಗಳು, ಅಸುರರು ಮತ್ತು ಮನುಷ್ಯರಿಂದ ಕೂಡಿದ ಜಗತ್ತೆಲ್ಲವೂ ಅವರಿಂದ ಹುಟ್ಟಿತು.

## ಅಧ್ಯಾಯದ ಸಾರಾಂಶ

ತನ್ನ ಮಗಳನ್ನೇ ಕಾಮಿಸಿದುದಕ್ಕಾಗಿ ಲಜ್ಜೆಗೊಂಡ ಬ್ರಹ್ಮನು ಮನ್ಮಥನಿಗೆ ಈಶ್ವರನಿಂದ ದಗ್ಧನಾಗುವಂತೆ ಶಾಪವಿತ್ತನು. ಬಳಿಕ ಅವನ ಪ್ರಾರ್ಥನೆಯಿಂದ ಪ್ರಸನ್ನನಾಗಿ ಅವನಿಗೆ ಪುನರ್ದೇಹವನ್ನೂ ಕರುಣಿಸಿದನು. ವಾಮದೇವನಿಂದ ಬ್ರಾಹ್ಮಣಾದಿ ಚತುರ್ವರ್ಣಗಳು ಉತ್ಪನ್ನವಾದುವು. ಉತ್ತಾನಪಾದರಾಜನ ಮಗನಾದ ಧ್ರುವನು ತಪಶ್ಚರ್ಯೆಯಿಂದ ಶಾಶ್ವತವಾದ ಪದವಿಯನ್ನು ಪಡೆದನು. ದಕ್ಷಪ್ರಜಾಪತಿಯು ಕೋಟಿಗಟ್ಟಲೆಯ ಸೃಷ್ಟಿಯೆನ್ನೆಸಗಿ, ತನ್ನ ಹೆಣ್ಣುಮಕ್ಕಳನ್ನು ಧರ್ಮ, ಕಶ್ಯಪ, ಚಂದ್ರ ಇವರಿಗೆ ಮದುವೆಮಾಡಿಕೊಟ್ಟನು. ದೇವಮನುಷ್ಯಾತ್ಮಕವಾದ ಜಗತ್ತೆಲ್ಲವೂ ಇವರಿಂದ ಹುಟ್ಟಿತು.

ಶ್ರೀಮತ್ಸ್ಯಮಹಾಪುರಾಣದಲ್ಲಿ ನಾಲ್ಕನೆಯ ಅಧ್ಯಾಯವು ಮುಗಿದುದು



## ಅಥ ಶ್ರೀಮತ್ಸ್ಯಮಹಾಪುರಾಣೇ ಪಂಚಮೋಽಧ್ಯಾಯಃ

॥ ಋಷಯ ಊಚುಃ ॥

ದೇವಾನಾಂ ದಾನವಾನಾಂ ಚ ಗಂಧರ್ವೋರಗಪಕ್ಷಿಣಾಂ ।
ಉತ್ಪತ್ತಿಂ ವಿಸ್ತರೇಣೈವ ಸೂತ ಬ್ರೂಹಿ ಯಥಾತಥಂ ॥ ೧ ॥

॥ ಸೂತ ಉವಾಚ ॥

ಸಂಕಲ್ಪಾದ್ದರ್ಶನಾತ್ಸ್ಪರ್ಶಾತ್ಪೂರ್ವೇಷಾಂ ಸೃಷ್ಟಿರುಚ್ಯತೇ ।
ದಕ್ಷಾತ್ಪ್ರಾಚೇತಸಾದೂರ್ಧ್ವಂ ಸೃಷ್ಟಿರ್ಮೈಥುನಸಂಭವಾ ॥ ೨ ॥

ಪ್ರಜಾಃ ಸೃಜೇತಿ ವ್ಯಾದಿಷ್ಟಃ ಪೂರ್ವಂ ದಕ್ಷಃ ಸ್ವಯಂಭುವಾ ।
ಯಥಾ ಸಸರ್ಜ ಚೈವಾದೌ ತಥೈವ ಶೃಣುತ ದ್ವಿಜಾಃ ॥ ೩ ॥

ಯದಾ ತು ಸೃಜತಸ್ತಸ್ಯ ದೇವರ್ಷಿಗಣಪನ್ನಗಾನ್ ।
ನ ವೃದ್ಧಿಮಗಮಲ್ಲೋಕಸ್ತದಾ ಮೈಥುನಯೋಗತಃ ।
ದಕ್ಷಃ ಪುತ್ರಸಹಸ್ರಾಣಿ ಪಾಂಚಜನ್ಯಾಮಜೀಜನತ್ ॥ ೪ ॥

---

೧. ಋಷಿಗಳು ಹೇಳಿದರು:—ಓ ಸೂತಾ, ದೇವತೆಗಳು, ದಾನವರು, ಗಂಧರ್ವರು, ನಾಗರು ಮತ್ತು ಪಕ್ಷಿಗಳು ಇವುಗಳ ಉತ್ಪತ್ತಿಯನ್ನು ಕ್ರಮವಾಗಿ ವಿಸ್ತರಿಸಿ ಹೇಳು.

೨. ಸೂತಮುನಿ ಹೇಳಿದನು:—ಹಿಂದಿನವರ ಸೃಷ್ಟಿಕಾರ್ಯವು ಸಂಕಲ್ಪದಿಂದಲೂ, ದರ್ಶನದಿಂದಲೂ, ಸ್ಪರ್ಶನದಿಂದಲೂ ನಡೆಯುತ್ತಿತ್ತು. ಪ್ರಚೇತಸರ ಪುತ್ರನಾದ ದಕ್ಷನಿಂದೀಚೆಗೆ ಅದು ಸ್ತ್ರೀಪುರುಷರ ಸಂಬಂಧದಿಂದ ನಡೆಯತಕ್ಕುದಾಗಿದೆ.

೩. ಎಲೈ ಬ್ರಾಹ್ಮಣರೇ, ಪೂರ್ವದಲ್ಲಿ ಪ್ರಜೆಗಳನ್ನು ಸೃಷ್ಟಿಸೆಂದು ಬ್ರಹ್ಮನು ಅಪ್ಪಣೆಮಾಡಲು, ದಕ್ಷನು ಹೇಗೆ ಸೃಷ್ಟಿಗೈದನೆಂಬುದನ್ನು ಹೇಳುವೆನು ಕೇಳಿರಿ.

೪. ದಕ್ಷನು ದೇವತೆಗಳ ಮತ್ತು ಋಷಿಗಳ ಗಣಗಳನ್ನೂ, ಪನ್ನಗರನ್ನೂ ಸೃಷ್ಟಿಸುತ್ತಿದ್ದರೂ ಲೋಕವು ಬೆಳೆಯದಿರಲು, ಅವನು ಪಾಂಚಜನಿಯಲ್ಲಿ ಮೈಥುನ ಸಂಬಂಧದಿಂದ ಸಾವಿರ ಮಕ್ಕಳನ್ನು ಪಡೆದನು.

ತಾಂಸ್ತು ದೃಷ್ಟ್ವಾ ಮಹಾಭಾಗಃ ಸಿಸೃಕ್ಷುರ್ವಿವಿಧಾಃ ಪ್ರಜಾಃ ।
ನಾರದಃ ಪ್ರಾಹ ಹರ್ಯಶ್ವಾನ್ದಕ್ಷಪುತ್ರಾನ್ಸಮಾಗತಾನ್ ॥ ೫ ॥

ಭುವಃ ಪ್ರಮಾಣಂ ಸರ್ವತ್ರ ಜ್ಞಾತ್ವೋರ್ಧ್ವಮಧ ಏವ ಚ ।
ತತಃ ಸೃಷ್ಟಿಂ ವಿಶೇಷೇಣ ಕುರುಧ್ವಮೃಷಿಸತ್ತಮಾಃ ॥ ೬ ॥

ತೇ ತು ತದ್ವಚನಂ ಶ್ರುತ್ವಾ ಪ್ರಯಾತಾಃ ಸರ್ವತೋ ದಿಶಂ ।
ಅದ್ಯಾಪಿ ನ ನಿವರ್ತಂತೇ ಸಮುದ್ರಾದಿವ ಸಿಂಧವಃ ॥ ೭ ॥

ಹರ್ಯಶ್ವೇಷು ಪ್ರಣಷ್ಟೇಷು ಪುನರ್ದಕ್ಷಃ ಪ್ರಜಾಪತಿಃ ।
ವೈರಿಣ್ಯಾಮೇವ ಪುತ್ರಾಣಾಂ ಸಹಸ್ರಮಸೃಜತ್ಪ್ರಭುಃ ॥ ೮ ॥

ಶಬಲಾ ನಾಮ ತೇ ವಿಪ್ರಾಃ ಸಮೇತಾಃ ಸೃಷ್ಟಿಹೇತವಃ ।
ನಾರದೋಽನುಗತಾನ್ಪ್ರಾಹ ಪುನಸ್ತಾನ್ ಪೂರ್ವವತ್ಸ ತಾನ್ ॥ ೯ ॥

---

೫. ವಿವಿಧ ಪ್ರಜಾವರ್ಗವನ್ನು ಸೃಷ್ಟಿಗೈಯಲಿಚ್ಛೆಯುಳ್ಳ ನಾರದನು ದಕ್ಷಪುತ್ರರಾದ ಆ ಹರ್ಯಶ್ವರು ತನ್ನ ಬಳಿಗೆ ಬರಲು, ಅವರನ್ನು ನೋಡಿ ಇಂತೆಂದನು.

೬. "ಎಲೈ ಋಷಿಶ್ರೇಷ್ಠರೇ, ಮೇಲ್ಗಡೆಯಲ್ಲೂ, ಕೆಳಗಡೆಯಲ್ಲೂ, ಉಳಿದೆಡೆಯಲ್ಲೂ ಭೂಮಿಯ ಪ್ರಮಾಣವನ್ನು ಅರಿತು, ಬಳಿಕ ವಿಧವಿಧವಾದ ಸೃಷ್ಟಿಯಂ ಮಾಡಿರಿ."

೭. ಅವರಾದರೋ ಅವನ ಮಾತನ್ನು ಕೇಳಿ ಎಲ್ಲ ದಿಕ್ಕಿಗೂ ಹೋದರು. ಸಮುದ್ರದಿಂದ ನದಿಗಳು ಹಿಂದಿರುಗಿ ಬಾರದಂತೆ ಇಂದಿಗೂ ಅವರು ಹಿಂದಿರುಗಿ ಬಂದಿಲ್ಲ.

೮. ಹರ್ಯಶ್ವರು ಹೀಗೆ ಪತ್ತೆಯಿಲ್ಲದೆ ಹೋಗಲು ದಕ್ಷಪ್ರಜಾಪತಿಯು ಪುನಃ ವೈರಿಣಿಯಲ್ಲಿ ಸಾವಿರ ಮಕ್ಕಳನ್ನು ಪಡೆದನು.

೯-೧೦. ಸೃಷ್ಟಿಗೆ ಕಾರಣರಾದ ಶಬಲರೆಂಬ ಆ ಬ್ರಾಹ್ಮಣರೆಲ್ಲರೂ ಒಟ್ಟಿಗೆ ಕೂಡಿ ನಾರದನ ಬಳಿಗೆ, ಬರಲು ಅವನು "ಭೂಮಿಯ ಎಲ್ಲ ಕಡೆಯ ಅಳತೆಯನ್ನು

ಭುವಃ ಪ್ರಮಾಣಂ ಸರ್ವತ್ರ ಜ್ಞಾತ್ವಾ ಭ್ರಾತೄನಥೋ ಪುನಃ ।
ಆಗತ್ಯ ಚಾಥ ಸೃಷ್ಟಿಂ ಚ ಕರಿಷ್ಯಥ ವಿಶೇಷತಃ ॥೧೦॥

ತೇಽಪಿ ತೇನೈವ ಮಾರ್ಗೇಣ ಜಗ್ಮುರ್ಭ್ರಾತೃಪಥಾ ತದಾ ।
ತತಃ ಪ್ರಭೃತಿ ನ ಭ್ರಾತುಃ ಕನೀಯಾನ್ಮಾರ್ಗಮಿಚ್ಛತಿ ।
ಅನ್ವಿಷ್ಯನ್ ದುಃಖಮಾಪ್ನೋತಿ ತೇನ ತತ್ಪರಿವರ್ಜಯೇತ್ ॥೧೧॥

ತತಸ್ತೇಷು ವಿನಷ್ಟೇಷು ಷಷ್ಟಿಂ ಕನ್ಯಾಃ ಪ್ರಜಾಪತಿಃ ।
ವೈರಿಣ್ಯಾಂ ಜನಯಾಮಾಸ ದಕ್ಷಃ ಪ್ರಾಚೇತಸಸ್ತಥಾ ॥೧೨॥

ಪ್ರಾದಾತ್ಸ ದಶ ಧರ್ಮಾಯ ಕಶ್ಯಪಾಯ ತ್ರಯೋದಶ ।
ಸಪ್ತವಿಂಶತಿ ಸೋಮಾಯ ಚತಸ್ರೋಽರಿಷ್ಟನೇಮಯೇ ॥೧೩॥

ದ್ವೇ ಚೈವ ಭೃಗುಪುತ್ರಾಯ ದ್ವೇ ಕೃಶಾಶ್ವಾಯ ಧೀಮತೇ ।
ದ್ವೇ ಚೈವಾಂಗಿರಸೇ ತದ್ವತ್ತಾಸಾಂ ನಾಮಾನಿ ವಿಸ್ತರಾತ್ ॥೧೪॥

---

ಅರಿತು, ನಿಮ್ಮ ಸೋದರರನ್ನು ಪತ್ತೆಮಾಡಿ ಬಂದು, ನಾನಾಬಗೆಯಾಗಿ ಸೃಷ್ಟಿ ಕಾರ್ಯವನ್ನು ನಡೆಸಿರಿ" ಎಂದು ಹಿಂದೆ ಹೇಳಿದಂತೆಯೇ ಹೇಳಿದನು.

೧೧. ಅವರೂ ಕೂಡ ತಮ್ಮ ಅಣ್ಣಂದಿರು ಹೋದ ದಾರಿಯಲ್ಲೇ ಹೋದರು. ಅದು ಮೊದಲು ತಮ್ಮನು ಅಣ್ಣನನ್ನು ಹುಡುಕುತ್ತ ಅವನ ಹಾದಿಯಲ್ಲಿ ಹೋಗುವುದಿಲ್ಲ. ಹಾಗೆ ಮಾಡಿದರೆ ದುಃಖವನ್ನು ಪಡೆಯುವನು. ಆದುದರಿಂದ ಅದನ್ನು ಬಿಡಬೇಕು.

೧೨. ಆ ಮಕ್ಕಳೂ ಸಹ ಎಲ್ಲೋ ಹೊರಟುಹೋಗಲು, ದಕ್ಷಪ್ರಜಾಪತಿಯು ವೈರಿಣಿಯಲ್ಲಿ ಅರವತ್ತು ಮಂದಿ ಕನ್ಯೆಯರನ್ನು ಉತ್ಪಾದನಮಾಡಿದನು.

೧೩-೧೪. ಅವನು ಧರ್ಮನಿಗೆ ಹತ್ತುಮಂದಿ, ಕಶ್ಯಪನಿಗೆ ಹದಿಮೂರು ಜನ, ಸೋಮನಿಗೆ ಇಪ್ಪತ್ತೇಳು ಜನ, ಅರಿಷ್ಟನೇಮಿಗೆ ನಾಲ್ವರು, ಅಂಗಿರಸನಿಗೆ ಇಬ್ಬರು, ಭೃಗುಪುತ್ರನಿಗೆ ಇಬ್ಬರು ಮತ್ತು ಕೃಶಾಶ್ವನಿಗೆ ಇಬ್ಬರು ಹೀಗೆ ಅರವತ್ತು ಜನ ಕನ್ಯೆಯರನ್ನೂ ದಾನಮಾಡಿದನು.

**ಶೃಣುಧ್ವಂ ದೇವಮಾತ್ೃಣಾಂ ಪ್ರಜಾವಿಸ್ತರಮಾದಿತಃ ।**
**ಮರುತ್ವತೀ ವಸುರ್ಯಾಮೀ ಲಂಬಾ ಭಾನುರರುಂಧತೀ ॥೧೫॥**

**ಸಂಕಲ್ಪಾ ಚ ಮುಹೂರ್ತಾ ಚ ಸಾಧ್ಯಾ ವಿಶ್ವಾ ಚ ಭಾಮಿನೀ ।**
**ಧರ್ಮಪತ್ನ್ಯಃ ಸಮಾಖ್ಯಾತಾಸ್ತಾಸಾಂ ಪುತ್ರಾನ್ನಿಬೋಧತ ॥೧೬॥**

**ವಿಶ್ವೇದೇವಾಂಸ್ತು ವಿಶ್ವಾ ಯಾ ಸಾಧ್ಯಾ ಸಾಧ್ಯಾನಜೀಜನತ್ ।**
**ಮರುತ್ವತ್ಯಾಂ ಮರುತ್ವಂತೋ ವಸೋಸ್ತು ವಸವಸ್ತಥಾ ॥೧೭॥**

**ಭಾನೋಸ್ತು ಭಾನವಸ್ತದ್ವನ್ಮುಹೂರ್ತಾಯಾಂ ಮುಹೂರ್ತಕಾಃ ।**
**ಲಂಬಾಯಾಂ ಘೋಷನಾಮಾನೋ ನಾಗವೀಥೀ ತು ಯಾಮಿಜಾ ॥೧೮॥**

**ಪೃಥಿವೀತಲಸಂಭೂತಮರುಂಧತ್ಯಾಮಜಾಯತ ।**
**ಸಂಕಲ್ಪಾಯಾಸ್ತು ಸಂಕಲ್ಪೋ ವಸುಸೃಷ್ಟಿಂ ನಿಬೋಧತ ॥೧೯॥**

**ಜ್ಯೋತಿಷ್ಮಂತಸ್ತು ಯೇ ದೇವಾ ವ್ಯಾಪಕಾಃ ಸರ್ವತೋ ದಿಶಂ ।**
**ವಸವಸ್ತೇ ಸಮಾಖ್ಯಾತಾಸ್ತೇಷಾಂ ಸರ್ಗಂ ನಿಬೋಧತ ॥೨೦॥**

---

೧೫-೧೬. ದೇವಮಾತೆಯರೆನಿಸಿದ ಅವರ ಹೆಸರುಗಳನ್ನೂ ಅವರ ಮಕ್ಕಳ ವಿವರವನ್ನೂ ಕೇಳಿರಿ. ಮರುತ್ವತೀ, ವಸು, ಯಾಮೀ, ಲಂಬಾ, ಭಾನು, ಅರುಂಧತೀ, ಸಂಕಲ್ಪಾ, ಮುಹೂರ್ತಾ, ಸಾಧ್ಯಾ, ವಿಶ್ವಾ ಮತ್ತು ಭಾಮಿನೀ ಇವರು ಧರ್ಮನ ಪತ್ನಿಯರು. ಇವರ ಮಕ್ಕಳನ್ನು ಇನ್ನು ಮುಂದೆ ತಿಳಿಯಿರಿ.

೧೭-೧೯. ವಿಶ್ವೆಯು ವಿಶ್ವೇದೇವರನ್ನೂ, ಸಾಧ್ಯೆಯು ಸಾಧ್ಯರನ್ನೂ ಹಡೆದರು. ಮರುತ್ವತಿಯಲ್ಲಿ ಮರುತ್ವಂತರು ಜನಿಸಿದರು. ವಸುವಿನಿಂದ ವಸುಗಳೂ, ಭಾನುವಿನಿಂದ ಭಾನುಗಳೂ, ಮೂಹೂರ್ತೆಯಲ್ಲಿ ಮುಹೂರ್ತಕರೂ, ಲಂಬೆಯಲ್ಲಿ ಘೋಷರೆಂಬವರೂ ಹುಟ್ಟಿದರು. ನಾಗವೀಥಿಯು ಯಾಮಿಯ ಮಗಳು. ಭೂಮಿಯ ಮೇಲೆ ಹುಟ್ಟಿರುವುದೆಲ್ಲ ಅರುಂಧತಿಯಿಂದ ಉತ್ಪನ್ನವಾದುದು. ಸಂಕಲ್ಪೆಯಿಂದ ಸಂಕಲ್ಪನು ಜನಿಸಿದನು. ಇನ್ನು ವಸುಸೃಷ್ಟಿಯನ್ನು ಲಾಲಿಸಿರಿ.

೨೦. ಎಲ್ಲ ದಿಕ್ಕುಗಳಲ್ಲಿಯೂ ವ್ಯಾಪಿಸಿರುವ ಜ್ಯೋತಿಷ್ಮಂತರೆಂಬ ದೇವತೆಗಳೇ ವಸುಗಳೆಂದು ಪ್ರಖ್ಯಾತರಾಗಿರುವರು. ಅವರ ಉತ್ಪತ್ತಿಯನ್ನು ಕೇಳಿ.

**ಆಪೋ ಧ್ರುವಶ್ಚ ಸೋಮಶ್ಚ ಧರಶ್ಚೈವಾನಿಲೋಽನಲಃ ।**
**ಪ್ರತ್ಯೂಷಶ್ಚ ಪ್ರಭಾಸಶ್ಚ ವಸವೋಽಷ್ಟೌ ಪ್ರಕೀರ್ತಿತಾಃ ॥೨೧॥**

**ಆಪಸ್ಯ ಪುತ್ರಾಶ್ಚತ್ವಾರಃ ಶಾಂತೋ ವೈ ದಂಡ ಏವ ಚ ।**
**ಶಾಂಭೋಽಥ ಮಣಿವಕ್ತ್ರಶ್ಚ ಯಜ್ಞರಕ್ಷಾಧಿಕಾರಿಣಃ ॥೨೨॥**

**ಧ್ರುವಸ್ಯ ಕಾಲಃ ಪುತ್ರಸ್ತು ವರ್ಚಾಃ ಸೋಮಾದಜಾಯತ ।**
**ದ್ರವಿಣೋ ಹವ್ಯವಾಹಶ್ಚ ಧರಪುತ್ರಾವುಭೌ ಸ್ಮೃತೌ ॥ ೨೩ ॥**

**ಕಲ್ಯಾಣಿನ್ಯಾಂ ತತಃ ಪ್ರಾಣೋ ರಮಣಃ ಶಿಶಿರೋಽಪಿ ಚ ।**
**ಮನೋಹರಾ ಧರಾತ್ಪುತ್ರಾನವಾಪಾಥ ಹರೇಃ ಸುತಾ ॥೨೪॥**

**ಶಿವಾ ಮನೋಜವಂ ಪುತ್ರಮವಿಜ್ಞಾತಗತಿಂ ತಥಾ ।**
**ಅವಾಪ ಚಾನಲಾತ್ಪುತ್ರಾವಗ್ನಿಪ್ರಾಯಗುಣೌ ಪುನಃ ॥೨೫॥**

---

೨೧. ಆಪ, ಧ್ರುವ, ಸೋಮ, ಧರ, ಅನಿಲ, ಅನಲ, ಪ್ರತ್ಯೂಷಸ್ ಮತ್ತು ಪ್ರಭಾಸರೆಂಬ ಎಂಟು ಜನರನ್ನು ವಸುಗಳೆನ್ನುವರು.

೨೨. ಶಾಂತ, ದಂಡ, ಶಾಂಬ, ಮತ್ತು ಮಣಿವಕ್ತ್ರರೆಂಬ ನಾಲ್ವರು ಆಪನ ಪುತ್ರರು. ಇವರು ಯಜ್ಞವನ್ನು ರಕ್ಷಿಸುವ ಅಧಿಕಾರಿಗಳು.

೨೩. ಕಾಲನು ಧ್ರುವನ ಮಗ. ಸೋಮನಿಂದ ವರ್ಚಸ್ಸು ಹುಟ್ಟಿದನು. ದ್ರವಿಣ, ಹವ್ಯವಾಹ ಇವರಿಬ್ಬರೂ ಧರನ ಮಕ್ಕಳು. ಇವರು ಕಲ್ಯಾಣಿನಿಯಲ್ಲಿ ಹುಟ್ಟಿದವರು.

೨೪. ಹರಿಯ ಮಗಳಾದ ಮನೋಹರೆಯೆಂಬವಳು ಧರನ ಮತ್ತೊಬ್ಬ ಹೆಂಡತಿ. ಅವಳು ಪ್ರಾಣ, ರಮಣ ಮತ್ತು ಶಿಶಿರರೆಂಬ ಮೂವರು ಮಕ್ಕಳನ್ನು ಪಡೆದಳು.

೨೫. ಅನಲನ ಪತ್ನಿಯಾದ ಶಿವೆಯು ಅಗ್ನಿಯಂತೆ ಪ್ರಕಾಶಮಾನರಾದ ಮನೋಜವ ಮತ್ತು ಅವಿಜ್ಞಾತಗತಿಯೆಂಬ ಪುತ್ರರಿಬ್ಬರನ್ನು ಪ್ರಸವಿಸಿದಳು.

ಅಗ್ನಿಪುತ್ರಃ ಕುಮಾರಸ್ತು ಶರಸ್ತಂಬೇ ವ್ಯಜಾಯತ ।
ತಸ್ಯ ಶಾಖೋ ವಿಶಾಖಶ್ಚ ನೈಗಮೇಯಶ್ಚ ಪೃಷ್ಠಜಾಃ ॥೨೬॥

ಅಪತ್ಯಂ ಕೃತ್ತಿಕಾನಾಂ ತು ಕಾರ್ತಿಕೇಯಸ್ತತಃ ಸ್ಮೃತಃ ।
ಪ್ರತ್ಯೂಷಸ ಋಷಿಃ ಪುತ್ರೋ ವಿಭುರ್ನಾಮ್ನಾಥ ದೇವಲಃ ।
ವಿಶ್ವಕರ್ಮಾ ಪ್ರಭಾಸಸ್ಯ ಪುತ್ರಃ ಶಿಲ್ಪೀ ಪ್ರಜಾಪತಿಃ ॥೨೭॥

ಪ್ರಾಸಾದಭವನೋದ್ಯಾನಪ್ರತಿಮಾಭೂಷಣಾದಿಷು ।
ತಡಾಗಾರಾಮಕೂಪೇಷು ಸ್ಮೃತಃ ಸೋಽಮರವರ್ಧಕಿಃ ॥೨೮॥

ಅಜೈಕಪಾದಹಿರ್ಬುಧ್ನ್ಯೋ ವಿರೂಪಾಕ್ಷೋಽಥ ರೈವತಃ
ಹರಶ್ಚ ಬಹುರೂಪಶ್ಚ ತ್ರ್ಯಂಬಕಶ್ಚ ಸುರೇಶ್ವರಃ ॥೨೯॥

ಸಾವಿತ್ರಶ್ಚ ಜಯಂತಶ್ಚ ಪಿನಾಕೀ ಚಾಪರಾಜಿತಃ ।
ಏತೇ ರುದ್ರಾಃ ಸಮಾಖ್ಯಾತಾ ಏಕಾದಶ ಗಣೇಶ್ವರಾಃ ॥೩೦॥

---

೨೬. ಅಗ್ನಿಪುತ್ರನಾದ ಕುಮಾರನಾದರೋ ಜೊಂಡಿನ ಬೊಡ್ಡೆಯಲ್ಲಿ ಜನಿಸಿದನು. ಅವನ ಬೆನ್ನಿನಲ್ಲಿ ಶಾಖ, ವಿಶಾಖ ಮತ್ತು ನೈಗಮೇಯರೆಂಬವರು ಹುಟ್ಟಿದರು.

೨೭. ಕೃತ್ತಿಕಾದೇವಿಯರು ಸಾಕಿದ ಮಗುವಾದುದರಿಂದ ಕುಮಾರಸ್ವಾಮಿಯನ್ನು ಕಾರ್ತಿಕೇಯನೆಂದೂ ಹೇಳುವರು. ಪ್ರತ್ಯೂಷಸ್ಸಿನ ಮಕ್ಕಳು ಋಷಿ, ವಿಭು ಮತ್ತು ದೇವಲರೆಂಬವರು. ಶಿಲ್ಪವರ್ಯನಾದ ವಿಶ್ವಕರ್ಮಪ್ರಜಾಪತಿಯು ಪ್ರಭಾಸನ ಮಗನು.

೨೮. ದೇವತೆಗಳ ಶಿಲ್ಪಿಯೆನಿಸಿದ ಅವನು ದೇವಾಲಯ, ಮನೆ, ತೋಟ, ವಿಗ್ರಹ, ಆಭರಣ, ಕೆರೆ, ಕೈದೋಟ ಮತ್ತು ಬಾವಿಗಳ ನಿರ್ಮಾಣಕಾರ್ಯದಲ್ಲಿ ಬಹು ಕುಶಲನು.

೨೯-೩೦. ಅಜೈಕಪಾದ, ಅಹಿರ್ಬುಧ್ನ್ಯ, ವಿರೂಪಾಕ್ಷ, ರೈವತ, ಹರ, ಬಹುರೂಪ, ತ್ರ್ಯಂಬಕ, ಸುರೇಶ್ವರ, ಸಾವಿತ್ರ, ಜಯಂತ ಮತ್ತು ಪರಾಜಯ ರಹಿತನಾದ ಪಿನಾಕಿ ಇವರು ಏಕಾದಶ ರುದ್ರರು ; ಗಣಾಧಿಪತಿಗಳು.

**ಏತೇಷಾಂ ಮಾನಸಾನಾಂ ತು ತ್ರಿಶೂಲವರಧಾರಿಣಾಂ।**
**ಕೋಟಿಯಶ್ಚತುರಾಶೀತಿಸ್ತತ್ಪುತ್ರಾಶ್ಚಾಕ್ಷಯಾ ಮತಾಃ ॥೩೧॥**
**ದಿಕ್ಷು ಸರ್ವಾಸು ಯೇ ರಕ್ಷಾಂ ಪ್ರಕುರ್ವಂತಿ ಗಣೇಶ್ವರಾಃ।**
**ಪುತ್ರಪೌತ್ರಸುತಾಶ್ಚೈತೇ ಸುರಭೀಗರ್ಭಸಂಭವಾಃ ॥೩೨॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಆದಿಸರ್ಗೇ**
**ವಸುರುದ್ರಾನ್ವಯೋ ನಾಮ ಪಂಚಮೋಽಧ್ಯಾಯಃ**

---

೩೧-೩೨. ಇವರ ಮಾನಸಪುತ್ರರು ತ್ರಿಶೂಲಧಾರಿಗಳಾದ ಎಂಬತ್ತನಾಲ್ಕು ಕೋಟಿಮಂದಿ. ಅವರ ಮಕ್ಕಳು ಲೆಕ್ಕವಿಲ್ಲದಷ್ಟು ಜನ. ಈ ಮೊಮ್ಮಕ್ಕಳೂ, ಮರಿ ಮಕ್ಕಳೂ ಸುರಭೀಗರ್ಭದಲ್ಲಿ ಹುಟ್ಟಿದವರು.

### ಅಧ್ಯಾಯದ ಸಾರಾಂಶ

ದೇವಾದಿಸೃಷ್ಟಿಯು ಈ ಅಧ್ಯಾಯದಲ್ಲಿ ವಿವರಿಸಲ್ಪಟ್ಟಿದೆ. ದಕ್ಷಪ್ರಜಾಪತಿಯ ಮೊದಲನೆಯ ಹೆಂಡತಿಯಾದ ಪಾಂಚಜನಿಯಲ್ಲಿ ಹುಟ್ಟಿದ ಹರ್ಯಶ್ವರೆಂಬ ಸಾವಿರ ಮಕ್ಕಳೂ, ಎರಡನೆಯವಳಾದ ವೈರಿಣಿಯಲ್ಲಿ ಜನಿಸಿದ ಶಬಲರೆಂಬ ಸಾವಿರಜನ ಮಕ್ಕಳೂ, ನಾರದೋಪದೇಶದಿಂದ ಪ್ರಜಾಸೃಷ್ಟಿಗೋಸುಗವೆಂದು ಎತ್ತಲೋ ಹೊರಟುಹೋದರು. ಅವನು ಪುನಃ ವೈರಿಣಿಯಲ್ಲಿ ಅರವತ್ತು ಜನ ಪುತ್ರಿಯರನ್ನು ಪಡೆದು ಧರ್ಮಾದಿಗಳಿಗೆ ಅವರನ್ನು ಕೊಟ್ಟನು. ಅವರಿಂದಲೇ ವಸುಗಳು, ರುದ್ರರು ಮೊದಲಾದ ದೇವಗಣಗಳೆಲ್ಲವೂ ಹುಟ್ಟಿದುವು.

ಶ್ರೀ ಮತ್ಸ್ಯಮಹಾಪುರಾಣದಲ್ಲಿ ಐದನೆಯ ಅಧ್ಯಾಯವು ಮುಗಿದುದು

# ಅಥ ಶ್ರೀಮತ್ಸ್ಯಮಹಾಪುರಾಣೇ ಷಷ್ಠೋಽಧ್ಯಾಯಃ

|| ಸೂತ ಉವಾಚ ||

ಕಶ್ಯಪಸ್ಯ ಪ್ರವಕ್ಷ್ಯಾಮಿ ಪತ್ನೀಭ್ಯಃ ಪುತ್ರಪೌತ್ರಕಾನ್ ।
ಅದಿತಿರ್ದಿತಿರ್ದನುಶ್ಚೈವ ಅರಿಷ್ಟಾ ಸುರಸಾ ತಥಾ || ೧ ||

ಸುರಭಿರ್ವಿನತಾ ತದ್ವತ್ತಾಮ್ರಾ ಕ್ರೋಧವಶಾ ಇರಾ ।
ಕದ್ರೂರ್ವಿಶ್ವಾ ಮುನಿಸ್ತದ್ವತ್ತಾಸಾಂ ಪುತ್ರಾನ್ನಿಬೋಧತ || ೨ ||

ತುಷಿತಾ ನಾಮ ಯೇ ದೇವಾಶ್ಚಾಕ್ಷುಷಸ್ಯಾಂತರೇ ಮನೋಃ ।
ವೈವಸ್ವತೇಽಂತರೇ ಚೈತೇ ಹ್ಯಾದಿತ್ಯಾ ದ್ವಾದಶ ಸ್ಮೃತಾಃ || ೩ ||

ಇಂದ್ರೋ ಧಾತಾ ಭಗಸ್ತ್ವಷ್ಟಾ ಮಿತ್ರೋಽಥ ವರುಣೋ ಯಮಃ ।
ವಿವಸ್ವಾನ್ಸವಿತಾ ಪೂಷಾ ಅಂಶುಮಾನ್ವಿಷ್ಣುರೇವ ಚ || ೪ ||

ಏತೇ ಸಹಸ್ರಕಿರಣಾ ಆದಿತ್ಯಾ ದ್ವಾದಶ ಸ್ಮೃತಾಃ ।
ಮಾರೀಚಾತ್ಕಶ್ಯಪಾದಾಪ ಪುತ್ರಾನದಿತಿರುತ್ತಮಾನ್ || ೫ ||

---

೧-೨. ಸೂತಮಹರ್ಷಿಯು ಹೇಳಿದನು :—ಕಶ್ಯಪಪ್ರಜಾಪತಿಯ ಪತ್ನಿಯರಿಂದ ಜನಿಸಿದ ಮಕ್ಕಳನ್ನೂ ಮೊಮ್ಮಕ್ಕಳನ್ನೂ ಹೇಳುವೆನು. ಅದಿತಿ, ದಿತಿ, ದನು, ಅರಿಷ್ಟಾ, ಸುರಸಾ, ಸುರಭಿ, ವಿನತಾ, ತಾಮ್ರಾ, ಕ್ರೋಧವಶಾ, ಇರಾ, ಕದ್ರೂ, ವಿಶ್ವಾ ಮತ್ತು ಮುನಿಯೆಂಬ ಹದಿಮೂರು ಜನರು ಅವನ ಪತ್ನಿಯರು. ಇವರ ಮಕ್ಕಳನ್ನು ಕೇಳಿರಿ.

೩. ಚಾಕ್ಷುಷಮನ್ವಂತರದಲ್ಲಿ ತುಷಿತರೆಂದು ಪ್ರಸಿದ್ಧರಾಗಿದ್ದ ದೇವತೆಗಳಿದ್ದರು. ಇವರೇ ವೈವಸ್ವತಮನ್ವಂತರದಲ್ಲಿ ದ್ವಾದಶಾದಿತ್ಯರೆನಿಸಿಕೊಂಡರು.

೪-೫. ಇಂದ್ರ, ಧಾತ, ಭಗ, ತ್ವಷ್ಟೃ, ಮಿತ್ರ, ವರುಣ, ಯಮ, ವಿವಸ್ವಂತ, ಸವಿತೃ, ಪೂಷ, ಅಂಶುಮಂತ ಮತ್ತು ವಿಷ್ಣುಗಳೆಂಬ ಹನ್ನೆರಡು ಜನ ಸೂರ್ಯರನ್ನು ಮರೀಚಪುತ್ರನಾದ ಕಶ್ಯಪನಿಂದ ಅದಿತಿಯು ಪಡೆದಳು.

**ಕೃಶಾಶ್ವಸ್ಯ ಋಷೇಃ ಪುತ್ರಾ ದೇವಪ್ರಹರಣಾಃ ಸ್ಮೃತಾಃ।**
**ಏತೇ ದೇವಗಣಾ ವಿಪ್ರಾಃ ಪ್ರತಿಮನ್ವಂತರೇಷು ಚ ॥ ೬ ॥**

**ಉತ್ಪದ್ಯಂತೇ ಪ್ರಲೀಯಂತೇ ಕಲ್ಪೇ ಕಲ್ಪೇ ತಥೈವ ಚ।**
**ದಿತಿಃ ಪುತ್ರದ್ವಯಂ ಲೇಭೇ ಕಶ್ಯಪಾದಿತಿ ನಃ ಶ್ರುತಂ ॥ ೭ ॥**

**ಹಿರಣ್ಯಕಶಿಪುಂ ಚೈವ ಹಿರಣ್ಯಾಕ್ಷಂ ತಥೈವ ಚ।**
**ಹಿರಣ್ಯಕಶಿಪೋಸ್ತದ್ವಜ್ಜಾತಂ ಪುತ್ರಚತುಷ್ಟಯಂ ॥ ೮ ॥**

**ಪ್ರಹ್ಲಾದಶ್ಚಾನುಹ್ಲಾದಶ್ಚ ಸಂಹ್ಲಾದೋ ಹ್ಲಾದ ಏವ ಚ।**
**ಪ್ರಹ್ಲಾದಪುತ್ರ ಆಯುಷ್ಮಾನ್ ಶಿಬಿರ್ಬಾಷ್ಕಲ ಏವ ಚ। ॥ ೯ ॥**

**ವಿರೋಚನಶ್ಚತುರ್ಥಶ್ಚ ಸ ಬಲಿಂ ಪುತ್ರಮಾಪ್ತವಾನ್।**
**ಬಲೇಃ ಪುತ್ರಶತಂ ತ್ವಾಸೀದ್ಬಾಣಜ್ಯೇಷ್ಠಂ ತತೋ ದ್ವಿಜಾಃ ॥೧೦॥**

**ಧೃತರಾಷ್ಟ್ರಸ್ತಥಾ ಸೂರ್ಯಶ್ಚಂದ್ರಶ್ಚಂದ್ರಾಂಶುತಾಪನಃ।**
**ನಿಕುಂಭನಾಭೋ ಗುರ್ವಕ್ಷಃ ಕುಕ್ಷಿಭೀಮೋ ವಿಭೀಷಣಃ ॥೧೧॥**

---

೬-೭. ಕೃಶಾಶ್ವಮುನಿಯ ಪುತ್ರರಿಗೆ ದೇವಪ್ರಹರಣರೆಂದು ಹೆಸರು. ಎಲೈ ವಿಪ್ರರೇ, ಈ ದೇವವರ್ಗದವರೆಲ್ಲರೂ ಪ್ರತಿಯೊಂದು ಮನ್ವಂತರದಲ್ಲೂ ಹುಟ್ಟುವರು ಮತ್ತು ಲಯಹೊಂದುವರು.

೮-೧೦. ದಿತಿಗೆ ಕಶ್ಯಪಮುನಿಯಿಂದ ಹಿರಣ್ಯಕಶಿಪು, ಹಿರಣ್ಯಾಕ್ಷ ಎಂಬ ಇಬ್ಬರು ಮಕ್ಕಳು ಜನಿಸಿದರೆಂದು ಕೇಳಬಲ್ಲೆವು. ಹಿರಣ್ಯಕಶಿಪುವಿಗೆ ನಾಲ್ವರು ಮಕ್ಕಳು ಜನಿಸಿದರು. ಪ್ರಹ್ಲಾದ, ಅನುಹ್ಲಾದ, ಸಂಹ್ಲಾದ ಮತ್ತು ಹ್ಲಾದರೆಂದು ಅವರಿಗೆ ಹೆಸರು. ಪ್ರಹ್ಲಾದನಿಗೆ ಆಯುಷ್ಮಂತ, ಶಿಬಿ, ಬಾಷ್ಕಲ ಮತ್ತು ವಿರೋಚನರೆಂಬ ಮಕ್ಕಳು ಹುಟ್ಟಿದರು. ವಿರೋಚನನ ಮಗನೇ ಬಲಿಚಕ್ರವರ್ತಿ. ಅವನಿಗೆ ನೂರು ಜನ ಮಕ್ಕಳು. ಅವರಲ್ಲಿ ಬಾಣನೇ ಹಿರಿಯವನು.

೧೧. ಧೃತರಾಷ್ಟ್ರ, ಸೂರ್ಯ, ಚಂದ್ರ, ಚಂದ್ರಾಂಶುತಾಪನ, ನಿಕುಂಭ, ನಾಭ, ಗುರ್ವಕ್ಷ, ಕುಕ್ಷಿಭೀಮ ಮತ್ತು ವಿಭೀಷಣ ಮುಂತಾದ ಹಲವರು ಬಾಣನ ತಮ್ಮಂದಿರು. ಇವರು ಅಧಿಕ ಗುಣವಂತರು.

**ಏವಮಾದ್ಯಾಸ್ತು ಬಹವೋ ಬಾಣಜ್ಯೇಷ್ಠಾ ಗುಣಾಧಿಕಾಃ ।**
**ಬಾಣಃ ಸಹಸ್ರಬಾಹುಶ್ಚ ಸರ್ವಾಸ್ತ್ರಗಣಸಂಯುತಃ ॥೧೨॥**

**ತಪಸಾ ತೋಷಿತೋ ಯಸ್ಯ ಪುರೇ ವಸತಿ ಶೂಲಭೃತ್ ।**
**ಮಹಾಕಾಲತ್ವಮಗಮತ್ಸಾಮ್ಯಂ ಯಶ್ಚ ಪಿನಾಕಿನಃ ॥೧೩॥**

**ಹಿರಣ್ಯಾಕ್ಷಸ್ಯ ಪುತ್ರೋಽಭೂದುಲೂಕಃ ಶಕುನಿಸ್ತಥಾ ।**
**ಭೂತಸಂತಾಪನಶ್ಚೈವ ಮಹಾನಾಭ ಸ್ತಥೈವ ಚ ॥೧೪॥**

**ಏತೇಭ್ಯಃ ಪುತ್ರಪೌತ್ರಾಣಾಂ ಕೋಟಯಃ ಸಪ್ತಸಪ್ತತಿಃ ।**
**ಮಹಾಬಲಾ ಮಹಾಕಾಯಾ ನಾನಾರೂಪಾ ಮಹೌಜಸಃ ॥೧೫॥**

**ದನುಃ ಪುತ್ರಶತಂ ಲೇಭೇ ಕಶ್ಯಪಾದ್ಬಲದರ್ಪಿತಂ ।**
**ವಿಪ್ರಚಿತ್ತಿಃ ಪ್ರಧಾನೋಽಭೂದ್ಯೇಷಾಂ ಮಧ್ಯೇ ಮಹಾಬಲಃ ॥೧೬॥**

**ದ್ವಿಮೂರ್ಧಾ ಶಕುನಿಶ್ಚೈವ ತಥಾ ಶಂಕುಶಿರೋಧರಃ ।**
**ಅಯೋಮುಖಃ ಶಂಬರಶ್ಚ ಕಪಿಶೋ ವಾಮನಸ್ತಥಾ ॥೧೭॥**

---

೧೨-೧೩. ಸಕಲ ಧನುರ್ವಿದ್ಯಾವಿಶಾರದನಾದ ಬಾಣನಿಗೆ ಸಾವಿರ ತೋಳು ಗಳಿದ್ದವು. ಅವನ ತಪಸ್ಸಿಗೆ ಮೆಚ್ಚಿ ಮಹೇಶ್ವರನು ಅವನ ನಗರದಲ್ಲಿ ನೆಲಸಿರುವನು. ಬಾಣನೂ ಸಹ ಮಹಾಕಾಲ ರೂಪವನ್ನು ಪಡೆದು ಮಹೇಶ್ವರನ ಸಾಮ್ಯವನ್ನು ಹೊಂದಿದನು.

೧೪-೧೫. ಹಿರಣ್ಯಾಕ್ಷನಿಗೆ ಉಲೂಕ, ಶಕುನಿ, ಭೂತಸಂತಾಪನ ಮತ್ತು ಮಹಾನಾಭಿಯೆಂಬವರು ಮಕ್ಕಳಾದರು. ಇವರಿಂದ ಮಹಾಬಲಿಷ್ಠರೂ, ಮಹಾ ದೇಹರೂ, ವಿವಿಧರೂಪದವರೂ ಮತ್ತು ಪರಾಕ್ರಮಶಾಲಿಗಳೂ ಆದ ಎಪ್ಪತ್ತೇಳು ಕೋಟಿ ಮಂದಿ ಮಕ್ಕಳೂ ಮೊಮ್ಮಕ್ಕಳೂ ಉದ್ಭವಿಸಿದರು.

೧೬. ಕಶ್ಯಪರಿಂದ ದನುವಿಗೆ ಬಲದಿಂದ ಕೊಬ್ಬಿದ ನೂರ್ವರು ಸುತರು ಜನಿಸಿದರು. ಅವರಲ್ಲಿ ಮಹಾಬಲನಾದ ವಿಪ್ರಚಿತ್ತಿಯು ಅಗ್ರಗಣ್ಯನು.

೧೭-೨೦. ದ್ವಿಮೂರ್ಧ, ಶಕುನಿ, ಶಂಕು ಶಿರೋಧರ, ಅಯೋಮುಖ, ಶಂಬರ, ಕಪಿಶ, ವಾಮನ, ಮಾರೀಚಿ, ಮೇಘವಂತ, ಇರಾಗರ್ಭ, ಶಿರಸ್ಸು, ವಿದ್ರಾವಣ, ಕೇತು, ಕೇತುವೀರ್ಯ, ಶತಹ್ರದ, ಇಂದ್ರಜಿತ್ತು, ಸಪ್ತಜಿತ್ತು,

**ಮಾರೀಚಿರ್ಮೇಘವಾಂಶ್ಚೈವ ಇರಾಗರ್ಭಶಿರಾಸ್ತಥಾ ।**
**ವಿದ್ರಾವಣಶ್ಚ ಕೇತುಶ್ಚ ಕೇತುವೀರ್ಯಃ ಶತಹ್ರದಃ ॥೧೮॥**

**ಇಂದ್ರಜಿತ್ಸಪ್ತಜಿಚ್ಚೈವ ವಜ್ರನಾಭಸ್ತಥೈವ ಚ ।**
**ಏಕಚಕ್ರೋ ಮಹಾಬಾಹುರ್ವಜ್ರಾಕ್ಷಸ್ತಾರಕ ಸ್ತಥಾ ॥೧೯॥**

**ಅಸಿಲೋಮಾ ಪುಲೋಮಾ ಚ ಬಿಂದುರ್ಬಾಣೋ ಮಹಾಸುರಃ ।**
**ಸ್ವರ್ಭಾನುರ್ವೃಷಪರ್ವಾ ಚ ಏವಮಾದ್ಯಾ ದನೋಃ ಸುತಾಃ ॥೨೦॥**

**ಸ್ವರ್ಭಾನೋಸ್ತು ಪ್ರಭಾ ಕನ್ಯಾ ಶಚೀ ಚೈವ ಪುಲೋಮಜಾ ।**
**ಉಪದಾನವೀ ಮಯಸ್ಯಾಸೀತ್ತಥಾ ಮಂದೋದರೀ ಕುಹೂಃ ॥೨೧॥**

**ಶರ್ಮಿಷ್ಠಾ ಸುಂದರೀ ಚೈವ ಚಂದ್ರಾ ಚ ವೃಷಪರ್ವಣಃ ।**
**ಪುಲೋಮಾ ಕಾಲಕಾ ಚೈವ ವೈಶ್ವಾನರಸುತೇ ಹಿ ತೇ ॥೨೨॥**

**ಬಹ್ವಪತ್ಯೇ ಮಹಾಸತ್ವೇ ಮಾರೀಚಸ್ಯ ಪರಿಗ್ರಹೇ ।**
**ತಯೋಃ ಷಷ್ಟಿಸಹಸ್ರಾಣಿ ದಾನವಾನಾಮಭೂತ್ಪುರಾ ॥೨೩॥**

---

ವಜ್ರನಾಭ, ಏಕಚಕ್ರ, ಮಹಾಬಾಹು, ವಜ್ರಾಕ್ಷ, ತಾರಕ, ಅಸಿಲೋಮ, ಪುಲೋಮ, ಬಿಂದು, ಬಾಣ, ಸ್ವರ್ಭಾನು ಮತ್ತು ವೃಷಪರ್ವ ಮುಂತಾದವರು ದನುವಿನ ಮಕ್ಕಳು.

೨೧. ಪ್ರಭೆಯು ಸ್ವರ್ಭಾನುವಿನ ಮಗಳು. ಶಚಿಯು ಪುಲೋಮನ ಪುತ್ರಿ. ಮಯನಿಗೆ ಉಪದಾನವಿ, ಮಂದೋದರಿ ಮತ್ತು ಕುಹು ಎಂಬ ಕನ್ಯೆಯರಾದರು.

೨೨. ಶರ್ಮಿಷ್ಠೆ, ಸುಂದರಿ, ಚಂದ್ರೆ ಇವರು ವೃಷಪರ್ವನ ಪುತ್ರಿಯರು. ಪುಲೋಮೆ, ಕಾಲಿಕೆ ಇವರಿಬ್ಬರೂ ಅಗ್ನಿಯ ಮಕ್ಕಳು.

೨೩. ಕಶ್ಯಪ ಮಹರ್ಷಿಯ ಈ ಇಬ್ಬರು ಪತ್ನಿಯರೂ ಬಹು ಧೀರೆಯರು. ಇವರಿಗೆ ಹಲವರು ಮಕ್ಕಳಾದರು. ಇವರಿಬ್ಬರಿಂದಲೂ ಒಟ್ಟು ಅರವತ್ತು ಸಾವಿರ ಮಂದಿ ದಾನವರು ಜನಿಸಿದರು.

ಪೌಲೋಮಾನ್ಕಾಲಕೇಯಾಂಶ್ಚ ಮಾರೀಚೋಽಜನಯತ್ಪುರಾ ।
ಅವಧ್ಯಾ ಯೇಽಮರಾಣಾಂ ವೈ ಹಿರಣ್ಯಪುರವಾಸಿನಃ ॥೨೪॥

ಚತುರ್ಮುಖಾಲ್ಲಬ್ಧವರಾಸ್ತೇ ಹತಾ ವಿಜಯೇನ ತು ।
ವಿಪ್ರಚಿತ್ತಿಃ ಸೈಂಹಿಕೇಯಾನ್ ಸಿಂಹಿಕಾಯಾಮಜೀಜನತ್ ॥೨೫॥

ಹಿರಣ್ಯಕಶಿಪೋರ್ಯೇ ವೈ ಭಾಗಿನೇಯಾಸ್ತ್ರಯೋದಶ ।
ವ್ಯಂಸಃ ಕಲ್ಪಶ್ಚ ರಾಜೇಂದ್ರ ನಲೋ ವಾತಾಪಿ ರೇವ ಚ ॥೨೬॥

ಇಲ್ವಲೋ ನಮುಚಿಶ್ಚೈವ ಶ್ವಸೃಪಶ್ಚಾಜನಸ್ತಥಾ ।
ನರಕಃ ಕಾಲನಾಭಶ್ಚ ಸರಮಾಣಸ್ತಥೈವ ಚ ॥೨೭॥

ಕಾಲವೀರ್ಯಶ್ಚ ವಿಖ್ಯಾತೋ ದನುವಂಶವಿವರ್ಧನಾಃ ।
ಸಂಹ್ಲಾದಸ್ಯ ತು ದೈತ್ಯಸ್ಯ ನಿವಾತಕವಚಾಃ ಸ್ಮೃತಾಃ ॥೨೮॥

ಅವಧ್ಯಾಃ ಸರ್ವದೇವಾನಾಂ ಗಂಧರ್ವೋರಗರಕ್ಷಸಾಂ ।
ಯೇ ಹತಾ ಭರ್ಗಮಾಶ್ರಿತ್ಯ ತ್ವರ್ಜುನೇನ ರಣಾಜಿರೇ ॥೨೯॥

---

೨೪–೨೫. ಪುಲೋಮೆಯಲ್ಲಿ ಪೌಲೋಮರನ್ನೂ, ಕಾಲಕೆಯಲ್ಲಿ ಕಾಲಕೇಯರನ್ನೂ ಮಾರೀಚನು ಪಡೆದನು. ಅವರು ಬ್ರಹ್ಮನಿಂದ ವರವನ್ನು ಪಡೆದು, ದೇವತೆಗಳಿಗೆ ಸಹ ಅವಧ್ಯರಾಗಿ ಹಿರಣ್ಯಪುರದಲ್ಲಿ ವಾಸಿಸುತ್ತಿದ್ದರು. ಅವರನ್ನು ಅರ್ಜುನನು ಕೊಂದನು. ವಿಪ್ರಚಿತ್ತಿಗೆ ಸಿಂಹಿಕೆಯಲ್ಲಿ ಸೈಂಹಿಕೇಯರೆಂಬ ಮಕ್ಕಳಾದರು.

೨೬–೨೭. ಹಿರಣ್ಯಕಶಿಪುವಿಗೆ ಹದಿಮೂರು ಜನ ಸೋದರಳಿಯಂದಿರು :— ವ್ಯಂಸ, ಕಲ್ಪ, ನಲ, ವಾತಾಪಿ, ಇಲ್ವಲ, ನಮುಚಿ, ಶ್ವಸೃಪ, ಅಜನ, ನರಕ, ಕಾಲನಾಭ, ಸರಮಾಣ, ಕಾಲವೀರ್ಯ ಮತ್ತು ವಿಖ್ಯಾತರೆಂದು. ಇವರು ದನುವಂಶವನ್ನು ವಿಶೇಷವಾಗಿ ಬೆಳೆಸಿದರು.

೨೮–೨೯. ದೈತ್ಯನಾದ ಸಂಹ್ಲಾದನ ಮಕ್ಕಳೇ ನಿವಾತಕವಚರು. ಅವರು ಸುರರು, ಅಸುರರು, ಸರ್ಪರು ಇವರೆಲ್ಲರಿಗೂ ಅವಧ್ಯರು. ಈಶ್ವರನ ಸಾಹಾಯ್ಯದಿಂದ ಅರ್ಜುನನು ಅವರನ್ನು ರಣಾಂಗಣದಲ್ಲಿ ಸಂಹರಿಸಿದನು.

**ಷಟ್ಕನ್ಯಾ ಜನಯಾಮಾಸ ತಾಮ್ರಾ ಮಾರೀಚಬೀಜತಃ ।**
**ಶುಕೀ ಶ್ಯೇನೀ ಚ ಭಾಸೀ ಚ ಸುಗ್ರೀವೀ ಗೃಧ್ರಿಕಾ ಶುಚಿಃ ॥೩೦॥**

**ಶುಕೀ ಶುಕಾನುಲೂಕಾಂಶ್ಚ ಜನಯಾಮಾಸ ಧರ್ಮತಃ ।**
**ಶ್ಯೇನೀ ಶ್ಯೇನಾಂಸ್ತಥಾ ಭಾಸೀ ಕುರರಾನಪ್ಯಜೀಜನತ್ ॥೩೧॥**

**ಗೃಧ್ರೀ ಗೃಧ್ರಾನ್ ಕಪೋತಾಂಶ್ಚ ಪಾರಾವತವಿಹಂಗಮಾನ್ ।**
**ಹಂಸಸಾರಸಕ್ರೌಂಚಾಂಶ್ಚ ಪ್ಲವಾಚ್ಛುಚಿರಜೀಜನತ್ ॥೩೨॥**

**ಅಜಾಶ್ವಮೇಷೋಷ್ಟ್ರಖರಾನ್ ಸುಗ್ರೀವೀ ಚಾಪ್ಯಜೀಜನತ್ ।**
**ಏಷ ತಾಮ್ರಾನ್ವಯಃ ಪ್ರೋಕ್ತೋ ವಿನತಾಯಾಂ ನಿಬೋಧತ ॥೩೩॥**

**ಗರುಡಃ ಪತತಾಂ ನಾಥೋ ವರುಣಶ್ಚ ಪತತ್ರಿಣಾಂ ।**
**ಸೌದಾಮನೀ ತಥಾ ಕನ್ಯಾ ಯೇಯಂ ನಭಸಿ ವಿಶ್ರುತಾ ॥೩೪॥**

---

೩೦. ತಾಮ್ರೆಯು ಮಾರೀಚನಿಂದ ಶುಕೀ, ಶ್ಯೇನೀ, ಭಾಸೀ, ಸುಗ್ರೀವೀ, ಗೃಧ್ರಿಕಾ ಮತ್ತು ಶುಚಿಯೆಂಬ ಆರು ಮಂದಿ ಹೆಣ್ಣುಮಕ್ಕಳನ್ನು ಪಡೆದಳು.

೩೧-೩೩. ಶುಕಿಯು ಧರ್ಮನಿಂದ ಗಿಳಿಗಳನ್ನೂ, ಗೂಬೆಗಳನ್ನೂ, ಶ್ಯೇನಿಯು ಗಿಡಗಗಳನ್ನೂ, ಭಾಸಿಯು ಟಿಟ್ಟಿಭಗಳನ್ನೂ ಹಡೆದರು. ಗೃಧ್ರಿಗೆ ಹದ್ದುಗಳೂ, ಕಪೋತಗಳೂ, ಪಾರಾವತಗಳೂ ಹುಟ್ಟಿದುವು. ಹಂಸ, ಸಾರಸ, ಮತ್ತು ಕ್ರೌಂಚಗಳು ಪ್ಲವನಿಂದ ಶುಚಿಯಲ್ಲಿ ಜನಿಸಿದುವು. ಸುಗ್ರೀವಿಯು ಆಡು, ಕುದುರೆ, ಟಗರು, ಒಂಟೆ ಮತ್ತು ಕತ್ತೆಗಳನ್ನು ಹೆತ್ತಳು. ಹೀಗೆ ತಾಮ್ರೆಯ ವಂಶವನ್ನು ಹೇಳಿದುದಾಯಿತು. ಇನ್ನು ವಿನತೆಯಲ್ಲಿ ಹುಟ್ಟಿದವರನ್ನು ಕೇಳಿರಿ.

೩೪. ವೇಗದಿಂದ ಕೆಳಕ್ಕೆ ಇಳಿಯುವ ಪಕ್ಷಿಗಳಲ್ಲಿ ಅತಿಶ್ರೇಷ್ಠನೆನಿಸಿದ ಗರುಡನೂ, ಬಾಣದಂತೆ ಮಹಾವೇಗದಿಂದ ಹಾರುವುದರಲ್ಲಿ ಗಟ್ಟಿಗನಾದ ವರುಣನೂ, ಅಂತರಿಕ್ಷದಲ್ಲಿ ಬೆಳಗುವ ಸೌದಾಮನಿ ಎಂದರೆ ಮಿಂಚು ಎಂಬ ಕನ್ಯೆಯೂ ವಿನತೆಯಲ್ಲಿ ಹುಟ್ಟಿದರು.

**ಸಂಪಾತಿಶ್ಚ ಜಟಾಯುಶ್ಚ ಅರುಣಸ್ಯ ಸುತಾವುಭೌ ।**
**ಸಂಪಾತಿಪುತ್ರೋ ಬಭ್ರುಶ್ಚ ಶೀಘ್ರಗಶ್ಚಾಪಿ ವಿಶ್ರುತಃ** ॥೩೫॥

**ಜಟಾಯುಷಃ ಕರ್ಣಿಕಾರಃ ಶತಗಾಮೀ ಚ ವಿಶ್ರುತೌ ।**
**ಸಾರಸೋ ರುಜ್ಜುವಾಲಶ್ಚ ಭೇರುಂಡಶ್ಚಾಪಿ ತತ್ಸುತಾಃ** ॥೩೬॥

**ತೇಷಾಮನಂತಮಭವತ್ಪಕ್ಷಿಣಾಂ ಪುತ್ರಪೌತ್ರಕಂ ।**
**ಸುರಸಾಯಾಃ ಸಹಸ್ರಂ ತು ಸರ್ಪಾಣಾಮಭವತ್ಪುರಾ** ॥೩೭॥

**ಸಹಸ್ರಶಿರಸಾಂ ಕದ್ರೂಃ ಸಹಸ್ರಂಚಾಪಿ ಸುವ್ರತ ।**
**ಪ್ರಧಾನಾಸ್ತೇಷು ವಿಖ್ಯಾತಾಃ ಷಡ್ವಿಂಶತಿರರಿಂದಮ** ॥೩೮॥

**ಶೇಷವಾಸುಕಿಕರ್ಕೋಟಶಂಖೈರಾವತಕಂಬಲಾಃ ।**
**ಧನಂಜಯಮಹಾನೀಲಪದ್ಮಾಶ್ವತರತಕ್ಷಕಾಃ** ॥೩೯॥

**ಏಲಾಪತ್ರ ಮಹಾಪದ್ಮ ಧೃತರಾಷ್ಟ್ರಬಲಾಹಕಾಃ ।**
**ಶಂಖಪಾಲ ಮಹಾಶಂಖಪುಷ್ಪದಂಷ್ಟ್ರಶುಭಾನನಾಃ** ॥೪೦॥

---

೩೫. ಸಂಪಾತಿ ಮತ್ತು ಜಟಾಯುವೆಂಬವರು ಅರುಣನ ಮಕ್ಕಳು. ಸಂಪಾತಿಪುತ್ರನಾದ ಬಭ್ರುವು ಮಹಾವೇಗಶಾಲಿಯೆಂದು ಪ್ರಸಿದ್ಧನು.

೩೬. ಜಟಾಯುವಿನ ಮಕ್ಕಳಲ್ಲಿ ಕರ್ಣಿಕಾರ ಮತ್ತು ಶತಗಾಮಿಗಳು ಪ್ರಸಿದ್ಧರು. ಸಾರಸ, ರಜ್ಜುವಾಲ ಮತ್ತು ಭೇರುಂಡರೆಂಬವರು ಮಿಕ್ಕವರು.

೩೭. ಆ ಪಕ್ಷಿಗಳ ಪುತ್ರಪೌತ್ರಸಂತತಿಯು ಕೊನೆಯಿಲ್ಲದಷ್ಟಾಯಿತು. ಸುರಸೆಗೆ ಸಾವಿರಾರು ಸರ್ಪಗಳು ಹುಟ್ಟಿದುವು.

೩೮-೪೧. ವ್ರತನಿಷ್ಠನಾದ ಓ ರಾಜಾ, ಕದ್ರುವು ಸಾವಿರತಲೆಗಳಿರುವ ಒಂದು ಸಾವಿರ ಸರ್ಪಗಳನ್ನು ಹೆತ್ತಳು. ಅವುಗಳಲ್ಲಿ ಇಪ್ಪತ್ತಾರು ಮುಖ್ಯವಾದುವು. ಶೇಷ, ವಾಸುಕಿ, ಕರ್ಕೋಟಕ, ಶಂಖ, ಐರಾವತ, ಕಂಬಲ, ಧನಂಜಯ, ಮಹಾ ನೀಲ, ಪದ್ಮ, ಅಶ್ವತರ, ತಕ್ಷಕ, ಏಲಾಪತ್ರ, ಮಹಾಪದ್ಮ, ಧೃತರಾಷ್ಟ್ರ, ಬಲಾ

**ಶಂಕುರೋಮಾ ಚ ಬಹುಲೋ ವಾಮನಃ ಪಾಣಿನಸ್ತಥಾ ।**
**ಕಪಿಲೋ ದುರ್ಮುಖಶ್ಚಾಪಿ ಪತಂಜಲಿರಿತಿ ಸ್ಮೃತಾಃ ॥೪೧॥**

**ಏಷಾಮನಂತಮಭವತ್ಸರ್ವೇಷಾಂ ಪುತ್ರಪೌತ್ರಕಂ ।**
**ಪ್ರಾಯಶೋ ಯತ್ಪುರಾ ದಗ್ಧಂ ಜನಮೇಜಯಮಂದಿರೇ ॥೪೨॥**

**ರಕ್ಷೋಗಣಂ ಕ್ರೋಧವಶಾ ಸ್ವನಾಮಾನಮಜೀಜನತ್**
**ದಂಷ್ಟ್ರಿಣಾಂ ನಿಯುತಂ ತೇಷಾಂ ಭೀಮಸೇನಾದಗಾತ್ ಕ್ಷಯಂ ॥೪೩॥**

**ರುದ್ರಾಣಾಂ ಚ ಗಣಂ ತದ್ವದ್ಗೋಮಹಿಷ್ಯೋ ವರಾಂಗನಾಃ ।**
**ಸುರಭಿರ್ಜನಯಾಮಾಸ ಕಶ್ಯಪಾತ್ಸಂಯತವ್ರತಾ ॥೪೪॥**

**ಮುನಿರ್ಮುನೀನಾಂ ಚ ಗಣಂ ಗಣಮಪ್ಸರಸಾಂ ತಥಾ ।**
**ತಥಾ ಕಿನ್ನರಗಂಧರ್ವಾನರಿಷ್ಟಾಜನಯದ್ಬಹೂನ್ ॥೪೫॥**

---

ಹಕ, ಶಂಖಪಾಲ, ಮಹಾಶಂಖ, ಪುಷ್ಪದಂಷ್ಟ್ರ, ಶುಭಾನನ, ಶಂಕುರೋಮ, ಬಹುಲ, ವಾಮನ, ಪಾಣಿನ, ಕಪಿಲ, ದುರ್ಮುಖ ಮತ್ತು ಪತಂಜಲಿ.

೪೨. ಈ ಸರ್ಪಗಳ ಮಕ್ಕಳಿಂದಲೂ, ಮೊಮ್ಮಕ್ಕಳಿಂದಲೂ ವಂಶವು ತುದಿಯಿಲ್ಲದಷ್ಟು ಬೆಳೆಯಿತು. ಜನಮೇಜಯರಾಯನು ಹಿಂದೆ ಮಾಡಿದ ಸರ್ಪ ಯಾಗದಲ್ಲಿ ಇವು ಬಹುಮಟ್ಟಿಗೆ ಸುಟ್ಟುಹೋದವು.

೪೩. ಕ್ರೋಧವಶೆಯು ತನ್ನ ಹೆಸರಿಗೆ ತಕ್ಕಂತೆ ಇರುವ ಎಂದರೆ ಕೋಪಿಷ್ಠ ರಾದ ರಾಕ್ಷಸರ ಗಣವನ್ನು ಹೆತ್ತಳು. ಲಕ್ಷಗಟ್ಟಲೆಯಾಗಿ ಅವರನ್ನು ಭೀಮಸೇನನು ನಾಶಮಾಡಿದನು.

೪೪. ರುದ್ರರ ಗಣಗಳು, ಹಸುಗಳು, ಮತ್ತು ಸುಂದರಿಯರಾದ ಹೆಂಗಸರು ಇವರನ್ನು ನಿಯಮವಂತೆಯಾದ ಸುರಭಿಯು ಕಶ್ಯಪರಿಂದ ಪಡೆದಳು.

೪೫. ಮುನಿಯು ಮುನಿಗಳ ಗಣವನ್ನೂ, ಅಪ್ಸರಸ್ಸುಗಳ ಸಮುದಾಯ ವನ್ನೂ ಹೆತ್ತಳು. ಹಾಗೆಯೇ ಅರಿಷ್ಟೆಯಿಂದ ಕಿನ್ನರರೂ, ಗಂಧರ್ವರೂ ಅಸಂಖ್ಯಾ ತವಾಗಿ ಹುಟ್ಟಿದರು.

ತೃಣವೃಕ್ಷಲತಾಗುಲ್ಮಮಿರಾ ಸರ್ವಮಜೀಜನತ್ ।
ವಿಶ್ವಾ ತು ಯಕ್ಷರಕ್ಷಾಂಸಿ ಜನಯಾಮಾಸ ಕೋಟಿಶಃ ॥೪೬॥
ತತ ಏಕೋನಪಂಚಾಶನ್ಮರುತಃ ಕಶ್ಯಪಾದ್ದಿತಿಃ ।
ಜನಯಾಮಾಸ ಧರ್ಮಜ್ಞಾನ್ಸರ್ವಾನಮರವಲ್ಲಭಾ ॥೪೭॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಆದಿಸರ್ಗೇ ಕಶ್ಯಪಾನ್ವಯೋನಾಮ ಷಷ್ಠೋಽಧ್ಯಾಯಃ

---

೪೬. ಹುಲ್ಲು, ಮರ, ಬಳ್ಳಿ, ಪೊದೆಗಳೆಲ್ಲವೂ ಇರೆಯಿಂದ ಹುಟ್ಟಿದವು. ವಿಶ್ವೆಯಾದರೋ ಯಕ್ಷರನ್ನೂ, ರಾಕ್ಷಸರನ್ನೂ ಕೋಟಿಗಟ್ಟಲೆಯಾಗಿ ಪ್ರಸವಿಸಿದಳು.

೪೭. ಅನಂತರ ದಿತಿಯು ಕಶ್ಯಪರಿಂದ ಧರ್ಮಜ್ಞರೂ, ದೇವವಲ್ಲಭರೂ ಆದ ನಲವತ್ತೊಂಬತ್ತು ಮಂದಿ ವಾಯುಗಣಗಳನ್ನು ಪಡೆದಳು.

### ಅಧ್ಯಾಯದ ಸಾರಾಂಶ

ಕಶ್ಯಪಪ್ರಜಾಪತಿಯ ಪತ್ನಿಯರಾದ ಅದಿತಿ, ದಿತಿ, ದನು ಮುಂತಾದ ಹದಿಮೂರು ಮಂದಿಯಿಂದ ಆದಿತ್ಯರು, ದೈತ್ಯರು, ದಾನವರು ಮೊದಲಾದ ಸಕಲ ಜೀವವರ್ಗಗಳೂ ಹುಟ್ಟಿದುವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಆರನೆಯ ಅಧ್ಯಾಯವು ಮುಗಿದುದು



## ಅಥ ಶ್ರೀಮತ್ಸ್ಯಮಹಾಪುರಾಣೇ ಸಪ್ತಮೋಽಧ್ಯಾಯಃ

॥ ಋಷಯ ಊಚುಃ ॥

ದಿತೇಃ ಪುತ್ರಾಃ ಕಥಂ ಜಾತಾ ಮರುತೋ ದೇವವಲ್ಲಭಾಃ ।
ದೇವೈರ್ಜಗ್ಮುಶ್ಚ ಸಾಪತ್ನ್ಯೈಃ ಕಸ್ಮಾತ್ತೇ ಸಖ್ಯಮುತ್ತಮಂ ॥ ೧ ॥

॥ ಸೂತ ಉವಾಚ ॥

ಪುರಾ ದೇವಾಸುರೇ ಯುದ್ಧೇ ಹತೇಷು ಹರಿಣಾ ಸುರೈಃ ।
ಪುತ್ರಪೌತ್ರೇಷು ಶೋಕಾರ್ತಾ ಗತ್ವಾ ಭೂರ್ಲೋಕಮುತ್ತಮಂ ॥ ೨ ॥

ಸ್ಯಮಂತಪಂಚಕೇ ಕ್ಷೇತ್ರೇ ಸರಸ್ವತ್ಯಾಸ್ತಟೇ ಶುಭೇ ।
ಭರ್ತುರಾರಾಧನಪರಾ ತಪ ಉಗ್ರಂ ಚಚಾರ ಹ ॥ ೩ ॥

ತದಾ ದಿತಿರ್ದೈತ್ಯಮಾತಾ ಋಷಿರೂಪೇಣ ಸುವ್ರತ ।
ಫಲಾಹಾರಾ ತಪಸ್ತೇಪೇ ಕೃಚ್ಛ್ರಂ ಚಾಂದ್ರಾಯಣಾದಿಕಂ ॥ ೪ ॥

---

೧. ಋಷಿಗಳು ಹೇಳಿದರು:—ದಿತಿಯ ಮಕ್ಕಳಾದ ವಾಯುಗಣಗಳು ದೇವತೆಗಳ ಪ್ರೀತಿಗೆ ಪಾತ್ರರಾದುದೆಂತು? ತಮ್ಮ ಶತ್ರುಗಳಾದ ದೇವತೆಗಳೊಡನೆ ಅವರಿಗೆ ಅಷ್ಟೊಂದು ಸ್ನೇಹವು ಉಂಟಾಗಲು ಕಾರಣವೇನು?

೨-೪. ಸೂತಮುನಿಯು ಹೇಳಿದನು.—ಪೂರ್ವದಲ್ಲಿ ದೇವತೆಗಳಿಗೂ ರಾಕ್ಷಸರಿಗೂ ನಡೆದ ಯುದ್ಧದಲ್ಲಿ ದೈತ್ಯಮಾತೆಯಾದ ದಿತಿಯ ಮಕ್ಕಳೂ ಮೊಮ್ಮಕ್ಕಳೂ ವಿಷ್ಣುವಿನಿಂದಲೂ ದೇವತೆಗಳಿಂದಲೂ ಹತರಾದರು. ಆಗ ಅವಳು ಬಹಳ ದುಃಖದಿಂದ ಕರ್ಮಾಚರಣೆಗೆ ಉತ್ತಮವಾದ ಭೂಲೋಕಕ್ಕೆ ಹೋಗಿ, ಸರಸ್ವತೀ ನದಿಯ ತಟದ ಸ್ಯಮಂತಪಂಚಕಕ್ಷೇತ್ರದಲ್ಲಿ ಪತಿಯ ಆರಾಧನದಲ್ಲಿ ತೊಡಗಿ ಉಗ್ರವಾದ ತಪಸ್ಸನ್ನು ಆಚರಿಸಿದಳು. ಅವಳು ಮುನಿರೂಪದಿಂದ ಫಲಾಹರವನ್ನೇ ಮಾಡುತ್ತ ಚಾಂದ್ರಾಯಣ ಮುಂತಾದ ವ್ರತಗಳನ್ನೆಸಗಿದಳು.

ಯಾವದ್ವರ್ಷಶತಂ ಸಾಗ್ರಂ ಜರಾಶೋಕಸಮಾಕುಲಾ ।
ತತಃ ಸಾ ತಪಸಾ ತಪ್ತಾ ವಸಿಷ್ಠಾದೀನಪೃಚ್ಛತ ॥ ೫ ॥
ಕಥಯಂತು ಭವಂತೋ ಮೇ ಪುತ್ರಶೋಕವಿನಾಶನಂ ।
ವ್ರತಂ ಸೌಭಾಗ್ಯಫಲದಮಿಹ ಲೋಕೇ ಪರತ ಚ ॥ ೬ ॥
ಊಚುರ್ವಸಿಷ್ಠಪ್ರಮುಖಾ ಮದನದ್ವಾದಶೀವ್ರತಂ ।
ಯಸ್ಯಾಃ ಪ್ರಭಾವಾದಭವತ್ಸುತಶೋಕವಿವರ್ಜಿತಾ ॥ ೭ ॥

॥ ಋಷಯ ಊಚುಃ ॥

ಶ್ರೋತುಮಿಚ್ಛಾಮಹೇ ಸೂತ ಮದನದ್ವಾದಶೀವ್ರತಂ ।
ಸುತಾನೇಕೋನಪಂಚಾಶದ್ಯೇನ ಲೇಭೇ ದಿತಿಃ ಪುನಃ ॥ ೮ ॥

॥ ಸೂತ ಉವಾಚ ॥

ಯದ್ವಸಿಷ್ಠಾದಿಭಿಃ ಪೂರ್ವಂ ದಿತೇಃ ಕಥಿತಮುತ್ತಮಂ ।
ವಿಸ್ತರೇಣ ತದೇವೇದಂ ಮತ್ಸಕಾಶಾನ್ನಿಬೋಧತ ॥ ೯ ॥

---

೫-೬. ದಿತಿಯು ನೂರುವರ್ಷಗಳು ಪೂರ್ತಿಯಾಗಿ ಮುಪ್ಪಿನಿಂದಲೂ, ಪುತ್ರಶೋಕದಿಂದಲೂ ಪೀಡಿತಳಾಗಿ ಮೇಲೆ ಹೇಳಿದಂತೆ ನಿಯಮದಲ್ಲಿದ್ದಳು. ಬಳಿಕ ಅವಳು ತಪಸ್ಸಿನಿಂದ ಬಳಲಿ, ವಸಿಷ್ಠಾದಿ ಮಹರ್ಷಿಗಳನ್ನು "ಪುತ್ರಶೋಕವನ್ನು ಕಳೆದು ಇಹದಲ್ಲೂ ಪರದಲ್ಲೂ ಸೌಭಾಗ್ಯಫಲವನ್ನು ಕೊಡತಕ್ಕ ವ್ರತವನ್ನು ನನಗೆ ಹೇಳಿರಿ" ಎಂದು ಕೇಳಿದಳು.

೭. ವಸಿಷ್ಠಮುಖ್ಯರಾದ ಮಹರ್ಷಿಗಳು ಮದನದ್ವಾದಶೀವ್ರತವನ್ನು ಅವಳಿಗೆ ಹೇಳಿದರು. ಅದರ ಪ್ರಭಾವದಿಂದ ಅವಳ ಪುತ್ರಶೋಕವು ತೊಲಗಿತು.

೮. ಋಷಿಗಳು ಹೇಳಿದರು.—ಯಾವ ವ್ರತದಿಂದ ದಿತಿಯು ನಲವತ್ತೊಂಬತ್ತು ಜನ ಮಕ್ಕಳನ್ನು ಪಡೆದಳೋ ಆ ಮದನದ್ವಾದಶೀವ್ರತವನ್ನು ಕೇಳಲು ಬಯಸುತ್ತೇವೆ.

೯. ಸೂತಮುನಿಯು ಹೇಳಿದನು.—ವಸಿಷ್ಠಾದಿಗಳು ಪೂರ್ವದಲ್ಲಿ ದಿತಿಗೆ ಹೇಳಿದ ಉತ್ತಮವಾದ ವ್ರತವನ್ನು ನನ್ನಿಂದ ವಿಸ್ತಾರವಾಗಿ ಕೇಳಿರಿ.

**ಚೈತ್ರೇಮಾಸಿ ಸಿತೇ ಪಕ್ಷೇ ದ್ವಾದಶ್ಯಾಂ ನಿಯತವ್ರತಃ |**
**ಸ್ಥಾಪಯೇದವ್ರಣಂ ಕುಂಭಂ ಸಿತತಂಡುಲಪೂರಿತಂ ||೧೦||**

**ನಾನಾಫಲಯುತಂ ತದ್ವದಿಕ್ಷುದಂಡಸಮನ್ವಿತಂ |**
**ಸಿತವಸ್ತ್ರಯುಗಚ್ಛನ್ನಂ ಸಿತಚಂದನಚರ್ಚಿತಂ ||೧೧||**

**ನಾನಾಭಕ್ಷ್ಯಸಮೋಪೇತಂ ಸಹಿರಣ್ಯಂ ತು ಶಕ್ತಿತಃ |**
**ತಾಮ್ರಪಾತ್ರಂ ಗುಡೋಪೇತಂ ತಸ್ಯೋಪರಿ ನಿವೇಶಯೇತ್ ||೧೨||**

**ತಸ್ಮಾದುಪರಿ ಕಾಮಂ ತು ಕದಲೀದಲಸಂಸ್ಥಿತಂ |**
**ಕುರ್ಯಾಚ್ಛರ್ಕರಯೋಪೇತಾಂ ರತಿಂ ತಸ್ಯ ಚ ವಾಮತಃ ||೧೩||**

**ಗಂಧಂ ಧೂಪಂ ತತೋ ದದ್ಯಾದ್ಗೀತಂ ವಾದ್ಯಂ ಚ ಕಾರಯೇತ್ |**
**ತದಭಾವೇ ಕಥಾಂ ಕುರ್ಯಾತ್ಕಾಮಕೇಶವಯೋರ್ನರಃ ||೧೪||**

**ಕಾಮನಾಮ್ನೋ ಹರೇರರ್ಚಾಂ ಸ್ನಾಪಯೇದ್ಗಂಧವಾರಿಣಾ |**
**ಶುಕ್ಲಪುಷ್ಪಾಕ್ಷತತಿಲೈರರ್ಚಯೇನ್ಮಧುಸೂದನಂ ||೧೫||**

---

೧೦-೧೨. ಚೈತ್ರಮಾಸದ ಶುಕ್ಲಪಕ್ಷದ ದ್ವಾದಶಿಯಲ್ಲಿ ವ್ರತನಿಷ್ಠನಾಗಿ, ಬಗೆಬಗೆಯ ಹಣ್ಣುಗಳೊಡಗೂಡಿ ಕಬ್ಬಿನಜಲ್ಲೆಯಿಂದಲಂಕೃತವಾದ, ಬಿಳಿಯಕ್ಕಿ ತುಂಬಿದ, ತೂತುಬಿರುಕುಗಳಿಲ್ಲದ ಕುಂಭವನ್ನು ಸ್ಥಾಪನೆಮಾಡಬೇಕು. ಬಿಳಿಯ ಬಟ್ಟೆಗಳೆರಡನ್ನು ಹೊದಿಸಿ, ಬಿಳಿಯ ಗಂಧವನ್ನು ಅನುಲೇಪಿಸಿ, ನಾನಾ ಭಕ್ಷ್ಯಗಳನ್ನು ನಿವೇದನಕ್ಕಿಟ್ಟು ಯಥಾಶಕ್ತಿ ದಕ್ಷಿಣೆಯನ್ನು ಸಮರ್ಪಿಸಬೇಕು. ಅದರ ಮೇಲೆ ಬೆಲ್ಲದೊಡನೆ ತಾಮ್ರದಪಾತ್ರೆಯನ್ನು ಇರಿಸಬೇಕು.

೧೩. ಅದರ ಮೇಲೆ ಬಾಳೆಯೆಲೆಯಲ್ಲಿ ಮನ್ಮಥನನ್ನೂ, ಅವನ ಎಡಗಡೆ ಸಕ್ಕರೆಯೊಡಗೂಡಿ ರತಿಯನ್ನೂ ಇಡಬೇಕು.

೧೪. ಗಂಧವನ್ನೂ, ಧೂಪವನ್ನೂ ಒಪ್ಪಿಸಿ ಗಾನವನ್ನೂ, ವಾದ್ಯವನ್ನೂ ಮಾಡಿಸಬೇಕು. ಅದಿಲ್ಲದಿದ್ದರೆ ಮನ್ಮಥನ ಮತ್ತು ವಿಷ್ಣುವಿನ ಕಥೆಯನ್ನು ಹೇಳಬೇಕು.

೧೫. ಕಾಮನ ಹೆಸರಿನಿಂದ ವಿಷ್ಣುವಿನ ಪೂಜೆಯನ್ನು ನಡೆಸಬೇಕು. ಪರಿಮಳಜಲದಿಂದ ಅಭಿಷೇಕಮಾಡಿ, ಬಳಿಕ ಹೂ, ಅಕ್ಷತೆ, ಮತ್ತು ಎಳ್ಳುಗಳಿಂದ ಮಧುಸೂದನನನ್ನು ಅರ್ಚಿಸಬೇಕು.

**ಕಾಮಾಯ ಪಾದೌ ಸಂಪೂಜ್ಯ ಜಂಘೇ ಸೌಭಾಗ್ಯದಾಯ ಚ ।**
**ಊರೂ ಸ್ಮರಾಯೇತಿ ಪುನರ್ಮನ್ಮಥಾಯೇತಿ ವೈ ಕಟಿಂ ॥೧೬॥**

**ಸ್ವಚ್ಛೋದರಾಯೇತ್ಯುದರಮನಂಗಾಯೇತ್ಯುರೋ ಹರೇಃ ।**
**ಮುಖಂ ಪದ್ಮಮುಖಾಯೇತಿ ಬಾಹೂ ಪಂಚಶರಾಯ ವೈ ॥೧೭॥**

**ನಮಃ ಸರ್ವಾತ್ಮನೇ ಮೌಲಿಮರ್ಚಯೇದಿತಿ ಕೇಶವಂ ।**
**ತತಃ ಪ್ರಭಾತೇ ತಂ ಕುಂಭಂ ಬ್ರಾಹ್ಮಣಾಯ ನಿವೇದಯೇತ್ ॥೧೮॥**

**ಬ್ರಾಹ್ಮಣಾನ್ಭೋಜಯೇದ್ಭಕ್ತ್ಯಾ ಸ್ವಯಂ ಚ ಲವಣಾದೃತೇ ।**
**ಭುಕ್ತ್ವಾತು ದಕ್ಷಿಣಾಂ ದದ್ಯಾದಿಮಂ ಮಂತ್ರಮುದೀರಯೇತ್ ॥೧೯॥**

**ಪ್ರೀಯತಾಮತ್ರಭಗವಾನ್ ಕಾಮರೂಪೀ ಜನಾರ್ದನಃ ।**
**ಹೃದಯೇ ಸರ್ವಭೂತಾನಾಂ ಯ ಆನಂದೋಽಭಿಧೀಯತೇ ॥೨೦॥**

---

೧೬-೧೮. ಕಾಮಾಯ ನಮಃ ಎಂದು ಪಾದಗಳನ್ನೂ, ಸೌಭಾಗ್ಯದಾಯ ನಮಃ ಎಂದು ಮೊಣಕಾಲುಗಳನ್ನೂ, ಸ್ಮರಾಯನಮಃ ಎಂದು ತೊಡೆಗಳನ್ನೂ, ಮನ್ಮಥಾಯನಮಃ ಎಂದು ಮಧ್ಯವನ್ನೂ, ಸ್ವಚ್ಛೋದರಾಯನಮಃ ಎಂದು ಉದರವನ್ನೂ , ಅನಂಗಾಯನಮಃ ಎಂದು ಎದೆಯನ್ನೂ, ಪದ್ಮಮುಖಾಯನಮಃ ಎಂದು ಮುಖವನ್ನೂ, ಪಂಚಶರಾಯನಮಃ ಎಂದು ಬಾಹುಗಳನ್ನೂ, ಸರ್ವಾತ್ಮನೇನಮಃ ಎಂದು ತಲೆಯನ್ನೂ ಪುಷ್ಪಗಳಿಂದ ಅರ್ಚಿಸಬೇಕು. ಇದು ಮನ್ಮಥರೂಪನಾದ ಕೇಶವನ ಅರ್ಚನ. ಬಳಿಕ ಪ್ರಾತಃಕಾಲದಲ್ಲಿ ಆ ಕುಂಭವನ್ನು ಬ್ರಾಹ್ಮಣನಿಗೆ ಸಮರ್ಪಿಸಬೇಕು.

೧೯-೨೦. ಬ್ರಾಹ್ಮಣರಿಗೆ ಭಕ್ತಿಯಿಂದ ಭೋಜನಮಾಡಿಸಿ, ತಾನೂ ಕೂಡ ಲವಣವನ್ನು ಸೇವಿಸದೆ ಊಟಮಾಡಿ, ದಕ್ಷಿಣೆಯನ್ನು ಕೊಟ್ಟು, ಷಡ್ಗುಣಪರಿಪೂರ್ಣನಾದ, ಎಲ್ಲಾ ಪ್ರಾಣಿಗಳ ಹೃದಯದಲ್ಲೂ ಆನಂದವೆನಿಸಿಕೊಂಡು ನೆಲೆಸಿರುವ, ಕಾಮರೂಪನಾದ ಶ್ರೀ ಜನಾರ್ದನನು ಪ್ರೀತನಾಗಲಿ ಎಂಬ ಈ ಮಂತ್ರವನ್ನು ಹೇಳಬೇಕು.

ಅನೇನ ವಿಧಿನಾ ಸರ್ವಂ ಮಾಸಿ ಮಾಸಿ ವ್ರತಂ ಚರೇತ್ ।
ಉಪವಾಸೀ ತ್ರಯೋದಶ್ಯಾಮರ್ಚಯೇದ್ವಿಷ್ಣುಮವ್ಯಯಂ ॥೨೦॥

ಫಲಮೇಕಂ ಚ ಸಂಪ್ರಾಶ್ಯ ದ್ವಾದಶ್ಯಾಂ ಭೂತಲೇ ಸ್ವಪೇತ್ ।
ತತಸ್ತ್ರಯೋದಶೇ ಮಾಸೇ ಘೃತಧೇನುಸಮನ್ವಿತಾಂ ॥೨೨॥

ಶಯ್ಯಾಂ ದದ್ಯಾದನಂಗಾಯ ಸರ್ವೋಪಸ್ಕರಸಂಯುತಾಂ ।
ಕಾಂಚನಂ ಕಾಮದೇವಂ ಚ ಶುಕ್ಲಾಂ ಗಾಂ ಚ ಪಯಸ್ವಿನೀಂ ॥೨೩॥

ವಾಸೋಭಿರ್ದ್ವಿಜದಾಂಪತ್ಯಂ ಪೂಜ್ಯಂ ಶಕ್ತ್ಯಾ ವಿಭೂಷಣೈಃ ।
ಶಯ್ಯಾಗಂಧಾದಿಕಂ ದದ್ಯಾತ್ಪ್ರೀಯತಾಮಿತ್ಯುದೀರಯೇತ್ ॥೨೪॥

ಹೋಮಃ ಶುಕ್ಲತಿಲೈಃ ಕಾರ್ಯಃ ಕಾಮನಾಮಾನಿ ಕೀರ್ತಯೇತ್ ।
ಗವ್ಯೇನ ಹವಿಷಾ ತದ್ವತ್ಪಾಯಸೇನ ಚ ಧರ್ಮವಿತ್ ॥೨೫॥

---

೨೧. ಈ ಕ್ರಮದಿಂದ ಪ್ರತಿಯೊಂದು ತಿಂಗಳೂ ವ್ರತವನ್ನು ನಡೆಸಬೇಕು. ತ್ರಯೋದಶಿಯ ದಿನ ಉಪವಾಸಮಾಡಿ ನಿರ್ವಿಕಾರನಾದ ಶ್ರೀ ಮಹಾವಿಷ್ಣುವನ್ನು ಅರ್ಚಿಸಬೇಕು.

೨೨-೨೪. ದ್ವಾದಶಿಯ ದಿನ ಒಂದು ಹಣ್ಣನ್ನು ತಿಂದು ಬರಿಯ ನೆಲದ ಮೇಲೆ ಮಲಗಬೇಕು. ಬಳಿಕ ಹದಿಮೂರನೆಯ ತಿಂಗಳು ಗಟ್ಟಿ ತುಪ್ಪದಲ್ಲಿ ಹಸುವಿನ ಪ್ರತಿಮೆಯನ್ನು ಬರೆದು ಅದನ್ನೂ, ಸಕಲ ಪರಿಕರಮೊಡಗೂಡಿದ ಹಾಸಿಗೆಯನ್ನೂ ಮನ್ಮಥನಿಗೆ ಒಪ್ಪಿಸಬೇಕು. ಬ್ರಾಹ್ಮಣದಂಪತಿಗಳನ್ನು ಯಥಾಶಕ್ತಿ ವಸ್ತ್ರಾಲಂಕಾರಗಳಿಂದ ಪೂಜಿಸಿ, ಸುವರ್ಣಮಯವಾದ ಕಾಮದೇವನ ಪ್ರತಿಮೆಯನ್ನೂ, ಚೆನ್ನಾಗಿ ಹಾಲುಕೊಡುವ ಬಿಳಿಯ ಹಸುವನ್ನೂ, ಹಾಸಿಗೆಯನ್ನೂ, ಗಂಧಾದಿಗಳನ್ನೂ ಸಹ "ಭಗವತ್ಪ್ರೀತಿಯಾಗಲಿ" ಎಂದು ದಾನಮಾಡಬೇಕು.

೨೫-೨೬. ಹಸುವಿನ ತುಪ್ಪದಿಂದಲೂ, ಪಾಯಸದಿಂದಲೂ, ಬಿಳಿಯ ಎಳ್ಳಿನಿಂದಲೂ ಸಹ ಮನ್ಮಥನ ಹೆಸರುಗಳನ್ನು ಹೇಳುತ್ತ ಹೋಮಮಾಡಬೇಕು.

ವಿಪ್ರೇಭ್ಯೋ ಭೋಜನಂ ದದ್ಯಾದ್ವಿತ್ತಶಾಠ್ಯಂ ವಿವರ್ಜಯೇತ್ ।
ಇಕ್ಷುದಂಡಾನಥೋ ದದ್ಯಾತ್ಪುಷ್ಪಮಾಲಾಶ್ಚ ಶಕ್ತಿತಃ ॥೨೬॥

ಯಃ ಕುರ್ಯಾದ್ವಿಧಿನಾನೇನ ಮದನದ್ವಾದಶೀಮಿಮಾಂ ।
ಸ ಸರ್ವಪಾಪನಿರ್ಮುಕ್ತಃ ಪ್ರಾಪ್ನೋತಿ ಹರಿಸಾಮ್ಯತಾಂ ॥೨೭॥

ಇಹ ಲೋಕೇ ವರಾನ್ ಪುತ್ರಾನ್ ಸೌಭಾಗ್ಯಫಲಮಶ್ನುತೇ ।
ಯಃ ಸ್ಮರಃ ಸಂಸ್ಮೃತೋ ವಿಷ್ಣುರಾನಂದಾತ್ಮಾ ಮಹೇಶ್ವರಃ ॥೨೮॥

ಸುಖಾರ್ಥೀ ಕಾಮರೂಪೇಣ ಸ್ಮರೇದಂಗಜಮೀಶ್ವರಂ ।
ಏತಚ್ಛ್ರುತ್ವಾ ಚಕಾರಾಸೌ ದಿತಿಃ ಸರ್ವಮಶೇಷತಃ ॥೨೯॥

ಕಶ್ಯಪೋ ವ್ರತಮಾಹಾತ್ಮ್ಯಾದಾಗತ್ಯ ಪರಯಾ ಮುದಾ ।
ಚಕಾರ ಕರ್ಕಶಾಂ ಭೂಯೋ ರೂಪಯೌವನಶಾಲಿನೀಂ ॥೩೦॥

---

ಬ್ರಾಹ್ಮಣರಿಗೆ ಊಟಹಾಕಬೇಕು. ಪ್ರವ್ಯವನ್ನು ವೆಚ್ಚಮಾಡಲು ಜಿಪುಣತನವನ್ನು ತೋರಿಸಬಾರದು. ಕಬ್ಬಿನ ಜಲ್ಲೆಗಳನ್ನೂ, ಹೂವಿನಮಾಲೆಗಳನ್ನೂ ಯಥಾಶಕ್ತಿ ದಾನಮಾಡಬೇಕು.

೨೭-೨೯. "ಈ ಮದನದ್ವಾದಶೀ ವ್ರತವನ್ನು ಮೇಲೆ ಹೇಳಿದ ವಿಧಿಯಿಂದ ಮಾಡುವವನು ಸರ್ವಪಾಪಗಳಿಂದಲೂ ಮುಕ್ತನಾಗಿ ಹರಿಯ ಸಾಮ್ಯವನ್ನು ಪಡೆಯುವನು. ಈ ಲೋಕದಲ್ಲಿ ಒಳ್ಳೆಯ ಮಕ್ಕಳನ್ನು ಪಡೆದು ಸೌಭಾಗ್ಯಫಲವನ್ನನುಭವಿಸುವನು. ಮನ್ಮಥನನ್ನು ಸ್ಮರಿಸಿದರೆ ಆನಂದರೂಪನೂ, ಮಹೇಶ್ವರನೂ ಆದ ವಿಷ್ಣುವನ್ನು ನೆನೆದಂತೆಯೇ ಆಗುವುದು. ಆದುದರಿಂದ ಸುಖವನ್ನು ಬಯಸುವವನು ಈಶ್ವರನನ್ನು ಕಾಮನರೂಪದಿಂದ ಸ್ಮರಿಸಬೇಕು" ದಿತಿಯು ಇವನ್ನು ಕೇಳಿ ಎಲ್ಲವನ್ನೂ ಸಾಂಗವಾಗಿ ನೆರವೇರಿಸಿದಳು.

೩೦. ವ್ರತದ ಮಹಿಮೆಯಿಂದ ಕಶ್ಯಪನು ಬಂದು, ಬಹಳ ಸಂತೋಷದಿಂದ ಕೂಡಿ, ಕಾಯಕ್ಲೇಶದಿಂದ ಬಾಡಿ ಒಣಗಿದ್ದ ತನ್ನ ಪತ್ನಿಯನ್ನು ಮತ್ತೆ ರೂಪವೂ ಯೌವ್ವನವೂ ಮೂಡಿ ಮೆರೆಯುವಂತೆ ಮಾಡಿದನು.

ವರ್ಷೈರಾಚ್ಛಂದಯಾಮಾಸ ಸಾ ತು ವವ್ರೇ ತತೋ ವರಂ ।
ಪುತ್ರಂ ಶಕ್ರವಧಾರ್ಥಾಯ ಸಮರ್ಥಮಮಿತೌಜಸಂ ॥೩೧॥

ವರಯಾಮಿ ಮಹಾತ್ಮಾನಂ ಸರ್ವಾಮರನಿಷೂದನಂ ।
ಉವಾಚ ಕಶ್ಯಪೋ ವಾಕ್ಯಮಿಂದ್ರಹಂತಾರಮೂರ್ಜಿತಂ ॥೩೨॥

ಪ್ರದಾಸ್ಯಾಮ್ಯಹಮೇವೇಹ ಕಿಂತ್ವೇತತ್ಕ್ರಿಯತಾಂ ಶುಭೇ ।
ಆಪಸ್ತಂಬಃ ಕರೋತ್ವಿಷ್ಟಿಂ ಪುತ್ರೀಯಾಮದ್ಯ ಸುವ್ರತೇ ॥೩೩॥

ವಿಧಾಸ್ಯಾಮಿ ತತೋ ಗರ್ಭಮಿಂದ್ರಶತ್ರುನಿಷೂದನಂ ।
ಆಪಸ್ತಂಬಸ್ತತಶ್ಚಕ್ರೇ ಪುತ್ರೇಷ್ಟಿಂ ದ್ರವಿಣಾಧಿಕಾಂ ॥೩೪॥

ಇಂದ್ರಶತ್ರುರ್ಭವಸ್ವೇತಿ ಜುಹಾವ ಚ ಸವಿಸ್ತರಂ ।
ದೇವಾ ಮುಮುದಿರೇ ದೈತ್ಯಾ ವಿಮುಖಾಃ ಸ್ಯುಶ್ಚ ದಾನವಾಃ ॥೩೫॥

ದಿತ್ಯಾಂ ಗರ್ಭಮಥಾಧತ್ತ ಕಶ್ಯಪಃ ಪ್ರಾಹ ತಾಂ ಪುನಃ ।
ತ್ವಯಾ ಯತ್ನೋ ವಿಧಾತವ್ಯೋ ಹ್ಯಸ್ಮಿನ್ ಗರ್ಭೇ ವರಾನನೇ ॥೩೬॥

---

೩೧-೩೩. ಕಶ್ಯಪನು ವರಗಳನ್ನು ನೀಡಲು, ಅವಳು ಇಂದ್ರನನ್ನು ಕೊಲ್ಲಲು ಶಕ್ತನಾಗಿ, ಮಹಾ ಪರಾಕ್ರಮಶಾಲಿಯಾಗಿ, ಸಮಸ್ತ ದೇವತೆಗಳನ್ನೂ ಸಂಹರಿಸಬಲ್ಲ ಮಹಾತ್ಮನಾದ ಪುತ್ರನನ್ನು ಬೇಡಿದಳು. ಆಗ ಆ ಮಹರ್ಷಿಯು "ಓ ಮಂಗಳಾಂಗೀ, ಇಂದ್ರ ಹಂತಾರನಾದ ತೇಜಸ್ವಿಯಾದ ಪುತ್ರನನ್ನು ನಾನೇ ಕೊಡುವೆನು; ಆದರೂ ಈ ಕೆಲಸವನ್ನು ಮಾಡು. ಎಲೌ, ಸುವ್ರತಳೇ, ಆಪಸ್ತಂಬನು ನಿನಗಾಗಿ ಪುತ್ರಪ್ರದವಾದ ಇಷ್ಟಿಯನ್ನು ನಡೆಸಲಿ. ಬಳಿಕ ನಾನು ಶತ್ರುವಾದ ಇಂದ್ರನನ್ನು ಕೊಲ್ಲಬಲ್ಲವನನ್ನು ನಿನ್ನ ಗರ್ಭದಲ್ಲಿ ಉತ್ಪಾದನ ಮಾಡುವೆನು" ಎಂದು ಹೇಳಿದನು.

೩೪-೩೫. ಬಳಿಕ ಆಪಸ್ತಂಬನು ವಿಶೇಷವಾಗಿ ದ್ರವ್ಯವನ್ನು ವಿನಿಯೋಗಿಸಿ, ಪುತ್ರಕಾಮೇಷ್ಟಿಯನ್ನು ನೆರವೇರಿಸಿ "ಇಂದ್ರಶತ್ರುವಾಗು" ಎಂದು ವಿಸ್ತರದಿಂದ ಹೋಮಮಾಡಿದನು; ದೇವತೆಗಳು ಸಂತೋಷಪಟ್ಟರು. ದೈತ್ಯದಾನವರಾದರೋ ವಿಮುಖರಾದರು.

೩೬. ಬಳಿಕ ಕಶ್ಯಪನು ದಿತಿಯಲ್ಲಿ ಗರ್ಭವನ್ನು ಉತ್ಪಾದಿಸಿ, "ಎಲೌ ಸುಂದರೀ, ಈ ತಪೋವನದಲ್ಲೇ ಒಂದುನೂರು ವರ್ಷಗಳಕಾಲ ಈ ಗರ್ಭವನ್ನು ಬಹು ಯತ್ನದಿಂದ ರಕ್ಷಿಸು" ಎಂದು ಹೇಳಿದನು.

ಸಂವತ್ಸರಶತಂ ತ್ವೇಕಮಸ್ಮಿನ್ನೇವ ತಪೋವನೇ ।
ಸಂಧ್ಯಾಯಾಂ ನೈವ ಭೋಕ್ತವ್ಯಂ ಗರ್ಭಿಣ್ಯಾ ವರವರ್ಣಿನಿ ॥೩೭॥

ನ ಸ್ಥಾತವ್ಯಂ ನ ಗಂತವ್ಯಂ ವೃಕ್ಷಮೂಲೇಷು ಸರ್ವದಾ ।
ನೋಪಸ್ಕಾರೇಷೂಪವಿಶೇನ್ಮುಸಲೋಲೂಖಲಾದಿಷು ॥೩೮॥

ಜಲೇ ಚ ನಾವಗಾಹೇತ ಶೂನ್ಯಾಗಾರಂ ಚ ವರ್ಜಯೇತ್ ।
ವಲ್ಮೀಕಾಯಾಂ ನ ತಿಷ್ಠೇತ ನ ಚೋದ್ವಿಗ್ನಮನಾ ಭವೇತ್ ॥೩೯॥

ವಿಲಿಖೇನ್ನ ನಖೈರ್ಭೂಮಿಂ ನಾಂಗಾರೇಣ ನ ಭಸ್ಮನಾ ।
ನ ಶಯಾಲುಃ ಸದಾ ತಿಷ್ಠೇದ್ವ್ಯಾಯಾಮಂ ಚ ವಿವರ್ಜಯೇತ್ ॥೪೦॥

ನ ತುಷಾಂಗಾರಭಸ್ಮಾಸ್ಥಿಕಪಾಲೇಷು ಸಮಾವಿಶೇತ್ ।
ವರ್ಜಯೇತ್ಕಲಹಂ ಲೋಕೈರ್ಗಾತ್ರಭಂಗಂ ತಥೈವ ಚ ॥೪೧॥

ನ ಮುಕ್ತಕೇಶಾ ತಿಷ್ಠೇತ ನಾಶುಚಿಃ ಸ್ಯಾತ್ಕದಾಚನ ।
ನ ಶಯೀತೋತ್ತರಶಿರಾ ನ ಚಾಪರಶಿರಾಃ ಕ್ವಚಿತ್ ॥೪೨॥

---

೩೭-೪೧. ಗರ್ಭಿಣಿಯಾದವಳು ಸಂಜೆಯಲ್ಲಿ ಊಟಮಾಡಬಾರದು. ಮರದ ಕೆಳಗೆ ನಿಲ್ಲಬಾರದು; ನಡೆಯಬಾರದು. ಸಾಸುವೆ, ಮೆಣಸಿನಕಾಯಿ ಮುಂತಾದುವುಗಳ ಘಾಟು ಕುಡಿಯಬಾರದು. ಕುಟ್ಟುವುದೂ ಅರೆಯುವುದೂ ಕೂಡದು. ನೀರಿನಲ್ಲಿಳಿಯಬಾರದು. ಜನರಹಿತವಾದ ಮನೆಯಲ್ಲಿರಬಾರದು, ಹುತ್ತದ ಮೇಲೆ ನಿಲ್ಲಬಾರದು. ಗಾಬರಿಗೊಳ್ಳಬಾರದು. ಉಗುರಿನಿಂದ ನೆಲವನ್ನು ಕೆರೆಯುವುದೂ, ಇದ್ದಿಲು ಬೂದಿಗಳಿಂದ ಬರೆಯುವುದೂ ತಪ್ಪು. ಯಾವಾಗಲೂ ಮಲಗಿರಬಾರದು ಆಯಾಸಕರವಾದ ವ್ಯಾಯಾಮವನ್ನು ತೆಗೆದುಕೊಳ್ಳಬಾರದು. ಹೊಟ್ಟು, ಇದ್ದಿಲು, ಬೂದಿ, ಮೂಳೆ ಮತ್ತು ಮಡಕೆಯ ಚೂರುಗಳ ಮೇಲೆ ನಡೆಯಬಾರದು. ಜನರೊಡನೆ ಜಗಳವಾಡಬಾರದು. ಮೈಮುರಿಯುವುದನ್ನು ಬಿಡಬೇಕು.

೪೨. ತಲೆಯನ್ನು ಕೆದರಿಕೊಂಡಿರಬಾರದು; ಎಂದಿಗೂ ಅಶುಚಿಯಾಗಿರಬಾರದು. ಉತ್ತರಕ್ಕೂ ಪಶ್ಚಿಮಕ್ಕೂ ತಲೆಯಿಟ್ಟು ಎಂದಿಗೂ ಮಲಗಬಾರದು.

**ನ ವಸ್ತ್ರಹೀನಾ ನೋದ್ವಿಗ್ನಾ ನ ಚಾರ್ದ್ರಚರಣಾ ಸತೀ ।**
**ನಾಮಂಗಲ್ಯಾಂ ವದೇದ್ವಾಚಂ ನ ಚ ಹಾಸ್ಯಾಧಿಕಾ ಭವೇತ್ ॥೪೩॥**

**ಕುರ್ಯಾತ್ತು ಗುರುಶುಶ್ರೂಷಾಂ ನಿತ್ಯಂ ಮಾಂಗಲ್ಯತತ್ಪರಾ ।**
**ಸರ್ವೌಷಧೀಭಿಃ ಕೋಷ್ಣೇನ ವಾರಿಣಾ ಸ್ನಾನಮಾಚರೇತ್ ॥೪೪॥**

**ಕೃತರಕ್ಷಾ ಸುಭೂಷಾ ಚ ವಾಸ್ತುಪೂಜನತತ್ಪರಾ ।**
**ತಿಷ್ಠೇತ್ಪ್ರಸನ್ನವದನಾ ಭರ್ತುಃ ಪ್ರಿಯಹಿತೇ ರತಾ ॥೪೫॥**

**ದಾನಶೀಲಾ ತೃತೀಯಾಯಾಂ ಪಾರ್ವಣ್ಯಂ ನಕ್ತಮಾಚರೇತ್ ।**
**ಇತಿವೃತ್ತಾ ಭವೇನ್ನಾರೀ ವಿಶೇಷೇಣ ತು ಗರ್ಭಿಣೀ ॥೪೬॥**

**ಯಸ್ತು ತಸ್ಯಾ ಭವೇತ್ಪುತ್ರಃ ಶೀಲಾಯುರ್ವೃದ್ಧಿಸಂಯುತಃ ।**
**ಅನ್ಯಥಾ ಗರ್ಭಪತನಮವಾಪ್ನೋತಿ ನ ಸಂಶಯಃ ॥೪೭॥**

---

೪೩. ಬಟ್ಟೆಯಿಲ್ಲದೆಯೂ, ಕಳವಳದಿಂದ ಕೂಡಿಯೂ, ಒದ್ದೆಯಾದ ಕಾಲನ್ನು ಒರಸಿಕೊಳ್ಳದೆಯೂ, ಸತಿಯು ಇರಬಾರದು. ಅಮಂಗಲವಾದ ಮಾತನ್ನು ಆಡಬಾರದು ; ಮಿತಿಮೀರಿದ ಹಾಸ್ಯವನ್ನು ಬಿಡಬೇಕು.

೪೪. ಗುರುಹಿರಿಯರ ಸೇವೆಯನ್ನೆಸಗಬೇಕು. ಯಾವಾಗಲೂ ಶುಭಕಾರ್ಯದಲ್ಲಿ ಆಸಕ್ತಳಾಗಿರಬೇಕು. ಎಲ್ಲ ಮೂಲಿಕೆಗಳಿಂದಲೂ ಬೆರೆತ ಸುಖೋಷ್ಣವಾದ ನೀರಿನಲ್ಲಿ ಸ್ನಾನಮಾಡಬೇಕು.

೪೫. ತಕ್ಕ ರಕ್ಷಣೆಯನ್ನು ಮಾಡಿಕೊಂಡು, ಉಚಿತಾಲಂಕಾರಗಳಿಂದ ಕೂಡಿ, ಗೃಹದೇವತೆಯ ಪೂಜೆಯಲ್ಲಿ ನಿರತಳಾಗಿರಬೇಕು. ಯಾವಾಗಲೂ ತಿಳಿ ಮುಖದಿಂದ ಪತಿದೇವನ ಪ್ರಿಯಾಚರಣೆಯಲ್ಲಿ ಆಸಕ್ತಿಯನ್ನು ತಾಳಬೇಕು.

೪೬. ಉದಾರಸ್ವಭಾವದವಳಾಗಿ ಮೂರನೆಯ ತಿಂಗಳ ಹುಣ್ಣಿಮೆಯಲ್ಲಿ ರಾತ್ರಿ ಭೋಜನವ್ರತವನ್ನು ಕೈಗೊಳ್ಳಬೇಕು. ಹೆಂಗಸು ಅವರಲ್ಲೂ ಮುಖ್ಯವಾಗಿ ಗರ್ಭಿಣಿಯು ಇಂತಹ ನಡತೆಯುಳ್ಳವಳಾಗಿರಬೇಕು.

೪೭. ಈ ಬಗೆಯ ಸತಿಯಲ್ಲಿ ಜನಿಸುವ ಮಗನು ಒಳ್ಳೆಯ ಸ್ವಭಾವದವನೂ, ದೀರ್ಘಾಯುವೂ ಆಗುವನು. ಹಾಗಿಲ್ಲದಿದ್ದರೆ ಖಂಡಿತವಾಗಿಯೂ ಗರ್ಭಪಾತವಾಗುವುದು.

ತಸ್ಮಾತ್ತ್ವಮನಯಾ ವೃತ್ತ್ಯಾ ಗರ್ಭೇಽಸ್ಮಿನ್ಯತ್ನಮಾಚರ ।
ಸ್ವಸ್ತ್ಯಸ್ತು ತೇ ಗಮಿಷ್ಯಾಮಿ ತಥೇತ್ಯುಕ್ತಸ್ತಯಾ ಪುನಃ ॥೪೮॥

ಪಶ್ಯತಾಂ ಸರ್ವಭೂತಾನಾಂ ತತ್ರೈವಾಂತರಧೀಯತ ।
ತತಃ ಸಾ ಕಶ್ಯಪೋಕ್ತೇನ ವಿಧಿನಾ ಸಮತಿಷ್ಠತ ॥೪೯॥

ಅಥ ಭೀತಸ್ತಥೇಂದ್ರೋಽಪಿ ದಿತೇಃ ಪಾರ್ಶ್ವಮುಪಾಗಮತ್ ।
ವಿಹಾಯ ದೇವಸದನಂ ತಚ್ಛುಶ್ರೂಷುರವಸ್ಥಿತಃ ॥೫೦॥

ದಿತೇಶ್ಛಿದ್ರಾಂತರಪ್ರೇಪ್ಸುರಭವತ್ಪಾಕಶಾಸನಃ ।
ವಿನೀತೋಽಭವದವ್ಯಗ್ರಃ ಪ್ರಶಾಂತವದನೋ ಬಹಿಃ ॥೫೧॥

ಅಜಾನಾತ್ಕಿಲ ತತ್ಕಾರ್ಯಮಾತ್ಮನಃ ಶುಭಮಾಚರನ್ ।
ತತೋ ವರ್ಷಶತಾಂತೇ ಸಾ ನ್ಯೂನೇ ತು ದಿವಸೈಸ್ತ್ರಿಭಿಃ ॥೫೨॥

---

೪೮–೪೯. ಆದುದರಿಂದ ನೀನು ಈ ರೀತಿಯಲ್ಲಿ ನಡೆದುಕೊಂಡು ಈ ಗರ್ಭವನ್ನು ಯತ್ನದಿಂದ ರಕ್ಷಿಸಿಕೋ; ನಿನಗೆ ಮಂಗಳವಾಗಲಿ; ನಾನು ಹೋಗಿಬರುವೆನು'' ಎಂದು ಕಶ್ಯಪನು ಹೇಳಲು ದಿತಿಯು ಹಾಗೆಯೇ ಆಗಲೆಂದಳು. ಎಲ್ಲ ಪ್ರಾಣಿಗಳು ನೋಡುತ್ತಿರುವಂತೆಯೇ ಆ ಮಹರ್ಷಿಯು ಅಲ್ಲೇ ಮಾಯವಾದನು. ಬಳಿಕ ಅವಳು ಕಶ್ಯಪಮುನಿ ಹೇಳಿದ ನಿಯಮದಲ್ಲೇ ನಡೆದಳು.

೫೦. ಬಳಿಕ ಇಂದ್ರನೂ ಕೂಡ ಹೆದರಿಕೊಂಡು, ದಿತಿಯ ಬಳಿಗೆ ಬಂದು ಅವಳ ಸೇವಾಭಿಲಾಷಿಯಾಗಿ ನಿಂತನು.

೫೧. ಪಾಕನೆಂಬ ರಾಕ್ಷಸನನ್ನು ಅಡಗಿಸಿದ ಅವನು ದಿತಿಯ ಲೋಪದೋಷಗಳ ಸಮಯವನ್ನೇ ಕಾಯುತ್ತ ಜಾಗರೂಕನಾಗಿ, ಹೊರಗಡೆ ಗಂಭೀರಮುಖದಿಂದ ವಿನಯವಂತನಾಗಿದ್ದನು. ತನ್ನ ಮೇಲ್ಮೆಯನ್ನು ಸಾಧಿಸಲಿಚ್ಛಿಸಿದ ಅವನಿಗೆ ಅವಳಿಗೇನು ಮಾಡಬೇಕೆಂದು ಚೆನ್ನಾಗಿ ಗೊತ್ತಿದ್ದಿತು.

೫೨–೫೩. ಬಳಿಕ ಒಂದು ನೂರುವರ್ಷಗಳು ಪೂರ್ಣವಾಗುವುದಕ್ಕೆ ಮೂರು ದಿನಗಳು ಮಾತ್ರವೇ ಉಳಿದುವು. ಅವಳು ತನ್ನನ್ನು ಕೃತಾರ್ಥಳೆಂದು ತಿಳಿದು, ವ್ರತವು ಸಾಂಗವಾದುದಕ್ಕಾಗಿ ಮನಸ್ಸಿನಲ್ಲೇ ಆಶ್ಚರ್ಯಪಟ್ಟು, ಪ್ರೀತಿಯಿಂದ ಎಲ್ಲೋ

ಮೇನೇ ಕೃತಾರ್ಥಮಾತ್ಮಾನಂ ಪ್ರೀತ್ಯಾ ವಿಸ್ಮಿತಮಾನಸಾ ।
ಅಕೃತ್ವಾ ಪಾದಯೋಃ ಶೌಚಂ ಪ್ರಸುಪ್ತಾ ಮುಕ್ತಮೂರ್ಧಜಾ ॥೫೩॥

ನಿದ್ರಾಭರಸಮಾಕ್ರಾಂತಾ ದಿವಾಪರಶಿರಾಃ ಕ್ವಚಿತ್ ।
ತತಸ್ತದಂತರಂ ಲಬ್ಧ್ವಾ ಪ್ರವಿಷ್ಟಸ್ತು ಶಚೀಪತಿಃ ॥೫೪॥

ವಜ್ರೇಣ ಸಪ್ತಧಾ ಚಕ್ರೇ ತಂ ಗರ್ಭಂ ತ್ರಿದಶಾಧಿಪಃ
ತತಃ ಸಪ್ತೈವ ತೇ ಜಾತಾಃ ಕುಮಾರಾಃ ಸೂರ್ಯವರ್ಚಸಃ ॥೫೫॥

ರುದಂತಃ ಸಪ್ತ ತೇ ಬಾಲಾ ನಿಷಿದ್ಧಾ ಗಿರಿದಾರಿಣಾ ।
ಭೂಯೋಽಪಿ ರುದತಶ್ಚೈತಾನೇಕೈಕಂ ಸಪ್ತಧಾ ಹರಿಃ ॥೫೬॥

ಚಿಚ್ಛೇದ ವೃತ್ರಹಂತಾ ವೈ ಪುನಸ್ತದುದರೇ ಸ್ಥಿತಃ ।
ಏವಮೇಕೋನಪಂಚಾಶದ್ಭೂತ್ವಾ ತೇ ರುರುದುರ್ಭೃಶಂ ॥೫೭॥

---

ಒಂದು ಸಾರಿ ಕಾಲುಗಳನ್ನು ತೊಳೆಯದೆ, ಹಗಲುಹೊತ್ತಿನಲ್ಲಿ ನಿದ್ರಾವಶದಿಂದ ಕೂದಲನ್ನು ಗಂಟುಹಾಕಿಕೊಳ್ಳದೆ, ಪಶ್ಚಿಮಕ್ಕೆ ತಲೆಯಿಟ್ಟು ಮಲಗಿದಳು.

೫೪-೫೫. ಅನಂತರ ಆ ಸಮಯವು ಸಿಕ್ಕಲು, ದೇವಾಧಿಪನಾದ ಇಂದ್ರನು ದಿತಿಯ ಗರ್ಭವನ್ನು ಪ್ರವೇಶಿಸಿ ತನ್ನ ವಜ್ರಾಯುಧದಿಂದ ಅದನ್ನು ಏಳು ಪಾಲು ಮಾಡಿದನು. ಬಳಿಕ ಆ ಏಳು ಚೂರುಗಳೂ ಸೂರ್ಯನಂತೆ ಪ್ರಕಾಶಿಸುವ ಏಳು ಮಕ್ಕಳೇ ಆಗಿ ಹುಟ್ಟಿದವು.

೫೬-೫೭. ಅಳುತ್ತಿರುವ ಆ ಏಳು ಮಕ್ಕಳನ್ನೂ ಇಂದ್ರನು ತಡೆದನು. ಅವು ಮತ್ತೂ ಅಳುತ್ತಿರಲು ಅವನು ಒಂದೊಂದನ್ನೂ, ಅವಳ ಉದರದಲ್ಲಿ ನಿಂತು, ಏಳೇಳು ಭಾಗವಾಗಿ ಕತ್ತರಿಸಿದನು. ಹೀಗೆ ನಲವತ್ತೊಂಬತ್ತು ಪಾಲಾಗಲು ಅವು ಬಲವಾಗಿ ಅತ್ತವು.

ಇಂದ್ರೋ ನಿವಾರಯಾಮಾಸ ಮಾ ರೋದಿಷ್ಟ ಪುನಃ ಪುನಃ ।
ತತಃ ಸ ಚಿಂತಯಾಮಾಸ ಕಿಮೇತದಿತಿ ವೃತ್ರಹಾ ॥೫೮॥

ಧರ್ಮಸ್ಯ ಕಸ್ಯ ಮಾಹಾತ್ಮ್ಯಾತ್ಪುನಃ ಸಂಜೀವಿತಾಸ್ತ್ವಮೀ ।
ವಿದಿತ್ವಾ ಧ್ಯಾನಯೋಗೇನ ಮದನದ್ವಾದಶೀಫಲಂ ॥೫೯॥

ನೂನಮೇತತ್ಪರಿಣತಮಧುನಾ ಕೃಷ್ಣಪೂಜನಾತ್ ।
ವಜ್ರೇಣಾಪಿ ಹತಾಃ ಸಂತೋ ನ ವಿನಾಶಮವಾಪ್ನುಯುಃ ॥೬೦॥

ಏಕೋಽಪ್ಯನೇಕತಾಮಾಪ ಯಸ್ಮಾದುದರಗೋಽಪ್ಯಲಂ ।
ಅವಧ್ಯಾ ನೂನಮೇತೇ ವೈ ತಸ್ಮಾದ್ದೇವಾ ಭವನ್ತ್ವಿತಿ ॥೬೧॥

ಯಸ್ಮಾನ್ಮಾ ರುದತೇತ್ಯುಕ್ತಾ ರುದಂತೋ ಗರ್ಭಸಂಸ್ಥಿತಾಃ ।
ಮರುತೋ ನಾಮ ತೇ ನಾಮ್ನಾ ಭವಂತು ಮಖಭಾಗಿನಃ ॥೬೨॥

ತತಃ ಪ್ರಸಾದ್ಯ ದೇವೇಶಃ ಕ್ಷಮಸ್ವೇತಿ ದಿತಿಂ ಪುನಃ ।
ಅರ್ಥಶಾಸ್ತ್ರಂ ಸಮಾಸ್ಥಾಯ ಮಯೈತದ್ದುಷ್ಕೃತಂ ಕೃತಂ ॥೬೩॥

೫೮-೬೦. ಅಳಬೇಡಿರೆಂದು ಇಂದ್ರನು ಆ ಮಕ್ಕಳನ್ನು ಪುನಃ ಪುನಃ ತಡೆದನು. ಬಳಿಕ ಅವನು "ಇದೇನು? ಯಾವಧರ್ಮದ ಮಹಿಮೆಯಿಂದ ಇವು ಮತ್ತೆ ಬದುಕಿದುವು?" ಎಂದು ಯೋಚಿಸಿದನು. ಧ್ಯಾನಬಲದಿಂದ ಮದನದ್ವಾದಶೀವ್ರತದ ಫಲವನ್ನರಿತು "ಶ್ರೀ ಕೃಷ್ಣನ ಪೂಜೆಯಿಂದ ಹೀಗಾಯಿತು. ವಜ್ರಾಯುಧದಿಂದ ಹೊಡೆದರೂ ಅವು ಸಾಯಲಿಲ್ಲ.

೬೧-೬೨. ಉದರದಲ್ಲಿದ್ದಾಗಲೇ ಈ ಒಂದು ಗರ್ಭವು ಹಲವು ಭಾಗವಾಯಿತು. ನನ್ನ ವಜ್ರಾಯುಧದ ಪ್ರಹಾರದಿಂದಲೂ ಕೂಡ ಅವಧ್ಯರಾದ ಕಾರಣ ಈ ಮಕ್ಕಳು ನಿಜವಾಗಿಯೂ ದೇವತೆಗಳಾಗಲಿ. ಅಳಬೇಡಿರೆಂದು ನಾನು ಹೇಳಿದರೂ ಅಳುತ್ತಲೇ ಗರ್ಭದಲ್ಲಿದ್ದಕಾರಣ ಅವರು ಮರುತರೆಂಬ ಹೆಸರನ್ನು ಪಡೆದು ಯಾಗಗಳಲ್ಲಿ ಹವಿರ್ಭಾಗವನ್ನು ಹೊಂದಲಿ" ಎಂದು ಇಂದ್ರನು ವರವಿತ್ತನು.

೬೩. ದೇವರಾಜನಾದ ಇಂದ್ರನು ಬಳಿಕ ದಿತಿಯನ್ನು ಸಂತೈಸಿ, "ಅರ್ಥಶಾಸ್ತ್ರದಲ್ಲಿ ಮನಸ್ಸಿಟ್ಟು ನಾನು ಈ ದುಷ್ಕಾರ್ಯವನ್ನೆಸಗಿದೆನು. ಕ್ಷಮಿಸು" ಎಂದು ಬೇಡಿಕೊಂಡನು.

**ಕೃತ್ವಾ ಮರುದ್ಗಣಂ ದೇವೈಃ ಸಮಾನಮಮರಾಧಿಪಃ ।**
**ದಿತಿಂ ವಿಮಾನಮಾರೋಪ್ಯ ಸಸುತಾಮನಯದ್ದಿವಂ ॥೬೪॥**

**ಯಜ್ಞಭಾಗಭುಜೋ ಜಾತಾ ಮರುತಸ್ತೇ ತತೋ ದ್ವಿಜಾಃ ।**
**ನ ಜಗ್ಮುರೈಕ್ಯಮಸುರೈರತಸ್ತೇ ಸುರವಲ್ಲಭಾಃ ॥೬೫॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಆದಿಸರ್ಗೇ ಮರುದುತ್ಪತ್ತೌ ಮದನದ್ವಾದಶೀವ್ರತಂ ನಾಮ ಸಪ್ತಮೋಽಧ್ಯಾಯಃ**

---

೬೪. ಇಂದ್ರನು ಮರುದ್ಗಣವನ್ನು ದೇವತೆಗಳಿಗೆ ಸಮಾನವಾಗಿ ಮಾಡಿ, ದಿತಿಯನ್ನು ಅವಳ ಮಕ್ಕಳೊಡನೆ ವಿಮಾನದಲ್ಲಿ ಕುಳ್ಳಿರಿಸಿ ಸ್ವರ್ಗಕ್ಕೆ ಕರೆದೊಯ್ದನು.

೬೫. ಎಲೈ ಬ್ರಾಹ್ಮಣರೇ, ಬಳಿಕ ಆ ಮರುತ್ತುಗಳು ಯಜ್ಞಭಾಗಾರ್ಹರಾದರು. ಅವರು ರಾಕ್ಷಸರೊಡನೆ ಸಮಾನತೆಯನ್ನು ಪಡೆಯಲಿಲ್ಲ. ಆದುದರಿಂದಲೇ ಅವರು ದೇವವಲ್ಲಭರೆನಿಸಿಕೊಂಡರು.

## ಅಧ್ಯಾಯದ ಸಾರಾಂಶ

ದೇವಾಸುರಯುದ್ಧದಲ್ಲಿ ಬಹಳ ಜನ ದೈತ್ಯರು ಸಾಯಲು ದಿತಿಯು ಪುತ್ರಶೋಕದಿಂದ ಸರಸ್ವತೀನದಿಯ ತೀರದಲ್ಲಿ ತಪಸ್ಸನ್ನೆಸಗಿದಳು. ಕಶ್ಯಪ ಮಹರ್ಷಿಗಳು ಪ್ರತ್ಯಕ್ಷರಾಗಿ ವರವನ್ನು ಬೇಡೆನಲು, "ಇಂದ್ರನನ್ನು ಕೊಲ್ಲಬಲ್ಲ ಶೂರನಾದ ಮಗನಾಗಬೇಕೆಂದು" ಬೇಡಿದಳು. ಅವರು ಅಂತೆಯೇ ಆಗಲೆಂದು ಅನುಗ್ರಹಿಸಿದರು. ಬಳಿಕ ದಿತಿಯು ವಸಿಷ್ಠಾದಿಗಳು ಹೇಳಿದ ಮದನದ್ವಾದಶೀವ್ರತವನ್ನು ಸಾಂಗವಾಗಿ ನೆರವೇರಿಸಿ ಪತಿಯ ಅನುಗ್ರಹದಿಂದ ಗರ್ಭವತಿಯಾದಳು. ಗರ್ಭಿಣಿಯಾಗಿರುವಾಗ ಅನುಸರಿಸಬೇಕಾದ ನಿಯಮಗಳೆಲ್ಲವನ್ನೂ ವಿವರಿಸಿ ಕಶ್ಯಪಮುನಿ ಅಂತರ್ಧಾನರಾದರು. ಇಂದ್ರನು ಈ ವೃತ್ತಾಂತವನ್ನರಿತು ಮಾತೃಸೇವಾವ್ಯಾಜದಿಂದ ಅಲ್ಲಿ ಬಂದು, ಕೆಲವು ಕಾಲ ಇದ್ದು, ಸಮಯವನ್ನು ಸಾಧಿಸಿ, ದಿತಿಯಗರ್ಭವನ್ನು ನಲವತ್ತೊಂಬತ್ತು ತುಂಡುಗಳನ್ನಾಗಿ ಕತ್ತರಿಸಿದನು. ಶ್ರೀ ಕೃಷ್ಣನ ಪೂಜಾ ಮಹಿಮೆಯಿಂದ ಅವು ಸಾಯದೆ ಬದುಕಿರಲು, ಅವನು ಅವುಗಳಿಗೆ ದೇವತ್ವವನ್ನು ಕೊಟ್ಟು, "ಅಳಬೇಡ—ಮಾರುದ" ಎಂದು ತನ್ನಿಂದ ಸಂತೈಸಲ್ಪಟ್ಟಕಾರಣ ಅವುಗಳಿಗೆ ಮರುತ್ತುಗಳೆಂಬ ಹೆಸರಿತ್ತು ದಿತಿಯೊಡನೆ ಸ್ವರ್ಗಕ್ಕೆ ತೆರಳಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಏಳನೆಯ ಅಧ್ಯಾಯವು ಮುಗಿದುದು

## ಅಥ ಶ್ರೀಮತ್ಸ್ಯಮಹಾಪುರಾಣೇ ಅಷ್ಟಮೋಽಧ್ಯಾಯಃ

॥ ಋಷಯ ಊಚುಃ ॥

ಆದಿಸರ್ಗಶ್ಚ ಯಃ ಸೂತ ಕಥಿತೋ ವಿಸ್ತರೇಣ ತು ।
ಪ್ರತಿಸರ್ಗಂ ಚ ಯೇ ಯೇಷಾಮಧಿಪಾಸ್ತಾನ್ವದಸ್ವ ನಃ ॥ ೧ ॥

॥ ಸೂತ ಉವಾಚ ॥

ಯದಾಭಿಷಿಕ್ತಃ ಸಕಲಾಧಿರಾಜ್ಯೇ
ಪೃಥುರ್ಧರಿತ್ರ್ಯಾಮಧಿಪೋ ಬಭೂವ ।
ತದೌಷಧೀನಾಮಧಿಪಂ ಚಕಾರ
ಯಜ್ಞವ್ರತಾನಾಂ ತಪಸಾಂ ಚ ಚಂದ್ರಂ ॥ ೨ ॥

ನಕ್ಷತ್ರತಾರಾದ್ವಿಜವೃಕ್ಷಗುಲ್ಮ-
ಲತಾವಿತಾನಸ್ಯ ಚ ರುಕ್ಮಗರ್ಭಃ ।
ಅಪಾಮಧೀಶಂ ವರುಣಂ ಧನಾನಾಂ
ರಾಜ್ಞಾಂ ಪ್ರಭುಂ ವೈಶ್ರವಣಂ ಚ ತದ್ವತ್ ॥ ೩ ॥

೧. ಋಷಿಗಳು ಹೇಳಿದರು:—ಓ ಸೂತಾ, ಆದಿಸೃಷ್ಟಿಯನ್ನು ವಿಸ್ತಾರವಾಗಿ ಹೇಳಿದೆ. ಇನ್ನುಮುಂದೆ ಪ್ರತಿಸೃಷ್ಟಿಯನ್ನೂ, ಯಾವಯಾವ ವರ್ಗಕ್ಕೆ ಯಾರು ಯಾರು ಅಧಿಪತಿಗಳೆಂಬುವನ್ನೂ ನಮಗೆ ಹೇಳು.*

೨. ಸೂತಮಹಾಮುನಿಯು ಹೇಳಿದನು:—ಭೂಮಿಯಲ್ಲಿ ಪೃಥುಚಕ್ರವರ್ತಿಗೆ ಪಟ್ಟಾಭಿಷೇಕಮಾಡಿ, ಸಕಲಾಧಿರಾಜ್ಯವನ್ನೂ ಅವನಿಗೆ ವಹಿಸಿದಾಗ ಓಷಧಿಗಳು, ಯಜ್ಞವ್ರತಗಳು, ಮತ್ತು ತಪಸ್ಸುಗಳು ಇವುಗಳಿಗೆಲ್ಲ ಚಂದ್ರನನ್ನು ಅಧಿದೇವತೆಯನ್ನಾಗಿ ಬ್ರಹ್ಮನು ಮಾಡಿದನು.

೩. ನಕ್ಷತ್ರಗಳು, ಗ್ರಹಗಳು, ಬ್ರಾಹ್ಮಣರು, ಮರಗಿಡಗಳು, ಬಳ್ಳಿಗಳು ಮತ್ತು ಪೊದೆಗಳು ಇವುಗಳಿಗೆಲ್ಲಾ ಚಂದ್ರನೇ ಒಡೆಯನು. ಹಿರಣ್ಯಗರ್ಭನು ವರುಣನನ್ನು ಜಲಕ್ಕೂ, ಹಾಗೆಯೇ ರಾಜಾಧಿರಾಜನಾದ ಕುಬೇರನನ್ನು ಸಂಪತ್ತಿಗೂ ಅಧಿಪತಿಯನ್ನಾಗಿ ಮಾಡಿದನು.

* ಬ್ರಹ್ಮನ ಸಾಕ್ಷಾತ್ ಸೃಷ್ಟಿ ನಡೆದ ತರುವಾಯ ಅವನ ಮಾನಸಪುತ್ರರಾದ ಮರೀಚಿ ಮುಂತಾದವರು ಮಾಡುವ ವಿವಿಧ ಜೀವರಾಶಿಯ ಸೃಷ್ಟಿಯು ಪ್ರತಿಸೃಷ್ಟಿ ಅಥವಾ ಪ್ರತಿಸರ್ಗವೆನಿಸುವುದು.

ವಿಷ್ಣುಂ ರವೀಣಾಮಧಿಪಂ ವಸೂನಾ-
ಮಗ್ನಿಂ ಚ ಲೋಕಾಧಿಪತಿಶ್ಚಕಾರ ।
ಪ್ರಜಾಪತೀನಾಮಧಿಪಂ ಚ ದಕ್ಷಂ
ಚಕಾರ ಶಕ್ರಂ ಮರುತಾಮಧೀಶಂ ॥ ೪ ॥

ದೈತ್ಯಾಧಿಪಾನಾಮಥ ದಾನವಾನಾಂ
ಪ್ರಹ್ಲಾದಮೀಶಂ ಚ ಯಮಂ ಪಿತೃಣಾಂ ।
ಪಿಶಾಚರಕ್ಷಃಪಶುಭೂತಯಕ್ಷ
ವೇತಾಲರಾಜಂ ತ್ವಥ ಶೂಲಪಾಣಿಂ ॥ ೫ ॥

ಪ್ರಾಲೇಯಶೈಲಂ ಚ ಪತಿಂ ಗಿರೀಣಾ-
ಮೀಶಂ ಸಮುದ್ರಂ ಸಸರಿನ್ನದಾನಾಂ ।
ಗಂಧರ್ವವಿದ್ಯಾಧರಕಿನ್ನರಾಣಾ-
ಮೀಶಂ ಪುನಶ್ಚಿತ್ರರಥಂ ಚಕಾರ ॥ ೬ ॥

---

೪. ಪಿತಾಮಹನ ಅಪ್ಪಣೆಯಿಂದ ದ್ವಾದಶಾದಿತ್ಯರಿಗೆ ವಿಷ್ಣುವೂ, ಅಷ್ಟವಸುಗಳಿಗೆ ಅಗ್ನಿಯೂ, ಪ್ರಜಾಪತಿಗಳಿಗೆ ದಕ್ಷನೂ ಮತ್ತು ದೇವತೆಗಳಿಗೆ ಇಂದ್ರನೂ ಅಧೀಶರಾದರು.

೫. ಬ್ರಹ್ಮನು ದೈತ್ಯಾಧಿಪತಿಗಳಿಗೂ ದಾನವರಿಗೂ ಪ್ರಹ್ಲಾದನನ್ನೂ, ಪಿತೃಗಳಿಗೆ ಯಮನನ್ನೂ, ಪಿಶಾಚರು, ರಾಕ್ಷಸರು, ಪಶುಗಳು, ಭೂತಗಳು, ಯಕ್ಷರು ಮತ್ತು ಬೇತಾಳಗಳಿಗೆ ಈಶ್ವರನನ್ನೂ ರಾಜನನ್ನಾಗಿ ಮಾಡಿದನು.

೬. ಹಿಮಾಚಲವು ಪರ್ವತಗಳ ರಾಜನೂ, ಸಮುದ್ರವು ನದೀನದಗಳ ಪತಿಯೂ, ಚಿತ್ರರಥನು ಗಂಧರ್ವರು, ವಿದ್ಯಾಧರರು, ಕಿನ್ನರರು ಇವರ ಒಡೆಯನೂ ಆದರು.

ನಾಗಾಧಿಪಂ ವಾಸುಕಿಮುಗ್ರವೀರ್ಯಂ
ಸರ್ಪಾಧಿಪಂ ತಕ್ಷಕಮಾದಿದೇಶ ।
ದಿಶಾಂ ಗಜಾನಾಮಧಿಪಂ ಚಕಾರ
ಗಜೇಂದ್ರಮೈರಾವತನಾಮಧೇಯಂ ॥ ೭ ॥

ಸುಪರ್ಣಮೀಶಂ ಪತತಾಮಥಾಶ್ವ-
ರಾಜಾನಮುಚ್ಚೈಃಶ್ರವಸಂ ಚಕಾರ ।
ಸಿಂಹಂ ಮೃಗಾಣಾಂ ವೃಷಭಂ ಗವಾಂ ಚ
ವೃಕ್ಷಂ ಪುನಃ ಸರ್ವವನಸ್ಪತೀನಾಂ ॥ ೮ ॥

ಪಿತಾಮಹಃ ಪೂರ್ವಮಥಾಭ್ಯಷಿಂಚ-
ಚ್ಚೈತಾನ್ಪುನಃ ಸರ್ವದಿಶಾಧಿನಾಥಾನ್ ।
ಪೂರ್ವೇಣ ದಿಕ್ಪಾಲಮಥಾಭ್ಯಷಿಂಚ-
ನ್ನಾಮ್ನಾ ಸುಧರ್ಮಾಣಮರಾತಿಕೇತುಂ ॥ ೯ ॥

---

೭. ಪ್ರಚಂಡ ವೀರ್ಯವುಳ್ಳ ವಾಸುಕಿಯನ್ನು ನಾಗಗಳ ರಾಜನನ್ನಾಗಿಯೂ, ತಕ್ಷಕನನ್ನು ಸರ್ಪಗಳ ಒಡೆಯನನ್ನಾಗಿಯೂ, ಐರಾವತವೆಂಬ ಹೆಸರಿನ ಗಜರಾಜನನ್ನು ದಿಗ್ಗಜಗಳ ಯಜಮಾನನ್ನಾಗಿಯೂ ಲೋಕಪಿತಾಮಹನು ನಿಯಮಿಸಿದನು.

೮. ಗರುಡನು ಪಕ್ಷಿಗಳ ರಾಜನೂ, ಉಚ್ಚೈಶ್ರವಸ್ಸು ಕುದುರೆಗಳ ಅರಸನೂ ಆದರು. ಸಿಂಹವು ಮೃಗಗಳಿಗೂ, ಎತ್ತು ದನಕರುಗಳಿಗೂ, ಮರವು ಎಲ್ಲ ಸಸ್ಯಲತಾದಿಗಳಿಗೂ ಅಧಿಪತಿಗಳಾದವು.

೯. ಈ ಮೇಲೆ ಹೇಳಿದವರನ್ನು ಬ್ರಹ್ಮನು ಮೊದಲು ಅವರವರ ಸ್ಥಾನದಲ್ಲಿ ಅಭಿಷಿಕ್ತರನ್ನಾಗಿ ಮಾಡಿ, ಪುನಃ ಎಲ್ಲ ದಿಕ್ಕುಗಳಿಗೂ ಅಧೀಶ್ವರರನ್ನು ನಿಯಮಿಸಿದನು. ಶತ್ರುನಾಶಕನಾದ ಸುಧರ್ಮನೆಂಬವನು ಪೂರ್ವದಿಕ್ಕಿನ ಪಾಲಕನಾಗಿ ಪಟ್ಟವನ್ನೇರಿದನು.

---

* ನಾಗಗಳು, ಸರ್ಪಗಳು ಎಂಬವು ಹಾವುಗಳ ಬೇರೆ ಬೇರೆ ಪಂಗಡಗಳ ಹೆಸರು.

**ತತೋಽಧಿಪಂ ದಕ್ಷಿಣತಶ್ಚಕಾರ**
**ಸರ್ವೇಶ್ವರಂ ಶಂಖಪದಾಭಿಧಾನಂ ।**
**ಸ ಕೇತುಮಂತಂ ಚ ದಿಗೀಶಮೀಶ-**
**ಶ್ಚಕಾರ ಪಶ್ಚಾದ್ಭುವನಾಂಡಗರ್ಭಃ** ॥೧೦॥

**ಹಿರಣ್ಯರೋಮಾಣಮುದಗ್ದಿಗೀಶಂ**
**ಪ್ರಜಾಪತಿರ್ದೇವಸುತಂ ಚಕಾರ ।**
**ಅದ್ಯಾಪಿ ಕುರ್ವಂತಿ ದಿಶಾಮಧೀಶಾಃ ।**
**ಶತ್ರೂನ್ ದಹಂತಸ್ತು ಭುವೋಽಭಿರಕ್ಷಾಂ** ॥೧೧॥

**ಚತುರ್ಭಿರೇಭಿಃ ಪೃಥುನಾಮಧೇಯೋ**
**ನೃಪೋಽಭಿಷಿಕ್ತಃ ಪ್ರಥಮಂ ಪೃಥಿವ್ಯಾಂ ।**
**ಗತೇಂತರೇ ಚಾಕ್ಷುಷನಾಮಧೇಯೋ**
**ವೈವಸ್ವತಾಖ್ಯೇ ಚ ಪುನಃ ಪ್ರವೃತ್ತೇ ।**
**ಪ್ರಜಾಪತಿಃ ಸೋಽಸ್ಯ ಚರಾಚರಸ್ಯ**
**ಬಭೂವ ಸೂರ್ಯಾನ್ವಯವಂಶಚಿಹ್ನಃ** ॥೧೨॥

**ಇತಿ ಶ್ರೀ ಮಾತ್ಸ್ಯೇ ಮಹಾಪುರಾಣೇ ಆಧಿಪತ್ಯಾಭಿಷೇಚನಂ ನಾಮಾಷ್ಟಮೋಽಧ್ಯಾಯಃ**

---

೧೦. ತರುವಾಯ ಸಕಲ ದಿಕ್ಪತಿಯೂ, ಅಂಡಾಧೀಶ್ವರನೂ ಆದ ಬ್ರಹ್ಮನು ಸರ್ವೇಶ್ವರನಾದ ಶಂಖಪದನೆಂಬವನನ್ನು ದಕ್ಷಿಣದಿಕ್ಕಿಗೂ, ಕೇತುಮಂತನನ್ನು ಪಶ್ಚಿಮದಿಕ್ಕಿಗೂ ಅಧಿಪತಿಯಾಗಿ ಮಾಡಿದನು.

೧೧. ಪ್ರಜಾಪತಿಯ ಅಪ್ಪಣೆಯಂತೆ ದೇವಸುತನಾದ ಹಿರಣ್ಯರೋಮನು ಉತ್ತರದಿಕ್ಪತಿಯಾದನು. ಈ ದಿಕ್ಪತಿಗಳು ಶತ್ರುಗಳನ್ನು ದಹಿಸುತ್ತ ಈಗಲೂ ಸಹ ಭೂಮಿಯನ್ನು ರಕ್ಷಿಸುತ್ತಿರುವರು.

೧೨. ಪೃಥುವೆಂಬ ರಾಜನು ಈ ನಾಲ್ವರು ದಿಕ್ಪಾಲಕರೊಡನೆ ಮೊದಲು ಮಹೀಮಂಡಲದಲ್ಲಿ ಅಭಿಷಿಕ್ತನಾದನು. ಚಾಕ್ಷುಷಮನ್ವಂತರವು ಕಳೆದು ವೈವಸ್ವತಮನ್ವಂತರವು ಹುಟ್ಟಲು, ಸೂರ್ಯವಂಶದಲ್ಲಿ ಜನಿಸಿದ ಆ ವೈವಸ್ವತಮನುವು ಚರಾಚರಾತ್ಮಕವಾದ ಈ ಜಗತ್ತಿಗೆ ಪ್ರಜಾಧಿಪತಿಯಾದನು.

ಅಧ್ಯಾಯ ೮

## ಅಧ್ಯಾಯದ ಸಾರಾಂಶ

ಬ್ರಹ್ಮನು ಭೂಮಿಯಲ್ಲಿ ಸಕಲಾಧಿರಾಜ್ಯವನ್ನೂ ಪೃಥುಚಕ್ರವರ್ತಿಗೆ ವಹಿಸಿ, ದ್ವಿಜವೃಕ್ಷಗುಲ್ಮಲತಾದಿಗಳಿಗೆ ಚಂದ್ರನನ್ನೂ, ನೀರಿಗೆ ವರುಣನನ್ನೂ, ಸಂಪತ್ತಿಗೆ ಕುಬೇರನನ್ನೂ ಅಧಿಪತಿಯಾಗಿ ಮಾಡಿದನು. ಹೀಗೆಯೇ ವಸುಗಳು, ದೇವತೆಗಳು, ದೈತ್ಯರು ಮುಂತಾದ ವಿವಿಧ ಜೀವರಾಶಿಗಳಿಗೆ ಅಧೀಶ್ವರರು ಗೊತ್ತಾದರು. ಪೂರ್ವಾದಿಚತುರ್ದಿಕ್ಕುಗಳಿಗೂ ಪಾಲಕರನ್ನು ನಿಯಮಿಸಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಎಂಟನೆಯ ಅಧ್ಯಾಯವು ಮುಗಿದುದು



## ಅಥ ಶ್ರೀಮತ್ಸ್ಯಮಹಾಪುರಾಣೇ ನವಮೋಽಧ್ಯಾಯಃ

॥ ಸೂತ ಉವಾಚ ॥

ಏವಂ ಶ್ರುತ್ವಾ ಮನುಃ ಪ್ರಾಹ ಪುನರೇವ ಜನಾರ್ದನಂ ।
ಪೂರ್ವೇಷಾಂ ಚರಿತಂ ಬ್ರೂಹಿ ಮನೂನಾಂ ಮಧುಸೂದನ ॥ ೧ ॥

॥ ಮತ್ಸ್ಯ ಉವಾಚ ॥

ಮನ್ವಂತರಾಣಿ ರಾಜೇಂದ್ರ ಮನೂನಾಂ ಚರಿತಂ ಚ ಯತ್ ।
ಪ್ರಮಾಣಂ ಚೈವ ಕಾಲಸ್ಯ ತಾಂ ಸೃಷ್ಟಿಂ ಚ ಸಮಾಸತಃ ॥ ೨ ॥
ಏಕಚಿತ್ತಃ ಪ್ರಶಾಂತಾತ್ಮಾ ಶೃಣು ಮಾರ್ತಂಡನಂದನ ।
ಯಾಮಾ ನಾಮ ಪುರಾ ದೇವಾ ಆಸನ್ ಸ್ವಾಯಂಭುವಾಂತರೇ ॥ ೩ ॥
ಸಪ್ತೈವ ಋಷಯಃ ಪೂರ್ವೇ ಯೇ ಮರೀಚ್ಯಾದಯಃ ಸ್ಮೃತಾಃ ।
ಆಗ್ನೀಧ್ರಶ್ಚಾಗ್ನಿಬಾಹುಶ್ಚ ಸಹಃ ಸವನ ಏವ ಚ ॥ ೪ ॥

---

೧. ಸೂತಮುನಿಯು ಹೇಳಿದನು:—ಮನುಚಕ್ರವರ್ತಿಯು ಹೀಗೆ ಕಥೆಯನ್ನು ಕೇಳಿ “ ಓ ಮಧುಸೂದನಾ, ಹಿಂದಿನ ಮನುಗಳ ವೃತ್ತಾಂತವನ್ನು ಹೇಳು ” ಎಂದು ಪುನಃ ವಿಷ್ಣುವನ್ನು ಪ್ರಶ್ನಿಸಿದನು.

೨-೩. ಮತ್ಸ್ಯರೂಪನಾದ ಭಗವಂತನು ಹೇಳಿದನು:—ಸೂರ್ಯಸುತನಾದ ಓ ರಾಜೇಂದ್ರಾ, ಮನ್ವಂತರಗಳನ್ನೂ, ಮನುಗಳ ವೃತ್ತಾಂತವನ್ನೂ, ಕಾಲದ ಪ್ರಮಾಣವನ್ನೂ, ಆಯಾ ಮನ್ವಂತರದ ಸೃಷ್ಟಿಯನ್ನೂ ಸಂಗ್ರಹವಾಗಿ ಏಕಾಗ್ರ ಚಿತ್ತದಿಂದ ಶಾಂತನಾಗಿ ಕೇಳು. ಹಿಂದೆ ಸ್ವಾಯಂಭುವಮನ್ವಂತರದಲ್ಲಿ ದೇವತೆಗಳಿಗೆ ಯಾಮರೆಂದು ಪ್ರಖ್ಯಾತಿಯಿತ್ತು.

೪-೫. ಹಿಂದೆ ಹೇಳಿದ ಮರೀಚಿ ಮೊದಲಾದ ಬ್ರಹ್ಮನ ಮಾನಸಪುತ್ರರಲ್ಲಿ ಏಳು ಜನ ಮಾತ್ರ ಆ ಮನ್ವಂತರದಲ್ಲಿದ್ದರು. ಆಗ್ನೀಧ್ರ, ಅಗ್ನಿಬಾಹು, ಸಹ, ಸಹನ, ಜ್ಯೋತಿಷ್ಮಂತ, ದ್ಯುತಿಮಂತ, ಹವ್ಯ, ಮೇಧಸ, ಮೇಧಾತಿಥಿ ಮತ್ತು

ಜ್ಯೋತಿಷ್ಮಾನ್ದ್ಯುತಿಮಾನ್ ಹವ್ಯೋ ಮೇಧಾ ಮೇಧಾತಿಥಿರ್ವಸುಃ ।
ಸ್ವಾಯಂಭುವಸ್ಯಾಸ್ಯ ಮನೋರ್ದಶೈತೇ ವಂಶವರ್ಧನಾಃ ॥ ೫ ॥
ಪ್ರತಿಸರ್ಗಮಿಮೇ ಕೃತ್ವಾ ಜಗ್ಮುರ್ಯತ್ಪರಮಂ ಪದಂ ।
ಏತತ್ಸ್ವಾಯಂಭುವಂ ಪ್ರೋಕ್ತಂ ಸ್ವಾರೋಚಿಷಮತಃ ಪರಂ ॥ ೬ ॥
ಸ್ವಾರೋಚಿಷಸ್ಯ ತನಯಾಶ್ಚತ್ವಾರೋ ದೇವವರ್ಚಸಃ ।
ನಭೋನಭಸ್ಯಪ್ರಸೃತಿಭಾನವಃ ಕೀರ್ತಿವರ್ಧನಾಃ ॥ ೭ ॥
ದತ್ತೋ ನಿಶ್ಚ್ಯವನಸ್ತಂಬಃ ಪ್ರಾಣಃ ಕಶ್ಯಪ ಏವ ಚ ।
ಔರ್ವೋ ಬೃಹಸ್ಪತಿಶ್ಚೈವ ಸಪ್ತೈತೇ ಋಷಯಃ ಸ್ಮೃತಾಃ ॥ ೮ ॥
ದೇವಾಶ್ಚ ತುಷಿತಾ ನಾಮ ಸ್ಮೃತಾಃ ಸ್ವಾರೋಚಿಷೇಽಂತರೇ ।
ಹಸ್ತೀಂದ್ರಃ ಸುಕೃತೋ ಮೂರ್ತಿರಾಪೋ ಜ್ಯೋತಿರಯಃ ಸ್ಮಯಃ ॥ ೯ ॥
ವಸಿಷ್ಠಸ್ಯ ಸುತಾಃ ಸಪ್ತ ಯೇ ಪ್ರಜಾಪತಯಃ ಸ್ಮೃತಾಃ ।
ದ್ವಿತೀಯಮೇತತ್ಕಥಿತಂ ಮನ್ವಂತರಮತಃ ಪರಂ ॥೧೦॥

---

ವಸುಗಳೆಂಬ ಈ ಹತ್ತು ಜನ ಮಕ್ಕಳು ಸ್ವಾಯಂಭುವಮನುವಿನ ವಂಶವನ್ನು ವಿಸ್ತಾರ ಪಡಿಸಿದರು.

೬. ಇವರು ಪ್ರತಿಸೃಷ್ಟಿಯನ್ನೆಸಗಿ ಪರಮಪದವನ್ನು ಸೇರಿದರು. ಇದೇ ಸ್ವಾಯಂಭುವಮನ್ವಂತರದ ವೃತ್ತಾಂತ. ಅದರ ಮುಂದಿನದು ಸ್ವಾರೋಚಿಷ ಮನ್ವಂತರವು.

೭. ಸ್ವಾರೋಚಿಷನಿಗೆ ಕಾಂತಿಯುಳ್ಳ ದೇವತೆಗಳಿಗೆ ಸದೃಶರಾಗಿ ಕೀರ್ತಿ ವಂತರಾದ ನಭ, ನಭಸ್ಯ, ಪ್ರಸೃತಿ ಮತ್ತು ಭಾನುಗಳೆಂಬ ನಾಲ್ವರು ಮಕ್ಕಳಿದ್ದರು.

೮. ದತ್ತ, ನಿಶ್ಚ್ಯವನ, ಸ್ತಂಬ, ಪ್ರಾಣ, ಕಶ್ಯಪ, ಔರ್ವ ಮತ್ತು ಬೃಹಸ್ಪತಿ ಗಳೆಂಬವರು ಸಪ್ತರ್ಷಿಗಳು.

೯-೧೦. ಸ್ವಾರೋಚಿಷಮನ್ವಂತರದಲ್ಲಿ ತುಷಿತರೆಂಬವರು ದೇವತೆಗಳು. ಹಸ್ತೀಂದ್ರ, ಸುಕೃತ, ಮೂರ್ತಿ, ಆಪ, ಜ್ಯೋತಿ, ಅಯ ಮತ್ತು ಸ್ಮಯರೆಂಬ ವಸಿಷ್ಠನ ಏಳುಜನ ಮಕ್ಕಳು ಪ್ರಜಾಪತಿಗಳು. ಎರಡನೆಯ ಮನ್ವಂತರವನ್ನು ಹೀಗೆ ಹೇಳಿದುದಾಯಿತು.

**ಔತ್ತಮೀಯಂ ಪ್ರವಕ್ಷ್ಯಾಮಿ ತಥಾ ಮನ್ವಂತರಂ ಶುಭಂ ।**
**ಮನುರ್ನಾಮೋತ್ತಮಿರ್ಯತ್ರ ದಶ ಪುತ್ರಾನಜೀಜನತ್ ॥೧೧॥**

**ಈಷ ಊರ್ಜಶ್ಚ ತರ್ಜಶ್ಚ ಶುಚಿಃ ಶುಕ್ರಸ್ತಥೈವ ಚ ।**
**ಮಧುಶ್ಚ ಮಾಧವಶ್ಚೈವ ನಭಸ್ಯೋಽಥ ನಭಾಸ್ತಥಾ ॥೧೨॥**

**ಸಹಃ ಕನೀಯಾನೇತೇಷಾಮುದಾರಃ ಕೀರ್ತಿವರ್ಧನಃ ।**
**ಭಾವನಾಸ್ತತ್ರ ದೇವಾಃ ಸ್ಯುರೂರ್ಜಾಃ ಸಪ್ತರ್ಷಯಃ ಸ್ಮೃತಾಃ ॥೧೩॥**

**ಕೌಕುರುಂಡಿಶ್ಚ ದಾಲ್ಭ್ಯಶ್ಚ ಶಂಖಃ ಪ್ರವಹಣಃ ಶಿವಃ ।**
**ಸಿತಶ್ಚ ಸಸ್ಮಿತಶ್ಚೈವ ಸಪ್ತೈತೇ ಯೋಗವರ್ಧನಾಃ ॥೧೪॥**

**ಮನ್ವಂತರಂ ಚತುರ್ಥಂ ತು ತಾಮಸಂ ನಾಮ ವಿಶ್ರುತಂ ।**
**ಕವಿಃ ಪೃಥುಸ್ತಥೈವಾಗ್ನಿರಕಪಿಃ ಕಪಿರೇವ ಚ ॥೧೫॥**

**ತಥೈವ ಜಲ್ಪಧೀಮಾನೌ ಮುನಯಃ ಸಪ್ತ ತಾಮಸೇ ।**
**ಸಾಧ್ಯಾ ದೇವಗಣಾ ಯತ್ರ ಕಥಿತಾಸ್ತಾಮಸೇಽಂತರೇ ॥೧೬॥**

---

೧೧. ಶುಭಕರವಾದ ಔತ್ತಮಿಕಮನ್ವಂತರವನ್ನು ಹೇಳುವೆನು. ಇಲ್ಲಿ ಔತ್ತಮಿಯೆಂಬವನು ಮನುವು. ಇವನು ಹತ್ತು ಜನ ಮಕ್ಕಳನ್ನು ಪಡೆದನು.

೧೨-೧೩. ಈಷ, ಊರ್ಜ, ತರ್ಜ, ಶುಚಿ, ಶುಕ್ರ, ಮಧು, ಮಾಧವ, ನಭಸ್ಯ ಮತ್ತು ನಭಸ್ಸು ಇವರೇ ಮಕ್ಕಳು. ಇವರೆಲ್ಲರಿಗೂ ಕಿರಿಯವನಾದ ಸಹನೆಂಬವನು ಉದಾರಿಯೂ ಕೀರ್ತಿಶಾಲಿಯೂ ಆಗಿದ್ದನು. ಆ ಮನ್ವಂತರದಲ್ಲಿ ದೇವತೆಗಳಿಗೆ ಭಾವನರೆಂದೂ, ಸಪ್ತರ್ಷಿಗಳಿಗೆ ಊರ್ಜರೆಂದೂ ಸಂಜ್ಞೆಯಿತ್ತು.

೧೪. ಕೌಕುರುಂಡಿ, ದಾಲ್ಭ್ಯ, ಶಂಖ, ಪ್ರವಹಣ, ಶಿವ, ಸಿತ ಮತ್ತು ಸಸ್ಮಿತರೆಂಬವರು ಸಪ್ತರ್ಷಿಗಳು.

೧೫-೧೬. ನಾಲ್ಕನೆಯ ಮನ್ವಂತರವು ತಾಮಸವೆಂದು ಪ್ರಸಿದ್ಧವಾದುದು. ಇದರಲ್ಲಿ ಕವಿ, ಪೃಥು, ಅಗ್ನಿ, ಅಕಪಿ, ಕಪಿ, ಜಲ್ಪ ಮತ್ತು ಧೀಮ ಎಂಬವರು ಸಪ್ತರ್ಷಿಗಳು. ದೇವಗಣಗಳಿಗೆ ಸಾಧ್ಯರೆಂದು ಹೆಸರು.

ಅಕಲ್ಮಷಸ್ತಥಾ ಧನ್ವೀ ತಪೋಮೂಲಸ್ತಪೋಧನಃ ।
ತಪೋರತಿಸ್ತಪಸ್ಯಶ್ಚ ತಪೋದ್ಯುತಿಪರಂತಪೌ ॥೧೭॥

ತಪೋಭೋಗೀ ತಪೋಯೋಗೀ ಧರ್ಮಾಚಾರರತಾಃ ಸದಾ ।
ತಾಮಸಸ್ಯ ಸುತಾಃ ಸರ್ವೇ ದಶ ವಂಶವಿವರ್ಧನಾಃ ॥೧೮॥

ಪಂಚಮಸ್ಯ ಮನೋಸ್ತದ್ವದ್ರೈವತಸ್ಯಾಂತರಂ ಶೃಣು ।
ದೇವಬಾಹುಃ ಸುಬಾಹುಶ್ಚ ಪರ್ಜನ್ಯಃ ಸೋಮಪೋ ಮುನಿಃ ॥೧೯॥

ಹಿರಣ್ಯರೋಮಾ ಸಪ್ತಾಶ್ವಃ ಸಪ್ತೈತೇ ಋಷಯಃ ಸ್ಮೃತಾಃ ।
ದೇವಾಶ್ಚಾಭೂತರಜಸಸ್ತಥಾ ಪ್ರಕೃತಯಃ ಶುಭಾಃ ॥೨೦॥

ಅರುಣಸ್ತತ್ವದರ್ಶೀ ಚ ವಿತ್ತವಾನ್ ಹವ್ಯಪಃ ಕಪಿಃ ।
ಯುಕ್ತೋ ನಿರುತ್ಸುಕಃ ಸತ್ವೋ ನಿರ್ಮೋಹೋಽಥ ಪ್ರಕಾಶಕಃ ॥೨೧॥

---

೧೭-೧೮. ಅಕಲ್ಮಷ, ಧನ್ವಿ, ತಪೋಮೂಲ, ತಪೋಧನ, ತಪೋರತಿ, ತಪಸ್ಯ, ತಪೋದ್ಯುತಿ, ಪರಂತಪ, ತಪೋಭೋಗಿ ಮತ್ತು ತಪೋಯೋಗಿಗಳೆಂಬ ಹತ್ತುಜನರು ತಾಮಸ ಮನುವಿನ ಮಕ್ಕಳು. ಇವರೆಲ್ಲರೂ ಧರ್ಮಾಚಾರನಿರತರಾಗಿ ಅವನ ವಂಶವನ್ನು ಮುಂದಕ್ಕೆ ಬೆಳೆಸಿದರು.

೧೯-೨೦. ಐದನೆಯವನಾದ ರೈವತನ ಅಂತರವನ್ನು ಕೇಳು. ದೇವಬಾಹು, ಸುಬಾಹು, ಪರ್ಜನ್ಯ, ಸೋಮಪ, ಮುನಿ, ಹಿರಣ್ಯರೋಮ ಮತ್ತು ಸಪ್ತಾಶ್ವರೆಂಬವರು ಸಪ್ತರ್ಷಿಗಳು. ಅಭೂತರಜಸರೆಂಬವರು ದೇವತೆಗಳು. ಅಂತೆಯೇ ಪ್ರಜೆಗಳಿಗೆ ಶುಭರೆಂದು ಪ್ರಖ್ಯಾತಿಯಿತ್ತು.

೨೧. ಅರುಣ, ತತ್ವದರ್ಶಿ, ವಿತ್ತವಂತ, ಹವ್ಯಪ, ಕಪಿ, ಯುಕ್ತ, ನಿರುತ್ಸುಕ, ಸತ್ವ, ನಿರ್ಮೋಹ ಮತ್ತು ಪ್ರಕಾಶಕರೆಂಬ ಹತ್ತುಜನರೂ ರೈವತನ ಮಕ್ಕಳು. ಇವರು ಧರ್ಮನಿರತರು, ಪರಾಕ್ರಮಶಾಲಿಗಳು ಮತ್ತು ಬಲಿಷ್ಠರು.

ಧರ್ಮವೀರ್ಯಬಲೋಪೇತಾ ದಶೈತೇ ರೈವತಾತ್ಮಜಾಃ ।
ಭೃಗುಃ ಸುಧಾಮಾ ವಿರಜಾಃ ಸಹಿಷ್ಣುರ್ನಾದ ಏವ ಚ ॥೨೨॥
ವಿವಸ್ವಾನತಿನಾಮಾ ಚ ಷಷ್ಠೇ ಸಪ್ತರ್ಷಯೋಽಪರೇ ।
ಚಾಕ್ಷುಷಸ್ಯಾಂತರೇ ದೇವಾ ಲೇಖಾ ನಾಮ ಪರಿಶ್ರುತಾಃ ॥೨೩॥
ಋಭವೋಽಥ ಋಭಾದ್ಯಾಶ್ಚ ವಾರಿಮೂಲಾ ದಿವೌಕಸಃ ।
ಚಾಕ್ಷುಷಸ್ಯಾಂತರೇ ಪ್ರೋಕ್ತಾ ದೇವಾನಾಂ ಪಂಚ ಯೋನಯಃ ॥೨೪॥
ರುರುಪ್ರಭೃತಯಸ್ತದ್ವಚ್ಚಾಕ್ಷುಷಸ್ಯ ಸುತಾ ದಶ ।
ಪ್ರೋಕ್ತಾಃ ಸ್ವಾಯಂಭುವೇ ವಂಶೇ ಯೇ ಮಯಾ ಪೂರ್ವಮೇವ ತು ॥
ಅಂತರಂ ಚಾಕ್ಷುಷಂ ಚೈತನ್ಮಯಾ ತೇ ಪರಿಕೀರ್ತಿತಂ ।
ಸಪ್ತಮಂ ತತ್ಪ್ರವಕ್ಷ್ಯಾಮಿ ಯದ್ವೈವಸ್ವತಮುಚ್ಯತೇ ॥೨೬॥
ಅತ್ರಿಶ್ಚೈವ ವಸಿಷ್ಠಶ್ಚ ಕಶ್ಯಪೋ ಗೌತಮಸ್ತಥಾ ।
ಭರದ್ವಾಜಸ್ತಥಾ ಯೋಗೀ ವಿಶ್ವಾಮಿತ್ರಃ ಪ್ರತಾಪವಾನ್ ॥೨೭॥

---

೨೨-೨೪. ಆರನೆಯದಾದ ಚಾಕ್ಷುಷ ಮನ್ವಂತರದಲ್ಲಿ ಭೃಗು, ಸುಧಾಮ, ವಿರಜಸ್, ಸಹಿಷ್ಣು, ನಾದ, ವಿವಸ್ವಂತ ಮತ್ತು ಅತಿನಾಮರೆಂಬವರು ಸಪ್ತರ್ಷಿಗಳು. ದೇವಗಣಗಳಿಗೆ ಲೇಖರೆಂದು ಹೆಸರು. ಪರಿಶ್ರುತರು, ಋಭುಗಳು, ಋಭಾದ್ಯರು, ವಾರಿಮೂಲರು ಮತ್ತು ದಿವೌಕಸರೆಂದು ಚಾಕ್ಷುಷಮನ್ವಂತರದಲ್ಲಿ ದೇವತೆಗಳು ಐದು ಪಂಗಡದವರಾಗಿದ್ದರು.

೨೫. ಚಾಕ್ಷುಷಮನುವಿಗೆ ರುರು ಮುಂತಾದ ಹತ್ತು ಜನ ಮಕ್ಕಳಿದ್ದರು. ಸ್ವಾಯಂಭುವ ಮನುವಿನ ವಂಶವನ್ನು ವರ್ಣಿಸುವಾಗ ಇವರ ಹೆಸರನ್ನು ಹಿಂದೆಯೇ ಹೇಳಿದೆ.

೨೬. ಚಾಕ್ಷುಷ ಮನ್ವಂತರವನ್ನು ಹೇಳಿದೆನು. ಏಳನೆಯದಾದ ವೈವಸ್ವತ ಮನ್ವಂತರವನ್ನು ಹೇಳುವೆನು.

೨೭-೨೮. ಅತ್ರಿ, ವಸಿಷ್ಠ, ಕಶ್ಯಪ, ಗೌತಮ, ಯೋಗನಿರತನಾದ ಭರದ್ವಾಜ, ಪ್ರತಾಪವಂತನಾದ ವಿಶ್ವಾಮಿತ್ರ, ಮತ್ತು ಜಮದಗ್ನಿ.ಈ ಸಪ್ತರ್ಷಿಗಳು

ಜಮದಗ್ನಿಶ್ಚ ಸಪ್ತೈತೇ ಸಾಂಪ್ರತಂ ಯೇ ಮಹರ್ಷಯಃ।
ಕೃತ್ವಾ ಧರ್ಮವ್ಯವಸ್ಥಾನಂ ಪ್ರಯಾಂತಿ ಪರಮಂ ಪದಂ ॥೨೮॥

ಸಾಧ್ಯಾ ವಿಶ್ವೇ ಚ ರುದ್ರಾಶ್ಚ ಮರುತೋ ವಸವೋಽಶ್ವಿನೌ।
ಆದಿತ್ಯಾಶ್ಚ ಸುರಾಸ್ತದ್ವತ್ಸಪ್ತ ದೇವಗಣಾಃ ಸ್ಮೃತಾಃ ॥೨೯॥

ಇಕ್ಷ್ವಾಕುಪ್ರಮುಖಾಶ್ಚಾಸ್ಯ ದಶ ಪುತ್ರಾಃ ಸ್ಮೃತಾ ಭುವಿ।
ಮನ್ವಂತರೇಷು ಸರ್ವೇಷು ಸಪ್ತ ಸಪ್ತ ಮಹರ್ಷಯಃ ॥೩೦॥

ಕೃತ್ವಾ ಧರ್ಮವ್ಯವಸ್ಥಾನಂ ಪ್ರಯಾಂತಿ ಪರಮಂ ಪದಂ।
ಸಾವರ್ಣ್ಯಸ್ಯ ಪ್ರವಕ್ಷ್ಯಾಮಿ ಮನೋರ್ಭಾವಿ ತಥಾಂತರಂ ॥೩೧॥

ಅಶ್ವತ್ಥಾಮಾ ಶರದ್ವಾಂಶ್ಚ ಕೌಶಿಕೋ ಗಾಲವಸ್ತಥಾ।
ಶತಾನಂದಃ ಕಾಶ್ಯಪಶ್ಚ ರಾಮಶ್ಚ ಋಷಯಃ ಸ್ಮೃತಾಃ ॥೩೨॥

ಧೃತಿರ್ವರೀಯಾನ್ಯವಸಃ ಸುವರ್ಣೋ ವೃಷ್ಟಿರೇವ ಚ।
ಚರಿಷ್ಣುರೀಡ್ಯಃ ಸುಮತಿರ್ವಸುಃ ಶುಕ್ರಶ್ಚ ವೀರ್ಯವಾನ್ ॥೩೩॥

---

ಈಗ ಧರ್ಮವ್ಯವಸ್ಥೆಯನ್ನು ಮಾಡುತ್ತಿರುವರು. ಮುಂದೆ ಅವರು ಮೋಕ್ಷವನ್ನು ಪಡೆಯುವರು.

೨೯. ಸಾಧ್ಯರು, ವಿಶ್ವರು, ರುದ್ರರು, ಮರುತರು, ವಸುಗಳು, ಅಶ್ವಿನೀ ದೇವತೆಗಳು ಮತ್ತು ಆದಿತ್ಯರೆಂಬ ದೇವಗಣಗಳು ಏಳು.

೩೦-೩೧. ಈ ವೈವಸ್ವತ ಮನುವಿಗೆ ಇಕ್ಷ್ವಾಕುವೇ ಮೊದಲಾದ ಹತ್ತು ಜನ ಮಕ್ಕಳು. ಎಲ್ಲ ಮನ್ವಂತರಗಳಲ್ಲೂ ಏಳೇಳು ಮಂದಿ ಮಹರ್ಷಿಗಳು ಧರ್ಮ ಸಂಸ್ಥಾಪನೆಯನ್ನು ಮಾಡಿ ಪರಮಪದವನ್ನು ಸೇರುವರು. ಮುಂದೆ ಬರಲಿರುವ ಸಾವರ್ಣಿ ಮನುವಿನ ಅಂತರವನ್ನು ಹೇಳುವೆನು.

೩೨. ಅಶ್ವತ್ಥಾಮ, ಶರದ್ವಂತ, ಕೌಶಿಕ, ಗಾಲವ, ಶತಾನಂದ, ಕಾಶ್ಯಪ ಮತ್ತು ರಾಮ ಈ ಏಳ್ವರೂ ಋಷಿಗಳು.

೩೩-೩೪. ಧೃತಿ, ವರೀಯಾನ್, ಯವಸ, ಸುವರ್ಣ, ವೃಷ್ಟಿ, ಚರಿಷ್ಣು, ಈಡ್ಯ, ಸುಮತಿ, ವಸು, ಶುಕ್ರ ಮತ್ತು ವೀರ್ಯವಂತರೆಂಬವರು ಸಾವರ್ಣಿ ಮನುವಿಗೆ

**ಭವಿಷ್ಯಾ ದಶ ಸಾವರ್ಣೇರ್ಮನೋಃ ಪುತ್ರಾಃ ಪ್ರಕೀರ್ತಿತಾಃ ।**
**ರೌಚ್ಯಾದಯಸ್ತಥಾನ್ಯೇಽಪಿ ಮನವಃ ಸಂಪ್ರಕೀರ್ತಿತಾಃ ॥೩೪॥**

**ರುಚೇಃ ಪ್ರಜಾಪತೇಃ ಪುತ್ರೋ ರೌಚ್ಯೋ ನಾಮ ಭವಿಷ್ಯತಿ ।**
**ಮನುರ್ಭೂತಿಸುತಸ್ತದ್ವದ್ಭೌತ್ಯೋ ನಾಮ ಭವಿಷ್ಯತಿ ॥೩೫॥**

**ತತಸ್ತು ಮೇರುಸಾವರ್ಣಿರ್ಬ್ರಹ್ಮಸೂನುರ್ಮನುಃ ಸ್ಮೃತಃ ।**
**ಋತಶ್ಚ ಋತಧಾಮಾ ಚ ವಿಷ್ವಕ್ಸೇನೋ ಮನುಸ್ತಥಾ ॥೩೬॥**

**ಅತೀತಾನಾಗತಾಶ್ಚೈತೇ ಮನವಃ ಪರಿಕೀರ್ತಿತಾಃ**
**ಷಡೂನಂ ಯುಗಸಾಹಸ್ರಮೇಭಿರ್ವ್ಯಾಪ್ತಂ ನರಾಧಿಪ ॥೩೭॥**

**ಸ್ವೇ ಸ್ವೇಽಂತರೇ ಸರ್ವಮಿದಮುತ್ಪಾದ್ಯ ಸಚರಾಚರಂ ।**
**ಕಲ್ಪಕ್ಷಯೇ ವಿನಿರ್ವೃತ್ತೇ ಮುಚ್ಯಂತೇ ಬ್ರಹ್ಮಣಾ ಸಹ ॥೩೮॥**

---

ಮುಂದೆ ಹುಟ್ಟಲಿರುವ ಹತ್ತು ಜನ ಮಕ್ಕಳು. ಹೀಗೆಯೇ ರೌಚ್ಯ ಮುಂತಾದವರೂ ಮಿಕ್ಕ ಮನುಗಳು.

೩೫. ರುಚಿಪ್ರಜಾಪತಿಯು ಮಗನಾದ ರೌಚ್ಯನೆಂಬವನೂ, ಭೂತಿಯ ಪುತ್ರನಾದ ಭೌತ್ಯನೆಂಬವನೂ ಮನುಗಳಾಗುವರು.

೩೬. ಬಳಿಕ ಬ್ರಹ್ಮಪುತ್ರನಾದ ಮೇರುಸಾವರ್ಣಿಯೂ, ಮುಂದೆ ಋತ, ಋತಧಾಮಾ ಮತ್ತು ವಿಷ್ವಕ್ಸೇನರೂ ಮನುಗಳಾಗುವರು.

೩೭. ಎಲೈ ರಾಜಾ, ಹಿಂದೆ ಇದ್ದ ಮತ್ತು ಮುಂದೆ ಬರಲಿರುವ ಈ ಮನುಗಳನ್ನು ಹೇಳಿದುದಾಯಿತು. ಇವರ ಆಧಿಪತ್ಯದ ಒಟ್ಟು ಕಾಲವು ೯೯೪ ಯುಗಗಳ ಕಾಲವಾಗುವುದು.

೩೮. ಇವರು ತಮ್ಮತಮ್ಮ ಮನ್ವಂತರದಲ್ಲಿ ಮೇಲೆ ಹೇಳಿದ ಚರಾಚರಾತ್ಮಕವಾದ ಈ ಜಗತ್ತೆಲ್ಲವನ್ನೂ ಉತ್ಪಾದನಮಾಡಿ, ಮಹಾಪ್ರಳಯಾವಸಾನದಲ್ಲಿ ಬ್ರಹ್ಮನೊಡನೆ ಮೋಕ್ಷವನ್ನೈದುವರು.

**ಏತೇ ಯುಗಸಹಸ್ರಾಂತೇ ವಿನಶ್ಯಂತಿ ಪುನಃ ಪುನಃ ।**
**ಬ್ರಹ್ಮಾದ್ಯಾ ವಿಷ್ಣುಸಾಯುಜ್ಯಂ ಯಾತಾ ಯಾಸ್ಯಂತಿ ವೈ ದ್ವಿಜಾಃ ॥೩೯॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಮನ್ವಂತರಾನುಕೀರ್ತನಂ ನಾಮ ನವಮೋಽಧ್ಯಾಯಃ**

---

೩೯. ಚತುರ್ಯುಗಸಹಸ್ರಾತ್ಮಕವಾದ ಬ್ರಹ್ಮನ ದಿನದ ಕೊನೆಯಲ್ಲಿ ಪ್ರಳಯವು ನಡೆಯುವುದಷ್ಟೆ. ಆಗ ಇವರು ಮತ್ತೆ ಮತ್ತೆ ಲಯವನ್ನೈದುವರು. ಓ ಬ್ರಾಹ್ಮಣರೇ, ಬ್ರಹ್ಮಾದಿಗಳು ಇದುವರೆಗೆ ಎಷ್ಟೋಜನ ವಿಷ್ಣುಸಾಯುಜ್ಯವನ್ನು ಪಡೆದರು ; ಮುಂದೆಯೂ ಪಡೆಯುವರು.*

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಹದಿನಾಲ್ಕು ಮನ್ವಂತರಗಳ ವಿವರಣೆಯನ್ನು ಹೇಳಿದೆ. ಪ್ರತಿಯೊಂದು ಮನ್ವಂತರದಲ್ಲಿಯೂ ಅಧಿಪತಿಯಾದ ಮನು, ಪ್ರತಿಸರ್ಗಕರ್ತೃಗಳಾದ ಅವನ ಮಕ್ಕಳು, ಧರ್ಮ ವ್ಯವಸ್ಥಾಪಕರಾದ ಸಪ್ತರ್ಷಿಗಳು ಮತ್ತು ದೇವಗಣಗಳ ಪ್ರಭೇದಗಳು ಇವು ಉಕ್ತವಾಗಿವೆ.

---

*ಮೋಕ್ಷಪ್ರಾಪ್ತಿಯವರೆಗೆ ಪುನರ್ಜನ್ಮವುಂಟೆಂದು ಶಾಸ್ತ್ರಗಳಲ್ಲಿ ಹೇಳಿರುವುದರಿಂದ ಮೇಲೆ ಹೇಳಿದ ಮನು ಮೊದಲಾದವರು ಚತುರ್ಮುಖಬ್ರಹ್ಮನೊಡನೆ ಮೋಕ್ಷವನ್ನು ಹೊಂದುವವರೆಗೂ ತಮ್ಮ ಪುಣ್ಯಾನುಭವಕ್ಕಾಗಿ ದಿವ್ಯದೇಹಗಳನ್ನು ಎತ್ತುವರೆಂದು ಅಭಿಪ್ರಾಯ. ಬ್ರಹ್ಮ, ಮನು, ಇಂದ್ರ, ಮುಂತಾದ ಪದಗಳು ಅಧಿಕಾರ ಸ್ಥಾನಗಳನ್ನು ಸೂಚಿಸುವುವು. ಆಯಾ ಪದವಿಯಲ್ಲಿರುವ ವ್ಯಕ್ತಿಗಳು ತಮ್ಮತಮ್ಮ ಕಾರ್ಯವನ್ನು ನೆರವೇರಿಸಿ ತಮ್ಮ ಕಾಲವು ತೀರಿದೊಡನೆ ಲಯವನ್ನು ಹೊಂದುವರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಒಂಬತ್ತನೆಯ ಅಧ್ಯಾಯವು ಮುಗಿದುದು

## ಅಥ ಶ್ರೀಮತ್ಸ್ಯಮಹಾಪುರಾಣೇ ದಶಮೋಽಧ್ಯಾಯಃ

॥ ಋಷಯ ಊಚುಃ ॥

ಬಹುಭಿರ್ಧರಣೀ ಭುಕ್ತಾ ಭೂಪಾಲೈಃ ಶ್ರೂಯತೇ ಪುರಾ ।
ಪಾರ್ಥಿವಾಃ ಪೃಥಿವೀಯೋಗಾತ್ಪೃಥಿವೀ ಕಸ್ಯ ಯೋಗತಃ ॥೧॥
ಕಿಮರ್ಥಂ ಚ ಕೃತಾ ಸಂಜ್ಞಾ ಭೂಮೇಃ ಕಿಂ ಪಾರಿಭಾಷಿಕೀ ।
ಗೌರಿತೀಯಂ ಚ ವಿಖ್ಯಾತಾ ಸೂತ ಕಸ್ಮಾದ್ಬ್ರವೀಹಿ ನಃ ॥ ೨ ॥

॥ ಸೂತ ಉವಾಚ ॥

ವಂಶೇ ಸ್ವಾಯಂಭುವಸ್ಯಾಸೀದಂಗೋ ನಾಮ ಪ್ರಜಾಪತಿಃ ।
ಮೃತ್ಯೋಸ್ತು ದುಹಿತಾ ತೇನ ಪರಿಣೀತಾ ಸುದುರ್ಮುಖಾ ॥ ೩ ॥
ಸುನೀಥಾ ನಾಮ ತಸ್ಯಾಸ್ತು ವೇನೋ ನಾಮ ಸುತಃ ಪುರಾ ।
ಅಧರ್ಮನಿರತಶ್ಚಾಸೀದ್ಬಲವಾನ್ವಸುಧಾಧಿಪಃ ॥ ೪ ॥

---

೧. ಋಷಿಗಳು ಹೇಳಿದರು :—ಹಿಂದೆ ಭೂಮಿಯನ್ನು ಎಷ್ಟೋಜನ ರಾಜರು ಅನುಭವಿಸಿದರೆಂದು ಕೇಳಿದ್ದೇವೆ. ಪೃಥಿವಿಯನ್ನು ಪಾಲಿಸುವವರಾದ್ದರಿಂದ ರಾಜರಿಗೆ ಪಾರ್ಥಿವರೆಂಬ ಹೆಸರು ಬಂತು ಹೀಗೆ ಭೂಮಿಗೆ ಪೃಥಿವೀ ಎಂಬ ಹೆಸರು ಯಾವ ಸಂಬಂಧದಿಂದ ಬಂದಿತು ?

೨. ಓ ಸೂತಾ, ಭೂಮಿಗೆ ಆ ಹೆಸರನ್ನೇಕೆ ಕೊಟ್ಟರು ? ಗಚ್ಛತೀತಿ ಗೌಃ ಎಂಬ ವ್ಯುತ್ಪತ್ತಿಯನ್ನನುಸರಿಸಿ ಹಸುವಿಗೆ ಗೋಶಬ್ದವನ್ನು ವ್ಯವಹರಿಸುವಂತೆ ಈ ಪೃಥಿವೀಶಬ್ದವೂ ಯಾವುದಾದರೂ ವ್ಯುತ್ಪತ್ತಿಯಿಂದ ಹುಟ್ಟಿದೆಯೆ ? ಅದರ ಕಾರಣವೇನು ? ಹೇಳು.

೩-೪. ಸೂತಮಹಾಮುನಿಯು ಹೇಳಿದನು :—ಬಲು ಹಿಂದಿನಕಾಲದಲ್ಲಿ ಸ್ವಾಯಂಭುವಮನುವಿನ ವಂಶದಲ್ಲಿ ಅಂಗನೆಂಬ ಪ್ರಜಾಪತಿಯಿದ್ದನು. ಅವನು ಮೃತ್ಯುವಿನ ಮಗಳಾದ ಸುನೀಥೆಯೆಂಬವಳನ್ನು ಮದುವೆಯಾದನು. ಅವಳು ಬಲು ಸಿಡುಕಿ. ಅವಳಿಗೆ ವೇನನೆಂಬ ಮಗನಿದ್ದನು. ಆ ರಾಜನು ಬಲಿಷ್ಠ. ಆದರೆ ಅಧರ್ಮದಲ್ಲಿ ಆಸಕ್ತನಾಗಿದ್ದನು.

ಲೋಕೇಽಪ್ಯಧರ್ಮಕೃಜ್ಞಾತಃ ಪರಭಾರ್ಯಾಪಹಾರಕಃ ।
ಧರ್ಮಾಚಾರಸ್ಯ ಸಿದ್ಧ್ಯರ್ಥಂ ಜಗತೋಽಥ ಮಹರ್ಷಿಭಿಃ ॥ ೫ ॥

ಅನುನೀತೋಽಪಿ ನ ದದಾವನುಜ್ಞಾಂ ಸ ಯದಾ ತತಃ ।
ಶಾಪೇನ ಮಾರಯಿತ್ವೈನಮರಾಜಕಭಯಾರ್ದಿತಾಃ ॥ ೬ ॥

ಮಮಂಥುರ್ಬ್ರಾಹ್ಮಣಾಸ್ತಸ್ಯ ಬಲಾದ್ದೇಹಮಕಲ್ಮಷಾಃ ।
ತತ್ಕಾಯಾನ್ಮಥ್ಯಮಾನಾತ್ತು ನಿಪೇತುರ್ಮ್ಲೇಚ್ಛಜಾತಯಃ ॥ ೭ ॥

ಶರೀರೇ ಮಾತುರಂಶೇನ ಕೃಷ್ಣಾಂಜನಸಮಪ್ರಭಾಃ ।
ಪಿತುರಂಶಸ್ಯ ಚಾಂಶೇನ ಧಾರ್ಮಿಕೋ ಧರ್ಮಚಾರಿಣಃ ॥ ೮ ॥

ಉತ್ಪನ್ನೋ ದಕ್ಷಿಣಾದ್ಧಸ್ತಾತ್ಸಧನುಃ ಸಶರೋ ಗದೀ ।
ದಿವ್ಯತೇಜೋಮಯವಪುಃ ಸರತ್ನಕವಚಾಂಗದಃ ॥ ೯ ॥

---

೫–೬. ಅವನು ತನ್ನ ದೇಶದಲ್ಲಿಯೇ ಪರಸ್ತ್ರೀಯರನ್ನು ಅಪಹರಿಸುತ್ತಾ ಅಧರ್ಮಕಾರ್ಯಗಳನ್ನು ಮಾಡುತ್ತಿದ್ದನು. ಧರ್ಮದ ನಡೆವಳಿಕೆಯು ಲೋಕದಲ್ಲಿ ನೆಲೆಗೊಳ್ಳುವಂತೆ ವರ್ತಿಸಬೇಕೆಂದು ಮಹರ್ಷಿಗಳು ಅವನನ್ನು ವಿನಯದಿಂದ ಕೇಳಿಕೊಂಡರು. ಆದರೂ ಅವನು ಹಾಗೆ ಪ್ರಜೆಗಳಿಗೆ ಆಜ್ಞೆಯನ್ನು ಮಾಡಲಿಲ್ಲ. ಆಗ ಪಾಪರಹಿತರಾದ ಆ ಬ್ರಾಹ್ಮಣರು ತಮ್ಮ ಶಾಪದಿಂದ ಅವನನ್ನು ಕೊಂದು, ಅನಾಯಕತ್ವವು ನೆಲಸೀತೆಂಬ ಹೆದರಿಕೆಯಿಂದ ಅವನ ದೇಹವನ್ನು ಕಡೆದರು.

೭–೯. ಹಾಗೆ ಕಡೆಯುತ್ತಿರಲು ಆ ಶರೀರದಲ್ಲಿದ್ದ ಅವನ ತಾಯಿಯ ಅಂಶದಿಂದ ಕಪ್ಪು ಕಾಡಿಗೆಯಂತಹ ಮೈ ಬಣ್ಣದ ಮ್ಲೇಚ್ಛಜಾತಿಯ ಜನರು ಹೊರಬಿದ್ದರು. ಧರ್ಮನಿಷ್ಠನಾದ ತಂದೆಯ ಅಂಶದಿಂದಲಾದರೋ ಧಾರ್ಮಿಕನಾದವನೊಬ್ಬನು ಬಲಗೈಯಿಂದ ಹುಟ್ಟಿದನು. ಅವನು ಬಿಲ್ಲು, ಬಾಣ, ಗದೆಗಳನ್ನು ಹಿಡಿದಿದ್ದನು ; ಅವನ ಶರೀರವು ದಿವ್ಯತೇಜೋಮಯವಾಗಿತ್ತು ; ಅವನು ರತ್ನದ ಕವಚವನ್ನೂ ತೋಳುಬಳೆಯನ್ನೂ ತೊಟ್ಟಿದ್ದನು. ಬಹಳ ಹೆಚ್ಚು ಪ್ರಯತ್ನದ ಫಲವಾಗಿ ಅವನು ಹುಟ್ಟಿದ ಕಾರಣ ಅವನು ಪೃಥು ಎಂದರೆ ದೊಡ್ಡವನು ಎನಿಸಿಕೊಂಡನು.

ಪೃಥೋರೇವಾಭವದ್ಯತ್ನಾತ್ತತಃ ಪೃಥುರಜಾಯತ ।
ಸ ವಿಪ್ರೈರಭಿಷಿಕ್ತೋಽಪಿ ತಪಃ ಕೃತ್ವಾ ಸುದಾರುಣಂ ॥೧೦॥

ವಿಷ್ಣೋರ್ವರೇಣ ಸರ್ವಸ್ಯ ಪ್ರಭುತ್ವಮಗಮತ್ಪ್ರನಃ ।
ನಿಸ್ಸ್ವಾಧ್ಯಾಯವಷಟ್ಕಾರಂ ನಿರ್ಧರ್ಮಂ ವೀಕ್ಷ್ಯ ಭೂತಲಂ ॥೧೧॥

ದಗ್ಧುಮೇವೋದ್ಯತಃ ಕೋಪಾಚ್ಛರೇಣಾಮಿತವಿಕ್ರಮಃ ।
ತತೋ ಗೋರೂಪಮಾಸ್ಥಾಯ ಭೂಃ ಪಲಾಯಿತುಮುದ್ಯತಾ ॥೧೨॥

ಪೃಷ್ಠತೋಽನುಗತಸ್ತಸ್ಯಾಃ ಪೃಥುರ್ದೀಪ್ತಶರಾಸನಃ ।
ತತಃ ಸ್ಥಿತ್ವೈಕದೇಶೇ ತು ಕಿಂ ಕರೋಮೀತಿ ಚಾಬ್ರವೀತ್ ॥೧೩॥

ಪೃಥುರಪ್ಯವದದ್ವಾಕ್ಯಮೀಪ್ಸಿತಂ ದೇಹಿ ಸುವ್ರತೇ ।
ಸರ್ವಸ್ಯ ಜಗತಃ ಶೀಘ್ರಂ ಸ್ಥಾವರಸ್ಯ ಚರಸ್ಯ ಚ ॥೧೪॥

ತಥೈವ ಸಾಬ್ರವೀದ್ಭೂಮಿರ್ದುದೋಹ ಸ ನರಾಧಿಪಃ ।
ಸ್ವಕೇ ಪಾಣೌ ಪೃಥುರ್ವತ್ಸಂ ಕೃತ್ವಾ ಸ್ವಾಯಂಭುವಂ ಮನುಂ ॥೧೫॥

---

೧೦-೧೨. ಬ್ರಾಹ್ಮಣರು ಅವನಿಗೆ ಪಟ್ಟಾಭಿಷೇಕ ಮಾಡಿದರು. ಆದರೂ ಆತನು ಅತ್ಯುಗ್ರತಪಸ್ಸನ್ನು ಮಾಡಿದನು; ಮತ್ತು ವಿಷ್ಣುವಿನ ವರದಿಂದ ಮತ್ತೆ ಎಲ್ಲ ಭೂಮಿಯ ಒಡೆತನವನ್ನು ಸಂಪಾದಿಸಿದನು. ವೇದಾಧ್ಯಯನವೂ, ಯಜ್ಞ ಯಾಗಾದಿಕಾರ್ಯಗಳೂ ಮತ್ತು ಧರ್ಮಾಚರಣೆಯೂ ಇಲ್ಲದಿರುವುದನ್ನು ಕಂಡು, ಮಹಾಪ್ರತಾಪಶಾಲಿಯಾದ ಆ ರಾಜನು ಭೂಮಂಡಲವನ್ನು ಸುಡುವುದಕ್ಕೇ ಪ್ರಯತ್ನಿಸಿದನು. ಬಳಿಕ ಭೂಮಿಯು ಹಸುವಿನ ರೂಪವನ್ನು ತಾಳಿ ಓಡತೊಡಗಿದಳು.

೧೩. ಜೆಳಗುತ್ತಿರುವ ಬಿಲ್ಲನ್ನು ಹಿಡಿದಿರುವ ಪೃಥುಚಕ್ರವರ್ತಿಯು ಆ ಭೂಮಿಯನ್ನು ಬೆನ್ನಟ್ಟಿಹೋದನು. ಬಳಿಕ ಅವಳು ಒಂದು ಕಡೆ ನಿಂತು "ನಾನು ಏನು ಮಾಡಬೇಕು" ಎಂದು ಕೇಳಿದಳು.

೧೪. ಎಲೌ ಶೋಭನವ್ರತೇ, "ಈ ಎಲ್ಲ ಜಗತ್ತಿನ ಚರಾಚರಜೀವರಾಶಿಗಳ ಇಷ್ಟಾರ್ಥವನ್ನು ಸಲ್ಲಿಸು" ಎಂದು ಪೃಥುವು ಹೇಳಿದನು.

೧೫. "ಹಾಗೆಯೇ ಆಗಲಿ" ಎಂದು ಆ ಭೂಮಿಯು ಹೇಳಿದಳು. ಪೃಥುರಾಜನು ಸ್ವಾಯಂಭುವಮನುವನ್ನು ಕರುವಾಗಿ ಮಾಡಿ ತನ್ನ ಅಂಗೈಯಲ್ಲಿ ಕರೆದನು.

ತದನ್ನಮುಭವಚ್ಛುದ್ಧಂ ಪ್ರಜಾ ಜೀವಂತಿ ಯೇನ ವೈ ।
ತತಸ್ತು ಋಷಿಭಿರ್ದುಗ್ಧಾ ವತ್ಸಃ ಸೋಮಸ್ತದಾಭವತ್ ॥೧೬॥

ದೋಗ್ಧಾ ಬೃಹಸ್ಪತಿರಭೂತ್ಪಾತ್ರಂ ವೇದಸ್ತಪೋ ರಸಃ ।
ದೇವೈಶ್ಚ ವಸುಧಾ ದುಗ್ಧಾ ದೋಗ್ಧಾ ಮಿತ್ರಸ್ತದಾಭವತ್ ॥೧೭॥

ಇಂದ್ರೋ ವತ್ಸಃ ಸಮಭವತ್ ಕ್ಷೀರಮೂರ್ಜಸ್ಕರಂ ಬಲಂ ।
ದೇವಾನಾಂ ಕಾಂಚನಂ ಪಾತ್ರಂ ಪಿತೄಣಾಂ ರಾಜತಂ ತಥಾ ॥೧೮॥

ಅಂತಕಶ್ಚಾಭವದ್ದೋಗ್ಧಾ ಯಮೋ ವತ್ಸಃ ಸ್ವಧಾ ರಸಃ ।
ಅಲಾಬುಪಾತ್ರಂ ನಾಗಾನಾಂ ತಕ್ಷಕೋ ವತ್ಸಕೋಽಭವತ್ ॥೧೯॥

ವಿಷಂ ಕ್ಷೀರಂ ತತೋ ದೋಗ್ಧಾ ಧೃತರಾಷ್ಟ್ರೋಽಭವತ್ಪುನಃ ।
ಅಸುರೈರಪಿ ದುಗ್ಧೇಯಮಾಯಸೇ ಶಕ್ರಪೀಡಿನೀಂ ॥೨೦॥

---

೧೬. ಅದು ಪ್ರಜೆಗಳಿಗೆ ಜೀವನಾಧಾಯಕವಾದ ಶುದ್ಧವಾದ ಅನ್ನವಾಯಿತು. ಬಳಿಕ ಋಷಿಗಳು ಕರೆದರು. ಆಗ ಚಂದ್ರನೇ ಕರು, ಕರೆದಾತನು ಬೃಹಸ್ಪತಿ, ದೋಹನಪಾತ್ರವು ವೇದ, ತಪಸ್ಸೇ ಕರೆದ ರಸ.

೧೭-೧೮. ದೇವತೆಗಳು ರತ್ನಗರ್ಭೆಯಾದ ಭೂಮಿಯನ್ನು ಕರೆದರು; ಮಿತ್ರನು ಕರೆಯುತಕ್ಕವನು; ಇಂದ್ರನು ಕರುವಾದನು; ಉತ್ಸಾಹಜನಕವಾದ ಬಲವೇ ಹಾಲಾಯಿತು. ದೇವತೆಗಳಿಗೆ ಚಿನ್ನದ ಪಾತ್ರೆಯೂ, ಪಿತೃಗಳಿಗೆ ಬೆಳ್ಳಿಯ ಪಾತ್ರೆಯೂ ಪ್ರಿಯವಾದುವು.

೧೯. ಅಂತಕನು ಕರೆವಾತನೂ, ಯಮನು ಕರುವೂ ಆದರು. ಪಿತೃಗಳನ್ನುದ್ದೇಶಿಸಿ ಕೊಡುವ ಆಹುತಿ ಮೊದಲಾದುವು ಕರೆಯಲ್ಪಟ್ಟ ರಸವಾದವು. ಸರ್ಪಗಳಿಗೆ ಸೋರೆ ಬುರುಡೆಯು ಪಾತ್ರೆಯಾಯಿತು. ತಕ್ಷಕನು ಕರುವಾದನು. ವಿಷವೇ ಕ್ಷೀರವಾಯಿತು. ಕರೆದಾತನಾದರೋ ಧೃತರಾಷ್ಟ್ರನು.

೨೦-೨೧. ರಾಕ್ಷಸರೂ ಕೂಡ ಈ ಭೂಮಿಯನ್ನು ಕಬ್ಬಿಣದ ಪಾತ್ರೆಯಲ್ಲಿ ಕರೆದರು. ಇಂದ್ರಹಿಂಸಕವಾದ ಮಾಯೆಯೇ ಕರೆಯಲ್ಪಟ್ಟ ರಸವು. ಪ್ರಹ್ಲಾದನ

**ಪಾತ್ರೇ ಮಾಯಾಮಭೂದ್ವತ್ಸಃ ಪ್ರಾಹ್ಲಾದಿಸ್ತು ವಿರೋಚನಃ ।**
**ದೋಗ್ಧಾ ದ್ವಿಮೂರ್ಧಾ ತತ್ರಾಸೀನ್ಮಾಯಾ ಯೇನ ಪ್ರವರ್ತಿತಾ ॥೨೦॥**

**ಯಕ್ಷೈಶ್ಚ ವಸುಧಾ ದುಗ್ಧಾ ಪುರಾಂತರ್ಧಾನಮೀಪ್ಸುಭಿಃ ।**
**ಕೃತ್ವಾ ವೈಶ್ರವಣಂ ವತ್ಸಮಾಮಪಾತ್ರೇ ಮಹೀಪತೇ ॥೨೨॥**

**ಪ್ರೇತರಕ್ಷೋಗಣೈರ್ದುಗ್ಧಾ ಧರಾ ರುಧಿರಮುಲ್ಬಣಂ ।**
**ರೌಪ್ಯನಾಭೋಽಭವದ್ದೋಗ್ಧಾ ಸುಮಾಲೀ ವತ್ಸ ಏವ ತು ॥೨೩॥**

**ಗಂಧರ್ವೈಶ್ಚ ಪುರಾ ದುಗ್ಧಾ ವಸುಧಾ ಸಾಪ್ಸರೋಗಣೈಃ ।**
**ವತ್ಸಂ ಚೈತ್ರರಥಂ ಕೃತ್ವಾ ಗಂಧಾನ್ ಪದ್ಮದಲೇ ತಥಾ ॥೨೪॥**

**ದೋಗ್ಧಾ ವರರುಚಿರ್ನಾಮ ನಾಟ್ಯವೇದಸ್ಯ ಪಾರಗಃ ।**
**ಗಿರಿಭಿರ್ವಸುಧಾ ದುಗ್ಧಾ ರತ್ನಾನಿ ವಿವಿಧಾನಿ ಚ ॥೨೫॥**

**ಔಷಧಾನಿ ಚ ದಿವ್ಯಾನಿ ದೋಗ್ಧಾ ಮೇರುರ್ಮಹಾಚಲಃ ।**
**ವತ್ಸೋಽಭೂದ್ಧಿಮವಾಂಸ್ತತ್ರ ಪಾತ್ರಂ ಶೈಲಮಯಂ ಪುನಃ ॥೨೬॥**

---

ಮಗನಾದ ವಿರೋಚನನು ಕರು. ಲೋಕದಲ್ಲಿ ಮಾಯೆಯನ್ನು ಪ್ರವರ್ತನಮಾಡಿದ ದ್ವಿಮೂರ್ಧನೇ ಕರೆದಾತನು.

೨೨. ಎಲೈ ರಾಜಾ, ಯಕ್ಷರೂ ಸಹ ಅಂತರ್ಧಾನಾಕಾಂಕ್ಷಿಗಳಾಗಿ, ಕುಬೇರನನ್ನು ಕರುವಾಗಿ ಮಾಡಿಕೊಂಡು, ಹಸಿಯ ಮಡಕೆಯಲ್ಲಿ ಭೂಮಿಯನ್ನು ಕರೆದರು.

೨೩. ಪ್ರೇತಗಣಗಳೂ, ರಕ್ಷೋಗಣಗಳೂ ರಕ್ತಧಾರೆಯನ್ನು ಅತಿಶಯವಾಗಿ ಕರೆದುವು. ರೌಪ್ಯನಾಭನು ಕರೆದನು ; ಸುಮಾಲಿಯು ಕರುವಾದನು.

೨೪. ಅಪ್ಸರಸ್ತ್ರೀಸಹಿತರಾದ ಗಂಧರ್ವರು ಚೈತ್ರರಥನು ಕರುವೂ, ತಾವರೆ ಯೆಸಳು ಪಾತ್ರೆಯೂ, ನಾಟ್ಯವೇದದಲ್ಲಿ ಪಾರಂಗತನಾದ ವರರುಚಿಯು ಕರೆಯತಕ್ಕವನೂ ಆಗಿರಲು, ಭೂಮಿಯನ್ನು ಕರೆದು, ವಿಧವಿಧವಾದ ಪರಿಮಳದ್ರವ್ಯಗಳನ್ನು ಪಡೆದರು.

೨೫-೨೬. ಹಿಮವಂತನು ಕರುವೂ, ಮೇರು ಮಹಾಪರ್ವತವು ಕರೆಯುವವನೂ, ಬೆಟ್ಟವೇ ಪಾತ್ರೆಯೂ ಆಗಿರಲು, ಗಿರಿಗಳು ವಿಧವಿಧವಾದ ರತ್ನಗಳನ್ನೂ ಮೂಲಿಕೆಗಳನ್ನೂ ಭೂಮಿಯಿಂದ ಪಡೆದವು.

ವೃಕ್ಷೈಶ್ಚ ವಸುಧಾ ದುಗ್ಧಾ ಕ್ಷೀರಂ ಛಿನ್ನಪ್ರರೋಹಣಂ ।
ಪಾಲಾಶಪಾತ್ರೇ ದೋಗ್ಧಾ ತು ಶಾಲಃ ಪುಷ್ಪಲತಾಕುಲಃ ॥೨೭॥

ಪ್ಲಕ್ಷೋಽಭವತ್ತತೋ ವತ್ಸಃ ಸರ್ವವೃಕ್ಷೋ ಧನಾಧಿಪಃ ।
ಏವಮನ್ಯೈಶ್ಚ ವಸುಧಾ ತದಾ ಧುಗ್ಧಾ ಯಥೇಪ್ಸಿತಂ ॥೨೮॥

ಆಯುರ್ಧನಾನಿ ಸೌಖ್ಯಂ ಚ ಪೃಥೌ ರಾಜ್ಯಂ ಪ್ರಶಾಸತಿ ।
ನ ದರಿದ್ರಸ್ತದಾ ಕಶ್ಚಿನ್ನ ರೋಗೀ ನ ಚ ಪಾಪಕೃತ್ ॥೨೯॥

ನೋಪಸರ್ಗಭಯಂ ಕಿಂಚಿತ್ಪೃಥೌ ರಾಜನಿ ಶಾಸತಿ ।
ನಿತ್ಯಂ ಪ್ರಮುದಿತಾ ಲೋಕಾ ದುಃಖಶೋಕವಿವರ್ಜಿತಾಃ ॥೩೦॥

ಧನುಷ್ಕೋಟ್ಯಾ ಚ ಶೈಲೇಂದ್ರಾನುತ್ಸಾರ್ಯ ಸ ಮಹಾಬಲಃ ।
ಭುವಸ್ತಲಂ ಸಮಂ ಚಕ್ರೇ ಲೋಕಾನಾಂ ಹಿತಕಾಮ್ಯಯಾ ॥೩೧॥

---

೨೭. ಮರಗಳು ಕರೆದಾಗ ಮುತ್ತುಗದೆಲೆಯೇ ಪಾತ್ರೆ. ಕಡಿದರೂ ಮತ್ತೆ ಬೆಳೆಯುವ ಗುಣವೇ ಹಾಲು, ಹೂಬಳ್ಳಿಗಳಿಂದ ಕೂಡಿದ ಸಾಲವೃಕ್ಷವು ಕರೆಯಿತು. ಎಲ್ಲ ಮರಗಳಿಗೂ, ಕಾಡುಗಳಿಗೂ ಅಧಿಪತಿಯಾದ ಪಣೆಯಾಲದ ಮರವು ಕರುವಾಯಿತು.

೨೮-೨೯. ಹೀಗೆಯೇ ಮಿಕ್ಕವರೂ ಕರೆಯಲಾಗಿ, ಭೂಮಿಯು ಅವರವರ ಇಷ್ಟಾನುಸಾರವಾಗಿ ಆಯುಸ್ಸು, ಧನ ಮತ್ತು ಸೌಖ್ಯಗಳನ್ನು ಕೊಟ್ಟಿತು. ಪೃಥುವು ರಾಜ್ಯವಾಳುತ್ತಿರಲು ಆತನ ರಾಜ್ಯದಲ್ಲಿ ದರಿದ್ರನಾಗಲಿ, ರೋಗಿಯಾಗಲಿ, ಪಾಪಿಷ್ಠನಾಗಲಿ, ಯಾರೂ ಇರಲಿಲ್ಲ.

೩೦. ಪೃಥುರಾಜನು ಆಳುತ್ತಿರಲು ಕ್ಷಾಮರೋಗಾದಿಭೀತಿಯೇನೂ ಇರಲಿಲ್ಲ. ಜನರು ಯಾವಾಗಲೂ ದುಃಖಶೋಕಗಳಿಲ್ಲದೆ ಸಂತಸದಿಂದಿದ್ದರು.

೩೧. ಮಹಾಬಲನಾದ ಆ ರಾಜನು ಜನಗಳ ಹಿತವನ್ನು ಕೋರಿ, ತನ್ನ ಬಿಲ್ಲಿನ ತುದಿಯಿಂದ ಪರ್ವತಗಳನ್ನು ದೂರಕ್ಕೆ ತಳ್ಳಿ, ಭೂಮಿಯ ಮೇಲ್ಮೈಯನ್ನು ಮಟ್ಟಮಾಡಿದನು.

**ನ ಪುರಗ್ರಾಮದುರ್ಗಾಣಿ ನ ಚಾಯುಧಧರಾ ನರಾಃ ।**
**ಕ್ಷಯಾತಿಶಯದುಃಖಂ ಚ ನಾರ್ಥಶಾಸ್ತ್ರಸ್ಯ ಚಾದರಃ ॥೩೨॥**

**ಧರ್ಮೈಕವಾಸನಾ ಲೋಕಾಃ ಪೃಥೌ ರಾಜ್ಯಂ ಪ್ರಶಾಸತಿ ।**
**ಕಥಿತಾನಿ ಚ ಪಾತ್ರಾಣಿ ಯತ್ಕ್ಷೀರಂ ಚ ಮಯಾ ತವ ॥೩೩॥**

**ಯೇಷಾಂ ಯತ್ರ ರುಚಿಸ್ತತ್ತದ್ದೇಯಂ ತೇಭ್ಯೋ ವಿಜಾನತಾ ।**
**ಯಜ್ಞಶ್ರಾದ್ಧೇಷು ಸರ್ವೇಷು ಮಯಾ ತುಭ್ಯಂ ನಿವೇದಿತಂ ॥೩೪॥**

**ದುಹಿತೃತ್ವಂ ಗತಾ ಯಸ್ಮಾತ್ಪೃಥೋರ್ಧರ್ಮವತೋ ಮಹೀ ।**
**ತದಾನುರಾಗಯೋಗಾಚ್ಚ ಪೃಥಿವೀ ವಿಶ್ರುತಾ ಬುಧೈಃ ॥೩೫॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ವೈನ್ಯಾಭಿವರ್ಣನೋ ನಾಮ ದಶಮೋಽಧ್ಯಾಯಃ**

---

೩೨. ಆ ಪೃಥುಚಕ್ರವರ್ತಿಯ ಆಳ್ವಿಕೆಯಲ್ಲಿ ಪಟ್ಟಣಗಳಿಗೂ, ಗ್ರಾಮಗಳಿಗೂ ಕೋಟೆಗಳಿರಲಿಲ್ಲ. ಜನರು ಆಯುಧಗಳನ್ನು ಧರಿಸುತ್ತಿರಲಿಲ್ಲ. ಎಂದರೆ ಇವುಗಳ ಅವಶ್ಯಕತೆಯೇ ಅವರಿಗೆ ಇರಲಿಲ್ಲವೆಂದು ಅಭಿಪ್ರಾಯ. ಜನರಿಗೆ ಕ್ಷೀಣತೆಯೂ, ದುಃಖವೂ ತಲೆದೋರವು. ಅವರಿಗೆ ಅರ್ಥಶಾಸ್ತ್ರದಲ್ಲಿ ಆದರವೂ, ಧರ್ಮದಲ್ಲಿಯೇ ಸ್ವಾಭಾವಿಕವಾದ ಅಭಿರುಚಿಯೂ ಇದ್ದುವು.

೩೩-೩೪. ಪಾತ್ರೆಗಳೂ ಹಾಲೂ ಯಾವುವು ಎಂಬುದನ್ನೂ, ಯಜ್ಞಗಳು, ಶ್ರಾದ್ಧಗಳು ಮುಂತಾದುವುಗಳಲ್ಲೆಲ್ಲ ಯಾರು ಯಾರಿಗೆ ಯಾವಯಾವದರಲ್ಲಿ ಅಭಿರುಚಿಯು ಇದೆಯೋ ಅವರವರಿಗೆ ಅಂತಹುದನ್ನು ಜ್ಞಾನಿಯಾದವನು ಕೊಡಬೇಕೆಂಬುದನ್ನೂ ನಿನಗೆ ನಾನು ತಿಳಿಸಿರುವೆನು.

೩೫. ಧರ್ಮನಿರತನಾದ ಪೃಥುಮಹಾರಾಜನಿಗೆ ಮಗಳಾದ ಕಾರಣದಿಂದಲೂ, ಅವನ ಪ್ರೀತಿಯ ಸಂಬಂಧದಿಂದಲೂ ಭೂಮಿಗೆ ಪೃಥಿವೀ ಎಂಬ ಹೆಸರನ್ನು ಪ್ರಾಜ್ಞರು ಕೊಟ್ಟರು.

ಅಧ್ಯಾಯ ೧೦

## ಅಧ್ಯಾಯದ ಸಾರಾಂಶ

ಸ್ವಾಯಂಭುವಮನುವಿನ ವಂಶದಲ್ಲಿ ಹುಟ್ಟಿದ ವೇನರಾಜನು ಅಧರ್ಮ ನಿರತನೂ, ಪರಸ್ತ್ರೀಲಂಪಟನೂ ಆಗಿದ್ದನು. ಧರ್ಮಮಾರ್ಗವನ್ನನುವರ್ತಿಸುವಂತೆ ಮಹರ್ಷಿಗಳು ಅವನಿಗೆ ಹೇಳಿದ ಬುದ್ಧಿವಾದವನ್ನವನು ಲಕ್ಷಿಸದಿರಲು, ಅವರು ಅವನನ್ನು ತಮ್ಮ ಶಾಪದಿಂದ ಸಂಹರಿಸಿ, ಬಳಿಕ ಅನಾಯಕತ್ವವನ್ನು ತಪ್ಪಿಸುವುದಕ್ಕಾಗಿ ಅವನ ಶರೀರವನ್ನು ಕಡೆದರು. ಬಲತೋಳಿನಿಂದ ಮಹಾಪ್ರತಾಪಶಾಲಿಯಾದ ಪೃಥುವೆಂಬವನು ಹುಟ್ಟಿದನು. ಪ್ರಾಣಿಗಳಿಗೆ ಬೇಕಾದ ಆಹಾರವಸ್ತುಗಳೂ, ಇತರ ಸಾರವಾದ ಪದಾರ್ಥಗಳೂ ಭೂಮಿಯಲ್ಲಿ ಇಲ್ಲದಿರಲು, ಅವನು ಗೋರೂಪಧರೆಯಾದ ಪೃಥಿವಿಯನ್ನು ಕರೆದನು. ಉಪಭೋಗವಸ್ತುಗಳು ದೊರಕಿದುವು. ಹಾಗೆಯೇ ಉಳಿದ ದೇವತೆಗಳು, ಋಷಿಗಳು, ಯಕ್ಷರು, ನಾಗರು ಮುಂತಾದವರೂ ಸಹ ಕರು, ದೋಹನಪಾತ್ರೆ ಮುಂತಾದುವನ್ನು ಹೊಂದಿಸಿಕೊಂಡು ತಮತಮಗೆ ಬೇಕಾದ ಸಾರವಸ್ತುಗಳನ್ನು ಪಡೆದರು. ಪೃಥುವಿನ ಸಂಬಂಧದಿಂದ ಭೂಮಿಗೆ ಪೃಥಿವೀ ಎಂಬ ಹೆಸರು ಬಂದಿತು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಹತ್ತನೆಯ ಅಧ್ಯಾಯವು ಮುಗಿದುದು



## ಅಥ ಶ್ರೀಮತ್ಸ್ಯಮಹಾಪುರಾಣೇ ಏಕಾದಶೋಽಧ್ಯಾಯಃ

॥ ಋಷಯ ಊಚುಃ ॥

ಆದಿತ್ಯವಂಶಮಖಿಲಂ ವದ ಸೂತ ಯಥಾಕ್ರಮಂ ।
ಸೋಮವಂಶಂ ಚ ತತ್ವಜ್ಞ ಯಥಾವದ್ವಕ್ತುಮರ್ಹಸಿ ॥ ೧ ॥

॥ ಸೂತ ಉವಾಚ ॥

ವಿವಸ್ವಾನ್ ಕಶ್ಯಪಾತ್ಪೂರ್ವಮದಿತ್ಯಾಮಭವತ್ಸುತಃ ।
ತಸ್ಯ ಪತ್ನೀತ್ರಯಂ ತದ್ವತ್ಸಂಜ್ಞಾ ರಾಜ್ಞೀ ಪ್ರಭಾ ತಥಾ ॥ ೨ ॥
ರೈವತಸ್ಯ ಸುತಾ ರಾಜ್ಞೀ ರೇವತಂ ಸುಷುವೇ ಸುತಂ ।
ಪ್ರಭಾ ಪ್ರಭಾತಂ ಸುಷುವೇ ತ್ವಾಷ್ಟ್ರೀ ಸಂಜ್ಞಾ ತಥಾ ಮನುಂ ॥ ೩ ॥
ಯಮಶ್ಚ ಯಮುನಾ ಚೈವ ಯಮಲೌ ತು ಬಭೂವತುಃ ।
ತತಸ್ತೇಜೋಮಯಂ ರೂಪಮಸಹಂತೀ ವಿವಸ್ವತಃ ॥ ೪ ॥
ನಾರೀಮುತ್ಪಾದಯಾಮಾಸ ಸ್ವಶರೀರಾದನಿಂದಿತಾಂ ।
ತ್ವಾಷ್ಟ್ರೀ ಸ್ವರೂಪರೂಪೇಣ ನಾಮ್ನಾ ಛಾಯೇತಿ ಭಾಮಿನೀ ॥ ೫ ॥

---

೧. ಋಷಿಗಳು ಹೇಳಿದರು.—ತತ್ತ್ವಜ್ಞಾನಿಯಾದ ಎಲೈ ಸೂತನೇ, ಸೂರ್ಯ ವಂಶ ಮತ್ತು ಚಂದ್ರವಂಶಗಳೆಲ್ಲವನ್ನೂ ಯಥಾಕ್ರಮವಾಗಿ ವಿವರಿಸಿ ಹೇಳು.

೨. ಸೂತಮುನಿಯು ಹೇಳಿದನು.—ಕಶ್ಯಪನಿಂದ ಅದಿತಿಯಲ್ಲಿ ಮೊಟ್ಟ ಮೊದಲು ಸೂರ್ಯನು ಹುಟ್ಟಿದನು. ಅವನಿಗೆ ಸಂಜ್ಞಾ, ರಾಜ್ಞೀ ಮತ್ತು ಪ್ರಭಾ ಎಂಬ ಮೂವರು ಪತ್ನಿಯರಿದ್ದರು.

೩. ರೈವತನ ಮಗಳಾದ ರಾಜ್ಞಿಯು ರೇವತನನ್ನೂ, ಪ್ರಭೆಯು ಪ್ರಭಾತನನ್ನೂ, ತ್ವಷ್ಟ್ರನ ಮಗಳಾದ ಸಂಜ್ಞೆಯು ಮನುವನ್ನೂ ಹೆತ್ತರು.

೪–೫. ಯಮ, ಯಮುನೆ ಇವರಿಬ್ಬರೂ ಅವಳಿಮಕ್ಕಳಾದರು. ಬಳಿಕ ಸಂಜ್ಞೆಯು ಸೂರ್ಯನ ತೇಜೋಮಯವಾದ ರೂಪವನ್ನು ತಾಳಲಾರದೆ, ತನ್ನ ಶರೀರದಿಂದ ತನ್ನಂತೆಯೇ ಆಕೃತಿಯುಳ್ಳ, ನಿರ್ದುಷ್ಟಳಾದ ಛಾಯೆಯೆಂಬ ನಾರಿಯನ್ನು ಸೃಷ್ಟಿಸಿದಳು.

**ಪುರತಃ ಸಂಸ್ಥಿತಾಂ ದೃಷ್ಟ್ವಾ ಸಂಜ್ಞಾ ತಾಂ ಪ್ರತ್ಯಭಾಷತ ।**
**ಛಾಯೇ ತ್ವಂ ಭಜ ಭರ್ತಾರಮಸ್ಮದೀಯಂ ವರಾನನೇ ॥ ೬ ॥**

**ಅಪತ್ಯಾನಿ ಮದೀಯಾನಿ ಮಾತೃಸ್ನೇಹೇನ ಪಾಲಯ ।**
**ತಥೇತ್ಯುಕ್ತ್ವಾ ತು ಸಾ ದೇವಮಗಮತ್ಕ್ವಾಪಿ ಸುವ್ರತಾ ॥ ೭ ॥**

**ಕಾಮಯಾಮಾಸ ದೇವೋಽಪಿ ಸಂಜ್ಞೇಯಮಿತಿ ಚಾದರಾತ್ ।**
**ಜನಯಾಮಾಸ ತಸ್ಯಾಂ ತು ಪುತ್ರಂ ಚ ಮನುರೂಪಿಣಂ ॥ ೮ ॥**

**ಸವರ್ಣತ್ವಾಚ್ಚ ಸಾವರ್ಣಿರ್ಮನೋರ್ವೈವಸ್ವತಸ್ಯ ಚ ।**
**ತತಃ ಶನಿಂ ಚ ತಪತೀಂ ವಿಷ್ಟಿಂ ಚೈವ ಕ್ರಮೇಣ ತು ॥ ೯ ॥**

**ಛಾಯಾಯಾಂ ಜನಯಾಮಾಸ ಸಂಜ್ಞೇಯಮಿತಿ ಭಾಸ್ಕರಃ ।**
**ಛಾಯಾ ಸ್ವಪುತ್ರೇಽಭ್ಯಧಿಕಂ ಸ್ನೇಹಂ ಚಕ್ರೇ ಮನೌ ತಥಾ ॥೧೦॥**

---

೬–೭. ತನ್ನ ಮುಂದುಗಡೆ ನಿಂತಿರುವ ಆ ಛಾಯೆಯನ್ನು ನೋಡಿ ಸಂಜ್ಞೆಯು "ಮಂಗಳಮುಖಿಯಾದ ಎಲೌ ಛಾಯೇ, ನನ್ನ ಪತಿಯನ್ನೇ ನೀನೂ ಪತಿಯಾಗಿ ಮಾಡಿಕೋ; ನನ್ನ ಮಕ್ಕಳನ್ನು ಮಾತೃಸ್ನೇಹದಿಂದ ಸಾಕು" ಎಂದು ಹೇಳಿದಳು. ಛಾಯೆಯು ಹಾಗೆಯೇ, ಆಗಲೆಂದು ಹೇಳಿ ಸೂರ್ಯದೇವನಲ್ಲಿಗೆ ಹೋದಳು. ವ್ರತಶೀಲೆಯಾದ ಸಂಜ್ಞೆಯು ಎತ್ತಲೋ ಹೊರಟು ಹೋದಳು.

೮. ಪೂಜ್ಯನಾದ ಸೂರ್ಯನು ಛಾಯೆಯನ್ನು ಸಂಜ್ಞೆಯೆಂದು ತಿಳಿದು ಅವಳಲ್ಲಿ ಅನುರಕ್ತನಾದನು. ಅವಳಲ್ಲಿ ಮನುವಿನಂತೆಯೇ ರೂಪವುಳ್ಳ ಮಗನನ್ನೂ ಪಡೆದನು.

೯–೧೦. ಸಂಜ್ಞಾಪುತ್ರನಾದ ಮನುವಿಗೂ, ಛಾಯಾಪುತ್ರನಾದ ವೈವಸ್ವತನಿಗೂ ಬಣ್ಣವೊಂದೇ ಇದ್ದುದರಿಂದ ಇವನಿಗೆ ಎಂದರೆ ಛಾಯಾಪುತ್ರನಿಗೆ ಸಾವರ್ಣಿ ಎಂಬ ಹೆಸರು ಬಂದಿತು. ಬಳಿಕ ಕ್ರಮವಾಗಿ ಛಾಯೆಯಲ್ಲಿ ಶನಿ, ತಪತೀ, ಮತ್ತು ವಿಷ್ಟಿ ಎಂಬ ಮಕ್ಕಳು ಹುಟ್ಟಿದರು. ಸೂರ್ಯನೇನೋ ಅವಳನ್ನು ಸಂಜ್ಞೆಯೆಂದೇ ತಿಳಿದಿದ್ದನು. ಛಾಯೆಯು ಮಾತ್ರ ತನ್ನ ಮಗನಾದ ಮನುವಿನ ಮೇಲೆಯೇ ಬಹಳ ಹೆಚ್ಚಾದ ಪ್ರೀತಿಯನ್ನಿಟ್ಟಳು.

ಪೂರ್ವೋ ಮನುಸ್ತು ಚಕ್ಷಾಮ ನ ಯಮಃ ಕ್ರೋಧಮೂರ್ಛಿತಃ ।
ಸಂತರ್ಜಯಾಮಾಸ ತದಾ ಪಾದಮುದ್ಯಮ್ಯ ದಕ್ಷಿಣಂ ॥೧೧॥

ಶಶಾಪ ಚ ಯಮಂ ಛಾಯಾ ಭಕ್ಷಿತಃ ಕೃಮಿಸಂಯುತಃ ।
ಪಾದೋಽಯಮೇಕೋ ಭವಿತಾ ಪೂಯಶೋಣಿತವಿಸ್ರವಃ ॥೧೨॥

ನಿವೇದಯಾಮಾಸ ಪಿತುರ್ಯಮಃ ಶಾಪಾದಮರ್ಷಿತಃ ।
ನಿಷ್ಕಾರಣಮಹಂ ಶಪ್ತೋ ಮಾತ್ರಾ ದೇವ ಸಕೋಪಯಾ ॥೧೩॥

ಬಾಲಭಾವಾನ್ಮಯಾ ಕಿಂಚಿದುದ್ಯತಶ್ಚರಣಃ ಸಕೃತ್ ।
ಮನುನಾ ವಾರ್ಯಮಾಣಾಪಿ ಮಮ ಶಾಪಮದಾದ್ವಿಭೋ ॥೧೪॥

ಪ್ರಾಯೋ ನ ಮಾತಾ ಸಾಸ್ಮಾಕಂ ಶಾಪೇನಾಹಂ ಯತೋ ಹತಃ ।
ದೇವೋಽಪ್ಯಾಹ ಯಮಂ ಭೂಯಃ ಕಿಂ ಕರೋಮಿ ಮಹಾಮತೇ ॥೧೫॥

---

೧೧-೧೨. ಇದನ್ನು ಹಿರಿಯ ಮನುವು ತಾಳ್ಮೆಯಿಂದ ಸಹಿಸಿದನು. ಯಮನಾದರೋ ಸ್ವೈರಣೆಬಿಟ್ಟನು. ಅವನು ಕೋಪದಿಂದ ಮೈಮರೆತು, ತನ್ನ ಬಲಗಾಲನ್ನೆತ್ತಿ ಛಾಯೆಯನ್ನು ಗದರಿಸಿದನು. ಅವಳು "ನಿನ್ನ ಈ ಕಾಲು ಹುಳಿತು ಕೀವು ರಕ್ತಗಳು ಹರಿಯಲಿ" ಎಂದು ಅವನಿಗೆ ಶಾಪವಿತ್ತಳು.

೧೩. ಯಮನು ಶಾಪದಿಂದ ಸಿಟ್ಟುಗೊಂಡು "ಗುರುವೇ, ತಾಯಿಯು ಕೋಪದಿಂದ ನಿಷ್ಕಾರಣವಾಗಿ ನನಗೆ ಶಾಪಕೊಟ್ಟಿದ್ದಾಳೆ" ಎಂದು ತಂದೆಗೆ ತಿಳಿಸಿದನು.

೧೪. "ಹುಡುಗತನದಿಂದ ನಾನು ಒಂದು ಸಲ ಕಾಲನ್ನು ಮೇಲಕ್ಕೆತ್ತಿದೆನು. ಮನು ಬೇಡವೆಂದು ತಡೆದರೂ ಕೂಡ ಅವಳು ನನಗೆ ಶಾಪವನ್ನು ಕೊಟ್ಟಳು. ಅಪ್ಪಾ, ಬಹುಶಃ ಅವಳು ನಮ್ಮ ತಾಯಿಯಾಗಿರಲಾರಳು. ಏಕೆಂದರೆ ನನ್ನನ್ನು ಶಾಪದಿಂದ ಹಾಳುಮಾಡಿದ್ದಾಳೆ."

೧೫-೧೭. "ಎಲೈ ಪ್ರಾಜ್ಞನೇ, ನಾನೇನು ಮಾಡಲಿ? ಮೂರ್ಖತನದಿಂದ ಯಾರಿಗೆ ತಾನೆ ದುಃಖ ಹುಟ್ಟದು? ಅಥವಾ ಈಶ್ವರನಿಗಾದರೂ ಕರ್ಮರಾಶಿಯ ಫಲವು ತಪ್ಪಿದುದಲ್ಲ. ಹಾಗಿರಲು ಮಿಕ್ಕ ಜಂತುಗಳ ಮಾತೇನು? ಮಗೂ, ನಿನಗೆ

ಮೌಖ್ಯಾರ್ತ್ಕಸ್ಯ ನ ದುಃಖಂ ಸ್ಯಾದಥವಾ ಕರ್ಮಸಂತತಿಃ ।
ಅನಿವಾರ್ಯಾ ಭವಸ್ಯಾಪಿ ಕಾ ಕಥಾಽನ್ಯೇಷು ಜಂತುಷು ॥೧೬॥

ಕೃಕವಾಕುರ್ಮಯಾ ದತ್ತೋ ಯಃ ಕೃಮೀನ್ಭಕ್ಷಯಿಷ್ಯತಿ ।
ಕ್ಲೇದಂ ಚ ರುಧಿರಂ ಚೈವ ವತ್ಸಾಯಮುಪನೇಷ್ಯತಿ ॥೧೭॥

ಏವಮುಕ್ತಸ್ತಪಸ್ತೇಪೇ ಯಮಸ್ತೀವ್ರಂ ಮಹಾಯಶಾಃ ।
ಗೋಕರ್ಣತೀರ್ಥೇ ವೈರಾಗ್ಯಾತ್ಫಲಪತ್ರಾನಿಲಾಶನಃ ॥೧೮॥

ಆರಾಧಯನ್ಮಹಾದೇವಂ ಯಾವದ್ವರ್ಷಾಯುತಾಯುತಂ ।
ವರಂ ಪ್ರಾದಾನ್ಮಹಾದೇವಃ ಸಂತುಷ್ಟಃ ಶೂಲಭೃತ್ತದಾ ॥೧೯॥

ವವ್ರೇ ಸ ಲೋಕಪಾಲತ್ವಂ ಪಿತೃಲೋಕೇ ನೃಪಾಲಯಂ ।
ಧರ್ಮಾಧರ್ಮಾತ್ಮಕಸ್ಯಾಪಿ ಜಗತಸ್ತು ಪರೀಕ್ಷಣಂ ॥೨೦॥

ಏವಂ ಸ ಲೋಕಪಾಲತ್ವಮಗಮಚ್ಛೂಲಪಾಣಿನಃ ।
ಪಿತ್ರೂಣಾಂ ಚಾಧಿಪತ್ಯಂ ಚ ಧರ್ಮಾಧರ್ಮಸ್ಯ ಚಾನಘ ॥೨೧॥

---

ನಾನೊಂದು ಕೋಳಿಯನ್ನು ಕೊಡುವೆನು, ಅದು ಹುಳುಗಳನ್ನು ತಿಂದು ಗಾಯದಿಂದ ಸುರಿಯುವ ಕೀವುರಕ್ತಗಳನ್ನು ಕಳೆಯುವುದು'' ಎಂದು ಸೂರ್ಯದೇವನು ಯಮನಿಗೆ ಹೇಳಿದನು.

೧೮-೧೯. ತಂದೆಯು ಇಂತೆನಲು, ಮಹಾಯಶಸ್ವಿಯಾದ ಯಮನು ಬೇಗನೆ ಗೋಕರ್ಣತೀರ್ಥಕ್ಕೆ ಹೋಗಿ, ವೈರಾಗ್ಯದಿಂದ ಹಣ್ಣು, ಎಲೆ, ಗಾಳಿಗಳನ್ನು ಸೇವಿಸುತ್ತ, ಲಕ್ಷಾಂತರ ವರ್ಷಗಳಕಾಲ ಮಹಾದೇವನನ್ನು ಆರಾಧಿಸುತ್ತ, ತೀವ್ರವಾದ ತಪಸ್ಸನ್ನು ಮಾಡಿದನು. ಆಗ ಶೂಲಪಾಣಿಯಾದ ಪರಮೇಶ್ವರನು ಸಂತುಷ್ಟನಾಗಿ ವರವನ್ನು ಕರುಣಿಸಿದನು.

೨೦. ಯಮನು ಲೋಕಪಾಲತ್ವವನ್ನೂ, ಪಿತೃಲೋಕದ ಅಧಿಪತಿಸ್ಥಾನವನ್ನೂ, ಜಗತ್ತಿನ ಧರ್ಮಾಧರ್ಮಗಳ ನಿರ್ಣಾಯಕತ್ವವನ್ನೂ ಬೇಡಿದನು.

೨೧. ನಿಷ್ಕಲ್ಮಷನಾದ ಓ ರಾಜಾ, ಹೀಗೆ ಅವನು ಈಶ್ವರನಿಂದ ಲೋಕಪಾಲತ್ವವನ್ನೂ, ಪಿತೃಗಳ ಆಧಿಪತ್ಯವನ್ನೂ, ಧರ್ಮಾಧರ್ಮಗಳನ್ನು ನಿರ್ಣಯಿಸುವ ಅಧಿಕಾರವನ್ನೂ ಸಂಪಾದಿಸಿದನು.

**ವಿವಸ್ವಾನಥ ತಜ್ಜ್ಞಾತ್ವಾ ಸಂಜ್ಞಾಯಾಃ ಕರ್ಮಚೇಷ್ಟಿತಂ ।**
**ತ್ವಷ್ಟುಃ ಸಮೀಪಮಗಮದಾಚಚಕ್ಷೇ ಚ ರೋಷವಾನ್ ॥೨೨॥**

**ತಮುವಾಚ ತತಸ್ತ್ವಷ್ಟಾ ಸಾಂತ್ವಪೂರ್ವಂ ದ್ವಿಜೋತ್ತಮಾಃ ।**
**ತವಾಸಹಂತೀ ಭಗವನ್ಮಹಸ್ತೀವ್ರಂ ತಮೋನುದಂ ॥೨೩॥**

**ವಡವಾರೂಪಮಾಸ್ಥಾಯ ಮತ್ಸಕಾಶಮಿಹಾಗತಾ ।**
**ನಿವಾರಿತಾ ಮಯಾ ಸಾ ತು ತ್ವಯಾ ಚೈವ ದಿವಾಕರ ॥೨೪॥**

**ಯಸ್ಮಾದವಿಜ್ಞಾನತಯಾ ಮತ್ಸಕಾಶಮಿಹಾಗತಾ ।**
**ತಸ್ಮಾನ್ಮದೀಯಂ ಭವನಂ ಪ್ರವೇಷ್ಟುಂ ನ ತ್ವಮರ್ಹಸಿ ॥೨೫॥**

**ಏವಮುಕ್ತಾ ಜಗಾಮಾಥ ಮರುದೇಶಮನಿಂದಿತಾ ।**
**ವಡವಾರೂಪಮಾಸ್ಥಾಯ ಭೂತಲೇ ಸಂಪ್ರತಿಷ್ಠಿತಾ ॥೨೬॥**

**ತಸ್ಮಾತ್ಪ್ರಸಾದಂ ಕುರು ಮೇ ಯದ್ಯನುಗ್ರಹಭಾಗಹಂ ।**
**ಅಪನೇಷ್ಯಾಮಿ ತೇ ತೇಜೋ ಯಂತ್ರೇ ಕೃತ್ವಾ ದಿವಾಕರ ॥೨೭॥**

---

೨೨. ಬಳಿಕ ಸೂರ್ಯನು ಸಂಜ್ಞೆಯ ಆ ಕೆಲಸವನ್ನು ತಿಳಿದು, ರೋಷದಿಂದ ತ್ವಷ್ಟೃನ ಬಳಿಗೆ ಹೋಗಿ ಎಲ್ಲವನ್ನೂ ಹೇಳಿದನು.

೨೩-೨೫. ಎಲೈ ಬ್ರಾಹ್ಮಣರೇ, ಬಳಿಕ ತ್ವಷ್ಟೃನು ಸಮಾಧಾನದಿಂದ ಸೂರ್ಯನಿಗಿಂತೆಂದನು. "ಓ ಭಗವಂತಾ, ಅಂಧಕಾರ ನಿವಾರಕವಾದ ನಿನ್ನ ಮಹಾ ತೇಜಸ್ಸನ್ನು ತಡೆಯಲಾರದೆ ಅವಳು ಹೆಣ್ಣುಕುದುರೆಯ ರೂಪವನ್ನು ತಾಳಿ, ನನ್ನ ಬಳಿಗೆ ಬಂದಳು. ಎಲೈ ಸೂರ್ಯನೇ, ನಿನಗೆ ತಿಳಿಯದಂತೆ ಅವಳು ನನ್ನ ಬಳಿಗೆ ಬಂದಕಾರಣ "ನನ್ನ ಮನೆಯನ್ನು ಪ್ರವೇಶಿಸಬೇಡ" ಎಂದು ನಾನು ಅವಳನ್ನು ಅಡ್ಡಿಪಡಿಸಿದೆನು.

೨೬. ಬಳಿಕ ಸಂಜ್ಞೆಯು ಅದೇ ಹೆಣ್ಣುಕುದುರೆಯ ರೂಪದಿಂದ ಭೂಲೋಕಕ್ಕೆ ಹೋಗಿ ಮರುದೇಶದಲ್ಲಿ ನೆಲೆಸಿದಳು.

೨೭. ಎಲೈ ದಿವಾಕರನೇ, ಆದುದರಿಂದ ನಾನು ಅನುಗ್ರಹಕ್ಕೆ ಅರ್ಹನೆಂದು ತೋರಿದರೆ ನನಗೆ ಪ್ರಸನ್ನನಾಗು. ಯಂತ್ರಕ್ಕೆ ಕೊಟ್ಟು ನಿನ್ನ ತೇಜಸ್ಸನ್ನು ತಗ್ಗಿಸುವೆನು. ಓ ಪ್ರಭೂ, ನಿನ್ನ ರೂಪವನ್ನು ಲೋಕಾನಂದಕರವಾಗಿ ಮಾಡುವೆನು."

ರೂಪಂ ತವ ಕರಿಷ್ಯಾಮಿ ಲೋಕಾನಂದಕರಂ ಪ್ರಭೋ ।
ತಥೇತ್ಯುಕ್ತಃ ಸ ರವಿಣಾ ಭ್ರಮೌ ಕೃತ್ವಾ ದಿವಾಕರಂ ॥೨೮॥

ಪೃಥಕ್ಚಕಾರ ತತ್ತೇಜಶ್ಚಕ್ರಂ ವಿಷ್ಣೋರಕಲ್ಪಯತ್ ।
ತ್ರಿಶೂಲಂ ಚಾಪಿ ರುದ್ರಸ್ಯ ವಜ್ರಮಿಂದ್ರಸ್ಯ ಚಾಧಿಕಂ ॥೨೯॥

ದೈತ್ಯದಾನವಸಂಹರ್ತುಃ ಸಹಸ್ರಕಿರಣಾತ್ಮಕಂ ।
ರೂಪಂ ಚಾಪ್ರತಿಮಂ ಚಕ್ರೇ ತ್ವಷ್ಟಾ ಪದ್ಭ್ಯಾಮೃತೇ ಮಹತ್ ॥೩೦॥

ನ ಶಶಾಕಾಥ ತದ್ದ್ರಷ್ಟುಂ ಪಾದರೂಪಂ ರವೇಃ ಪುನಃ ।
ಅರ್ಚಾಸ್ವಪಿ ತತಃ ಪಾದೌ ನ ಕಶ್ಚಿತ್ಕಾರಯೇತ್ಕ್ವಚಿತ್ ॥೩೧॥

ಯಃ ಕರೋತಿ ಸ ಪಾಪಿಷ್ಠಾಂ ಗತಿಮಾಪ್ನೋತಿ ನಿಂದಿತಾಂ ।
ಕುಷ್ಠರೋಗಮವಾಪ್ನೋತಿ ಲೋಕೇಽಸ್ಮಿನ್ ದುಃಖಸಂಯುತಃ ॥೩೨॥

ತಸ್ಮಾಚ್ಚ ಧರ್ಮಕಾಮಾರ್ಥೀ ಚಿತ್ರೇಷ್ವಾಯತನೇಷು ಚ ।
ನ ಕ್ವಚಿತ್ಕಾರಯೇತ್ಪಾದೌ ದೇವದೇವಸ್ಯ ಧೀಮತಃ ॥೩೩॥

---

೨೮-೩೦. ಸೂರ್ಯನು ಹಾಗೆಯೇ ಆಗಲಿ ಎನಲು, ತ್ವಷ್ಟ್ರನು ಅವನನ್ನು ತಿರುಗುವ ಚಕ್ರಕ್ಕೆ ಕೊಟ್ಟು ಅವನ ತೇಜಸ್ಸನ್ನು ಬೇರ್ಪಡಿಸಿದನು. ಅದರಿಂದ ವಿಷ್ಣುವಿಗೆ ಚಕ್ರವನ್ನೂ, ರುದ್ರನಿಗೆ ತ್ರಿಶೂಲವನ್ನೂ, ದೈತ್ಯದಾನವ ಸಂಹಾರಕನಾದ ಇಂದ್ರನಿಗೆ ಸೂರ್ಯಕಿರಣಾತ್ಮಕವಾದ ವಜ್ರಾಯುಧವನ್ನೂ ಮಾಡಿಕೊಟ್ಟನು. ಸೂರ್ಯನ ರೂಪವನ್ನು ಅನುಪಮವಾಗಿ ಮಾಡಿದನು ; ಆದರೆ ಅವನಿಗೆ ಕಾಲುಗಳನ್ನು ಮಾತ್ರ ಇಡಲಿಲ್ಲ.

೩೧. ಏಕೆಂದರೆ ಸೂರ್ಯನ ಕಾಲುಗಳ ರೂಪವನ್ನು ನೋಡುವುದಕ್ಕೆ ಅವನಿಗೆ ಸಾಧ್ಯವಾಗಲಿಲ್ಲ. ಆದುದರಿಂದ ವಿಗ್ರಹಗಳನ್ನು ಮಾಡುವಾಗಲೂ ಸಹ ಸೂರ್ಯನಿಗೆ ಯಾರೂ ಎಂದಿಗೂ ಪಾದಗಳನ್ನು ಕಲ್ಪಿಸಬಾರದು.

೩೨. ಹಾಗೆ ಕಲ್ಪಿಸುವವನು ಪಾಪಮಯವಾದ ಹೀನಗತಿಯನ್ನೈದುವನು. ಈ ಲೋಕದಲ್ಲಿ ದುಃಖಿಯಾಗಿ ಕುಷ್ಠರೋಗಕ್ಕೆ ತುತ್ತಾಗುವನು.

೩೩. ಆದುದರಿಂದ ಧರ್ಮಕಾರ್ಯಗಳನ್ನು ಬಯಸುವವನು ಚಿತ್ರಗಳಲ್ಲಾಗಲಿ ದೇವತಾಮಂದಿರಗಳಲ್ಲಾಗಲಿ ದೇವದೇವನೂ ವೇದಸ್ವರೂಪನೂ ಆದ ಸೂರ್ಯನಿಗೆ ಪಾದಗಳನ್ನೆಂದಿಗೂ ನಿರ್ಮಿಸಬಾರದು.

**ತತಃ ಸ ಭಗವಾನ್ ಗತ್ವಾ ಭೂರ್ಲೋಕಮಮರಾಧಿಪಃ ।**
**ಕಾಮಯಾಮಾಸ ಕಾಮಾರ್ತೋ ಮುಖ ಏವ ದಿವಾಕರಃ ॥೩೪॥**

**ಅಶ್ವರೂಪೇಣ ಮಹತಾ ತೇಜಸಾ ಚ ಸಮಾವೃತಃ ।**
**ಸಂಜ್ಞಾ ಚ ಮನಸಾ ಕ್ಷೋಭಮಗಮದ್ಭಯವಿಹ್ವಲಾ ॥೩೫॥**

**ನಾಸಾಪುಟಾಭ್ಯಾಮುತ್ಸೃಷ್ಟಂ ಪರೋಽಯಮಿತಿ ಶಂಕಯಾ ।**
**ತದ್ರೇತಸಸ್ತತೋ ಜಾತಾವಾಶ್ವಿನಾವಿತಿ ನಿಶ್ಚಿತಂ ॥೩೬॥**

**ದಸ್ರೌ ಸುತತ್ವಾತ್ಸಂಜಾತೌ ನಾಸತ್ಯೌ ನಾಸಿಕಾಗ್ರತಃ ।**
**ಜ್ಞಾತ್ವಾ ಚಿರಾಚ್ಚ ತಂ ದೇವಂ ಸಂತೋಷಮಗಮತ್ಪರಂ ।**
**ವಿಮಾನೇನಾಗಮತ್ಸ್ವರ್ಗಂ ಪತ್ಯಾ ಸಹ ಮುದಾನ್ವಿತಾ ॥೩೭॥**

**ಸಾವರ್ಣೋಽಪಿ ಮನುರ್ಮೇರಾವದ್ಯಾಪ್ಯಾಸ್ತೇ ತಪೋಧನಃ ।**
**ಶನಿಸ್ತಪೋಬಲಾದಾಪ ಗ್ರಹಸಾಮ್ಯಂ ತತಃ ಪುನಃ ॥೩೮॥**

---

೩೪–೩೫. ಬಳಿಕ ಅಮರಾಧಿಪನಾದ ಸೂರ್ಯಭಗವಂತನು ಭೂಲೋಕಕ್ಕೆ ಹೋಗಿ, ದೊಡ್ಡ ಕುದುರೆಯ ರೂಪವನ್ನು ತಾಳಿ, ಮಹಾತೇಜಸ್ಸಿನಿಂದ ಪ್ರಕಾಶಿಸುತ್ತ, ಕಾಮಾರ್ತನಾಗಿ ಸಂಜ್ಞೆಯ ಮುಖದಲ್ಲೇ ಕಾಮಿಸಿದನು. ಸಂಜ್ಞೆಯೂ ಕೂಡ ಭಯದಿಂದ ಗಾಬರಿಗೊಂಡಳು. ಅವಳ ಮನಸ್ಸು ವಿಕಾರವನ್ನು ಹೊಂದಿತು.

೩೬. ಅವನು ಪರಪುರುಷನೆಂಬ ಶಂಕೆಯಿಂದ ಅವನ ರೇತಸ್ಸನ್ನು ತನ್ನ ಮೂಗಿನ ಹೊಳ್ಳೆಗಳಿಂದ ಹೊರಕ್ಕೆ ಬಿಟ್ಟಳು. ಅದರಿಂದ ಅಶ್ವಿನೀದೇವತೆಗಳಿಬ್ಬರೂ ಜನಿಸಿದರು. ಅವರ ಮಕ್ಕಳಾದುದರಿಂದ ದಸ್ರರೆಂದೂ, ನಾಸಿಕಾಗ್ರದಿಂದ ಎಂದರೆ ತುದಿಮೂಗಿನಿಂದ ಹುಟ್ಟಿದುದರಿಂದ ನಾಸತ್ಯರೆಂದೂ ಅವರಿಗೆ ಹೆಸರಾಯಿತು.

೩೭. ಬಹಳ ಕಾಲಾನಂತರ ತನ್ನನ್ನು ಕಾಮಿಸಿದವನು ತನ್ನ ಪತಿದೇವನೆಂದೇ ತಿಳಿದು ಅವಳು ಬಹು ಸಂತುಷ್ಟಳಾದಳು. ಪತಿಯೊಡನೆ ವಿಮಾನದಲ್ಲಿ ಕುಳಿತು ಪ್ರೀತಿಯಿಂದ ಸ್ವರ್ಗಕ್ಕೆ ಹೋದಳು.

೩೮. ಸಾವರ್ಣಮನುವು ಈಗಲೂ ಸಹ ಮೇರುಪರ್ವತದಲ್ಲಿ ಮಹಾತಪಸ್ವಿಯಾಗಿರುವನು. ಶನಿಯು ತನ್ನ ತಪಸ್ಸಿನ ಮಹಿಮೆಯಿಂದ ಪುನಃ ಉಳಿದ ಗ್ರಹಗಳಿಗೆ ಸಮಾನನೆನಿಸಿದನು.

**ಯಮುನಾ ತಪತೀ ಚೈವ ಪುನರ್ನದ್ಯೌ ಬಭೂವತುಃ ।**
**ವಿಷ್ಟಿರ್ಘೋರಾತ್ಮಿಕಾ ತದ್ವತ್ಕಾಲತ್ವೇನ ವ್ಯವಸ್ಥಿತಾ ॥೩೯॥**

**ಮನೋರ್ವೈವಸ್ವತಸ್ಯಾಸನ್ ದಶ ಪುತ್ರಾ ಮಹಾಬಲಾಃ ।**
**ಇಲಸ್ತು ಪ್ರಥಮಸ್ತೇಷಾಂ ಪುತ್ರೇಷ್ಟ್ಯಾಂ ಸಮಜಾಯತ ॥೪೦॥**

**ಇಕ್ಷ್ವಾಕುಃ ಕುಶನಾಭಶ್ಚ ಅರಿಷ್ಟೋ ಧೃಷ್ಟ ಏವ ಚ ।**
**ನರಿಷ್ಯಂತಃ ಕರೂಷಶ್ಚ ಶರ್ಯಾತಿಶ್ಚ ಮಹಾಬಲಾಃ ।**
**ಪೃಷಧ್ರಶ್ಚಾಥ ನಾಭಾಗಃ ಸರ್ವೇ ತೇ ದಿವ್ಯಮಾನುಷಾಃ ॥೪೧॥**

**ಅಭಿಷಿಚ್ಯ ಮನುಃ ಪುತ್ರಮಿಲಂ ಜ್ಯೇಷ್ಠಂ ಸ ಧಾರ್ಮಿಕಃ ।**
**ಜಗಾಮ ತಪಸೇ ಭೂಯಃ ಸ ಮಹೇಂದ್ರವನಾಲಯಂ ॥೪೨॥**

**ಅಥ ದಿಗ್ಜಯಸಿದ್ಧ್ಯರ್ಥಮಿಲಃ ಪ್ರಾಯಾನ್ಮಹೀಮಿಮಾಂ ।**
**ಭ್ರಮನ್ ದ್ವೀಪಾನಿ ಸರ್ವಾಣಿ ಕ್ಷ್ಮಾಭೃತಃ ಸಂಪ್ರಧರ್ಷಯನ್ ॥೪೩॥**

---

೩೯. ಯಮುನಾ ಮತ್ತು ತಪತಿಯರಿಬ್ಬರೂ ನದಿಗಳಾದರು. ಘೋರ ಸ್ವಭಾವದವಳಾದ ವಿಷ್ಟಿಯೂ ಸಹ ಅದೇ ಹೆಸರಿನಿಂದ ಶುಭಕರ್ಮಗಳಿಗೆ ಅನರ್ಹವಾದ ಕಾಲರೂಪವಾದಳು.

೪೦. ವೈವಸ್ವತ ಮನುವಿಗೆ ಮಹಾಬಲಿಷ್ಠರಾದ ಹತ್ತು ಜನ ಮಕ್ಕಳಿದ್ದರು. ಅವರಲ್ಲಿ ಮೊದಲನೆಯವನಾದ ಇಲನು ಪುತ್ರಕಾಮೇಷ್ಟಿಯಿಂದ ಜನಿಸಿದನು.

೪೧. ಇಕ್ಷ್ವಾಕು, ಕುಶನಾಭ, ಅರಿಷ್ಟ, ಧೃಷ್ಟ, ನರಿಷ್ಯಂತ, ಕರೂಷ, ಮಹಾಬಲನೆನಿಸಿದ ಶರ್ಯಾತಿ, ಪೃಷಧ್ರ ಮತ್ತು ನಾಭಾಗ ಇವರೆಲ್ಲರೂ ದೇವತಾ ಮಹಿಮೆಯನ್ನು ಪಡೆದ ಮನುಷ್ಯರು.

೪೨. ಧರ್ಮನಿರತನಾದ ಆ ಮನು ಜ್ಯೇಷ್ಠಪುತ್ರನಾದ ಇಲನಿಗೆ ಪಟ್ಟವನ್ನು ಕಟ್ಟಿ, ತಪಸ್ಸಿಗೋಸ್ಕರ ಮಹೇಂದ್ರವನಕ್ಕೆ ತೆರಳಿದನು.

೪೩. ಬಳಿಕ ಇಲನು ಎಲ್ಲ ದ್ವೀಪಗಳಲ್ಲೂ ಅಲೆಯುತ್ತ, ಬೆಟ್ಟಗಳನ್ನು ಮರ್ದನಮಾಡುತ್ತ ಈ ಭೂಮಿಯಲ್ಲಿ ದಿಗ್ವಿಜಯಕ್ಕಾಗಿ ಹೊರಟನು.

**ಜಗಾಮೋಪವನಂ ಶಂಭೋರಶ್ವಾಕೃಷ್ಟಃ ಪ್ರತಾಪವಾನ್ ।**
**ಕಲ್ಪದ್ರುಮಲತಾಕೀರ್ಣಂ ನಾಮ್ನಾ ಶರವಣಂ ಮಹತ್ ॥೪೪॥**

**ರಮತೇ ಯತ್ರ ದೇವೇಶಃ ಶಂಭುಃ ಸೋಮಾರ್ಧಶೇಖರಃ ।**
**ಉಮಯಾ ಸಮಯಸ್ತತ್ರ ಪುರಾ ಶರವಣೇ ಕೃತಃ ॥೪೫॥**

**ಪುನ್ನಾಮ ಸತ್ವಂ ಯತ್ಕಿಂಚಿದಾಗಮಿಷ್ಯತಿ ತೇ ವನೇ ।**
**ಸ್ತ್ರೀತ್ವಮೇಷ್ಯತಿ ತತ್ಸರ್ವಂ ದಶಯೋಜನಮಂಡಲೇ ॥೪೬॥**

**ಅಜ್ಞಾತಸಮಯೋ ರಾಜಾ ಇಲಃ ಶರವಣೇ ಪುರಾ ।**
**ಸ್ತ್ರೀತ್ವಮಾಪ ವಿಶನ್ನೇವ ವಡವಾತ್ವಂ ಹಯಸ್ತದಾ ॥೪೭॥**

**ಪುರುಷತ್ವಂ ಹೃತಂ ಸರ್ವಂ ಸ್ತ್ರೀರೂಪೇ ವಿಸ್ಮಿತೋ ನೃಪಃ ।**
**ಇಲೇತಿ ಸಾಽಭವನ್ನಾರೀ ಪೀನೋನ್ನತ ಘನಸ್ತನೀ ॥೪೮॥**

**ಉನ್ನತಶ್ರೋಣಿಜಘನಾ ಪದ್ಮಪತ್ರಾಯತೇಕ್ಷಣಾ ।**
**ಪೂರ್ಣೇಂದುವದನಾ ತನ್ವೀ ವಿಲಾಸೋಲ್ಲಾಸಿತೇಕ್ಷಣಾ ॥೪೯॥**

---

೪೪-೪೬. ಕುದುರೆಯು ಸ್ವಾಧೀನತಪ್ಪಿ ಹೊತ್ತುಕೊಂಡು ಹೋಗಲು, ಪ್ರತಾಪವಂತನಾದ ಆ ರಾಜನು ಕಲ್ಪವೃಕ್ಷಗಳಿಂದಲೂ ಲತೆಗಳಿಂದಲೂ ಕೂಡಿ, ಶರವಣವೆಂದು ಪ್ರಸಿದ್ಧವಾದ ಈಶ್ವರನ ಉಪವನವನ್ನು ಸೇರಿದನು. ಅಲ್ಲಿ ಸೋಮ ಶೇಖರನಾದ ಮಹಾದೇವನು ಪಾರ್ವತಿಯೊಡನೆ ವಿಹರಿಸುತ್ತಿದ್ದನು. "ಹತ್ತು ಯೋಜನ ವಿಸ್ತಾರದೊಳಗೆ ಈ ವನವನ್ನು ಯಾವ ಪುರುಷಪ್ರಾಣಿಯು ಪ್ರವೇಶಿಸಿದರೂ ಅದು ಸ್ತ್ರೀ ರೂಪವನ್ನು ಪಡೆಯಲಿ" ಎಂಬುದು ಅವನ ಕಟ್ಟಾಜ್ಞೆ.

೪೭. ಈ ಕಟ್ಟಳೆಯನ್ನರಿಯದೆ ಆ ಇಲನು ಶರವಣವನ್ನು ಪ್ರವೇಶಿಸಿದನು. ಕೂಡಲೆ ಸ್ತ್ರೀರೂಪವನ್ನು ಪಡೆದನು; ಅವನ ಕುದುರೆಯೂ ಕೂಡ ಹೆಣ್ಣು ಕುದುರೆಯಾಯಿತು.

೪೮-೪೯. ಪುರುಷ ಚಿಹ್ನವೆಲ್ಲವೂ ಹೋಗಿ ಸ್ತ್ರೀರೂಪ ಬರಲು ರಾಜನು ಆಶ್ಚರ್ಯಭರಿತನಾದನು. ಅವನು ಇಳೆಯೆಂಬ ಹೆಂಗಸಾದನು. ಅವಳು ಉನ್ನತವಾದ ಕುಚಗಳಿಂದಲೂ, ದಪ್ಪವಾದ ಜಘನಗಳಿಂದಲೂ ಶೋಭಿಸಿದಳು. ಕಣ್ಣುಗಳು ತಾವರೆಯೆಸಳಿನಂತೆ ನೀಳವಾಗಿದ್ದವು. ಮುಖವು ಪೂರ್ಣಚಂದ್ರನಂತಿತ್ತು. ವಿಲಾಸವು ಕಣ್ಣುಗಳಲ್ಲಿ ಸೂಸುತ್ತಿತ್ತು.

ಮೂಲೋನ್ನತಾಯತಭುಜಾ ನೀಲಕುಂಚಿತಮೂರ್ಧಜಾ ।
ತನುಲೋಮಾ ಸುದಶನಾ ಮೃದುಗಂಭೀರಭಾಷಿಣೀ ॥೩೦॥

ಶ್ಯಾಮಗೌರೇಣ ವರ್ಣೇನ ಹಂಸವಾರಣಗಾಮಿನೀ ।
ಕಾರ್ಮುಕಭ್ರೂಯುಗೋಪೇತಾ ತನುತಾಮ್ರನಖಾಂಕುರಾ ॥೩೧॥

ಭ್ರಮಂತೀ ಚ ವನೇ ತಸ್ಮಿಂಶ್ಚಿಂತಯಾಮಾಸ ಭಾಮಿನೀ ।
ಕೋ ಮೇ ಪಿತಾಥವಾ ಭ್ರಾತಾ ಕಾ ಮೇ ಮಾತಾ ಭವೇದಿಹ ॥೩೨॥

ಕಸ್ಯ ಭರ್ತುರಹಂ ದತ್ತಾ ಕಿಯದ್ವತ್ಸ್ಯಾಮಿ ಭೂತಲೇ ।
ಚಿಂತಯಂತೀತಿ ದದೃಶೇ ಸೋಮಪುತ್ರೇಣ ಸಾಂಗನಾ ॥೩೩॥

ಇಲಾರೂಪಸಮಾಕ್ಷಿಪ್ತಮನಸಾ ವರವರ್ಣಿನೀ ।
ಬುಧಸ್ತದಾಪ್ತಯೇ ಯತ್ನಮಕರೋತ್ಕಾಮಪೀಡಿತಃ ॥೩೪॥

---

೩೦. ತೋಳುಗಳು ಬುಜದಲ್ಲಿ ಉನ್ನತವಾಗಿಯೂ ನೀಳವಾಗಿಯೂ ಇದ್ದುವು. ಕೂದಲು ಕೋಮಲವಾಗಿ ನೀಲವಾಗಿ ಸುರುಳಿಗಟ್ಟಿದ್ದುವು. ಹಲ್ಲುಗಳು ಅಂದವಾಗಿದ್ದುವು. ಅವಳು ಮೃದುವಾಗಿಯೂ ಗಂಭೀರವಾಗಿಯೂ ಮಾತನಾಡುತ್ತಿದ್ದಳು.

೩೧. ಮಾಸಲುಬಿಳಿದಾದ ಮೈಬಣ್ಣದಿಂದ, ಹಂಸದಂತೆಯೂ ಆನೆಯಂತೆಯೂ ಹೆಜ್ಜೆಯಿಡುತ್ತ, ಬಿಲ್ಲಿನಂತೆ ಹುಬ್ಬುಗಳು ಬಗ್ಗಿರಲು, ಆ ಸುಂದರಿಯು ಕೆಂಪಾದ ತೆಳ್ಳುಗುರುಗಳಿಂದ ವಿರಾಜಿಸುತ್ತಿದ್ದಳು.

೩೨-೩೪. ಅವಳು "ನನ್ನ ತಂದೆತಾಯಿಗಳೂ ಒಡಹುಟ್ಟಿದವರೂ ಯಾರು? ನಾನು ಯಾರನ್ನು ಮದುವೆಯಾಗಿದ್ದೆ? ಎಷ್ಟುಕಾಲದಿಂದ ಈ ಭೂಲೋಕದಲ್ಲಿ ವಾಸಿಸುತ್ತಿದ್ದೇನೆ?" ಎಂದು ಯೋಚಿಸುತ್ತ ಆ ವನದಲ್ಲಿ ಓಡಾಡುತ್ತಿದ್ದಳು. ಚಂದ್ರನ ಮಗನಾದ ಬುಧನು ಅವಳ ಸೌಂದರ್ಯಕ್ಕೆ ಮನಸೋತು, ಕಾಮಪೀಡಿತನಾಗಿ, ಅವಳನ್ನು ಸೇರಲು ಯತ್ನಿಸಿದನು.

ವಿಶಿಷ್ಟಾಕಾರವಾನ್ದಂಡೀ ಸಕಮಂಡಲುಪುಸ್ತಕಃ |
ವೇಣುದಂಡಕೃತಾನೇಕಪವಿತ್ರಕಗಣೋ ನೃಪ ||೫೫||

ದ್ವಿಜರೂಪಃ ಶಿಖೀ ಬ್ರಹ್ಮ ನಿಗದನ್ ಕರ್ಣಕುಂಡಲಃ |
ವಟುಭಿಶ್ಚಾನ್ವಿತೋ ಯುಕ್ತೈಃ ಸಮಿತ್ಪುಷ್ಪಕುಶೋದಕೈಃ | ||೫೬||

ಕಿಲಾನ್ವಿಷನ್ವನೇ ತಸ್ಮಿನ್ನಾಜುಹಾವ ಸ ತಾಮಿಲಾಂ |
ಬಹಿರ್ವನಸ್ಯಾಂತರಿತಃ ಕಿಲ ಪಾದಪಮಂಡಲೇ ||೫೭||

ಸಸಂಭ್ರಮಮಕಸ್ಮಾತ್ತಾಂ ಸೋಽಪಾಲಂಭಮಿವಾವದತ್ |
ತ್ಯಕ್ತ್ವಾಗ್ನಿಹೋತ್ರಶುಶ್ರೂಷಾಂ ಕ್ವ ಗತಾ ಮಂದಿರಾನ್ಮಮ ||೫೮||

ಇಯಂ ವಿಹಾರವೇಲಾ ತೇ ಹ್ಯತಿಕ್ರಾಮತಿ ಸಾಂಪ್ರತಂ |
ಏಹ್ಯೇಹಿ ಪೃಥುಸುಶ್ರೋಣಿ ಸಂಭ್ರಾಂತಾ ಕೇನ ಹೇತುನಾ ||೫೯||

ಇಯಂ ಸಾಯಂತನೀ ವೇಲಾ ವಿಹಾರಸ್ಯೇಹ ವರ್ತತೇ |
ಕೃತ್ವೋಪಲೇಪನಂ ಪುಷ್ಪೈರಲಂಕುರು ಗೃಹಂ ಮಮ ||೬೦||

---

೫೫-೫೭. ಅವನು ಲಕ್ಷಣವಾದ ಆಕಾರದಿಂದ ದಂಡ, ಕಮಂಡಲು ಮತ್ತು ಪುಸ್ತಕಗಳನ್ನು ಹಿಡಿದು, ಬಿದಿರಿನ ದಂಡದಲ್ಲಿ ದರ್ಭೆಯ ಪವಿತ್ರಗಳನ್ನು ಸಿಕ್ಕಿಸಿ, ಬ್ರಾಹ್ಮಣರೂಪಧಾರಿಯಾಗಿ, ಕಿವಿಯಲ್ಲಿ ಕಡಕುಗಳು ಹೊಳೆಯುತ್ತಿರಲು, ವೇದವನ್ನು ಹೇಳುತ್ತ, ಸಮಿತ್ತು, ಪುಷ್ಪ ಮತ್ತು ಕುಶೋದಕಗಳನ್ನು ಹಿಡಿದಿರುವ ಬ್ರಹ್ಮಚಾರಿಗಳೊಡನೆ ಆ ವನದಲ್ಲಿ ಹುಡುಕುತ್ತ, ಮರಗಳ ಗುಂಪಿನ ಮರೆಯಲ್ಲಿ ಇಳೆಯನ್ನು ಕೂಗಿ ಕರೆದನು.

೫೮-೬೦. ಥಟ್ಟನೆ ಸಡಗರದಿಂದ ಆಕೆಯನ್ನು ಸ್ವಲ್ಪ ಜರೆದು ಇಂತೆಂದನು. "ನನ್ನ ಅಗ್ನಿಹೋತ್ರಕ್ಕೆ ತಕ್ಕ ಸಿದ್ಧತೆಯನ್ನು ಮಾಡದೆ ಮನೆಯಿಂದ ಎಲ್ಲಿ ಹೊರಟು ಹೋದೆ? ಇಗೋ! ವಿಹಾರಕ್ಕೆ ಅನುಕೂಲವಾದ ಹೊತ್ತು ಮೀರುತ್ತಿದೆ. ಎಲೌ ಸುಂದರೀ, ಬಾ ಬಾ, ಏಕೆ ಗಾಬರಿಗೊಂಡಿರುವೆ? ಈ ಸಂಧ್ಯಾಕಾಲವು ವಿಹಾರೋಚಿತವಾಗಿದೆ. ಮನೆಯನ್ನು ಸಾರಿಸಿ ಹೂಗಳಿಂದ ಅಲಂಕರಿಸು."

**ಸಾ ತ್ವಬ್ರವೀದ್ವಿಸ್ಮೃತಾಹಂ ಸರ್ವಮೇತತ್ತಪೋಧನ ।**
**ಆತ್ಮಾನಂ ತ್ವಾಂ ಚ ಭರ್ತಾರಂ ಕುಲಂ ಚ ವದ ಮೇಽನಘ ॥೬೧॥**

**ಬುಧಃ ಪ್ರೋವಾಚ ತಾಂ ತನ್ವೀಮಿಲಾ ತ್ವಂ ವರವರ್ಣಿನಿ ।**
**ಅಹಂ ಚ ಕಾಮುಕೋ ನಾಮ ಬಹುವಿದ್ಯೋ ಬುಧಃ ಸ್ಮೃತಃ ॥೬೨॥**

**ತೇಜಸ್ವಿನಃ ಕುಲೇ ಜಾತಃ ಪಿತಾ ಮೇ ಬ್ರಾಹ್ಮಣಾಧಿಪಃ ।**
**ಇತಿ ಸಾ ತಸ್ಯ ವಚನಾತ್ಪ್ರವಿಷ್ಟಾ ಬುಧಮಂದಿರಂ ॥೬೩॥**

**ರತ್ನಸ್ತಂಭಸಮಾಯುಕ್ತಂ ದಿವ್ಯಮಾಯಾವಿನಿರ್ಮಿತಂ ।**
**ಇಲಾ ಕೃತಾರ್ಥಮಾತ್ಮಾನಂ ಮೇನೇ ತದ್ಭವನಸ್ಥಿತಾ ॥೬೪॥**

**ಅಹೋ ವೃತ್ತಮಹೋ ರೂಪಮಹೋ ಧನಮಹೋ ಕುಲಂ ।**
**ಮಮ ಚಾಸ್ಯ ಚ ಮೇ ಭರ್ತುರಹೋ ಲಾವಣ್ಯಮುತ್ತಮಂ ॥೬೫॥**

---

೬೧. "ಎಲೈ ತಪಸ್ವಿಯೇ, ಇವೆಲ್ಲವೂ ನನಗೆ ಮರೆತುಹೋಗಿದೆ. ನಾನು ಯಾರು? ಪತಿಯಾದ ನೀನು ಯಾರು? ನನ್ನ ಕುಲವಾವುದು? ಇವನ್ನು ತಿಳಿಸು" ಎಂದು ಆ ನಾರೀಮಣಿಯು ಕೇಳಿದಳು.

೬೨-೬೩. "ಎಲೌ ಸುಂದರಾಂಗೀ, ನೀನು ಇಲೆ; ನಾನಾದರೋ ತೇಜಸ್ವಿಯಾದ ವಂಶದಲ್ಲಿ ಹುಟ್ಟಿದವನು. ಹಲವು ವಿದ್ಯೆಗಳನ್ನು ಬಲ್ಲವನು. ಆದುದರಿಂದಲೇ ಬುಧನೆಂದು ಪ್ರಸಿದ್ಧನಾಗಿರುವೆನು. ನಿನ್ನನ್ನು ಕಾಮಿಸಿರುವೆನು. ನನ್ನ ತಂದೆ ಬ್ರಾಹ್ಮಣರಿಗೆಲ್ಲ ಅಧಿಪತಿ" ಎಂದು ಬುಧನು ಹೇಳಲು, ಅವಳು ಅವನ ಮನೆಗೆ ಹೋದಳು.

೬೪-೬೫. ಬುಧನ ಮನೆಯು ರತ್ನದ ಕಂಬಗಳಿಂದ ಮೆರೆಯುತ್ತ ದೇವಮಾಯೆಯಿಂದ ನಿರ್ಮಿತವಾಗಿತ್ತು. "ನನಗೂ ನನ್ನ ಪತಿಗೂ ಎಂತಹ ಆನುರೂಪ್ಯ! ನಡತೆ, ರೂಪ, ಐಶ್ವರ್ಯ ಮತ್ತು ಕುಲ ಇವೆಲ್ಲವೂ ಎಷ್ಟು ದಿವ್ಯವಾದುವು! ನಮ್ಮಿಬ್ಬರ ಲಾವಣ್ಯವು ಎಂತಹ ಸೊಗಸಾದುದು!" ಎಂದು ಇಲೆಯು ಹಿಗ್ಗುತ್ತ, ತಾನೇ ಧನ್ಯಳೆಂದು ತಿಳಿದು ಅಲ್ಲಿ ವಾಸಿಸುತ್ತಿದ್ದಳು.

**ರೇಮೇ ಚ ಸಾ ತೇನ ಸಮಮತಿಕಾಲಮಿಲಾ ತತಃ |**
**ಸರ್ವಭೋಗಮಯೇ ಗೇಹೇ ಯಥೇಂದ್ರಭವನೇ ತಥಾ ||೬೬||**

**ಇತಿ ಶ್ರೀ ಮಾತ್ಸ್ಯೇ ಮಹಾಪುರಾಣೇ ಬುಧಸಂಗಮೋ ನಾಮೈಕಾದಶೋಽಧ್ಯಾಯಃ**

---

೬೬. ಇಂದ್ರಭವನದಂತೆ ಸಕಲವಿಧವಾದ ಸುಖಸಾಧನಗಳಿಂದ ತುಂಬಿದ ಆ ಮನೆಯಲ್ಲಿ ಅವಳು ಬುಧನೊಡನೆ ಬಹುಕಾಲ ಸುಖಸಂತೋಷಗಳಿಂದಿದ್ದಳು.

## ಅಧ್ಯಾಯದ ಸಾರಾಂಶ

ಸೂರ್ಯನಿಗೆ ರಾಜ್ಞಿ, ಪ್ರಭೆ ಮತ್ತು ಸಂಜ್ಞೆಯರೆಂಬ ಮೂವರು ಪತ್ನಿಯರು. ಮೊದಲನೆಯವರಿಬ್ಬರಲ್ಲೂ ರೇವತ ಮತ್ತು ಪ್ರಭಾತರೆಂಬ ಇಬ್ಬರು ಪುತ್ರರು ಕ್ರಮವಾಗಿ ಜನಿಸಿದರು. ಸಂಜ್ಞೆಯಲ್ಲಾದರೋ ಮನು, ಯಮ ಎಂಬ ಇಬ್ಬರು ಪುತ್ರರೂ, ಯಮುನೆಯೆಂಬ ಮಗಳೂ ಹುಟ್ಟಿದರು. ಸಂಜ್ಞೆಯು ಸೂರ್ಯನ ತೇಜಸ್ಸನ್ನು ಸಹಿಸಲಾರದೆ ತನ್ನಂತೆಯೇ ಇರುವ ಛಾಯೆಯೆಂಬ ನಾರಿಯನ್ನು ಸ್ವಶರೀರದಿಂದ ನಿರ್ಮಿಸಿ, ಅವನ ಬಳಿಯಲ್ಲಿರಿಸಿ, ತಾನೆಲ್ಲೋ ಹೊರಟುಹೋದಳು. ಸೂರ್ಯನೂ ಸಹ ಇವಳನ್ನು ಸಂಜ್ಞೆಯೆಂದೇ ತಿಳಿದು ಅವಳಲ್ಲಿ ಅನುರಕ್ತನಾಗಿದ್ದನು. ಅವಳಿಗೆ ಸಾವರ್ಣಿಮನು, ಶನಿ, ತಪತಿ ಮತ್ತು ವಿಷ್ಟಿಯರೆಂಬ ಮಕ್ಕಳಾದರು. ತರುವಾಯ ಸೂರ್ಯನಿಗೆ ಸಂಜ್ಞೆಯು ತನ್ನನ್ನು ಬಿಟ್ಟು ಹೆಣ್ಣುಕುದುರೆಯ ರೂಪದಿಂದ ಮರುದೇಶದಲ್ಲಿರುವಳೆಂಬ ಸಂಗತಿ ಗೊತ್ತಾಯಿತು. ಅವನೂ ಸಹ ಅಶ್ವರೂಪದಿಂದ ಅಲ್ಲಿಗೆ ಹೋದನು ಕಾಮಾರ್ತನಾಗಿ ಅವಳನ್ನು ಮೋಹಿಸಿದನು. ಅವಳೂ ಸಹ ಅವನನ್ನು ಪರಪುರುಷನೆಂದು ಬಗೆದು ಅವನ ವೀರ್ಯವನ್ನು ತನ್ನ ಮೂಗಿನ ಹೊಳ್ಳೆಗಳಿಂದ ಹೊರಕ್ಕೆಬಿಟ್ಟಳು. ಅದರಿಂದ ಅಶ್ವಿನೀದೇವತೆಗಳಿಬ್ಬರೂ ಹುಟ್ಟಿದರು. ಕೊನೆಗೆ ಅವಳಿಗೆ ತನ್ನ ಬಳಿಗೆ ಬಂದಿದ್ದವನು ಸೂರ್ಯನೆಂದೇ ಗೊತ್ತಾಗಲು, ಬಹು ಸಂತೋಷದಿಂದ ಅವನೊಡನೆ ವಿಮಾನದಲ್ಲಿ ಸ್ವರ್ಗಕ್ಕೆ ಹೋದಳು. ವೈವಸ್ವತ ಮನುವಿಗೆ ಹತ್ತು ಜನ ಮಕ್ಕಳು. ಜ್ಯೇಷ್ಠಪುತ್ರನಾದ ಇಲನು ದಿಗ್ವಿಜಯಕ್ಕಾಗಿ ಹೊರಟು ಶರವಣದಲ್ಲಿ ಸಂಚರಿಸುವಾಗ ಪರಮೇಶ್ವರನ ಶಾಪದಿಂದ ಇಲಾ ಎಂಬ ಹೆಂಗಸಾದನು. ಚಂದ್ರನ ಮಗನಾದ ಬುಧನು ಅವಳ ಸೌಂದರ್ಯಕ್ಕೆ ಮೋಹಿಸಿ ಅವಳೊಡನೆ ಚಿರಕಾಲ ಸುಖದಿಂದಿದ್ದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಹನ್ನೊಂದನೆಯ ಅಧ್ಯಾಯವು ಮುಗಿದುದು

# ಅಥ ಶ್ರೀಮತ್ಸ್ಯಮಹಾಪುರಾಣೇ ದ್ವಾದಶೋಽಧ್ಯಾಯಃ

|| ಸೂತ ಉವಾಚ ||

ಅಥಾನ್ವಿಷಂತೋ ರಾಜಾನಂ ಭ್ರಾತರಸ್ತಸ್ಯ ಮಾನವಾಃ |
ಇಕ್ಷ್ವಾಕುಪ್ರಮುಖಾ ಜಗ್ಮುಸ್ತದಾ ಶರವಣಾಂತಿಕಂ || ೧ ||
ತತಸ್ತೇ ದದೃಶುಃ ಸರ್ವೇ ವಡವಾಮಗ್ರತಃ ಸ್ಥಿತಾಂ |
ರತ್ನಪರ್ಯಾಣಕಿರಣದೀಪ್ತಕಾಯಾಮನುತ್ತಮಾಂ || ೨ ||
ಪರ್ಯಾಣಪ್ರತ್ಯಭಿಜ್ಞಾನಾತ್ಸರ್ವೇ ವಿಸ್ಮಯಮಾಗತಾಃ |
ಅಯಂ ಚಂದ್ರಪ್ರಭೋ ನಾಮ ವಾಜೀ ತಸ್ಯ ಮಹಾತ್ಮನಃ || ೩ ||
ಅಗಮದ್ವಡವಾರೂಪಮುತ್ತಮಂ ಕೇನ ಹೇತುನಾ |
ತತಸ್ತು ಮೈತ್ರಾವರುಣಿಂ ಪಪ್ರಚ್ಛುಸ್ತೇ ಪುರೋಧಸಂ || ೪ ||
ಕಿಮಿತ್ಯೇತದಭೂಚ್ಚಿತ್ರಂ ವದ ಯೋಗವಿದಾಂ ವರ |
ವಸಿಷ್ಠಶ್ಚಾಬ್ರವೀತ್ಸರ್ವಂ ದೃಷ್ಟ್ವಾ ತದ್ಧ್ಯಾನಚಕ್ಷುಷಾ || ೫ ||

---

೧. ಸೂತಪೌರಾಣಿಕನು ಹೇಳಿದನು:—ಬಳಿಕ ರಾಜನಾದ ಇಲನನ್ನು ಹುಡುಕುತ್ತಾ ಅವನ ಒಡಹುಟ್ಟಿದವರಾದ ಇಕ್ಷ್ವಾಕು ಮುಂತಾದ ಮನುಪುತ್ರರು ಶರವಣದ ಸಮೀಪಕ್ಕೆ ಹೋದರು.

೨. ಬಳಿಕ ಅವರು ರತ್ನದ ಜೀನಿನ ಕಾಂತಿಯಿಂದ ಶರೀರವು ಬೆಳಗುತ್ತಿರಲು, ತಮ್ಮ ಮುಂದೆ ನಿಂತಿದ್ದ ಉತ್ತಮವಾದ ಹೆಣ್ಣು ಕುದುರೆಯನ್ನು ಕಂಡರು.

೩-೪. ಜೀನನ್ನು ಗುರುತಿಸಿ ಅವರೆಲ್ಲರೂ "ಇದು ಆ ಮಹಾತ್ಮನ ಚಂದ್ರಪ್ರಭನೆಂಬ ಕುದುರೆ. ಇದಕ್ಕೆ ಏತಕ್ಕಾಗಿ ಹೆಣ್ಣುರೂಪ ಬಂತು?" ಎನ್ನುತ್ತ ಆಶ್ಚರ್ಯಪಟ್ಟು "ಇದೇನಾಶ್ಚರ್ಯವು? ಎಲೈ ಯೋಗಿವರ್ಯನೇ, ಹೇಳು" ಎಂದು ಪುರೋಹಿತರಾದ ವಸಿಷ್ಠರನ್ನು ಕೇಳಿದರು.

೫-೬. ವಸಿಷ್ಠರೂ ಕೂಡ ಜ್ಞಾನದೃಷ್ಟಿಯಿಂದ ಎಲ್ಲವನ್ನೂ ತಿಳಿದು "ಈ ಶರವಣವನ್ನು ಪ್ರವೇಶಿಸಿದ ಪುರುಷನು ಸ್ತ್ರೀಯಾಗುವನೆಂಬುದು ಹಿಂದೆ ಪಾರ್ವತೀ

**ಸಮಯಃ ಶಂಭುದಯಿತಾಕೃತಃ ಶರವಣೇ ಪುರಾ ।**
**ಯಃ ಪುಮಾನ್ ಪ್ರವಿಶೇದತ್ರ ಸ ನಾರೀತ್ವಮವಾಪ್ಸ್ಯತಿ ॥ ೭ ॥**

**ಅಯಮಶ್ವೋಽಪಿ ನಾರೀತ್ವಮಗಾದ್ರಾಜ್ಞಾ ಸಹೈವ ತು ।**
**ಪುನಃ ಪುರುಷತಾಮೇತಿ ಯಥಾಸೌ ಧನದೋಪಮಃ ॥ ೭ ॥**

**ತಥೈವ ಯತ್ನಃ ಕರ್ತವ್ಯಶ್ಚಾರಾಧ್ಯೈವ ಪಿನಾಕಿನಂ ।**
**ತತಸ್ತೇ ಮಾನವಾ ಜಗ್ಮುರ್ಯತ್ರ ದೇವೋ ಮಹೇಶ್ವರಃ ॥ ೮ ॥**

**ತುಷ್ಟುವುರ್ವಿವಿಧೈಃ ಸ್ತೋತ್ರೈಃ ಪಾರ್ವತೀಪರಮೇಶ್ವರೌ ।**
**ತಾವೂಚತುರಲಂಘ್ಯೋಽಯಂ ಸಮಯಃ ಕಿಂ ತು ಸಾಂಪ್ರತಂ ॥ ೯ ॥**

**ಇಕ್ಷ್ವಾಕೋರಶ್ವಮೇಧೇನ ಯತ್ಫಲಂ ಸ್ಯಾತ್ತದಾವಯೋಃ ।**
**ದತ್ವಾ ಕಿಂಪುರುಷೋ ವೀರಃ ಸ ಭವಿಷ್ಯತ್ಯಸಂಶಯಃ ॥೧೦॥**

**ತಥೇತ್ಯುಕ್ತ್ವಾಸ್ತತಸ್ತೇ ತು ಜಗ್ಮುರ್ವೈವಸ್ವತಾತ್ಮಜಾಃ ।**
**ಇಕ್ಷ್ವಾಕೋಶ್ಚಾಶ್ವಮೇಧೇನ ಚೇಲಃ ಕಿಂಪುರುಷೋಽಭವತ್ ॥೧೧॥**

---

ದೇವಿಯು ಕೊಟ್ಟ ಶಾಪ. ರಾಜನೊಡನೆಯೇ ಈ ಕುದುರೆಯೂ ಸಹ ಹೆಣ್ಣಾಗಿದೆ. ಪರಮೇಶ್ವರನನ್ನಾರಾಧಿಸಿ ಮತ್ತೆ ಇಲನು ಕುಬೇರಸದೃಶನಾದ ಪುರುಷನಾಗುವಂತೆ ಪ್ರಯತ್ನಮಾಡಬೇಕು" ಎಂದು ಹೇಳಿದರು.

೮–೧೦. ಬಳಿಕ ಆ ಮನುಪುತ್ರರು ಮಹೇಶ್ವರನಲ್ಲಿಗೆ ಹೋಗಿ ಪಾರ್ವತೀ ಪರಮೇಶ್ವರರನ್ನು ಬಗೆಬಗೆಯಾಗಿ ಸ್ತುತಿಸಿದರು. "ನಾವು ಮಾಡಿದ ಈ ಕಟ್ಟಳೆಯು ತಪ್ಪದು. ಆದರೆ ಇಕ್ಷ್ವಾಕುವು ಅಶ್ವಮೇಧದಿಂದ ಪಡೆದಿರುವ ಫಲವನ್ನು ನಮಗೆ ಕೊಟ್ಟರೆ ಇಲನು ಕಿಂಪುರುಷನಾಗುವನು" ಎಂದು ಅವರು ಹೇಳಿದರು.*

೧೧. ಹಾಗೆಯೇ ಆಗಲೆಂದು ವೈವಸ್ವತನ ಪುತ್ರರೆಲ್ಲರೂ ಹೊರಟು ಹೋದರು. ಇಕ್ಷ್ವಾಕುವಿನ ಅಶ್ವಮೇಧಫಲದಿಂದ ಇಲನು ಕಿಂಪುರುಷನಾದನು.

---

* ಕಿಂಪುರುಷನೆಂದರೆ ಕೆಲಕಾಲ ಪುರುಷನೂ ಕೆಲಕಾಲ ಸ್ತ್ರೀಯೂ ಆಗಿರುವವನು.

ಮಾಸಮೇಕಂ ಪುಮಾನ್ ವೀರಃ ಸ್ತ್ರೀ ಚ ಮಾಸಮಭೂತ್ಪುನಃ ।
ಬುಧಸ್ಯ ಭವನೇ ತಿಷ್ಠನ್ನಿಲೋ ಗರ್ಭಧರೋಽಭವತ್ ॥೧೨॥

ಅಜೀಜನತ್ಪುತ್ರಮೇಕಮನೇಕಗುಣಸಂಯುತಂ ।
ಬುಧಶ್ಚೋತ್ಪಾದ್ಯ ತಂ ಪುತ್ರಂ ಸ್ವರ್ಲೋಕಮಗಮತ್ತತಃ ॥೧೩॥

ಇಲಸ್ಯ ನಾಮ್ನಾ ತದ್ವರ್ಷಮಿಲಾವೃತಮಭೂತ್ತದಾ ।
ಸೋಮಾರ್ಕವಂಶಯೋರಾದಾವಿಲೋಽಭೂನ್ಮನುನಂದನಃ ॥೧೪॥

ಏವಂ ಪುರೂರವಾಃ ಪುಂಸೋರಭವದ್ವಂಶವರ್ಧನಃ ।
ಇಕ್ಷ್ವಾಕುರರ್ಕವಂಶಸ್ಯ ತಥೈವೋಕ್ತಸ್ತಪೋಧನಾಃ ॥೧೫॥

ಇಲಃ ಕಿಂಪುರುಷತ್ವೇ ಚ ಸುದ್ಯುಮ್ನ ಇತಿ ಚೋಚ್ಯತೇ ।
ಪುನಃ ಪುತ್ರತ್ರಯಮಭೂತ್ಸುದ್ಯುಮ್ನಸ್ಯಾಪರಾಜಿತಂ ॥೧೬॥

---

೧೨. ಆ ವೀರನು ಒಂದು ತಿಂಗಳು ಪುರುಷನಾಗಿಯೂ ಇನ್ನೊಂದು ತಿಂಗಳು ಮತ್ತೆ ಸ್ತ್ರೀಯಾಗಿಯೂ ಇದ್ದನು. ಬುಧನ ಮನೆಯಲ್ಲಿರುವಾಗ ಅವನು ಗರ್ಭವನ್ನು ಧರಿಸಿದನು.

೧೩. ಬುಧನು ಅನೇಕ ಗುಣಸಹಿತನಾದ ಮಗನನ್ನು ಪಡೆದು ಬಳಿಕ ಸ್ವರ್ಗಲೋಕಕ್ಕೆ ಹೋದನು.

೧೪. ಇಲನ ಹೆಸರಿನಿಂದ ಆ ಭೂಭಾಗವು ಇಲಾವೃತವರ್ಷವೆನಿಸಿತು. ಮನುಪುತ್ರನಾದ ಅವನು ಚಂದ್ರಸೂರ್ಯ ವಂಶಗಳೆರಡರ ಆದಿಕಾಲದಲ್ಲಿದ್ದು ಅವುಗಳ ಅಭಿವೃದ್ಧಿಗೆ ಕಾರಣನಾದನು.

೧೫. ಮುನಿಗಳೇ, ಹೀಗೆ ಪುರೂರವನು ಇಲ ಮತ್ತು ಬುಧ ಇವರಿಬ್ಬರ ವಂಶವನ್ನು ಬೆಳೆಸತಕ್ಕವನಾದನು. ಇಕ್ಷ್ವಾಕುವಾದರೋ ಸೂರ್ಯವಂಶವರ್ಧಕನಾದನು.

೧೬. ಕಿಂಪುರುಷನಾಗಿರುವಾಗ ಇಲನಿಗೆ ಸುದ್ಯುಮ್ನನೆಂದೂ ಹೆಸರು. ಅವನಿಗೆ ಮತ್ತೆ ಮಹಾಶೂರರಾದ ಮೂವರು ಮಕ್ಕಳು ಜನಿಸಿದರು.

**ಉತ್ಕಲೋ ವೈ ಗಯಸ್ತದ್ವದ್ಧರಿತಾಶ್ವಶ್ಚ ವೀರ್ಯವಾನ್ |**
**ಉತ್ಕಲಸ್ಯೋತ್ಕಲಾ ನಾಮ ಗಯಸ್ಯ ತು ಗಯಾ ಮತಾ** ||೧೭||

**ಹರಿತಾಶ್ವಸ್ಯ ದಿಕ್ಪೂರ್ವಾ ವಿಶ್ರುತಾ ಕುರುಭಿಃ ಸಹ |**
**ಪ್ರತಿಷ್ಠಾನೇಽಭಿಷಿಚ್ಯಾಥ ಸ ಪುರೂರವಸಂ ಸುತಂ** ||೧೮||

**ಜಗಾಮೇಲಾವೃತಂ ಭೋಕ್ತುಂ ವರ್ಷಂ ದಿವ್ಯಫಲಾಶನಂ |**
**ಇಕ್ಷ್ವಾಕುಜ್ಯೇಷ್ಠದಾಯಾದೋ ಮಧ್ಯದೇಶಮವಾಪ್ತವಾನ್** ||೧೯||

**ನರಿಷ್ಯಂತಸ್ಯ ಪುತ್ರೋಽಭೂಚ್ಛುಚೋ ನಾಮ ಮಹಾಬಲಃ |**
**ನಾಭಾಗಸ್ಯಾಂಬರೀಷಸ್ತು ಧೃಷ್ಟಸ್ಯ ಚ ಸುತತ್ರಯಂ** ||೨೦||

**ಧೃತಕೇತುಶ್ಚಿತ್ರನಾಥೋ ರಣಧೃಷ್ಟಶ್ಚ ವೀರ್ಯವಾನ್ |**
**ಆನರ್ತೋ ನಾಮ ಶರ್ಯಾತೇಃ ಸುಕನ್ಯಾ ಚೈವ ದಾರಿಕಾ** ||೨೧||

**ಆನರ್ತಸ್ಯಾಭವತ್ಪುತ್ರೋ ರೋಚಮಾನಃ ಪ್ರತಾಪವಾನ್ |**
**ಆನರ್ತೋ ನಾಮ ದೇಶೋಽಭೂನ್ನಗರೀ ಚ ಕುಶಸ್ಥಲೀ** ||೨೨||

---

೧೭. ಉತ್ಕಲ, ಗಯ, ಹರಿತಾಶ್ವ ಎಂಬವರೇ ಅವರು. ಉತ್ಕಲನ ನಗರಿಗೆ ಉತ್ಕಲೆಯೆಂದೂ, ಗಯನ ಪಟ್ಟಣಕ್ಕೆ ಗಯೆಯೆಂದೂ ಹೆಸರು ಬಂದುವು. ಹರಿತಾಶ್ವನಾದರೋ ಕುರುದೇಶಗಳಿಂದ ಕೂಡಿ ಪ್ರಸಿದ್ಧವಾದ ಪೂರ್ವದಿಕ್ಕನ್ನು ಆಳತೊಡಗಿದನು.

೧೮-೧೯. ಬಳಿಕ ಇಲನು ಮಗನಾದ ಪುರೂರವಸ್ಸನ್ನು ಪ್ರತಿಷ್ಠಾನ ನಗರದಲ್ಲಿ ಸಿಂಹಾಸನದಲ್ಲಿ ಕೂರಿಸಿ, ದಿವ್ಯಫಲಗಳಿಂದ ತುಂಬಿದ ಇಲಾವೃತವರ್ಷವನ್ನನುಭವಿಸಲು ತಾನು ತೆರಳಿದನು. ಅವನ ತಮ್ಮಂದಿರಲ್ಲಿ ಹಿರಿಯವನಾದ ಇಕ್ಷ್ವಾಕುವಿನ ಪಾಲಿಗೆ ಮಧ್ಯದೇಶವು ಬಂದಿತು.

೨೦. ನರಿಷ್ಯಂತನ ಮಗನೇ ಬಲಶಾಲಿಯಾದ ಶುಚನೆಂಬವನು. ಅಂಬರೀಷನು ನಾಭಾಗನ ಸುತ. ಧೃಷ್ಟಸಿಗೆ ಧೃತಕೇತು, ಚಿತ್ರನಾಥ ಮತ್ತು ವೀರನಾದ ರಣಧೃಷ್ಟನೆಂಬ ಮೂವರು ಪುತ್ರರು ಜನಿಸಿದರು.

೨೧-೨೨. ಶರ್ಯಾತಿಗೆ ಆನರ್ತನೆಂಬ ಮಗನೂ, ಸುಕನ್ಯೆಯೆಂಬ ಮಗಳೂ ಆದರು. ಪ್ರತಾಪವಂತನಾದ ರೋಚಮಾನನು ಆನರ್ತನ ಮಗ. ಇವನ ದೇಶಕ್ಕೆ ಆನರ್ತವೆಂದೂ, ರಾಜಧಾನಿಗೆ ಕುಶಸ್ಥಲಿಯೆಂದೂ ಹೆಸರು.

ರೋಚಮಾನಸ್ಯ ಪುತ್ರೋಽಭೂದ್ರೇವೋ ರೈವತ ಏವ ಚ ।
ಕಕುದ್ಮೀ ಚಾಪರಂ ನಾಮ ಜ್ಯೇಷ್ಠಃ ಪುತ್ರಶತಸ್ಯ ಚ ॥೨೩॥

ರೇವತೀ ತಸ್ಯ ಸಾ ಕನ್ಯಾ ಭಾರ್ಯಾ ರಾಮಸ್ಯ ವಿಶ್ರುತಾ ।
ಕರೂಷಸ್ಯ ತು ಕಾರೂಷಾ ಬಹವಃ ಪ್ರಥಿತಾ ಭುವಿ ॥೨೪॥

ಪೃಷಧ್ರೋ ಗೋವಧಾಚ್ಛೂದ್ರೋ ಗುರುಶಾಪಾದಜಾಯತ ।
ಇಕ್ಷ್ವಾಕುವಂಶಂ ವಕ್ಷ್ಯಾಮಿ ಶೃಣುಧ್ವಮೃಷಿಸತ್ತಮಾಃ ॥೨೫॥

ಇಕ್ಷ್ವಾಕೋಃ ಪುತ್ರತಾಮಾಪ ವಿಕುಕ್ಷಿರ್ನಾಮ ದೇವರಾಟ್ ।
ಜ್ಯೇಷ್ಠಃ ಪುತ್ರಶತಸ್ಯಾಸೀದ್ದಶ ಪಂಚ ಚ ತತ್ಸುತಾಃ ॥೨೬॥

ಮೇರೋರುತ್ತರತಸ್ತೇ ತು ಜಾತಾಃ ಪಾರ್ಥಿವಸತ್ತಮಾಃ ।
ಚತುರ್ದಶೋತ್ತರಂ ಚಾನ್ಯಚ್ಛತಮಸ್ಯ ತಥಾಭವತ್ ॥೨೭॥

---

೨೩. ರೋಚಮಾನನಿಗೆ ರೇವ ಅಥವಾ ರೈವತನೆಂಬ ಮಗನಾದನು. ಕಕುದ್ಮಿಯೆಂದೂ ಇವನಿಗೆ ಮತ್ತೊಂದು ಹೆಸರು. ನೂರು ಜನ ಸಹೋದರರಲ್ಲಿ ಇವನೇ ಹಿರಿಯವನು.

೨೪. ಅವನ ಮಗಳೇ ಬಲರಾಮನ ಪತ್ನಿಯಾದ ರೇವತಿ. ಕರೂಷನಿಗೆ ಕಾರೂಷರೆಂಬ ಹಲವರು ಮಕ್ಕಳಾದರು. ಇವರು ಲೋಕದಲ್ಲಿ ಬಹು ಪ್ರಸಿದ್ಧಿಯನ್ನು ಪಡೆದರು.

೨೫. ಪೃಷಧ್ರನು ಗೋಹತ್ಯಮಾಡಿದುದರಿಂದ ಗುರುವಿನ ಶಾಪಕ್ಕೆ ತುತ್ತಾಗಿ ಶೂದ್ರನಾದನು. ಇನ್ನುಮುಂದೆ ಇಕ್ಷ್ವಾಕುವಂಶವನ್ನು ಹೇಳುವೆನು. ಎಲೈ ಋಷಿವರ್ಯರೇ ಕೇಳಿರಿ.

೨೬. ವಿಕುಕ್ಷಿಯೆಂಬ ಖ್ಯಾತಿಯುಳ್ಳ ದೇವರಾಜನು ಇಕ್ಷ್ವಾಕುವಿಗೆ ಮಗನಾದನು. ನೂರ್ವರು ಮಕ್ಕಳಲ್ಲಿ ಇವನು ಹಿರಿಯವನು. ಇವನಿಗೆ ಹದಿನೈದು ಜನ ಸುತರು ಹುಟ್ಟಿದರು.

೨೭. ಅವರು ಮೇರುಪರ್ವತದ ಉತ್ತರದ ಕಡೆ ರಾಜಶ್ರೇಷ್ಠರಾಗಿ ಬಾಳಿದರು. ಈ ವಿಕುಕ್ಷಿಗೆ ಮತ್ತೆ ಬೇರೆ ನೂರಹದಿನಾಲ್ಕು ಜನ ಮಕ್ಕಳಿದ್ದರು. ಇವರು ಮೇರುಪರ್ವತದ ದಕ್ಷಿಣದ ಕಡೆಗೆ ರಾಜರೆನಿಸಿಕೊಂಡರು.

ಮೇರೋರ್ದಕ್ಷಿಣತೋ ಯೇ ವೈ ರಾಜಾನಃ ಸಂಪ್ರಕೀರ್ತಿತಾಃ ।
ಜ್ಯೇಷ್ಠಃ ಕಕುತ್‌ಸ್ಥೋ ನಾಮ್ನಾಭೂತ್ತಸ್ಸತಸ್ತು ಸುಯೋಧನಃ ॥೨೮॥

ತಸ್ಯ ಪುತ್ರಃ ಪೃಥುರ್ನಾಮ ವಿಶ್ವಗಶ್ಚ ಪೃಥೋಃ ಸುತಃ ।
ಇಂದುಸ್ತಸ್ಯ ಚ ಪುತ್ರೋಽಭೂದ್ಯುವನಾಶ್ವಸ್ತತೋಽಭವತ್ ॥೨೯॥

ಶ್ರಾವಸ್ತಶ್ಚ ಮಹಾತೇಜಾ ವತ್ಸಕಸ್ತತ್ಸುತೋಽಭವತ್ ।
ನಿರ್ಮಿತಾ ಯೇನ ಶ್ರಾವಸ್ತೀ ಗೌಡದೇಶೇ ದ್ವಿಜೋತ್ತಮಾಃ ॥೩೦॥

ಶ್ರಾವಸ್ತಾದ್ಬೃಹದಶ್ವೋಽಭೂತ್ಕುವಲಾಶ್ವಸ್ತತೋಽಭವತ್ ।
ಧುಂಧುಮಾರತ್ವಮಗಮದ್ಧುಂಧುನಾಮ್ನಾ ಹತಃ ಪುರಾ ॥೩೧॥

ತಸ್ಯ ಪುತ್ರಾಸ್ತ್ರಯೋ ಜಾತಾ ದೃಢಾಶ್ವೋ ದಂಡ ಏವ ಚ ।
ಕಪಿಲಾಶ್ವಶ್ಚ ವಿಖ್ಯಾತೋ ಧೌಂಧುಮಾರಿಃ ಪ್ರತಾಪವಾನ್ ॥೩೨॥

ದೃಢಾಶ್ವಸ್ಯ ಪ್ರಮೋದಶ್ಚ ಹರ್ಯಶ್ವಸ್ತಸ್ಯ ಚಾತ್ಮಜಃ ।
ಹರ್ಯಶ್ವಸ್ಯ ನಿಕುಂಭೋಽಭೂತ್ಸಂಹತಾಶ್ವಸ್ತತೋಽಭವತ್ ॥೩೩॥

---

೨೮-೨೯. ಇವರಲ್ಲಿ ಕಕುತ್ಸ್ಥನು ಜ್ಯೇಷ್ಠನು. ಇವನ ಮಗನು ಸುಯೋಧನ. ಪೃಥುವು ಅವನ ಪುತ್ರ. ಅವನಿಂದ ವಿಶ್ವಗನೂ, ಅವನಿಂದ ಇಂದುವೂ ಜನಿಸಿದರು. ಇಂದುವಿನ ಮಗನೇ ಯುವನಾಶ್ವ.

೩೦. ದ್ವಿಜೋತ್ತಮರೇ, ತೇಜೋವಂತನಾದ ಶ್ರಾವಸ್ತನ ಮಗನು ವತ್ಸಕನು. ಇವನು ಗೌಡದೇಶದಲ್ಲಿ ಶ್ರಾವಸ್ತೀನಗರವನ್ನು ನಿರ್ಮಿಸಿದನು.

೩೧. ಶ್ರಾವಸ್ತನ ಇನ್ನೊಬ್ಬ ಮಗನು ಬೃಹದಶ್ವ. ಅವನ ಮಗ ಕುವಲಾಶ್ವ. ಧುಂಧುವೆಂಬ ರಾಕ್ಷಸನಿಂದ ಹತನಾದ ಕಾರಣ ಇವನಿಗೆ ಧುಂಧುಮಾರನೆಂಬ ಹೆಸರು ಬಂತು.

೩೨. ಅವನ ಮಕ್ಕಳು ಮೂವರು; ದೃಢಾಶ್ವ, ದಂಡ ಮತ್ತು ಪ್ರತಾಪಶಾಲಿಯಾದ ಕಪಿಲಾಶ್ವ.

೩೩. ದೃಢಾಶ್ವನಿಗೆ ಪ್ರಮೋದನೂ, ಅವನಿಗೆ ಹರ್ಯಶ್ವನೂ, ಅವನಿಗೆ ನಿಕುಂಭನೂ ಜನಿಸಿದರು. ಸಂಹತಾಶ್ವನು ನಿಕುಂಭನ ಪುತ್ರನು.

**ಅಕೃತಾಶ್ವೋ ರಣಾಶ್ವಶ್ಚ ಸಂಹತಾಶ್ವಸುತಾವುಭೌ ।**
**ಯುವನಾಶ್ವೋ ರಣಾಶ್ವಸ್ಯ ಮಾಂಧಾತಾ ಚ ತತೋಽಭವತ್ ॥೩೪॥**

**ಮಾಂಧಾತುಃ ಪುರುಕುತ್ಸೋಽಭೂದ್ಧರ್ಮಸೇನಶ್ಚ ಪಾರ್ಥಿವಃ ।**
**ಮುಚುಕುಂದಶ್ಚ ವಿಖ್ಯಾತಃ ಶತ್ರುಜಿಚ್ಚ ಪ್ರತಾಪವಾನ್ ॥೩೫॥**

**ಪುರುಕುತ್ಸಸ್ಯ ಪುತ್ರೋಽಭೂದ್ವಸುದೋ ನರ್ಮದಾಪತಿಃ ।**
**ಸಂಭೂತಿಸ್ತಸ್ಯ ಪುತ್ರೋಽಭೂತ್ತ್ರಿಧನ್ವಾ ಚ ತತೋಽಭವತ್ ॥೩೬॥**

**ತ್ರಿಧನ್ವನಸ್ಸುತೋ ಜಾತಸ್ತ್ರಯ್ಯಾರುಣ ಇತಿ ಸ್ಮೃತಃ ।**
**ತಸ್ಮಾತ್ಸತ್ಯವ್ರತೋ ನಾಮ ತಸ್ಮಾತ್ಸತ್ಯರಥಃ ಸ್ಮೃತಃ ॥೩೭॥**

**ತಸ್ಯ ಪುತ್ರೋ ಹರಿಶ್ಚಂದ್ರೋ ಹರಿಶ್ಚಂದ್ರಾಚ್ಚ ರೋಹಿತಃ ।**
**ಲೋಹಿತಾಚ್ಚ ವೃಕೋ ಜಾತೋ ವೃಕಾದ್ಬಾಹುರಜಾಯತ ॥೩೮॥**

**ಸಗರಸ್ತಸ್ಯಪುತ್ರೋಽಭೂದ್ರಾಜಾ ಪರಮಧಾರ್ಮಿಕಃ ।**
**ದ್ವೇ ಭಾರ್ಯೇ ಸಗರಸ್ಯಾಪಿ ಪ್ರಭಾ ಭಾನುಮತೀ ತಥಾ ॥೩೯॥**

---

೩೪. ಸಂಹತಾಶ್ವನಿಗೆ ಅಕೃತಾಶ್ವನೆಂದೂ ರಣಾಶ್ವನೆಂದೂ ಮಕ್ಕಳಿಬ್ಬರು ಜನಿಸಿದರು. ರಣಾಶ್ವನಿಗೆ ಯುವನಾಶ್ವನೂ ಅವನಿಗೆ ಮಾಂಧಾತನೂ ಮಕ್ಕಳೆನಿಸಿದರು.

೩೫. ಮಾಂಧಾತನ ಮಕ್ಕಳು ಪುರುಕುತ್ಸ, ಧರ್ಮಸೇನ, ಮುಚುಕುಂದ ಮತ್ತು ಪ್ರತಾಪಶಾಲಿಯಾದ ಶತ್ರುಜಿತುವೆಂಬ ನಾಲ್ವರು.

೩೬. ನರ್ಮದೆಯ ಪತಿಯಾದ ವಸುದನು ಪುರುಕುತ್ಸನ ಮಗನು. ಅವನಿಗೆ ಸಂಭೂತಿಯೂ ಅವನಿಂದ ತ್ರಿಧನ್ವನೂ ಜನಿಸಿದರು.

೩೭. ತ್ರಿಧನ್ವನ ಮಗನಿಗೆ ತ್ರಯ್ಯಾರುಣನೆಂದು ಹೆಸರು. ಅವನಿಗೆ ಸತ್ಯವ್ರತನೂ ಸತ್ಯವ್ರತನಿಗೆ ಸತ್ಯರಥನೂ ಮಕ್ಕಳಾದರು.

೩೮–೩೯. ಅವನ ಪುತ್ರನೇ ಹರಿಶ್ಚಂದ್ರನು. ಇವನಿಗೆ ರೋಹಿತನೂ, ರೋಹಿತನಿಗೆ ವೃಕನೂ ತನಯರೆನಿಸಿದರು. ವೃಕನಿಂದ ಬಾಹು ಜನಿಸಿದನು. ಅವನಿಗೆ ಪರಮಧಾರ್ಮಿಕನಾದ ಸಗರಚಕ್ರವರ್ತಿಯು ಮಗನಾದನು. ಇವನಿಗೆ ಪ್ರಭಾ, ಭಾನುಮತೀ ಎಂಬಿಬ್ಬರು ಪತ್ನಿಯರಿದ್ದರು.

**ತಾಭ್ಯಾಮಾರಾಧಿತಃ ಪೂರ್ವಮೌರ್ವೋಽಗ್ನಿಃ ಪುತ್ರಕಾಮ್ಯಯಾ ।**
**ಔರ್ವಸ್ತುಷ್ಟಸ್ತಯೋಃ ಪ್ರಾದಾದ್ಯಥೇಷ್ಟಂ ವರಮುತ್ತಮಂ** ॥೪೦॥

**ಏಕಾ ಷಷ್ಟಿಸಹಸ್ರಾಣಿ ಸುತಮೇಕಂ ತಥಾಪರಾ ।**
**ಗೃಹ್ಣಾತು ವಂಶಕರ್ತಾರಂ ಪ್ರಭಾಽಗೃಹ್ಣಾದ್ಬಹೂಂಸ್ತದಾ** ॥೪೧॥

**ಏಕಂ ಭಾನುಮತೀ ಪುತ್ರಮಗೃಹ್ಣಾದಸಮಂಜಸಂ ।**
**ತತಃ ಷಷ್ಟಿಸಹಸ್ರಾಣಿ ಸುಷುವೇ ಯಾದವೀ ಪ್ರಭಾ** ॥೪೨॥

**ಖನಂತಃ ಪೃಥಿವೀಂ ದಗ್ಧಾ ವಿಷ್ಣುನಾ ಯೇಽಶ್ವಮಾರ್ಗಣೇ ।**
**ಅಸಮಂಜಸಸ್ತು ತನಯೋ ಯೋಽಂಶುಮಾನ್ನಾಮ ವಿಶ್ರುತಃ** ॥೪೩॥

---

೪೦-೪೧. ಅವರಿಬ್ಬರೂ ಪುತ್ರಾಪೇಕ್ಷೆಯಿಂದ ಬಾಡಬಾಗ್ನಿಯನ್ನು ಆರಾಧಿಸಿದರು. ತುಷ್ಟನಾದ ಆ ಅಗ್ನಿದೇವನು "ಒಬ್ಬಳು ಅರವತ್ತು ಸಾವಿರ ಮಕ್ಕಳನ್ನು, ಇನ್ನೊಬ್ಬಳು ವಂಶವರ್ಧಕನಾದ ಒಬ್ಬ ಮಗನನ್ನೂ ಪಡೆಯುವರು" ಎಂದು ವರವನ್ನು ಕರುಣಿಸಿದನು. ಪ್ರಭೆಯು ಹಲವರನ್ನು ಅಪೇಕ್ಷಿಸಿದಳು.

೪೨-೪೩. ಭಾನುಮತಿಯು ಒಬ್ಬ ಮಗನನ್ನು ಆರಿಸಿಕೊಂಡಳು. ಅವನೇ ಅಸಮಂಜಸ. ಯದುವಿನ ಮಗಳಾದ ಪ್ರಭೆಯು ಬಳಿಕ ಅರವತ್ತು ಸಾವಿರ ಮಕ್ಕಳನ್ನು ಹೆತ್ತಳು. ಅವರು ಯಜ್ಞಾಶ್ವವನ್ನು ಹುಡುಕುವುದಕ್ಕಾಗಿ ಭೂಮಿಯನ್ನು ಅಗೆಯುತ್ತಿರಲು, ಕಪಿಲಮುನಿರೂಪನಾದ ವಿಷ್ಣುವಿನ ಕ್ರೋಧಜ್ವಾಲೆಗೆ ಸಿಕ್ಕಿ ಸುಟ್ಟುಹೋದರು. ಅಸಮಂಜನನ ಮಗನಿಗೆ ಅಂಶುಮಂತನೆಂದು ಖ್ಯಾತಿಯಾಯಿತು.*

* ಪೂರ್ವಕಥಾ ಸಂದರ್ಭ :—ಮಹಾಧರ್ಮಿಷ್ಠನಾದ ಸಗರಚಕ್ರವರ್ತಿಯು ಅಶ್ವಮೇಧಯಾಗ ಮಾಡಬೇಕೆಂದು ಯಜ್ಞಾಶ್ವವನ್ನು ಬಿಟ್ಟನು. ತನ್ನ ಪದವಿಗೆ ಮುಂದೆ ಎಲ್ಲಿ ಲೋಪ ಬಂದೀತೋ ಎಂದು ಹೆದರಿ, ಇಂದ್ರನು ಆ ಕುದುರೆಯನ್ನಪಹರಿಸಿ, ಪಾತಾಳದಲ್ಲಿ ತಪಸ್ಸು ಮಾಡುತ್ತಿದ್ದ ಕಪಿಲಮಹರ್ಷಿಗಳ ಸಮೀಪದಲ್ಲಿ ಅದನ್ನು ಕಟ್ಟಿಹಾಕಿದನು. ಇತ್ತ ಕುದುರೆಯನ್ನು ಎಲ್ಲೆಲ್ಲೂ ಹುಡುಕಿ ಕಾಣದೆ, ಸಗರನ ಅರವತ್ತುಸಾವಿರ ಜನ ಮಕ್ಕಳು ಭೂಮಿಯನ್ನೆಲ್ಲ ಅಗೆದು ನೋಡುತ್ತ ಪಾತಾಳದವರೆಗೂ ಹೋದರು. ಅಲ್ಲಿ ಧ್ಯಾನನಿರತನಾಗಿದ್ದ ಕಪಿಲಮುನಿಯ ಬಳಿಯಲ್ಲಿ ಅದು ಇದ್ದುದನ್ನು ಕಂಡು, ಅವನೇ ಅದನ್ನು ಕದ್ದವನೆಂದು ಅವನನ್ನು ಪೀಡಿಸಿ ಧ್ಯಾನಕ್ಕೆ ವಿಘ್ನವನ್ನು ತಂದರು. ಆ ತಪಸ್ವಿಯು ಮಹಾಕ್ರೋಧದಿಂದ ಕಣ್ದೆರೆದನು. ಆಗ ದೊಡ್ಡ ಬೆಂಕಿ ಹುಟ್ಟಿ ಅವರೆಲ್ಲರೂ ದಗ್ಧರಾದರು. ಮುಂದೆ ಭಗೀರಥನು ದೇವಲೋಕದಿಂದ ಗಂಗೆಯನ್ನು ತಂದು ಇವರೆಲ್ಲರಿಗೂ ಸದ್ಗತಿಯನ್ನು ಕಾಣಿಸಿದನು.

ತಸ್ಯ ಪುತ್ರೋ ದಿಲೀಪಸ್ತು ದಿಲೀಪಾತ್ತು ಭಗೀರಥಃ।
ಯೇನ ಭಾಗೀರಥೀ ಗಂಗಾ ತಪಃ ಕೃತ್ವಾವತಾರಿತಾ ॥೪೪॥

ಭಗೀರಥಸ್ಯ ತನಯೋ ನಾಭಾಗ ಇತಿ ವಿಶ್ರುತಃ।
ನಾಭಾಗಸ್ಯಾಂಬರೀಷೋಽಭೂತ್ಸಿಂಧುದ್ವೀಪಸ್ತತೋಽಭವತ್ ॥೪೫॥

ತಸ್ಯಾಯುತಾಯುಃ ಪುತ್ರೋಽಭೂದೃತುಪರ್ಣಸ್ತತೋಽಭವತ್।
ತಸ್ಯ ಕಲ್ಮಾಷಪಾದಸ್ತು ಸರ್ವಕರ್ಮಾ ತತಃ ಸ್ಮೃತಃ ॥೪೬॥

ತಸ್ಯಾನರಣ್ಯಃ ಪುತ್ರೋಽಭೂನ್ನಿಘ್ನಸ್ತಸ್ಯ ಸುತೋಽಭವತ್।
ನಿಘ್ನಪುತ್ರಾವುಭೌ ಜಾತಾವನಮಿತ್ರರಘೂ ನೃಪೌ ॥೪೭॥

ಅನಮಿತ್ರೋ ವನಮಗಾದ್ಭವಿತಾ ಸ ಕೃತೇ ನೃಪಃ।
ರಘೋರಭೂದ್ದಿಲೀಪಸ್ತು ದಿಲೀಪಾದಜಕಸ್ತಥಾ ॥೪೮॥

---

೪೪. ಅಂಶುಮಂತನ ಪುತ್ರನು ದಿಲೀಪನು. ತನ್ನ ತಪಸ್ಸಿನ ಮಹಿಮೆಯಿಂದ ಗಂಗಾನದಿಯನ್ನು ದೇವಲೋಕದಿಂದ ಭೂಮಿಗೆ ಇಳಿಸಿದ ಭಗೀರಥನೇ ಇವನ ಮಗನು.

೪೫. ಭಗೀರಥನಿಗೆ ಪ್ರಸಿದ್ಧನಾದ ನಾಭಾಗನೂ, ಅವನಿಗೆ ಅಂಬರೀಷನೂ, ಆತನಿಗೆ ಸಿಂಧುದ್ವೀಪನೂ ಪುತ್ರರಾದರು.

೪೬. ಸಿಂಧುದ್ವೀಪನಿಗೆ ಅಯುತಾಯುವೂ, ಆತನಿಗೆ ಋತುಪರ್ಣನೂ ಮಕ್ಕಳಾದರು. ಋತುಪರ್ಣನ ಮಗನು ಕಲ್ಮಾಷಪಾದನು. ಅವನಿಂದ ಸರ್ವಕರ್ಮನೆಂಬ ಪುತ್ರನು ಉದಯಿಸಿದನು.

೪೭. ಅವನಿಗೆ ಅನರಣ್ಯನೂ, ಅನರಣ್ಯನಿಗೆ ನಿಘ್ನನೂ ಮಕ್ಕಳಾದರು. ಅನಮಿತ್ರನೂ, ರಘುವೂ ನಿಘ್ನನ ಸುತರಾಗಿ ಜನಿಸಿದರು.

೪೮. ಅನಮಿತ್ರನು ಅರಣ್ಯಕ್ಕೆ ತರಳಿದನು. ಅವನು ಕೃತಯುಗದಲ್ಲಿ ರಾಜನಾಗಿ ಹುಟ್ಟುವನು. ರಘುವಿಗೆ ದೀಲಿಪನು ಜನಿಸಿದನು. ದೀಲಿಪನ ಮಗ ಅಜ.

ದೀರ್ಘಬಾಹುರಜಾಜ್ಜಾತಶ್ಚಾಜಪಾಲಸ್ತತೋ ನೃಪಃ ।
ತಸ್ಮಾದ್ದಶರಥೋ ಜಾತಸ್ತಸ್ಯ ಪುತ್ರಚತುಷ್ಟಯಂ ॥೪೯॥

ನಾರಾಯಣಾತ್ಮಕಾಃ ಸರ್ವೇ ರಾಮಸ್ತೇಷ್ವಗ್ರಜೋಽಭವತ್ ।
ರಾವಣಾಂತಕರಸ್ತದ್ವದ್ರಘೂಣಾಂ ವಂಶವರ್ಧನಃ ॥೫೦॥

ವಾಲ್ಮೀಕಿಸ್ತಸ್ಯ ಚರಿತಂ ಚಕ್ರೇ ಭಾರ್ಗವಸತ್ತಮಃ ।
ತಸ್ಯ ಪುತ್ರೌ ಕುಶಲವಾವಿಕ್ಷ್ವಾಕುಕುಲವರ್ಧನೌ ॥೫೧॥

ಅತಿಥಿಸ್ತು ಕುಶಾಜ್ಜಜ್ಞೇ ನಿಷಧಸ್ತಸ್ಯ ಚಾತ್ಮಜಃ ।
ನಲಸ್ತು ನೈಷಧಸ್ತಸ್ಮಾನ್ನಭಾಸ್ತಸ್ಮಾದಜಾಯತ ॥೫೨॥

ನಭಸಃ ಪುಂಡರೀಕೋಽಭೂತ್ಕ್ಷೇಮಧನ್ವಾ ತತಃ ಸ್ಮೃತಃ ।
ತಸ್ಯ ಪುತ್ರೋಽಭವದ್ವೀರೋ ದೇವಾನೀಕಃ ಪ್ರತಾಪವಾನ್ ॥೫೩॥

---

೪೯. ಅಜನಿಂದ ದೀರ್ಘಬಾಹುವೂ, ಅವನಿಂದ ಅಜಪಾಲನೂ ಉದಿಸಿದರು. ಅಜಪಾಲನ ಮಗನು ದಶರಥನು ; ಇವನಿಗೆ ನಾಲ್ವರು ಮಕ್ಕಳು.

೫೦. ಅವರೆಲ್ಲರೂ ವಿಷ್ಣುವಿನ ಅಂಶದಿಂದ ಹುಟ್ಟಿದರು. ಅವರಲ್ಲಿ ಹಿರಿಯವನೇ ರಾಮನು. ಅವನು ರಾವಣನನ್ನು ಸಂಹರಿಸಿದನು. ಮತ್ತು ರಘುವಂಶಕ್ಕೆ ಬಹಳ ಪ್ರಖ್ಯಾತಿಯನ್ನು ತಂದನು.

೫೧. ಭೃಗುವಂಶದಲ್ಲಿ ಶ್ರೇಷ್ಠನೆನಿಸಿದ ವಾಲ್ಮೀಕಿಮಹರ್ಷಿಯು ಶ್ರೀರಾಮನ ಚರಿತ್ರವನ್ನು ರಾಮಾಯಣಗ್ರಂಥರೂಪವಾಗಿ ರಚಿಸಿದನು. ಕುಶಲವರು ರಾಮನ ಮಕ್ಕಳು. ಅವರು ಇಕ್ಷ್ವಾಕು ವಂಶಕ್ಕೆ ಬಹಳ ಕೀರ್ತಿಯನ್ನು ತಂದರು.

೫೨. ಕುಶನಿಂದ ಅತಿಥಿಯೂ, ಅವನಿಂದ ನಿಷಧನೂ ಜನಿಸಿದರು. ನಿಷಧದೇಶಾಧಿಪತಿಯಾದ ನಲನು ನಿಷಧನ ಮಗನು. ಅವನಿಗೆ ನಭಸ್ ಎಂಬ ಮಗನು ಹುಟ್ಟಿದನು.

೫೩. ನಭಸ್ಸಿನಿಂದ ಪುಂಡರೀಕನೂ, ಅವನಿಂದ ಕ್ಷೇಮಧನ್ವನೂ ಉತ್ಪನ್ನರಾದರು. ಪ್ರತಾಪಶಾಲಿಯಾದ ದೇವಾನೀಕನು ಇವನ ಮಗನು.

ಅಹೀನಗುಸ್ತಸ್ಯ ಸುತಃ ಸಹಸ್ರಾಶ್ವಸ್ತತಃ ಪರಃ ।
ತತಶ್ಚಂದ್ರಾವಲೋಕಸ್ತು ತಾರಾಪೀಡಸ್ತತೋಽಭವತ್ ॥೫೪॥

ತಸ್ಯಾತ್ಮಜಶ್ಚಂದ್ರಗಿರಿರ್ಭಾನುಶ್ಚಂದ್ರಸ್ತತೋಽಭವತ್ ।
ಶ್ರುತಾಯುರಭವತ್ತಸ್ಮಾದ್ಭಾರತೇ ಯೋ ನಿಪಾತಿತಃ ॥೫೫॥

ನಲೌ ದ್ವಾವೇವ ವಿಖ್ಯಾತೌ ವಂಶೇ ಕಶ್ಯಪಸಂಭವೇ ।
ವೀರಸೇನಸುತಸ್ತದ್ವನ್ನೈಷಧಶ್ಚ ನರಾಧಿಪಃ ॥೫೬॥

ಏತೇ ವೈವಸ್ವತೇ ವಂಶೇ ರಾಜಾನೋ ಭೂರಿದಕ್ಷಿಣಾಃ ।
ಇಕ್ಷ್ವಾಕುವಂಶಪ್ರಭವಾಃ ಪ್ರಾಧಾನ್ಯೇನ ಪ್ರಕೀರ್ತಿತಾಃ ॥೫೭॥

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸೂರ್ಯವಂಶಾನುಕೀರ್ತನಂ ನಾಮ ದ್ವಾದಶೋಽಧ್ಯಾಯಃ**

---

೫೪. ದೇವಾನೀಕನ ಮಗನು ಅಹೀನಗು. ಅವನ ಮಗ ಸಹಸ್ರಾಶ್ವ. ಅವನಿಂದ ಚಂದ್ರಾಲೋಕನೂ, ಅವನಿಂದ ತಾರಾಪೀಡನೂ ಜನಿಸಿದರು.

೫೫. ಅವನ ಮಗನು ಚಂದ್ರಗಿರಿ; ಅವನ ಮಗ ಭಾನು; ಅವನ ಪುತ್ರ ಚಂದ್ರ. ಅವನಿಂದ ಶ್ರುತಾಯುವು ಹುಟ್ಟಿದನು. ಇವನು ಭಾರತಯುದ್ಧದಲ್ಲಿ ಮಡಿದನು.

೫೬. ಕಶ್ಯಪರ ವಂಶದಲ್ಲಿ ಪ್ರಸಿದ್ಧರಾದ ನಳರು ಇಬ್ಬರೇ; ಒಬ್ಬನು ವೀರಸೇನನ ಮಗ; ಮತ್ತೊಬ್ಬನು ನಿಷಧ ದೇಶದ ರಾಜ.

೫೭. ವೈವಸ್ವತ ವಂಶದಲ್ಲಿ ಹುಟ್ಟಿದ ಉದಾರ ಸ್ವಭಾವದವರಾದ ರಾಜರು ಇವರು. ಇಕ್ಷ್ವಾಕು ಕುಲದಲ್ಲಿ ಹುಟ್ಟಿದವರ ವೃತ್ತಾಂತವನ್ನು ವಿಶೇಷವಾಗಿ ವಿಸ್ತರಿಸಿ ಹೇಳಾಯಿತು.

## ಅಧ್ಯಾಯದ ಸಾರಾಂಶ

ದಿಗ್ವಿಜಯಕ್ಕಾಗಿ ಹೋಗಿ ಹಿಂದಿರುಗದಿರುವ ಇಲನನ್ನು ಹುಡುಕುತ್ತ ಅವನ ತಮ್ಮಂದಿರಾದ ಇಕ್ಷ್ವಾಕು ಮೊದಲಾದವರು ಬುಧನ ಆಶ್ರಮಕ್ಕೆ ಬಂದರು. ಅಲ್ಲಿ ಚಂದ್ರಪ್ರಭವೆಂಬ ಅವನ ಕುದುರೆಯು ಹೆಣ್ಣಾಗಿದ್ದುದನ್ನು ಕಂಡು, ಆಶ್ಚರ್ಯದಿಂದ ವಸಿಷ್ಠರನ್ನು ಕೇಳಲು, ಅವರು ಜ್ಞಾನದೃಷ್ಟಿಯಿಂದ ನೋಡಿ, ಪರಮೇಶ್ವರನನ್ನು ಆರಾಧಿಸಿ ತೃಪ್ತಿಪಡಿಸಿದರೆ ಇಲನು ಮತ್ತೆ ಪುರುಷನಾಗುವನೆಂದು ಹೇಳಿದರು. ಇವರು ಹಾಗೆಯೇ ಮಾಡಲು, ಮಹಾದೇವನು ಬಂದು ತನ್ನ ಶಾಪವು ಅಲಂಘ್ಯವಾದುದೆಂದೂ, ಇಕ್ಷ್ವಾಕುವು ಅಶ್ವಮೇಧಯಾಗವನ್ನು ಮಾಡಿ ಪಡೆದಿರುವ ಪುಣ್ಯವನ್ನು ತನಗೆ ಕೊಟ್ಟರೆ ಇಲನು ಕಿಂಪುರುಷರೂಪವನ್ನು ತಾಳುವನೆಂದೂ ತಿಳಿಸಿದನು. ಇಕ್ಷ್ವಾಕುವು ಅದಕ್ಕೆ ಒಪ್ಪಿಕೊಳ್ಳಲು, ಇಲನು ಒಂದು ತಿಂಗಳು ಪುರುಷನಾಗಿಯೂ, ಮತ್ತೊಂದು ತಿಂಗಳು ಸ್ತ್ರೀಯಾಗಿಯೂ ಆಗಿ ಕಾಲಕಳೆಯುತ್ತಿದ್ದನು. ಬುಧನ ಮನೆಯಲ್ಲಿದ್ದಾಗ ಅವನಿಗೆ ಪುರೂರವಸ್ಸೆಂಬ ಮಗನು ಹುಟ್ಟಿದನು. ಇವನು ಚಂದ್ರವಂಶವನ್ನು ಬೆಳೆಸಿದನು. ಇವನನ್ನು ಪ್ರತಿಷ್ಠಾನನಗರದಲ್ಲಿ ದೊರೆಯಾಗಿ ನಿಲ್ಲಿಸಿ ಇಲನು ಇಲಾವೃತವರ್ಷಕ್ಕೆ ಹೊರಟುಹೋದನು. ಇಕ್ಷ್ವಾಕು ಮಹಾರಾಜನ ಸಂತತಿಯು ಬೆಳೆಯಿತು. ರಾಮಲಕ್ಷ್ಮಣಾದಿಗಳು ಅಲ್ಲೇ ಜನಿಸಿ ಖ್ಯಾತಿವಂತರಾದರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಹನ್ನೆರಡನೆಯ ಅಧ್ಯಾಯವು ಮುಗಿದುದು



## ಅಥ ಶ್ರೀಮತ್ಸ್ಯಮಹಾಪುರಾಣೇ ತ್ರಯೋದಶೋಽಧ್ಯಾಯಃ

|| ಮನುರುವಾಚ ||

ಭಗವಞ್ಛ್ರೋತುಮಿಚ್ಛಾಮಿ ಪಿತೄಣಾಂ ವಂಶಮುತ್ತಮಂ |
ರವೇಶ್ಚ ಶ್ರಾದ್ಧದೇವತ್ವಂ ಸೋಮಸ್ಯ ಚ ವಿಶೇಷತಃ || ೧ ||

|| ಮತ್ಸ್ಯ ಉವಾಚ ||

ಹಂತ ತೇ ಕಥಯಿಷ್ಯಾಮಿ ಪಿತೄಣಾಂ ವಂಶಮುತ್ತಮಂ |
ಸ್ವರ್ಗೇ ಪಿತೃಗಣಾಸ್ಸಪ್ತ ತ್ರಯಸ್ತೇಷಾಮಮೂರ್ತಯಃ || ೨ ||

ಮೂರ್ತಿಮಂತೋಽಥ ಚತ್ವಾರಃ ಸರ್ವೇಷಾಮಮಿತೌಜಸಃ |
ಅಮೂರ್ತಯಃ ಪಿತೃಗಣಾ ವೈರಾಜಸ್ಯ ಪ್ರಜಾಪತೇಃ || ೩ ||

ಯಜಂತಿ ಯಾನ್ ದೇವಗಣಾ ವೈರಾಜಾ ಇತಿ ವಿಶ್ರುತಾಃ |
ಯೇ ಚೈತೇ ಯೋಗವಿಭ್ರಷ್ಟಾಃ ಪ್ರಾಪ್ಯ ಲೋಕಾನ್ಸನಾತನಾನ್ || ೪ ||

---

೧. ಮನುಚಕ್ರವರ್ತಿ ಹೇಳಿದನು.—ಓ ದೇವಾ, ಪಿತೃಗಳ ಶ್ರೇಷ್ಠವಾದ ವಂಶವನ್ನು ಕೇಳಬಯಸುತ್ತೇನೆ. ಸೂರ್ಯನೂ, ಮುಖ್ಯವಾಗಿ ಚಂದ್ರನೂ ಶ್ರಾದ್ಧ ದೇವತೆಗಳು ಹೇಗಾದರು ? ವಿವರಿಸಿ ಹೇಳು.

೨-೩. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಆಗಲಿ ; ಪಿತೃಗಳ ವಂಶವನ್ನು ಹೇಳುವೆನು.—ಸ್ವರ್ಗದಲ್ಲಿ ಪಿತೃಗಳ ಗುಂಪು ಏಳಿವೆ. ಅವರಲ್ಲಿ ಮೂರು ಗುಂಪಿನವರು ನಿರಾಕಾರರು. ಮಿಕ್ಕ ನಾಲ್ವರು ಸಾಕಾರರು. ಎಲ್ಲರಿಗಿಂತ ಅಧಿಕತೇಜಸ್ವಿಗಳು. ನಿರಾಕಾರರಾದ ಪಿತೃ ಗಣಗಳವರು ವೈರಾಜಪ್ರಜಾಪತಿಯಿಂದ ಉತ್ಪನ್ನರಾದವರು. ವೈರಾಜರೆಂಬ ದೇವ ಗಣದವರು ಇವರನ್ನು ಪೂಜಿಸುತ್ತಾರೆ.

೪-೬. ಯೋಗಾಭ್ಯಾಸದಲ್ಲಿ ಸಿದ್ಧಿಯನ್ನು ಪಡೆಯದವರು ಪುಣ್ಯಫಲಾನುಭವಕ್ಕಾಗಿ ಶಾಶ್ವತವಾದ ಲೋಕಗಳನ್ನು ಸೇರಿ, ಪುನಃ ಚತುರ್ಮುಖಬ್ರಹ್ಮನ ದಿವಸಾವಸಾನದಲ್ಲಿ ಬ್ರಹ್ಮಜ್ಞಾನಿಗಳಾಗಿ ಹುಟ್ಟುವರು. ಹಿಂದಿನ ಯೋಗಾಭ್ಯಾಸದ

**ಪುನರ್ಬ್ರಹ್ಮದಿನಾಂತೇ ತು ಜಾಯಂತೇ ಬ್ರಹ್ಮವಾದಿನಃ ।**
**ಸಂಪ್ರಾಪ್ಯ ತಾಂ ಸ್ಮೃತಿಂ ಭೂಯೋ ಯೋಗಂ ಸಾಂಖ್ಯಮನುತ್ತಮಂ ॥**

**ಸಿದ್ಧಿಂ ಪ್ರಯಾಂತಿ ಯೋಗೇನ ಪುನರಾವೃತ್ತಿದುರ್ಲಭಾಂ ।**
**ಯೋಗಿನಾಮೇವ ದೇಯಾನಿ ತಸ್ಮಾಚ್ಛ್ರಾದ್ಧಾನಿ ದಾತೃಭಿಃ ॥ ೬ ॥**

**ಏತೇಷಾಂ ಮಾನಸೀ ಕನ್ಯಾ ಪತ್ನೀ ಹಿಮವತೋ ಮತಾ ।**
**ಮೈನಾಕಸ್ತಸ್ಯ ದಾಯಾದಃ ಕ್ರೌಂಚಸ್ತಸ್ಯಾಗ್ರಜೋಽಭವತ್ ॥ ೭ ॥**

**ಕ್ರೌಂಚದ್ವೀಪಃ ಸ್ಮೃತೋ ಯೇನ ಚತುರ್ಥೋ ಘೃತಸಂವೃತಃ ।**
**ಮೇನಾ ಚ ಸುಷುವೇ ತಿಸ್ರಃ ಕನ್ಯಾ ಯೋಗವತೀಸ್ತತಃ ।**
**ಉಮೈಕಪರ್ಣಾಪರ್ಣಾ ಚ ತೀವ್ರವ್ರತಪರಾಯಣಾಃ ॥ ೮ ॥**

**ರುದ್ರಸ್ಯೈಕಾ ಸಿತಸ್ಯೈಕಾ ಜೈಗೀಷವ್ಯಸ್ಯ ಚಾಪರಾ ।**
**ದತ್ತಾ ಹಿಮವತಾ ಬಾಲಾಸ್ಸರ್ವಾ ಲೋಕೇ ತಪೋಧಿಕಾಃ ॥ ೯ ॥**

---

ಸ್ಮೃತಿಬಲದಿಂದ ಆತ್ಮಜ್ಞಾನವನ್ನೂ ಪಡೆದು ಪುನರಾವೃತ್ತಿರಹಿತವಾದ ಮೋಕ್ಷವನ್ನು ಸೇರುವರು. ಆದುದರಿಂದ ಶ್ರಾದ್ಧಸಂಬಂಧವಾದ ದಾನಭೋಜನಾದಿಗಳನ್ನು ಯೋಗಿಗಳಲ್ಲೇ ವಿನಿಯೋಗಿಸಬೇಕು.

೭. ಈ ಪಿತೃಗಣಗಳ ಕನ್ಯೆಯಾದ ಮಾನಸಿಯನ್ನು ಹಿಮವಂತನು ಮದುವೆಯಾದನು. ಅವನಿಗೆ ಮೈನಾಕನೂ ಅವನ ಅಣ್ಣನಾದ ಕ್ರೌಂಚನೂ ಮಕ್ಕಳಾದರು. ತುಪ್ಪದ ಸಮುದ್ರವು ಸುತ್ತಲೂ ಬಳಸಿಕೊಂಡಿರುವ ನಾಲ್ಕನೆಯ ದ್ವೀಪಕ್ಕೆ ಕ್ರೌಂಚವೆಂಬ ಹೆಸರು ಬಂದುದು ಇವನಿಂದಲೇ.

೮. ಹಿಮವಂತನ ಮತ್ತೊಬ್ಬ ಪತ್ನಿಯಾದ ಮೇನೆಯು ಉಮಾ, ಏಕಪರ್ಣಾ, ಅಪರ್ಣಾ ಎಂಬ ಮೂವರು ಹೆಣ್ಣುಮಕ್ಕಳನ್ನು ಪ್ರಸವಿಸಿದಳು. ಇವರೆಲ್ಲರೂ ಯೋಗಾಭ್ಯಾಸದಲ್ಲಿ ಆಸಕ್ತರಾಗಿದ್ದರು.

೯. ತಪೋನಿಷ್ಠರಾದ ಈ ಮೂವರು ಕನ್ಯೆಯರನ್ನೂ ಹಿಮವಂತನು ರುದ್ರ, ಸಿತ, ಮತ್ತು ಜೈಗೀಷವ್ಯರೆಂಬ ಮೂವರಿಗೆ ಪಾಣಿಗ್ರಹಣ ಮಾಡಿಕೊಟ್ಟನು.

|| ಋಷಯ ಊಚುಃ ||

ಕಸ್ಮಾದ್ದಾಕ್ಷಾಯಣೀ ಪೂರ್ವಂ ದದಾಹಾತ್ಮಾನಮಾತ್ಮನಾ ।
ಹಿಮವದ್ದುಹಿತಾ ತದ್ವತ್ಕಥಂ ಜಾತಾ ಮಹೀತಲೇ ||೧೦||

ಸಂಹರಂತೀ ಕಿಮುಕ್ತಾsಸೌ ಸುತಾ ವಾ ಬ್ರಹ್ಮಸೂನುನಾ ।
ದಕ್ಷೇಣ ಲೋಕಜನನೀ ಸೂತ ವಿಸ್ತರತೋ ವದ ||೧೧||

|| ಸೂತ ಉವಾಚ ||

ದಕ್ಷಸ್ಯ ಯಜ್ಞೇ ವಿತತೇ ಪ್ರಭೂತವರದಕ್ಷಿಣೇ ।
ಸಮಾಹೂತೇಷು ದೇವೇಷು ಪ್ರೋವಾಚ ಪಿತರಂ ಸತೀ ||೧೨||

ಕಿಮರ್ಥಂ ತಾತ ಭರ್ತಾ ಮೇ ಯಜ್ಞೇsಸ್ಮಿನ್ನಾಭಿಮಂತ್ರಿತಃ ।
ಅಯೋಗ್ಯ ಇತಿ ತಾಮಾಹ ದಕ್ಷೋ ಯಜ್ಞೇಷು ಶೂಲಭೃತ್ ||೧೩||

ಉಪಸಂಹಾರಕೃದ್ರುದ್ರಸ್ತೇನಾಮಂಗಳಭಾಗಯಂ ।
ಚುಕೋಪಾಥ ಸತೀ ದೇಹಂ ತ್ಯಕ್ಷ್ಯಾಮೀತಿ ತ್ವದುದ್ಭವಂ ||೧೪||

---

೧೦-೧೧. ಋಷಿಗಳು ಹೇಳಿದರು.—ಎಲೈ ಸೂತಪೌರಾಣಿಕನೇ, ದಾಕ್ಷಾಯಣಿಯು ಏತಕ್ಕಾಗಿ ತನ್ನನ್ನು ಸುಟ್ಟುಕೊಂಡಳು? ಅವಳು ಹಿಮವಂತನ ಮಗಳಾಗಿ ಭೂಮಿಯಲ್ಲಿ ಹುಟ್ಟಿದುದು ಹೇಗೆ? ಅವಳು ಪ್ರಾಣಬಿಡುವಾಗ ದಕ್ಷಬ್ರಹ್ಮನು ಅವಳಿಗೆ ಏನು ಹೇಳಿದನು?

೧೨. ಸೂತಪೌರಾಣಿಕನು ಹೇಳಿದನು.—ದಕ್ಷಬ್ರಹ್ಮನು ಯಥೇಚ್ಛವಾಗಿ ದಕ್ಷಿಣಾದಿಗಳನ್ನು ಕೊಟ್ಟು ಸಂಭ್ರಮದಿಂದ ಯಜ್ಞವನ್ನು ಮಾಡಿದನು. ದೇವತೆಗಳೆಲ್ಲರನ್ನೂ ಕರೆದಿದ್ದನು. ಅವನ ಮಗಳಾದ ಸತಿಯು "ಅಪ್ಪಾ, ನನ್ನ ಪತ್ನಿಯನ್ನೇಕೆ ಈ ಯಜ್ಞಕ್ಕೆ ಕರೆಯಲಿಲ್ಲ?" ಎಂದು ಅವನನ್ನು ಕೇಳಿದಳು.

೧೩. "ರುದ್ರನು ಜಗತ್ತಿನ ಸಂಹಾರಕರ್ತನು; ಅಮಂಗಲ ಭೂಯಿಷ್ಠನು. ಆದಕಾರಣ ಯಜ್ಞಗಳಿಗೆ ಬರಲು ಅಯೋಗ್ಯನು" ಎಂದು ಮಗಳಿಗೆ ಅವನು ಉತ್ತರಕೊಟ್ಟನು.

೧೪-೧೫. ಬಳಿಕ ಸತಿಯು ಕೋಪಗೊಂಡು "ನಿನ್ನಿಂದ ಹುಟ್ಟಿದ ಈ ದೇಹವನ್ನು ಈಗಲೇ ತೊರೆಯುವೆನು. ಹತ್ತು ಜನ ತಂದೆಗಳಿಗೆ ನೀನೊಬ್ಬನೇ ಮಗ

**ದಶಾನಾಂ ತ್ವಂ ಚ ಭವಿತಾ ಪಿತ್ರ್ಯಾಣಾಮೇಕಪುತ್ರಕಃ |**
**ಕ್ಷತ್ರಿಯತ್ವೇಽಶ್ವಮೇಧೇ ಚ ರುದ್ರಾತ್ತ್ವಂ ನಾಶಮೇಷ್ಯಸಿ ||೧೫||**

**ಇತ್ಯುಕ್ತ್ವಾ ಯೋಗಮಾಸ್ಥಾಯ ಸ್ವದೇಹೋದ್ಭೂತತೇಜಸಾ |**
**ನಿರ್ದಹಂತೀ ತದಾತ್ಮಾನಂ ಸದೇವಾಸುರಕಿನ್ನರೈಃ ||೧೬||**

**ಕಿಂ ಕಿಮೇತದಿತಿ ಪ್ರೋಕ್ತಾ ಗಂಧರ್ವಗಣಗುಹ್ಯಕೈಃ |**
**ಉಪಗಮ್ಯಾಬ್ರವೀದ್ದಕ್ಷಃ ಪ್ರಣಿಪತ್ಯಾಥ ದುಃಖಿತಃ ||೧೭||**

**ತ್ವಮಸ್ಯ ಜಗತೋ ಮಾತಾ ಜಗತ್ಸೌಭಾಗ್ಯದೇವತಾ |**
**ದುಹಿತೃತ್ವಂ ಗತಾ ದೇವಿ ಮಮಾನುಗ್ರಹಕಾಮ್ಯಯಾ ||೧೮||**

**ನ ತ್ವಯಾ ರಹಿತಂ ಕಿಂಚಿದ್ಬ್ರಹ್ಮಾಂಡೇ ಸಚರಾಚರಂ |**
**ಪ್ರಸಾದಂ ಕುರು ಧರ್ಮಜ್ಞೇ ನ ಮಾಂ ತ್ಯಕ್ತುಮಿಹಾರ್ಹಸಿ ||೧೯||**

---

ನಾಗು (ಎಂದರೆ ನಿನ್ನ ತಂದೆಗೆ ನೀನೊಬ್ಬನೇ ಮಗ. ಅವನ ಸೋದರರು ಒಂಬತ್ತು ಜನರು ಮಕ್ಕಳಿಲ್ಲದವರಾಗಲಿ ಎಂದು ಅಭಿಪ್ರಾಯ.) ನೀನು ಕ್ಷತ್ರಿಯನಾಗಿ ಹುಟ್ಟಿ ಅಶ್ವಮೇಧಯಾಗವನ್ನು ಮಾಡುವಾಗ ರುದ್ರನು ನಿನ್ನನ್ನು ಸಂಹರಿಸುವನು."

೧೬–೧೭. ಹೀಗೆಂದು ಹೇಳಿ ಯೋಗಮಹಿಮೆಯಿಂದ ತನ್ನ ದೇಹದಲ್ಲೇ ಹುಟ್ಟಿದ ತೇಜಸ್ಸಿನಲ್ಲಿ ದಗ್ಧಳಾದಳು. ದೇವತೆಗಳು, ಅಸುರರು, ಕಿನ್ನರರು, ಗಂಧರ್ವರು ಮತ್ತು ಗುಹ್ಯಕರು "ಇದೇನು ? ಇದೇನು ?" ಎಂದು ಗಾಬರಿಯಿಂದ ಕೇಳಿದರು. ಬಳಿಕ ದಕ್ಷಬ್ರಹ್ಮನು ಅವಳ ಬಳಿಗೆ ಬಂದು, ದುಃಖದಿಂದ ನಮಸ್ಕರಿಸಿ ಇಂತೆಂದನು.

೧೮–೧೯. "ಈ ಜಗತ್ತಿಗೆ ತಾಯಿ ನೀನು ; ಲೋಕಕ್ಕೆ ಸೌಭಾಗ್ಯವನ್ನು ಕೊಡುವ ದೇವತೆ ನೀನು. ಎಲೌ ದೇವಿ, ನನಗೆ ಅನುಗ್ರಹಮಾಡಬೇಕೆಂಬ ಅಭಿಲಾಷೆಯಿಂದ ನೀನು ನನಗೆ ಮಗಳಾಗಿ ಹುಟ್ಟಿದೆ. ಈ ಬ್ರಹ್ಮಾಂಡದಲ್ಲಿ ಚರಾಚರವೆನಿಸಿದ ಯಾವವಸ್ತುವೂ ನಿನ್ನನ್ನು ಬಿಟ್ಟಿರಲಾರದು. ದಯೆಯನ್ನು ತೋರು ; ಧರ್ಮಜ್ಞಳೇ, ನನ್ನನ್ನು ಬಿಡಬೇಡ."

ಪ್ರಾಹ ದೇವೀ ಯದಾರಬ್ಧಂ ತತ್ಕಾರ್ಯಂ ಮೇ ನ ಸಂಶಯಃ ।
ಕಿಂತ್ವವಶ್ಯಂ ತ್ವಯಾ ಮರ್ತ್ಯೇ ಹತಯಜ್ಞೇನ ಶೂಲಿನಾ ॥೨೦॥
ಪ್ರಸಾದೇ ಲೋಕಸೃಷ್ಟ್ಯರ್ಥಂ ತಪಃ ಕಾರ್ಯಂ ಮಮಾಂತಿಕೇ ।
ಪ್ರಜಾಪತಿಸ್ತ್ವಂ ಭವಿತಾ ದಶಾನಾಮಂಗಜೋಽಪ್ಯಲಂ ॥೨೧॥
ಮದಂಶೇನಾಂಗನಾಷಷ್ಟಿರ್ಭವಿಷ್ಯತ್ಯಂಗಜಾಸ್ತವ ।
ಮತ್ಸನ್ನಿಧೌ ತಪಃ ಕುರ್ವನ್ಪ್ರಾಪ್ಯಸೇ ಯೋಗಮುತ್ತಮಂ ॥೨೨॥
ಏವಮುಕ್ತೋಽಬ್ರವೀದ್ದಕ್ಷಃ ಕೇಷು ಕೇಷು ಮಯಾಽನಘೇ ।
ತೀರ್ಥೇಷು ಚ ತ್ವಂ ದ್ರಷ್ಟವ್ಯಾ ಸ್ತೋತವ್ಯಾ ಕೈಶ್ಚ ನಾಮಭಿಃ ॥೨೩॥

॥ ದೇವ್ಯುವಾಚ ॥

ಸರ್ವದಾ ಸರ್ವಭೂತೇಷು ದ್ರಷ್ಟವ್ಯಾ ಸರ್ವತೋ ಭುವಿ ।
ಸರ್ವಲೋಕೇಷು ಯತ್ಕಿಂಚಿದ್ರಹಿತಂ ನ ಮಯಾ ವಿನಾ ॥೨೪॥

---

೨೦-೨೨. "ಪ್ರಾರಂಭಿಸಿದುದನ್ನು ನಾನುಮಾಡಿಯೇ ತೀರಬೇಕು. ಅದರಲ್ಲಿ ಸಂಶಯವಿಲ್ಲ. ಆದರೆ ನೀನು ಮನುಷ್ಯನಾಗಿ ಹುಟ್ಟಿ ಅಶ್ವಮೇಧಯಾಗವನ್ನು ನಡೆಸುವಾಗ, ಅದು ಈಶ್ವರನಿಂದ ಕೆಟ್ಟುಹೋದ ಮೇಲೆ ಅವನನ್ನು ಪ್ರಸನ್ನನಾಗಿ ಮಾಡು. ಬಳಿಕ ಲೋಕಸೃಷ್ಟಿಗಾಗಿ ನನ್ನ ಸಮೀಪದಲ್ಲಿ ತಪಸ್ಸನ್ನು ಆಚರಿಸು. ಬ್ರಹ್ಮನ ಅವಯವಗಳಿಂದ ಜನಿಸಿ ಅಂಗಜರೆಂದೆನಿಸಿಕೊಳ್ಳುವ ಹತ್ತು ಜನ ಮಕ್ಕಳಲ್ಲಿ ನೀನೊಬ್ಬನಾಗುವೆ. ನನ್ನ ಅಂಶದಿಂದ ಅರವತ್ತು ಜನ ಕನ್ಯೆಯರು ನಿನ್ನ ಶರೀರದಲ್ಲಿ ಜನಿಸುವರು. ನನ್ನ ಸಾನ್ನಿಧ್ಯದಲ್ಲಿ ತಪಸ್ಸನ್ನು ನಡೆಸುತ್ತ ಉತ್ತಮಗತಿಯನ್ನು ಪಡೆಯುವೆ" ಎಂದು ದೇವಿಯು ಹೇಳಿದಳು.

೨೩. "ಪಾಪದೂರಳಾದ ಓ ದೇವೀ, ಯಾವ ಪುಣ್ಯತೀರ್ಥಗಳಲ್ಲಿ ನಿನ್ನ ದರ್ಶನವಂ ಮಾಡಲಿ? ಯಾವ ಯಾವ ಹೆಸರುಗಳಿಂದ ನಿನ್ನನ್ನು ಸ್ತುತಿಸಲಿ?" ಎಂದು ದಕ್ಷನು ಕೇಳಿದನು.

೨೪-೨೫. ದಾಕ್ಷಾಯಣಿಯು ಹೇಳಿದಳು.—ಯಾವಾಗಲೂ, ಎಲ್ಲ ಪ್ರಾಣಿಗಳಲ್ಲಿಯೂ, ಎಲ್ಲ ಕಡೆಗಳಲ್ಲಿಯೂ ನನ್ನನ್ನು ಕಾಣಬಹುದು. ಎಲ್ಲ ಲೋಕಗಳ

**ತಥಾಽಪಿ ಯೇಷು ಸ್ಥಾನೇಷು ದ್ರಷ್ಟವ್ಯಾ ಸಿದ್ಧಿಮೀಪ್ಸುಭಿಃ ।**
**ಸ್ಮರ್ತವ್ಯಾ ಭೂತಿಕಾಮೈರ್ವಾ ತಾನಿ ವಕ್ಷ್ಯಾಮಿ ತತ್ತ್ವತಃ** ॥೨೫॥

**ವಾರಾಣಸ್ಯಾಂ ವಿಶಾಲಾಕ್ಷೀ ನೈಮಿಷೇ ಲಿಂಗಧಾರಿಣೀ ।**
**ಪ್ರಯಾಗೇ ಲಲಿತಾ ದೇವೀ ಕಾಮಾಕ್ಷೀ ಗಂಧಮಾದನೇ** ॥೨೬॥

**ಮಾನಸೇ ಕುಮುದಾ ನಾಮ ವಿಶ್ವಕಾಯಾ ತಥಾಂಬರೇ** ॥೨೭॥

**ಗೋಮಂತೇ ಗೋಮತೀ ನಾಮ ಮಂದರೇ ಕಾಮಚಾರಿಣೀ ।**
**ಮದೋತ್ಕಟಾ ಚೈತ್ರರಥೇ ಜಯಂತೀ ಹಸ್ತಿನಾಪುರೇ** ॥೨೮॥

**ಕಾನ್ಯಕುಬ್ಜೇ ತಥಾ ಗೌರೀ ರಂಭಾ ಮಲಯಪರ್ವತೇ ।**
**ಏಕಾಂಭಕೇ ಕೀರ್ತಿಮತೀ ವಿಶ್ವಾಂ ವಿಶ್ವೇಶ್ವರೇ ವಿದುಃ** ॥೨೯॥

**ಪುಷ್ಕರೇ ಪುರುಹೂತೇತಿ ಕೇದಾರೇ ಮಾರ್ಗದಾಯಿನೀ ।**
**ನಂದಾ ಹಿಮವತಃ ಪೃಷ್ಠೇ ಗೋಕರ್ಣೇ ಭದ್ರಕರ್ಣಿಕಾ** ।೩೦।

---

ಲ್ಲಿಯೂ ನನ್ನನ್ನೀದು ಯಾವ ವಸ್ತುವೂ ಇರಲಾರದು. ಆದರೂ ಸಿದ್ಧಿಯನ್ನು ಬಯಸುವವರೂ, ಶ್ರೇಯಸ್ಕಾಮಿಗಳೂ ಯಾವ ಯಾವ ಕ್ಷೇತ್ರಗಳಲ್ಲಿ ನನ್ನ ದರ್ಶನ ಮಾಡಬೇಕು; ಧ್ಯಾನಮಾಡಬೇಕು ಎಂಬುದನ್ನು ಹೇಳುವೆನು ಕೇಳು.

೨೬-೨೭. ವಾರಾಣಸೀಕ್ಷೇತ್ರದಲ್ಲಿ ವಿಶಾಲಾಕ್ಷಿ, ನೈಮಿಷಾರಣ್ಯದಲ್ಲಿ ಲಿಂಗ ಧಾರಿಣಿ, ಪ್ರಯಾಗಕ್ಷೇತ್ರದಲ್ಲಿ ಲಲಿತೆ, ಗಂಧಮಾದನದಲ್ಲಿ ಕಾಮಾಕ್ಷಿ, ಮಾನಸ ತೀರ್ಥದಲ್ಲಿ ಕುಮುದೆ, ಅಂಬರಕ್ಷೇತ್ರದಲ್ಲಿ ವಿಶ್ವಕಾಯೆ.

೨೮. ಗೋಮಂತದಲ್ಲಿ ಗೋಮತಿ, ಮಂದರದಲ್ಲಿ ಕಾಮಚಾರಿಣಿ, ಚೈತ್ರರಥ ದಲ್ಲಿ ಮದೋತ್ಕಟೆ, ಹಸ್ತಿನಾಪುರದಲ್ಲಿ ಜಯಂತಿ.

೨೯. ಕಾನ್ಯಕುಬ್ಜದಲ್ಲಿ ಗೌರಿ, ಮಲಯಪರ್ವತದಲ್ಲಿ ರಂಭೆ, ಏಕಾಂಭಕ ಕ್ಷೇತ್ರದಲ್ಲಿ ಕೀರ್ತಿಮತಿ, ಮತ್ತು ವಿಶ್ವೇಶ್ವರದಲ್ಲಿ ವಿಶ್ವೆ ಎಂದು ನನ್ನನ್ನು ಹೇಳುವರು.

೩೦. ಪುಷ್ಕರದಲ್ಲಿ ಪುರುಹೂತೆ, ಕೇದಾರದಲ್ಲಿ ಮಾರ್ಗದಾಯಿನಿ, ಹಿಮವತ್ಪರ್ವತದ ಮೇಲೆ ನಂದೆ, ಗೋಕರ್ಣದಲ್ಲಿ ಭದ್ರಕರ್ಣಿಕೆ.

**ಸ್ಥಾನೇಶ್ವರೇ ಭವಾನೀ ತು ಬಿಲ್ವಲೇ ಬಿಲ್ವಪತ್ರಿಕಾ ।**
**ಶ್ರೀಶೈಲೇ ಮಾಧವೀ ನಾಮ ಭದ್ರಾ ಭದ್ರೇಶ್ವರೇ ತಥಾ ॥೩೧॥**

**ಜಯಾ ವರಾಹಶೈಲೇ ತು ಕಾಮಲಾ ಕಮಲಾಲಯೇ ।**
**ರುದ್ರಕೋಟ್ಯಾಂ ಚ ರುದ್ರಾಣೀ ಕಾಲೀ ಕಾಲಂಜರೇ ಗಿರೌ ॥೩೨॥**

**ಮಹಾಲಿಂಗೇ ತು ಕಪಿಲಾ ಮರ್ಕೋಟೇ ಮುಕುಟೇಶ್ವರೀ ।**
**ಶಾಲಗ್ರಾಮೇ ಮಹಾದೇವೀ ಶಿವಲಿಂಗೇ ಜಲಪ್ರಿಯಾ ॥೩೩॥**

**ಮಾಯಾಪುರ್ಯಾಂ ಕುಮಾರೀ ತು ಸಂತಾನೇ ಲಲಿತಾ ತಥಾ ।**
**ಉತ್ಪಲಾಕ್ಷೀ ಸಹಸ್ರಾಕ್ಷೇ ಕಮಲಾಕ್ಷೇ ಮಹೋತ್ಪಲಾ ॥೩೪॥**

**ಗಂಗಾಯಾಂ ಮಂಗಲಾ ನಾಮ ವಿಮಲಾ ಪುರುಷೋತ್ತಮೇ ।**
**ವಿಪಾಶಾಯಾಮಮೋಘಾಕ್ಷೀ ಪಾಟಲಾ ಪಾಂಡ್ರವರ್ಧನೇ ॥೩೫॥**

**ನಾರಾಯಣೀ ಸುಪಾರ್ಶ್ವೇ ತು ವಿಕೂಟೇ ಭದ್ರಸುಂದರೀ ।**
**ವಿಪುಲೇ ವಿಪುಲಾ ನಾಮ ಕಲ್ಯಾಣೀ ಮಲಯಾಚಲೇ ॥೩೬॥**

---

೩೧. ಸ್ಥಾನೇಶ್ವರದಲ್ಲಿ ಭವಾನಿ, ಬಿಲ್ವಲದಲ್ಲಿ ಬಿಲ್ವಪತ್ರಿಕೆ, ಶ್ರೀಶೈಲದಲ್ಲಿ ಮಾಧವಿ, ಭದ್ರೇಶ್ವರದಲ್ಲಿ ಭದ್ರೆ.

೩೨. ವರಾಹಶೈಲದಲ್ಲಿ ಜಯೆ, ಕಮಲಾಲಯದಲ್ಲಿ ಕಾಮಲೆ, ರುದ್ರ ಕೋಟಿಯಲ್ಲಿ ರುದ್ರಾಣಿ, ಕಾಲಂಜರಗಿರಿಯಲ್ಲಿ ಕಾಳಿ.

೩೩. ಮಹಾಲಿಂಗದಲ್ಲಿ ಕಪಿಲೆ, ಮರ್ಕೋಟದಲ್ಲಿ ಮುಕುಟೇಶ್ವರಿ, ಶಾಲ ಗ್ರಾಮದಲ್ಲಿ ಮಹಾದೇವಿ, ಶಿವಲಿಂಗದಲ್ಲಿ ಜಲಪ್ರಿಯೆ.

೩೪. ಮಾಯಾಪುರಿಯಲ್ಲಿ ಕುಮಾರಿ, ಸಂತಾನದಲ್ಲಿ ಲಲಿತೆ, ಸಹಸ್ರಾಕ್ಷ ದಲ್ಲಿ ಉತ್ಪಲಾಕ್ಷಿ, ಕಮಲಾಕ್ಷದಲ್ಲಿ ಮಹೋತ್ಪಲೆ.

೩೫. ಗಂಗೆಯಲ್ಲಿ ಮಂಗಲೆ, ಪುರುಷೋತ್ತಮದಲ್ಲಿ ವಿಮಲೆ, ವಿಪಾಶೆಯಲ್ಲಿ ಅಮೋಘಾಕ್ಷಿ, ಪಾಂಡ್ರವರ್ಧನದಲ್ಲಿ ಪಾಟಲೆ.

೩೬. ಸುಪಾರ್ಶ್ವದಲ್ಲಿ ನಾರಾಯಣಿ, ವಿಕೂಟದಲ್ಲಿ ಭದ್ರಸುಂದರಿ, ವಿಪುಲ ಕ್ಷೇತ್ರದಲ್ಲಿ ವಿಮಲೆ, ಮಲಯಾಚಲದಲ್ಲಿ ಕಲ್ಯಾಣಿ.

**ಕೋಟವೀ ಕೋಟಿತೀರ್ಥೇ ತು ಸುಗಂಧಾ ಮಾಧವೇ ವನೇ ।**
**ಗೋದಾಶ್ರಮೇ ತ್ರಿಸಂಧ್ಯಾ ತು ಗಂಗಾದ್ವಾರೇ ರತಿಪ್ರಿಯಾ ॥೩೭॥**

**ಶಿವಕುಂಡೇ ಶಿವಾನಂದಾ ನಂದಿನೀ ದೇವಿಕಾತಟೇ ।**
**ರುಕ್ಮಿಣೀ ದ್ವಾರವತ್ಯಾಂ ತು ರಾಧಾ ವೃಂದಾವನೇ ವನೇ ॥೩೮॥**

**ದೇವಕೀ ಮಧುರಾಯಾಂ ತು ಪಾತಾಲೇ ಪರಮೇಶ್ವರೀ ।**
**ಚಿತ್ರಕೂಟೇ ತಥಾ ಸೀತಾ ವಿಂಧ್ಯೇ ವಿಂಧ್ಯಾಧಿವಾಸಿನೀ ॥೩೯॥**

**ಸಹ್ಯಾದ್ರಾವೇಕವೀರಾ ತು ಹರಿಶ್ಚಂದ್ರೇ ತು ಚಂದ್ರಿಕಾ ।**
**ರಮಣಾ ರಾಮತೀರ್ಥೇ ತು ಯಮುನಾಯಾಂ ಮೃಗಾವತೀ ॥೪೦॥**

**ಕರವೀರೇ ಮಹಾಲಕ್ಷ್ಮೀರುಮಾದೇವೀ ವಿನಾಯಕೇ ।**
**ಅರೋಗಾ ವೈದ್ಯನಾಥೇ ತು ಮಹಾಕಾಲೇ ಮಹೇಶ್ವರೀ ॥೪೧॥**

**ಅಭಯೇತ್ಯುಷ್ಣತೀರ್ಥೇಷು ಚಾಮೃತಾ ವಿಂಧ್ಯಕಂದರೇ ।**
**ಮಾಂಡವ್ಯೇ ಮಾಂಡವೀ ನಾಮ ಸ್ವಾಹಾ ಮಾಹೇಶ್ವರೇ ಪುರೇ ॥೪೨॥**

---

೩೭. ಕೋಟಿತೀರ್ಥದಲ್ಲಿ ಕೋಟವಿ, ಮಾಧವವನದಲ್ಲಿ ಸುಗಂಧೆ, ಗೋದಾಶ್ರಮದಲ್ಲಿ ತ್ರಿಸಂಧ್ಯೆ, ಗಂಗಾದ್ವಾರದಲ್ಲಿ ರತಿಪ್ರಿಯೆ.

೩೮. ಶಿವಕುಂಡದಲ್ಲಿ ಶಿವಾನಂದೆ, ದೇವಿಕಾತಟದಲ್ಲಿ ನಂದಿನಿ, ದ್ವಾರಾವತಿಯಲ್ಲಿ ರುಕ್ಮಿಣಿ, ವೃಂದಾವನದಲ್ಲಿ ರಾಧೆ.

೩೯. ಮಧುರಾಕ್ಷೇತ್ರದಲ್ಲಿ ದೇವಕಿ, ಪಾತಾಲದಲ್ಲಿ ಪರಮೇಶ್ವರಿ, ಚಿತ್ರಕೂಟದಲ್ಲಿ ಸೀತೆ, ವಿಂಧ್ಯದಲ್ಲಿ ವಿಂಧ್ಯಾಧಿವಾಸಿನಿ.

೪೦. ಸಹ್ಯಾದ್ರಿಯಲ್ಲಿ ಏಕವೀರೆ, ಹರಿಶ್ಚಂದ್ರತೀರ್ಥದಲ್ಲಿ ಚಂದ್ರಿಕೆ, ರಾಮತೀರ್ಥದಲ್ಲಿ ರಮಣೆ, ಯಮುನೆಯಲ್ಲಿ ಮೃಗಾವತಿ.

೪೧. ಕರವೀರಕ್ಷೇತ್ರದಲ್ಲಿ ಮಹಾಲಕ್ಷ್ಮಿ, ವಿನಾಯಕತೀರ್ಥದಲ್ಲಿ ಉಮಾದೇವಿ, ವೈದ್ಯನಾಥದಲ್ಲಿ ಅರೋಗೆ, ಮಹಾಕಾಲದಲ್ಲಿ ಮಹೇಶ್ವರಿ.

೪೨. ಉಷ್ಣತೀರ್ಥಗಳಲ್ಲಿ ಅಭಯೆ, ವಿಂಧ್ಯಕಂದರದಲ್ಲಿ ಅಮೃತೆ, ಮಾಂಡವ್ಯದಲ್ಲಿ ಮಾಂಡವಿ, ಮಾಹೇಶ್ವರದಲ್ಲಿ ಸ್ವಾಹಾದೇವಿ.

ಭಾಗಲಂಡೇ ಪ್ರಚಂಡಾ ತು ಚಂಡಿಕಾ ಮಕರಂದಕೇ ।
ಸೋಮೇಶ್ವರೇ ವರಾರೋಹಾ ಪ್ರಭಾಸೇ ಪುಷ್ಕರಾವತೀ ॥೪೩॥

ದೇವಮಾತಾ ಸರಸ್ವತ್ಯಾಂ ಪಾರಾವಾರತಟೇ ಮತಾ ।
ಮಹಾಲಯೇ ಮಹಾಭಾಗಾ ಪಯೋಷ್ಣ್ಯಾಂ ಪಿಂಗಲೇಶ್ವರೀ ॥೪೪॥

ಸಿಂಹಿಕಾ ಕೃತಶೌಚೇ ತು ಕಾರ್ತಿಕೇಯೇ ಯಶಸ್ಕರೀ ।
ಉತ್ಪಲಾವರ್ತಕೇ ಲೋಲಾ ಸುಭದ್ರಾ ಶೋಣಸಂಗಮೇ ॥೪೫॥

ಮಾತಾ ಸಿದ್ಧಪುರೇ ಲಕ್ಷ್ಮೀರಂಗನಾ ಭರತಾಶ್ರಮೇ ।
ಜಾಲಂಧರೇ ವಿಶ್ವಮುಖೀ ತಾರಾ ಕಿಷ್ಕಿಂಧಪರ್ವತೇ ॥೪೬॥

ದೇವದಾರುವನೇ ಪುಷ್ಟಿರ್ಮೇಧಾ ಕಾಶ್ಮೀರಮಂಡಲೇ ।
ಭೀಮಾ ದೇವೀ ಹಿಮಾದ್ರೌ ತು ಪುಷ್ಟಿರ್ವಿಶ್ವೇಶ್ವರೇ ತಥಾ ॥೪೭॥

---

೪೩. ಭಾಗಲಂಡತೀರ್ಥದಲ್ಲಿ ಪ್ರಚಂಡೆ, ಮಕರಂದಕ್ಷೇತ್ರದಲ್ಲಿ ಚಂಡಿಕೆ, ಸೋಮೇಶ್ವರದಲ್ಲಿ ವರಾರೋಹೆ, ಪ್ರಭಾಸದಲ್ಲಿ ಪುಷ್ಕರಾವತಿ.

೪೪. ಸರಸ್ವತಿಯಲ್ಲಿ ದೇವಮಾತೆ, ಸಮುದ್ರತಟತೀರ್ಥದಲ್ಲಿ ಮತೆ, ಮಹಾಲಯದಲ್ಲಿ ಮಹಾಭಾಗೆ, ಪಯೋಷ್ಣಿಯಲ್ಲಿ ಪಿಂಗಲೇಶ್ವರಿ.

೪೫. ಕೃತಶೌಚಕ್ಷೇತ್ರದಲ್ಲಿ ಸಿಂಹಿಕೆ, ಕಾರ್ತಿಕೇಯ ತೀರ್ಥದಲ್ಲಿ ಯಶಸ್ಕರಿ, ಉತ್ಪಲಾವರ್ತಕದಲ್ಲಿ ಲೋಲೆ, ಶೋಣಸಂಗಮಕ್ಷೇತ್ರದಲ್ಲಿ ಸುಭದ್ರೆ.

೪೬. ಸಿದ್ಧಿಪುರದಲ್ಲಿ ಮಾತೆಯು ಲಕ್ಷ್ಮಿಯೆಂದೆನಿಸುವಳು. ಭರತಾಶ್ರಮದಲ್ಲಿ ಅಂಗನೆ, ಜಾಲಂಧರಕ್ಷೇತ್ರದಲ್ಲಿ ವಿಶ್ವಮುಖಿ, ಕಿಷ್ಕಿಂಧಪರ್ವತದಲ್ಲಿ ತಾರೆ ಎಂದು ಆಕೆಗೆ ಹೆಸರು.

೪೭. ದೇವದಾರುವನದಲ್ಲಿ ಪುಷ್ಟಿ, ಕಾಶ್ಮೀರಮಂಡಲದಲ್ಲಿ ಮೇಧೆ, ಹಿಮಾದ್ರಿಯಲ್ಲಿ ಭೀಮಾದೇವಿ, ವಿಶ್ವೇಶ್ವರದಲ್ಲಿ ಪುಷ್ಟಿ.

**ಕಪಾಲಮೋಚನೇ ಶುದ್ಧಿರ್ಮಾತಾ ಕಾಯಾವರೋಹಣೇ |**
**ಶಂಖೋದ್ಧಾರೇ ಧ್ವನಿರ್ನಾಮ ಧೃತಿಃ ಪಿಂಡಾರಕೇ ತಥಾ ||೪೮||**

**ಕಾಲಾ ತು ಚಂದ್ರಭಾಗಾಯಾಮಚ್ಛೋದೇ ಶಿವಕಾರಿಣೀ |**
**ವೇಣಾಯಾಮಮೃತಾ ನಾಮ ಬದರ್ಯಾಮುರ್ವಶೀ ತಥಾ ||೪೯||**

**ಔಷಧೀಚೋತ್ತರಕುರೌ ಕುಶದ್ವೀಪೇ ಕುಶೋದಕಾ |**
**ಮನ್ಮಥಾ ಹೇಮಕೂಟೇ ತು ಮುಕುಟೇ ಸತ್ಯವಾದಿನೀ ||೫೦||**

**ಅಶ್ವತ್ಥೇ ವಂದನೀಯಾ ತು ನಿಧಿರ್ವೈಶ್ರವಣಾಲಯೇ |**
**ಗಾಯತ್ರೀ ವೇದವದನೇ ಪಾರ್ವತೀ ಶಿವಸನ್ನಿಧೌ ||೫೧||**

**ದೇವಲೋಕೇ ತಥೇಂದ್ರಾಣೀ ಬ್ರಹ್ಮಾಸ್ಯೇಷು ಸರಸ್ವತೀ |**
**ಸೂರ್ಯಬಿಂಬೇ ಪ್ರಭಾ ನಾಮ ಮಾತೄಣಾಂ ವೈಷ್ಣವೀ ಮತಾ ||೫೨||**

---

೪೮. ಮಾತೆಯು ಕಪಾಲಮೋಚನಕ್ಷೇತ್ರದಲ್ಲಿ ಶುದ್ಧಿಯೆಂದೂ, ಅವರೋಹಣವೆಂಬ ತೀರ್ಥದಲ್ಲಿ ಕಾಯೆಯೆಂದೂ, ಶಂಖೋದ್ಧಾರದಲ್ಲಿ ಧ್ವನಿಯೆಂದೂ, ಪಿಂಡಾರಕದಲ್ಲಿ ಧೃತಿಯೆಂದೂ ಪ್ರಸಿದ್ಧಳಾಗಿರುವಳು.

೪೯. ಚಂದ್ರಭಾಗಾತೀರ್ಥದಲ್ಲಿ ಕಾಲೆ, ಅಚ್ಛೋದತೀರ್ಥದಲ್ಲಿ ಶಿವಕಾರಿಣಿ, ವೇಣಾಕ್ಷೇತ್ರದಲ್ಲಿ ಅಮೃತೆ, ಬದರಿಯಲ್ಲಿ ಊರ್ವಶಿ.

೫೦. ಉತ್ತರ ಕುರುಕ್ಷೇತ್ರದಲ್ಲಿ ಔಷಧಿ, ಕುಶದ್ವೀಪದಲ್ಲಿ ಕುಶೋದಕೆ, ಹೇಮಕೂಟದಲ್ಲಿ ಮನ್ಮಥೆ, ಮುಕುಟ ತೀರ್ಥದಲ್ಲಿ ಸತ್ಯವಾದಿನಿ.

೫೧. ಅಶ್ವತ್ಥತೀರ್ಥದಲ್ಲಿ ವಂದನೀಯೆ. ಕುಬೇರ ಮಂದಿರದಲ್ಲಿ ನಿಧಿ, ವೇದಮುಖದಲ್ಲಿ ಗಾಯತ್ರಿ, ಶಿವಸನ್ನಿಧಿಯಲ್ಲಿ ಪಾರ್ವತಿ.

೫೨. ದೇವಲೋಕದಲ್ಲಿ ಇಂದ್ರಾಣಿ, ಬ್ರಹ್ಮನ ಚತುರ್ಮುಖಗಳಲ್ಲಿ ಸರಸ್ವತಿ, ಸೂರ್ಯಬಿಂಬದಲ್ಲಿ ಪ್ರಭೆ, ಸಪ್ತಮಾತೃಕೆಯರಲ್ಲಿ ವೈಷ್ಣವಿ.

ಅರುಂಧತೀ ಸತೀನಾಂ ತು ರಾಮಾಸು ಚ ತಿಲೋತ್ತಮಾ ।
ಚಿತ್ತೇ ಬ್ರಹ್ಮಕಲಾ ನಾಮ ಶಕ್ತಿಃ ಸರ್ವಶರೀರಿಣಾಂ ॥೫೩॥

ಏತದುದ್ದೇಶತಃ ಪ್ರೋಕ್ತಂ ನಾಮಾಷ್ಟಶತಮುತ್ತಮಂ ।
ಅಷ್ಟೋತ್ತರಂ ಚ ತೀರ್ಥಾನಾಂ ಶತಮೇತದುದಾಹೃತಂ ॥೫೪॥

ಯಃ ಸ್ಮರೇಚ್ಛೃಣುಯಾದ್ವಾಪಿ ಸರ್ವಪಾಪೈಃ ಪ್ರಮುಚ್ಯತೇ ।
ಏಷು ತೀರ್ಥೇಷು ಯಃ ಕೃತ್ವಾ ಸ್ನಾನಂ ಪಶ್ಯತಿ ಮಾಂ ನರಃ ॥೫೫॥

ಸರ್ವಪಾಪವಿನಿರ್ಮುಕ್ತಃ ಕಲ್ಪಂ ಶಿವಪುರೇ ವಸೇತ್ ।
ಯಸ್ತು ಮತ್ಸರಮಂ ಕಾಲಂ ಕರೋತ್ಯೇತೇಷು ಮಾನವಃ ॥೫೬॥

ಸ ಭಿತ್ವಾ ಬ್ರಹ್ಮಸದನಂ ಪದಮಭ್ಯೇತಿ ಶಾಂಕರಂ ।
ನಾಮ್ನಾಮಷ್ಟಶತಂ ಯಸ್ತು ಶ್ರಾವಯೇಚ್ಛಿವಸನ್ನಿಧೌ ॥೫೭॥

---

೫೩. ಸಾಧ್ವಿಯರಲ್ಲಿ ಅರುಂಧತಿ, ನಾರೀಮಣಿಯರಲ್ಲಿ ತಿಲೋತ್ತಮೆ, ಮನಸ್ಸಿನಲ್ಲಿ ಬ್ರಹ್ಮಕಲೆ, ಸಮಸ್ತಪ್ರಾಣಿಗಳಲ್ಲೂ ಶಕ್ತಿಯೆಂದೆನಿಸಿಕೊಂಡು ದೇವಿಯು ಎಲ್ಲೆಲ್ಲಿಯೂ ವಿರಾಜಿಸುತ್ತಿರುವಳು.

೫೪. ನೂರೆಂಟು ಪುಣ್ಯತೀರ್ಥಗಳ ಹೆಸರನ್ನೂ, ದೇವಿಯ ಅಷ್ಟೋತರ ಶತನಾಮಗಳನ್ನೂ ಸಂಗ್ರಹವಾಗಿ ಹೇಳಿದೆನು.

೫೫. ಹಿಂದೆ ಹೇಳಿದ ಪುಣ್ಯತೀರ್ಥಗಳನ್ನೂ, ಅಷ್ಟೋತ್ತರ ಶತನಾಮಗಳನ್ನೂ ಯಾರು ಸ್ಮರಿಸುವರೋ ಅಥವಾ ಕೇಳುವರೋ ಅವರು ಎಲ್ಲ ಪಾಪಗಳಿಂದಲೂ ಬಿಡುಗಡೆಹೊಂದುವರು. ಈ ತೀರ್ಥಗಳಲ್ಲಿ ಸ್ನಾನಮಾಡಿ ನನ್ನ ದರ್ಶನ ಮಾಡುವ ಮನುಷ್ಯನು ಸಮಸ್ತಪಾಪಗಳನ್ನೂ ನೀಗಿ ಕೈಲಾಸದಲ್ಲಿ ಕಲ್ಪಾಂತದವರೆಗೂ ವಾಸಮಾಡುವನು.

೫೬. ಈ ಕ್ಷೇತ್ರಗಳಲ್ಲಿ ನನ್ನ ಸೇವಾಸಕ್ತನಾಗಿ ಕಾಲವನ್ನು ಕಳೆಯುವ ಮನುಷ್ಯನು ಬ್ರಹ್ಮಲೋಕವನ್ನು ಭೇದಿಸಿ ಶಿವಸಾಯುಜ್ಯವನ್ನು ಸೇರುವನು.

೫೭. ತೃತೀಯೆಯಲ್ಲಿ ಇಲ್ಲವೇ ಅಷ್ಟಮಿಯಲ್ಲಿ ನನ್ನ ಈ ಅಷ್ಟೋತ್ತರ ಶತನಾಮಗಳನ್ನು ಶಿವಸಾನ್ನಿಧ್ಯದಲ್ಲಿ ಜಪಿಸುವ ಮನುಜನು ಹಲವರು ಮಕ್ಕಳನ್ನು ಪಡೆಯುವನು.

ತೃತೀಯಾಯಾಮಥಾಷ್ಟಮ್ಯಾಂ ಬಹುಪುತ್ರೋ ಭವೇನ್ನರಃ ।
ಗೋದಾನೇ ಶ್ರಾದ್ಧದಾನೇ ವಾ ಅಹನ್ಯಹನಿ ವಾ ಬುಧಃ ॥೫೮॥

ದೇವಾರ್ಚನವಿಧೌ ವಿದ್ವಾನ್ ಪರಂ ಬ್ರಹ್ಮಾಧಿಗಚ್ಛತಿ ।
ಏವಂ ವದಂತೀ ಸಾ ತತ್ರ ದದಾಹಾತ್ಮಾನಮಾತ್ಮನಾ ॥೫೯॥

ಸ್ವಾಯಂಭುವೋಽಪಿ ಕಾಲೇನ ದಕ್ಷಃ ಪ್ರಾಚೇತಸೋಽಭವತ್ ।
ಪಾರ್ವತೀ ಸಾಭವದ್ದೇವೀ ಶಿವದೇಹಾರ್ಧಧಾರಿಣೀ ॥೬೦॥

ಮೇನಾಗರ್ಭಸಮುತ್ಪನ್ನಾ ಭುಕ್ತಿಮುಕ್ತಿಫಲಪ್ರದಾ ।
ಅರುಂಧತೀ ಜಪಂತ್ಯೇತತ್ಪ್ರಾಪ ಯೋಗಮನುತ್ತಮಂ ॥೬೧॥

ಪುರೂರವಾಶ್ಚ ರಾಜರ್ಷಿರ್ಲೋಕೇ ವ್ಯಜೇಯತಾಮಗಾತ್ ।
ಯಯಾತಿಃ ಪುತ್ರಲಾಭಂ ಚ ಧನಲಾಭಂ ಚ ಭಾರ್ಗವಃ ॥೬೨॥

---

೫೮-೫೯. ಗೋದಾನ ಮಾಡುವಾಗ, ಶ್ರಾದ್ಧವನ್ನು ಆಚರಿಸುವಾಗ ಇಲ್ಲವೇ ಪ್ರತಿದಿನವೂ ದೇವರ ಪೂಜೆಯನ್ನು ನೆರವೇರಿಸುವಾಗ ಈ ನಾಮಪಾರಾಯಣವನ್ನು ಮಾಡಿದರೆ ಬ್ರಹ್ಮಸಾನ್ನಿಧ್ಯವು ಲಭಿಸುವುದು.'' ಇಂತೆಂದು ಹೇಳಿ ದಾಕ್ಷಾಯಣಿಯು ತನ್ನ ಯೋಗಾಗ್ನಿಯಿಂದಲೇ ದಗ್ಧಳಾದಳು.

೬೦. ಬಳಿಕ ಕಾಲಕ್ರಮದಲ್ಲಿ ದಕ್ಷಪ್ರಜಾಪತಿಯು ಸ್ವಾಯಂಭುವಮನುವಿನ ವಂಶದಲ್ಲಿ ಪ್ರಾಚೇತಸನೆಂಬ ಹೆಸರಿನಿಂದ ಜನಿಸಿದನು. ದಾಕ್ಷಾಯಣಿಯು ಮೇನಾದೇವಿಯ ಗರ್ಭದಲ್ಲಿ ಹುಟ್ಟಿ ಈಶ್ವರನ ಅರ್ಧಾಂಗಿಯಾದಳು. ಅವಳು ಇಹದಲ್ಲಿ ಸುಖಸಂಪತ್ತನ್ನೂ, ಪರದಲ್ಲಿ ಮೋಕ್ಷಸುಖವನ್ನೂ ಕರುಣಿಸುತ್ತ ಪಾರ್ವತಿಯೆಂಬ ದಿವ್ಯನಾಮದಿಂದ ಪ್ರಖ್ಯಾತಳಾದಳು.

೬೧-೬೨. ಮೇಲೆ ಹೇಳಿದ ದೇವಿಯ ಅಷ್ಟೋತ್ತರಶತನಾಮಗಳನ್ನು ಜಪಿಸಿದುದರಿಂದ ಅರುಂಧತಿಯು ದಿವ್ಯಜ್ಞಾನವನ್ನು ಪಡೆದಳು. ರಾಜರ್ಷಿಯೆನಿಸಿದ ಪುರೂರವನು ಯಾರೂ ಜಯಿಸಲಾಗದಂತಹ ವೀರನಾದನು. ಯಯಾತಿಯು

ತಥಾಽನ್ಯೇ ದೇವದೈತ್ಯಾಶ್ಚ ಬ್ರಾಹ್ಮಣಾಃ ಕ್ಷತ್ರಿಯಾಸ್ತಥಾ ।
ವೈಶ್ಯಾಶ್ಶೂದ್ರಾಶ್ಚ ಬಹವಃ ಸಿದ್ಧಿಮೀಯುರ್ಯಥೇಪ್ಸಿತಾಂ ॥೬೩॥

ಯತ್ರೈತಲ್ಲಿಖಿತಂ ತಿಷ್ಠೇತ್ಪೂಜ್ಯತೇ ದೇವಸನ್ನಿಧೌ ।
ನ ತತ್ರ ಶೋಕೋ ದೌರ್ಗತ್ಯಂ ಕದಾಚಿದಪಿ ಜಾಯತೇ ॥೬೪॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಪಿತೃವಂಶಾನ್ವಯೇ
ಗೌರೀನಾಮಾಷ್ಟೋತ್ತರಶತಕಥನಂ ನಾಮ
ತ್ರಯೋದಶೋಽಧ್ಯಾಯಃ

---

ಪುತ್ರಲಾಭವನ್ನೂ, ಭಾರ್ಗವನು ಧನಲಾಭವನ್ನೂ ಪಡೆದರು. ಹೀಗೆಯೇ ಎಷ್ಟೋ ಜನ ಸುರರು, ಅಸುರರು, ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಮತ್ತು ಶೂದ್ರರು ತಮ್ಮತಮ್ಮ ಇಷ್ಟಾರ್ಥವನ್ನು ಸಂಪಾದಿಸಿದರು.

೬೪. ಇದನ್ನು ಬರೆದು, ದೇವಸನ್ನಿಧಿಯಲ್ಲಿರಿಸಿ ಪೂಜೆಮಾಡಿದರೆ ಆ ಪ್ರದೇಶದಲ್ಲಿ ದುಃಖ, ಬಡತನ ಮುಂತಾದುದೆಂದಿಗೂ ತಲೆದೋರದು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ವೈರಾಜ ಪಿತೃಗಳ ವಂಶವನ್ನು ವರ್ಣಿಸಿದೆ. ಪಿತೃಗಣಗಳು ಏಳಿವೆ. ಮೂರು ಗಣದವರು ಆಕಾರವಿಲ್ಲದವರು; ಮಿಕ್ಕವರು ಸಾಕಾರರು. ಇವರಿಗೆ, ಮಾನಸೀ, ಮೇನಾ ಎಂಬ ಇಬ್ಬರು ಕನ್ಯೆಯರಿದ್ದರು. ಇಬ್ಬರಿಗೂ ಹಿಮವಂತನೇ ಪತಿ. ಮಾನಸಿಯು ಮೈನಾಕ, ಕ್ರೌಂಚ ಎಂಬ ಇಬ್ಬರು ಗಂಡುಮಕ್ಕಳನ್ನೂ, ಮೇನೆಯು ಉಮಾ, ಏಕಪರ್ಣಾ, ಅಪರ್ಣಾ ಎಂಬ ಮೂವರು ಹೆಣ್ಣುಮಕ್ಕಳನ್ನೂ ಪಡೆದರು.

ದಕ್ಷಪ್ರಜಾಪತಿಯು ಮಾಡಿದ ಯಜ್ಞಕ್ಕೆ ದೇವತೆಗಳೆಲ್ಲರೂ ಬಂದಿದ್ದರು. ಈಶ್ವರನು ಮಾತ್ರ ಬರಲಿಲ್ಲ. ಅದಕ್ಕೆ ಕಾರಣವೇನೆಂದು ಸತಿಯು ತನ್ನ ತಂದೆಯನ್ನು ಕೇಳಿದಳು. "ಅವನು ಅಶುಭ, ಯಜ್ಞಾರ್ಹನಲ್ಲ; ಆದಕಾರಣ ಅವನನ್ನು ಕರೆಯಲಿಲ್ಲ"ವೆಂದು ದಕ್ಷಬ್ರಹ್ಮನು ಉತ್ತರವಿತ್ತನು. ಸತಿಯು ಬಹಳ ಕ್ರುದ್ಧಳಾಗಿ, ದೇಹವನ್ನು ತೊರೆಯಲೆಣಿಸಿ "ನೀನು ಹತ್ತುಜನ ಪಿತೃಗಳಿಗಾಗಿ ಒಬ್ಬನೇ ಮಗನಾಗಿ ಹುಟ್ಟು. ಕ್ಷತ್ರಿಯನಾಗಿ ಜನಿಸಿ ನೀನು ಅಶ್ವಮೇಧಯಾಗವನ್ನು ಮಾಡುವಾಗ

ಶಿವನು ನಿನ್ನ ಯಜ್ಞವನ್ನು ಧ್ವಂಸಮಾಡುವನು." ಎಂದು ಶಾಪಕೊಡಲು ಅವನು ಅವಳನ್ನು ಸಂತೈಸಿದನು. "ನಾನು ದೇಹವನ್ನೇನೋ ಬಿಟ್ಟೇಬಿಡುವೆನು. ನೀನು ಬ್ರಹ್ಮನ ಅಂಗಜರಾದ ಹತ್ತು ಜನ ಪುತ್ರರಲ್ಲಿ ಒಬ್ಬನಾಗಿ ಪ್ರಜಾಪತಿಯೆನಿಸುವೆ. ನನ್ನ ಅಂಶದಿಂದ ನಿನ್ನ ಹೊಟ್ಟೆಯಲ್ಲಿ ಅರವತ್ತು ಜನ ಕನ್ಯೆಯರು ಜನಿಸುವರು. ಈಶ್ವರನು ನಿನ್ನ ಯಾಗವನ್ನು ಕೆಡಿಸಿದ ಮೇಲೆ ನೀನು ವಾರಾಣಸಿಯೇ ಮುಂತಾದ ನೂರೆಂಟು ದಿವ್ಯಕ್ಷೇತ್ರಗಳಲ್ಲಿ ವಿಶಾಲಾಕ್ಷಿ ಮೊದಲಾದ ಪವಿತ್ರವಾದ ನಾಮಗಳಿಂದ ನೆಲಸಿರುವ ನನ್ನ ದಿವ್ಯಮೂರ್ತಿಯನ್ನು ಸಂದರ್ಶಿಸುತ್ತ ನನ್ನ ಸಾನ್ನಿಧ್ಯದಲ್ಲಿ ತಪಸ್ಸನ್ನು ಆಚರಿಸು'' ಎಂದು ಹೇಳಿ, ಆ ಕ್ಷೇತ್ರಗಳ ಮತ್ತು ತನ್ನ ದಿವ್ಯನಾಮಗಳ ಹೆಸರನ್ನು ತಿಳಿಸಿ ಅವುಗಳ ಮಹಿಮೆಯನ್ನು ಬಣ್ಣಿಸಿದಳು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪಿತೃವಂಶವರ್ಣನದಲ್ಲಿ ಗೌರೀನಾಮಾಷ್ಟೋತ್ತರ ಶತಕಥನವೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು



## ಅಥ ಶ್ರೀಮತ್ಸ್ಯಮಹಾಪುರಾಣೇ ಚತುರ್ದಶೋಽಧ್ಯಾಯಃ

॥ ಸೂತ ಉವಾಚ ॥

ಲೋಕಾಃ ಸೋಮಪಥಾ ನಾಮ ಯತ್ರ ಮಾರೀಚನಂದನಾಃ ।
ವರ್ತಂತೇ ದೇವಪಿತರೋ ದೇವಾ ಯಾನ್ ಭಾವಯಂತ್ಯಲಂ ॥ ೧ ॥

ಅಗ್ನಿಷ್ವಾತ್ತಾ ಇತಿ ಖ್ಯಾತಾ ಯಜ್ವಾನೋ ಯತ್ರ ಸಂಸ್ಥಿತಾಃ ।
ಅಚ್ಛೋದಾ ನಾಮ ತೇಷಾಂ ತು ಮಾನಸೀ ಕನ್ಯಕಾ ನದೀ ॥ ೨ ॥

ಅಚ್ಛೋದಂ ನಾಮ ಚ ಸರಃ ಪಿತೃಭಿರ್ನಿರ್ಮಿತಂ ಪುರಾ ।
ಅಚ್ಛೋದಾ ತು ತಪಶ್ಚಕ್ರೇ ದಿವ್ಯಂ ವರ್ಷಸಹಸ್ರಕಂ ॥ ೩ ॥

ಆಜಗ್ಮುಃ ಪಿತರಸ್ತುಷ್ಟಾಃ ಕಿಲ ದಾತುಂ ಚ ತಾಂ ವರಂ ।
ದಿವ್ಯರೂಪಧರಾಃ ಸರ್ವೇ ದಿವ್ಯಮಾಲ್ಯಾನುಲೇಪನಾಃ ॥ ೪ ॥

---

೧-೨. ಸೂತಪೌರಾಣಿಕನು ಹೇಳಿದನು. ಸೋಮಪಥಗಳೆಂಬ ಲೋಕಗಳುಂಟು. ಅಲ್ಲಿ ದೇವತೆಗಳಿಂದ ವಿಶೇಷವಾಗಿ ಪೂಜೆಯನ್ನು ಕೈಗೊಳ್ಳುವ, ಮಾರೀಚಪುತ್ರರಾದ ದೇವಪಿತೃಗಳು ವಾಸಮಾಡುವರು. ಅಗ್ನಿಷ್ವಾತ್ತರೆಂದೂ ಅವರಿಗೆ ಖ್ಯಾತಿಯುಂಟು. ಶಾಸ್ತ್ರೋಕ್ತವಾಗಿ ಯಜ್ಞವನ್ನು ಆಚರಿಸಿದವರು ಆ ಲೋಕವನ್ನು ಸೇರುವರು. ಆ ಪಿತೃಗಳ ಮನಸ್ಸಂಕಲ್ಪದಿಂದಲೇ ಅಚ್ಛೋದೆಯೆಂಬ ಕನ್ಯೆ ಜನಿಸಿದಳು. ಅವಳು ನದಿಯ ರೂಪದಲ್ಲಿದ್ದಳು.

೩. ಪೂರ್ವದಲ್ಲಿ ಪಿತೃಗಳು ಅಚ್ಛೋದವೆಂಬ ಸರೋವರವನ್ನೂ ನಿರ್ಮಿಸಿದರು. ಅಚ್ಛೋದೆಯು ದೇವಮಾನದ ಸಹಸ್ರವರ್ಷಗಳ ಕಾಲ ತಪಸ್ಸನ್ನು ಮಾಡಿದಳು.

೪. ಅವಳ ತಪಸ್ಸಿನಿಂದ ಪಿತೃಗಳೆಲ್ಲರೂ ತುಷ್ಟರಾಗಿ, ದಿವ್ಯರೂಪವನ್ನು ಧರಿಸಿ, ಶ್ರೇಷ್ಠವಾದ ಗಂಧಪುಷ್ಪಗಳಿಂದ ಅಲಂಕೃತರಾಗಿ, ಮನ್ಮಥನಂತೆ ಯೌವನದಿಂದಲೂ ಬಲದಿಂದಲೂ ವಿರಾಜಿಸುತ್ತ ವರವನ್ನು ನೀಡುವುದಕ್ಕಾಗಿ ಬಂದರು.

**ಸರ್ವೇ ಯುವಾನೋ ಬಲಿನಃ ಕುಸುಮಾಯುಧಸನ್ನಿಭಾಃ ।**
**ತನ್ಮಧ್ಯೇಽಮಾವಸುಂ ನಾಮ ಪಿತರಂ ವೀಕ್ಷ್ಯ ಸಾಂಽಗನಾ ॥ ೫ ॥**

**ವವ್ರೇ ವರಾರ್ಥಿನೀ ಸಂಗಂ ಕುಸುಮಾಯುಧಪೀಡಿತಾ ।**
**ಯೋಗಾದ್ಭ್ರಷ್ಟಾ ತು ಸಾ ತೇನ ವ್ಯಭಿಚಾರೇಣ ಭಾಮಿನೀ ॥ ೬ ॥**

**ಧರಾಂ ತು ನಾಸ್ಪೃಶತ್ಪೂರ್ವಂ ಪಪಾತಾಥ ಭುವಸ್ತಲೇ ।**
**ತಿಥಾವಮಾವಸುರ್ಯಸ್ಯಾಮಿಚ್ಛಾಂ ಚಕ್ರೇ ನ ತಾಂ ಪ್ರತಿ ॥ ೭ ॥**

**ಧೈರ್ಯೇಣ ತಸ್ಯ ಸಾ ಲೋಕೈರಮಾವಾಸ್ಯೇತಿ ವಿಶ್ರುತಾ ।**
**ಪಿತೄಣಾಂ ವಲ್ಲಭಾ ತಸ್ಮಾತ್ತಸ್ಯಾಮಕ್ಷಯಕಾರಕಂ ॥ ೮ ॥**

**ಅಚ್ಛೋದಾಽಧೋಮುಖೀ ದೀನಾ ಲಜ್ಜಿತಾ ತಪಸಃ ಕ್ಷಯಾತ್ ।**
**ಸಾ ಪಿತೄನ್ ಪ್ರಾರ್ಥಯಾಮಾಸ ಪುರೇವಾಽಽತ್ಮಪ್ರಸಿದ್ಧಯೇ ॥ ೯ ॥**

---

೫-೬. ಆ ನಾರಿಯು ಅವರಲ್ಲಿ ಅಮಾವಸುವೆಂಬ ಪಿತೃವನ್ನು ನೋಡಿ, ಮನ್ಮಥಬಾಣದಿಂದ ಪೀಡಿತಳಾಗಿ, ಅವನ ದೇಹಸಂಗವನ್ನು ವರವಾಗಿ ಬೇಡಿದಳು. ಆ ವ್ಯಭಿಚಾರದೋಷದಿಂದ ಅವಳು ಯೋಗದಲ್ಲಿ ಸಿದ್ಧಿಯನ್ನು ಪಡೆಯಲಾರದೆ ಹೋದಳು.

೭. ಅದಕ್ಕೆ ಮೊದಲು ಭೂಸ್ಪರ್ಶವೇ ಇಲ್ಲದಿದ್ದ ಅವಳು ಅಮಾವಸುವಿನ ತಿಥಿಯಲ್ಲಿ ನೆಲದಮೇಲೆ ಬಿದ್ದಳು. ಅವನಂತೂ ಅವಳನ್ನು ಬಯಸಲೇ ಇಲ್ಲ.

೮. ಅವನ ಧೈರ್ಯದಿಂದ ಆ ತಿಥಿಯು ಅಮಾವಾಸ್ಯೆಯೆಂದು ಪ್ರಸಿದ್ಧವಾಯಿತು. ಅದು ಪಿತೃದೇವತೆಗಳಿಗೆ ಪ್ರಿಯವಾದ ದಿನ. ಆದುದರಿಂದ ಅಂದು ಮಾಡುವ ಶ್ರಾದ್ಧ, ತರ್ಪಣ ಮುಂತಾದ ಪಿತೃಕರ್ಮಗಳು ಅಕ್ಷಯಫಲವನ್ನು ಕೊಡುವುವು.

೯. ಅಚ್ಛೋದೆಯು ತಲೆ ತಗ್ಗಿಸಿಕೊಂಡು, ತಪಸ್ಸು ನಷ್ಟವಾದುದಕ್ಕಾಗಿ ಲಜ್ಜೆಪಡುತ್ತ, ಲೋಕದಲ್ಲಿ ತನಗೆ ಖ್ಯಾತಿಯು ಮೊದಲಿನಂತೆಯೇ ಉಳಿಯಬೇಕೆಂದು ಪಿತೃಗಳನ್ನು ಬೇಡಿಕೊಂಡಳು.

ವಿಲಪ್ಯಮಾನಾ ಪಿತೃಭಿರಿದಮುಕ್ತಾ ತಪಸ್ವಿನೀ ।
ಭವಿಷ್ಯಮರ್ಥಮಾಲೋಕ್ಯ ದೇವಕಾರ್ಯಂ ಚ ತೇ ತದಾ ॥೧೦॥

ಇದಮೂಚುರ್ಮಹಾಭಾಗಾಃ ಪ್ರಸಾದಶುಭಯಾ ಗಿರಾ ।
ದಿವಿ ದಿವ್ಯಶರೀರೇಣ ಯತ್ಕಿಂಚಿತ್ಕ್ರಿಯತೇ ಬುಧೈಃ ॥೧೧॥

ತೇನೈವ ತತ್ಕರ್ಮಫಲಂ ಭುಜ್ಯತೇ ವರವರ್ಣಿನಿ ।
ಸದ್ಯಃ ಫಲಂತಿ ಕರ್ಮಾಣಿ ದೇವತ್ವೇ ಪ್ರೇತ್ಯ ಮಾನುಷೇ ॥೧೨॥

ತಸ್ಮಾತ್ತ್ವಂ ಪುತ್ರಿ ತಪಸಃ ಪ್ರಾಪ್ಸ್ಯಸೇ ಪ್ರೇತ್ಯ ತತ್ಫಲಂ ।
ಅಷ್ಟಾವಿಂಶೇ ಭವಿತ್ರೀ ತ್ವಂ ದ್ವಾಪರೇ ಮತ್ಸ್ಯಯೋನಿಜಾ ॥೧೩॥

ವ್ಯತಿಕ್ರಮಾತ್ಪಿತ್ಯಾಣಾಂ ತ್ವಂ ಕಷ್ಟಂ ಕುಲಮವಾಪ್ಸ್ಯಸಿ ।
ತಸ್ಮಾದ್ರಾಜ್ಞೋ ವಸೋಃ ಕನ್ಯಾ ತ್ವಮವಶ್ಯಂ ಭವಿಷ್ಯಸಿ ॥೧೪॥

---

೧೦. ದೈನ್ಯದಿಂದ ಅಳುತ್ತಿರುವ ಆಕೆಯನ್ನು ನೋಡಿ, ಮಹಾಮಹಿಮರಾದ ಪಿತೃದೇವತೆಗಳು ಮುಂದೆ ಒದಗಲಿರುವ ಸಂಗತಿಯನ್ನೂ, ದೇವತೆಗಳ ಕಾರ್ಯವನ್ನೂ ಅರಿತು ಮೃದುವಚನದಿಂದ ಹೀಗೆ ಹೇಳಿದರು.

೧೧-೧೨. "ಎಲೌ ಶೋಭನಾಂಗೀ, ದೇವತೆಗಳು ಸ್ವರ್ಗದಲ್ಲಿ ದಿವ್ಯದೇಹದಿಂದ ಮಾಡುವ ಶುಭಾಶುಭಕರ್ಮದ ಫಲವನ್ನು ಅದೇ ದೇಹದಿಂದ ಅನುಭವಿಸುವರು; ಎಂದರೆ ದೇವಜನ್ಮದಲ್ಲಿ ಕರ್ಮಗಳು ಕೂಡಲೇ ಫಲವನ್ನು ಕೊಡುವುವು. ಮನುಷ್ಯಜನ್ಮದಲ್ಲಾದರೋ ಮರಣಾನಂತರ ಕೊಡುವುವು. ಆದುದರಿಂದ, ಮಗೂ, ನೀನು ನಿನ್ನ ತಪಸ್ಸಿನ ಫಲವನ್ನು ಈ ದೇಹಾನಂತರದಲ್ಲಿ ಪಡೆಯುವೆ.

೧೩-೧೪. ಇಪ್ಪತ್ತೆಂಟನೆಯ ದ್ವಾಪರಯುಗದಲ್ಲಿ ನೀನು ಮತ್ಸ್ಯಯೋನಿಯಲ್ಲಿ ಹುಟ್ಟುವೆ. ಪಿತೃಗಳಲ್ಲಿ ನಡೆಸಿದ ಅಪಚಾರದಿಂದ ನಿನಗೆ ಹೀನಕುಲದ ಪ್ರಾಪ್ತಿಯಾಗುವುದು. ಬಳಿಕ ನೀನು ವಸುರಾಜನ ಮಗಳಾಗುವೆ. ಈ ಮಾತು ತಪ್ಪದು.

**ಕನ್ಯಾ ಭೂತ್ವಾ ಚ ಲೋಕಾನ್ ಸ್ವಾನ್ ಪುನರಾಪ್ಸ್ಯಸಿ ದುರ್ಲಭಾನ್ ।**
**ಪರಾಶರಸ್ಯ ವೀರ್ಯೇಣ ಪುತ್ರಮೇಕಮವಾಪ್ಸ್ಯಸಿ ॥೧೫॥**

**ದ್ವೀಪೇ ತು ಬದರೀಪ್ರಾಯೇ ಬಾದರಾಯಣಮಚ್ಯುತಂ ।**
**ಸ ವೇದಮೇಕಂ ಬಹುಧಾ ವಿಭಜಿಷ್ಯತಿ ತೇ ಸುತಃ ॥೧೬॥**

**ಪೌರವಸ್ಯಾತ್ಮಜೌ ದ್ವೌ ತು ಸಮುದ್ರಾಂಶಸ್ಯ ಶಂತನೋಃ ।**
**ವಿಚಿತ್ರವೀರ್ಯಸ್ತನಯಸ್ತಥಾ ಚಿತ್ರಾಂಗದೋ ನೃಪಃ ॥೧೭॥**

**ಇಮಾವುತ್ಪಾದ್ಯ ತನಯೌ ಕ್ಷೇತ್ರಜಾವಸ್ಯ ಧೀಮತಃ ।**
**ಪ್ರೋಷ್ಠಪದ್ಯಷ್ಟಕಾರೂಪಾ ಪಿತೃಲೋಕೇ ಭವಿಷ್ಯಸಿ ॥೧೮॥**

---

೧೫. ಕನ್ಯೆಯಾದ ಬಳಿಕ ದುರ್ಲಭವಾದ ನಿನ್ನ ವಸುಲೋಕವನ್ನೇ ಮತ್ತೆ ಸೇರುವೆ. ಪರಾಶರಮಹರ್ಷಿಯ ವೀರ್ಯದಿಂದ ನಿನಗೆ ಎಲಚೀಮರಗಳು ವಟ್ಟವಾಗಿ ಬೆಳೆದಿರುವ ದ್ವೀಪದಲ್ಲಿ ಬಾದರಾಯಣನೆಂಬ ವಿಷ್ಣುರೂಪನಾದ ಮಗನು ಜನಿಸುವನು.

೧೬. ಆ ನಿನ್ನ ಮಗನು ಏಕರಾಶಿರೂಪವಾಗಿರುವ ವೇದವನ್ನು ಅನೇಕ ಪ್ರಕಾರವಾಗಿ ವಿಂಗಡಿಸುವನು.

೧೭. ಪುರುವಂಶದಲ್ಲಿ ಸಮುದ್ರಾಂಶದಿಂದ ಹುಟ್ಟಿದ ಶಂತನು ಚಕ್ರವರ್ತಿಯು ನಿನ್ನನ್ನು ವರಿಸಿ ವಿಚಿತ್ರವೀರ್ಯ ಮತ್ತು ಚಿತ್ರಾಂಗದರೆಂಬ ಇಬ್ಬರು ಮಕ್ಕಳನ್ನು ಪಡೆಯುವನು.

೧೮. ಇವರಿಬ್ಬರೂ ಮೃತರಾಗಲು, ಪುರುವಂಶದ ಏಳ್ಗೆಗಾಗಿ ವಿಚಿತ್ರವೀರ್ಯನ ಪತ್ನಿಯರಾದ ಅಂಬೆ ಮತ್ತು ಅಂಬಾಲಿಕೆಯರಲ್ಲಿ ಜ್ಞಾನಿಯಾದ ಈ ನಿನ್ನ ಮಗನಿಂದ ಇಬ್ಬರು ಮಕ್ಕಳು ಜನಿಸುವಂತೆ ಏರ್ಪಾಟುಮಾಡು. ಬಳಿಕ ಪ್ರೋಷ್ಠಪದೀ, ಅಷ್ಟಕಾ ಮುಂತಾದ ರೂಪಗಳಿಂದ ಪಿತೃಲೋಕದಲ್ಲಿ ವಾಸಿಸುವೆ.*

---

* ಪತಿಯು ವಂಶವನ್ನು ಬೆಳೆಸುವುದಕ್ಕಾಗಿ ಆತನ ಪತ್ನಿಯು ಹಿರಿಯರಿಂದ ಅಪ್ಪಣೆ ಪಡೆದು ಜ್ಞಾನಿಯಾದ ಪರಪುರುಷನಿಂದ ಹೊಂದುವ ಮಗನಿಗೆ ಕ್ಷೇತ್ರಜನೆಂದು ಹೆಸರು.

**ನಾಮ್ನಾ ಸತ್ಯವತೀ ಲೋಕೇ ಪಿತೃಲೋಕೇ ತಥಾಷ್ಟಕಾ ।**
**ಆಯುರಾರೋಗ್ಯದಾ ನಿತ್ಯಂ ಸರ್ವಕಾಮಫಲಪ್ರದಾ ॥೧೯॥**

**ಭವಿಷ್ಯಸಿ ಪರೇ ಕಾಲೇ ನದೀತ್ವಂ ಚ ಗಮಿಷ್ಯಸಿ ।**
**ಪುಣ್ಯತೋಯಾ ಸರಿಚ್ಛ್ರೇಷ್ಠಾ ಲೋಕೇ ಹ್ಯಚ್ಛೋದನಾಮಿಕಾ ॥೨೦॥**

**ಇತ್ಯುಕ್ತ್ವಾ ಸ ಗಣಸ್ತೇಷಾಂ ತತ್ರೈವಾಂತರಧೀಯತ ।**
**ಸಾಽಪ್ಯವಾಪ ಚ ತತ್ಸರ್ವಂ ಫಲಂ ಯದುದಿತಂ ಪುರಾ ॥೨೧॥**

**ಇತಿ ಶ್ರೀ ಮಾತ್ಸ್ಯೇ ಮಹಾಪುರಾಣೇ ಪಿತೃವಂಶಾನುಕೀರ್ತನಂ**
**ನಾಮ ಚತುರ್ದಶೋಽಧ್ಯಾಯಃ**

---

೧೯-೨೦. ಭೂಲೋಕದಲ್ಲಿ ಸತ್ಯವತಿಯೆಂದೂ ಪಿತೃಲೋಕದಲ್ಲಿ ಅಷ್ಟಕೆಯೆಂದೂ ಪ್ರಸಿದ್ಧಳಾಗಿ, ಆಯುರಾರೋಗ್ಯಗಳನ್ನೂ ಸಕಲ ಮನೋರಥಗಳ ಸಿದ್ಧಿಯನ್ನೂ ಕೊಡುತ್ತ ಖ್ಯಾತಳಾಗುವೆ. ಕಾಲಾಂತರದಲ್ಲಿ ಅಚ್ಛೋದೆಯೆಂಬ ಪುಣ್ಯ ನದಿಯಾಗುವೆ."

೨೧. ಹೀಗೆಂದು ಹೇಳಿ ಆ ಪಿತೃದೇವತೆಗಳೆಲ್ಲರೂ ಅಲ್ಲೇ ಮಾಯವಾದರು. ಅವರು ಹೇಳಿದ ಫಲವನ್ನೆಲ್ಲ ಅವಳು ಪಡೆದಳು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಅಗ್ನಿಷ್ವಾತ್ತಾದಿ ಪಿತೃಗಳ ವಂಶವರ್ಣನವನ್ನು ಮಾಡಿದೆ.

ಈ ಪಿತೃಗಳಿಗೆ ಅಚ್ಛೋದೆಯೆಂಬ ಮಾನಸ ಕನ್ಯೆಯೊಬ್ಬಳು ಜನಿಸಿದಳು. ಅವಳು ಒಂದುಸಾವಿರ ದಿವ್ಯವರ್ಷಗಳ ಕಾಲ ತಪಸ್ಸುಮಾಡಿದಳು. ಅದರಿಂದ ತುಷ್ಟರಾದ ಪಿತೃಗಳು ವರವನ್ನು ಕರುಣಿಸುವುದಕ್ಕಾಗಿ ದಿವ್ಯರೂಪಧಾರಿಗಳಾಗಿ ಅವಳ ಬಳಿಗೆ ಬಂದರು. ಅವಳು ಕಾಮಶರಪೀಡಿತಳಾಗಿ ಅವರಲ್ಲೊಬ್ಬನಾದ ಅಮಾವಸುವಿನ ಅಂಗಸಂಗವನ್ನು ಬೇಡಿದಳು. ಈ ವ್ಯಭಿಚಾರದ ದೋಷದಿಂದ ಅವಳ ತಪಸ್ಸು ಕೆಟ್ಟಿತು.

ಆಕೆ ಬಳಿಕ ಲಜ್ಜಿತಳಾಗಿ ಪ್ರಾರ್ಥಿಸಿಕೊಳ್ಳಲು ಪಿತೃಗಳು ಹೀಗೆ ಹೇಳಿದರು— ಅವಳು ಭೂಲೋಕದಲ್ಲಿ ರಾಜನಾದ ವಸುವಿಗೆ ಮಗಳಾಗಿ ಜನಿಸುವಳು. ಪರಾಶರ ಮಹರ್ಷಿಗಳ ಅನುಗ್ರಹದಿಂದ ಆಕೆಯಲ್ಲಿ ಬಾದರಾಯಣನೆಂಬ ಮಗನು ಹುಟ್ಟು ವನು. ಅವನು ವೇದಗಳನ್ನು ವಿಂಗಡಿಸುವನು. ಅವನ ಮೂಲಕ ಪುರುವಂಶದ ವಿಚಿತ್ರವೀರ್ಯನಿಗೆ ಧೃತರಾಷ್ಟ್ರ, ಪಾಂಡು ಎಂಬ ಇಬ್ಬರು ಕ್ಷೇತ್ರಜರಾದ ಪುತ್ರರು ಉತ್ಪನ್ನರಾಗುವರು. ಬಳಿಕ ಅವಳು ಭೂಲೋಕದಲ್ಲಿ ಸತ್ಯವತಿಯೆಂದೂ, ಪಿತೃ ಲೋಕದಲ್ಲಿ ಪ್ರೋಷ್ಠಪದಿ ಮತ್ತು ಅಷ್ಟಕೆಯೆಂದೂ ಪ್ರಖ್ಯಾತಳಾಗುವಳು. ಕಾಲಾಂತರದಲ್ಲಿ ಅಚ್ಛೋದೆಯೆಂಬ ಪವಿತ್ರವಾದ ನದಿಯ ರೂಪವನ್ನು ತಾಳು ವಳು.—ಈ ರೀತಿಯಾಗಿ ತಿಳಿಸಿ ಅವರು ಅಂತರ್ಧಾನರಾದರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪಿತೃವಂಶಾನುಕೀರ್ತನವೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು



## ಅಥ ಶ್ರೀಮತ್ಸ್ಯಮಹಾಪುರಾಣೇ ಪಂಚದಶೋಽಧ್ಯಾಯಃ

|| ಸೂತ ಉವಾಚ ||

ವಿಭ್ರಾಜಾ ನಾಮ ಚಾನ್ಯೇ ತು ದಿವಿ ಸಂತಿ ಸುವರ್ಚಸಃ ।
ಲೋಕಾ ಬರ್ಹಿಷದೋ ಯತ್ರ ಪಿತರಃ ಸಂತಿ ಸುವ್ರತಾಃ || ೧ ||

ಯತ್ರ ಬರ್ಹಿಣಯುಕ್ತಾನಿ ವಿಮಾನಾನಿ ಸಹಸ್ರಶಃ ।
ಸಂಕಲ್ಪಾ ಬರ್ಹಿಷೋ ಯತ್ರ ತಿಷ್ಠಂತಿ ಫಲದಾಯಿನಃ || ೨ ||

ಯತ್ರಾಭ್ಯುದಯಶಾಲಾಸು ಮೋದಂತೇ ಶ್ರಾದ್ಧದಾಯಿನಃ ।
ಯಾಂಶ್ಚ ದೇವಾಸುರಗಣಾ ಗಂಧರ್ವಾಪ್ಸರಸಾಂ ಗಣಾಃ || ೩ ||

ಯಕ್ಷರಕ್ಷೋಗಣಾಶ್ಚೈವ ಯಜಂತಿ ದಿವಿ ದೇವತಾಃ ।
ಪುಲಸ್ತ್ಯಪುತ್ರಾಃ ಶತಶಸ್ತಪೋಯೋಗಸಮನ್ವಿತಾಃ || ೪ ||

---

೧. ಸೂತಪೌರಾಣಿಕನು ಹೇಳಿದನು :—ಸ್ವರ್ಗದಲ್ಲಿ ತೇಜೋಯುಕ್ತಗಳಾದ ವಿಭ್ರಾಜವೆಂಬ ಇನ್ನೂ ಕೆಲವು ಲೋಕಗಳುಂಟು. ಅಲ್ಲಿ ಬರ್ಹಿಷದರೆಂಬ ವ್ರತನಿಷ್ಠರಾದ ಪಿತೃಗಳು ವಾಸಿಸುತ್ತಾರೆ.

೨. ನವಿಲುಗರಿಗಳಿಂದ ಅಲಂಕೃತವಾದ ಸಾವಿರಾರು ವಿಮಾನಗಳು ಆ ಲೋಕದಲ್ಲಿವೆ. ಧ್ಯಾನಮಾತ್ರದಿಂದಲೇ ಫಲವನ್ನು ಕೊಡುವ ಹೋಮಾಗ್ನಿಗಳು ಅಲ್ಲಿ ಪ್ರಕಾಶಿಸುತ್ತವೆ.

೩-೪. ಭೂಲೋಕದಲ್ಲಿ ಪಿತೃಗಳನ್ನುದ್ದೇಶಿಸಿ ಶ್ರಾದ್ಧಮಾಡಿದವರು ಅಲ್ಲಿನ ಸುಖಸಮೃದ್ಧವಾದ ಭವ್ಯಮಂದಿರಗಳಲ್ಲಿ ಸಂತೋಷದಿಂದಿರುವರು. ದೇವತೆಗಳು, ಅಸುರರು, ಗಂಧರ್ವರು, ಅಪ್ಸರಸ್ಸುಗಳು, ಯಕ್ಷರು, ರಾಕ್ಷಸರು ಇನ್ನೂ ಮಿಕ್ಕ ದೇವತೆಗಳು, ತಪೋನಿಷ್ಠರಾದ ನೂರಾರುಜನ ಪುಲಸ್ತ್ಯಪುತ್ರರು ಇವರೆಲ್ಲರೂ ಈ ಬರ್ಹಿಷದರೆಂಬ ಪಿತೃಗಳನ್ನು ಆರಾಧಿಸುವರು.

**ಮಹಾತ್ಮಾನೋ ಮಹಾಭಾಗಾ ಭಕ್ತಾನಾಮಭಯಪ್ರದಾಃ ।**
**ಏತೇಷಾಂ ಪೀವರೀ ಕನ್ಯಾ ಮಾನಸೀ ದಿವಿ ವಿಶ್ರುತಾ ॥ ೫ ॥**

**ಯೋಗಿನೀ ಯೋಗಮಾತಾ ಚ ತಪಶ್ಚಕ್ರೇ ಸುದಾರುಣಂ ।**
**ಪ್ರಸನ್ನೋ ಭಗವಾಂಸ್ತಸ್ಯಾ ವರಂ ವವ್ರೇ ತು ಸಾ ಹರೇಃ ॥ ೬ ॥**

**ಯೋಗವಂತಂ ಸುರೂಪಂ ಚ ಭರ್ತಾರಂ ವಿಜಿತೇಂದ್ರಿಯಂ ।**
**ದೇಹಿ ದೇವ ಪ್ರಸನ್ನಸ್ತ್ವಂ ಪತಿಂ ಮೇ ವದತಾಂ ವರಂ ॥ ೭ ॥**

**ಉವಾಚ ದೇವೋ ಭವಿತಾ ವ್ಯಾಸಪುತ್ರೋ ಯದಾ ಶುಕಃ ।**
**ಭವಿತಾ ತಸ್ಯ ಭಾರ್ಯಾ ತ್ವಂ ಯೋಗಾಚಾರ್ಯಸ್ಯ ಸುವ್ರತೇ ॥ ೮ ॥**

**ಭವಿಷ್ಯತಿ ಚ ತೇ ಕನ್ಯಾ ಕೃತ್ವೀ ನಾಮ ಚ ಯೋಗಿನೀ ।**
**ಪಾಂಚಾಲಾಧಿಪತೇರ್ದೇಯಾ ಮಾನುಷಸ್ಯ ತ್ವಯಾ ತದಾ ॥ ೯ ॥**

---

೫-೬. ಇವರು ಮಹಾಮಹಿಮರು ; ತೇಜಸ್ವಿಗಳು ; ಭಕ್ತರಿಗೆ ಅಭಯವನ್ನು ಕೊಡತಕ್ಕವರು. ಇವರಿಗೆ ಪೀವರಿಯೆಂಬ ಮಾನಸಪುತ್ರಿಯೊಬ್ಬಳುಂಟು. ಇವಳು ಸ್ವರ್ಗದಲ್ಲೆಲ್ಲ ಬಹು ಪ್ರಸಿದ್ಧಳಾಗಿದ್ದಳು. ಇವಳಿಗೆ ಯೋಗಿನಿಯೆಂದೂ ಯೋಗ ಮಾತೆಯೆಂದೂ ಹೆಸರು. ಇವಳು ತೀವ್ರವಾದ ತಪಸ್ಸನ್ನು ಮಾಡಲು ಭಗವಂತ ನಾದ ವಿಷ್ಣು ಪ್ರಸನ್ನನಾದನು.

೭. "ಓ ದೇವಾ, ನೀನು ಪ್ರಸನ್ನನಾಗಿರುವೆ ; ತಪಸ್ವಿಯೂ, ಸುಂದರನೂ, ಜಿತೇಂದ್ರಿಯನೂ, ವಾಗ್ಮಿಶ್ರೇಷ್ಠನೂ ಆದ ಪತಿಯನ್ನು ನನಗೆ ಕರುಣಿಸು" ಎಂದು ಆಕೆ ವರವನ್ನು ಬೇಡಿದಳು.

೮. ಭಗವಂತನಾದ ವಿಷ್ಣು ಹೇಳಿದನು. "ಎಲೌ ತಪೋನಿಷ್ಠಳೇ, ಯೋಗಾ ಚಾರ್ಯನಾದ ಶುಕಮಹರ್ಷಿಯು ವ್ಯಾಸಮಹಾಮುನಿಗೆ ಮಗನಾಗಿ ಹುಟ್ಟಿದಾಗ ನೀನು ಆತನಿಗೆ ಪತ್ನಿಯಾಗುವೆ.

೯-೧೦. ನಿನಗೆ ಯೋಗಜ್ಞಾನವುಳ್ಳ ಕೃತ್ವಿಯೆಂಬ ಮಗಳು ಹುಟ್ಟುವಳು. ಪಾಂಚಾಲದೇಶದ ಅರಸಾದ ಮಾನುಷನಿಗೆ ಅವಳನ್ನು ಮದುವೆಮಾಡಿಕೊಡು. ಅವಳಿಗೆ ಬ್ರಹ್ಮದತ್ತನೆಂಬ ಮಗನಾಗುವನು. ಯೋಗದಲ್ಲಿ ಸಿದ್ಧಿಯನ್ನು ಪಡೆದು

ತನನೀ ಬ್ರಹ್ಮದತ್ತಸ್ಯ ಯೋಗಸಿದ್ಧಾ ಚ ಗೌಃ ಸ್ಮೃತಾ ।
ೃಷ್ಣೋ ಗೌರಃ ಪ್ರಭುಶ್ಶಂಭುರ್ಭವಿಷ್ಯಂತಿ ಚ ತೇ ಸುತಾಃ ॥೧೦॥

ಮಹಾತ್ಮಾನೋ ಮಹಾಭಾಗಾ ಗಮಿಷ್ಯಂತಿ ಪರಂ ಪದಂ ।
ಾನುತ್ಪಾದ್ಯ ಪುನರ್ಯೋಗಾತ್ಸವರಾ ಮೋಕ್ಷಮೇಷ್ಯಸಿ ॥೧೧॥

ಮೂರ್ತಿಮಂತಃ ಪಿತರೋ ವಸಿಷ್ಠಸ್ಯ ಸುತಾಃ ಸ್ಮೃತಾಃ ।
ಾಮ್ನಾ ತು ಮಾನಸಾಃ ಸರ್ವೇ ಸರ್ವೇ ತೇ ಧರ್ಮಮೂರ್ತಯಃ ॥೧೨॥

ಜ್ಯೋತಿರ್ಭಾಸಿಷು ಲೋಕೇಷು ಯೇ ವಸಂತಿ ದಿವಃ ಪರಂ ।
ರಾಜಮಾನಾಃ ಕ್ರೀಡಂತಿ ಯತ್ರ ತೇ ಶಾದ್ಧದಾಯಿನಃ ॥೧೩॥

ರ್ವಕಾಮಸಮೃದ್ಧೇಷು ವಿಮಾನೇಷ್ವಪಿ ಪಾದಜಾಃ ।
ಂ ಪುನಃ ಶ್ರಾದ್ಧದಾ ವಿಪ್ರಾ ಭಕ್ತಿಮಂತಃ ಕ್ರಿಯಾನ್ವಿತಾಃ ॥೧೪॥

---

ವಳು ಗೌಃ ಎಂದರೆ ಸರಸ್ವತಿಯೆಂಬ ಪ್ರಖ್ಯಾತಿಯನ್ನು ಹೊಂದುವಳು. ಈ ಕನ್ಯೆ ಮಲ್ಲದೆ ನಿನಗೆ ಕೃಷ್ಣ, ಗೌರ, ಪ್ರಭು ಮತ್ತು ಶಂಭುಗಳೆಂಬ ಪುತ್ರರೂ ನಿಸುವರು.

೧೧. ಇವರೆಲ್ಲರೂ ಮಹಾತೇಜಸ್ವಿಗಳೂ, ಮಹಿಮಾವಂತರೂ ಆಗಿ ಅತ್ಯು ತಪದವಿಯನ್ನೈದುವರು. ಆ ತರುವಾಯ ನಮ್ಮ ವರದ ಬಲದಿಂದ ಯೋಗಾ ಭ್ಯಾಸವನ್ನೆಸಗಿ ನೀನು ಮೋಕ್ಷವನ್ನು ಹೊಂದುವೆ.''

೧೨. ಹಿಂದೆ ಹೇಳಿದ ಆಕಾರಸಹಿತರಾದ ಪಿತೃಗಳು ವಸಿಷ್ಠಮಹರ್ಷಿಯ ಮಕ್ಕಳು. ಮಾನಸರೆಂದು ಅವರ ಹೆಸರು. ಅವರೆಲ್ಲರೂ ಧರ್ಮಮೂರ್ತಿಗಳು. ಸ್ವರ್ಗ ಕ್ಕಿಂತಲೂ ಮೇಲೆ ಜ್ಯೋತಿರ್ಭಾಸಿಗಳೆಂಬ ಲೋಕಗಳಲ್ಲಿ ಅವರು ವಾಸಿಸುವರು.

೧೩-೧೪. ಭಕ್ತಿಯಿಂದ ಪಿತೃಕರ್ಮವನ್ನೆಸಗಿದ ಶೂದ್ರರೂ ಸಹ ಆ ಲೋಕ ಳನ್ನು ಸೇರಿ, ಸಕಲಭೋಗಸಮೃದ್ಧವಾದ ದಿವ್ಯಮಂದಿರಗಳಲ್ಲಿ ಸುಖಿಸುತ್ತಿರುವರು. ಗಿರುವಲ್ಲಿ ಕರ್ಮನಿರತರಾಗಿ ಭಕ್ತಿಯಿಂದ ಶ್ರಾದ್ಧವನ್ನು ಮಾಡಿದ ಬ್ರಾಹ್ಮಣರ ಚಾರವನ್ನೇನು ಹೇಳಬೇಕು ?

**ಗೌರ್ನಾಮ ಕನ್ಯಾ ಯೇಷಾಂ ತು ಮಾನಸೀ ದಿವಿ ರಾಜತೇ ।**
**ಶುಕ್ರಸ್ಯ ದಯಿತಾ ಪತ್ನೀ ಸಾಧ್ಯಾನಾಂ ಕೀರ್ತಿವರ್ಧಿನೀ ॥೧೫॥**

**ಮರೀಚಿಗರ್ಭಾ ನಾಮ್ನಾ ತು ಲೋಕಾ ಮಾರ್ತಾಂಡಮಂಡಲೇ ।**
**ಪಿತರೋ ಯತ್ರ ತಿಷ್ಠಂತಿ ಹವಿಷ್ಮಂತೋಽಂಗಿರಸ್ಸುತಾಃ ॥೧೬॥**

**ತೀರ್ಥಶ್ರಾದ್ಧಪ್ರದಾ ಯಾಂತಿ ಯೇ ಚ ಕ್ಷತ್ರಿಯಸತ್ತಮಾಃ ।**
**ರಾಜ್ಞಾಂ ತು ಪಿತರಸ್ತೇ ವೈ ಸ್ವರ್ಗಮೋಕ್ಷಫಲಪ್ರದಾಃ ॥೧೭॥**

**ಏತೇಷಾಂ ಮಾನಸೀ ಕನ್ಯಾ ಯಶೋದಾ ಲೋಕವಿಶ್ರುತಾ ।**
**ಪತ್ನೀ ಹ್ಯಂಶುಮತಃ ಶ್ರೇಷ್ಠಾ ಸ್ನುಷಾ ಪಂಚಜನಸ್ಯ ಚ ॥೧೮॥**

**ಜನನ್ಯಥ ದಿಲೀಪಸ್ಯ ಭಗೀರಥಪಿತಾಮಹೀ ।**
**ಲೋಕಾಃ ಕಾಮದುಘಾ ನಾಮ ಕಾಮಭೋಗಫಲಪ್ರದಾಃ ॥೧೯॥**

---

೧೫. ಸುಮೂರ್ತಿಮಂತರೆಂಬ ಈ ಪಿತೃಗಳಿಗೆ ಗೋವೆಂಬ ಮಾನಸಪುತ್ರಿ ಹುಟ್ಟಿದಳು. ಇವಳು ಶುಕ್ರಾಚಾರ್ಯನ ಪ್ರಿಯಪತ್ನಿ; ಸಾಧ್ಯರ ಕೀರ್ತಿಯನ್ನು ಬೆಳೆಸಿದವಳು.

೧೬. ಸೂರ್ಯಮಂಡಲದಲ್ಲಿ ಮರೀಚಿಗರ್ಭಗಳೆಂಬ ಲೋಕಗಳುಂಟು. ಅಂಗಿರಸಮುನಿಯ ಸುತರಾದ ಹವಿಷ್ಮಂತರೆಂಬ ಪಿತೃಗಳು ಅಲ್ಲಿರುವರು.

೧೭. ಪಿತೃಗಳನ್ನುದ್ದೇಶಿಸಿ ತೀರ್ಥಶ್ರಾದ್ಧವನ್ನು ಮಾಡುವ ಕ್ಷತ್ರಿಯೋತ್ತಮರು ಆ ಲೋಕಗಳಿಗೆ ಹೋಗುವರು. ರಾಜರುಗಳಿಗೆ ಸ್ವರ್ಗಫಲವನ್ನೂ ಮೋಕ್ಷಫಲವನ್ನೂ ಕೊಡುವವರು ಈ ಹವಿಷ್ಮಂತ ಪಿತೃಗಳು.

೧೮. ಲೋಕಪ್ರಸಿದ್ಧಳಾದ ಯಶೋದೆಯೆಂಬವಳು ಇವರ ಮಾನಸಪುತ್ರಿ. ಇವಳು ಪಂಚಜನಮಹಾರಾಜನ ಸೊಸೆ; ಅಂಶುಮಂತನ ಪತ್ನಿ. ಇವಳ ಮಗನು ದಿಲೀಪ; ಮೊಮ್ಮಗನು ಭಗೀರಥ.

೧೯–೨೦. ಬಯಸಿದ ಸುಖಭೋಗಗಳೆಲ್ಲ ಕೊಡುವ ಕಾಮದುಘಗಳೆಂಬ ದಿವ್ಯಲೋಕಗಳಿವೆ. ಅಲ್ಲಿ ವ್ರತನಿಷ್ಠರಾದ ಸುಸ್ವಧರೆಂಬ ಪಿತೃಗಳಿದ್ದಾರೆ. ಕರ್ದಮ

**ಸುಸ್ವಧಾ ನಾಮ ಪಿತರೋ ಯತ್ರ ತಿಷ್ಠಂತಿ ಸುವ್ರತಾಃ ।**
**ಆಜ್ಯಪಾ ನಾಮ ಲೋಕೇಷು ಕರ್ದಮಸ್ಯ ಪ್ರಜಾಪತೇಃ ॥೨೦॥**

**ಪುಲಹಾಂಗಜದಾಯಾದಾ ವೈಶ್ಯಾಸ್ತಾನ್ ಭಾವಯಂತಿ ಚ ।**
**ಯತ್ರ ಶ್ರಾದ್ಧಕೃತಃ ಸರ್ವೇ ಪಶ್ಯಂತಿ ಯುಗಪದ್ಗತಾಃ ॥೨೧॥**

**ಮಾತೃಭ್ರಾತೃಪಿತೃಸ್ವಸೃಸಖಿಸಂಬಂಧಿಬಾಂಧವಾನ್ ।**
**ಅಪಿ ಜನ್ಮಾಯುತೈರ್ದೃಷ್ಟಾನನುಭೂತಾನ್ ಸಹಸ್ರಶಃ ॥೨೨॥**

**ಏತೇಷಾಂ ಮಾನಸೀ ಕನ್ಯಾ ವಿರಜಾ ನಾಮ ವಿಶ್ರುತಾ ।**
**ಯಾ ಪತ್ನೀ ನಹುಷಸ್ಯಾಸೀದ್ಯಯಾತೇರ್ಜನನೀ ತಥಾ ॥೨೩॥**

**ಏಕಾಷ್ಟಕಾಽಭವತ್ಪಶ್ಚಾದ್ಬ್ರಹ್ಮಲೋಕೇ ಗತಾ ಸತೀ ।**
**ತ್ರಯ ಏತೇ ಗಣಾಃ ಪ್ರೋಕ್ತಾಶ್ಚತುರ್ಥಂ ತು ವದಾಮ್ಯಹಂ ॥೨೪॥**

---

ಪ್ರಜಾಪತಿಯ ಲೋಕಗಳಲ್ಲಿ ಅವರಿಗೆ ಆಜ್ಯಪರೆಂದು ಪ್ರಸಿದ್ಧಿಯಿದೆ. ಪುಲಹಾಂಗಜರ ಮಕ್ಕಳಾದ ಅವರನ್ನು ವೈಶ್ಯರು ಪೂಜಿಸುವರು.

೨೧-೨೨. ಶ್ರಾದ್ಧಮಾಡಿದವರೆಲ್ಲರೂ ಅಲ್ಲಿಗೆ ಒಟ್ಟಿಗೆ ಹೋಗಿ, ಹತ್ತುಸಾವಿರ ಜನ್ಮಗಳು ಕಳೆದುಹೋಗಿರಲಿ ಆಗ ನೋಡಿದ್ದ ಅಥವಾ ಜೊತೆಯಲ್ಲಿ ಕೂಡಿದ್ದ ತಾಯಿ, ಸಹೋದರ, ತಂದೆ, ಸೋದರಿ, ಮಿತ್ರ, ಬಂಧು ಮತ್ತು ಇತರ ಸಂಬಂಧಿಗಳನ್ನು ಕಾಣುತ್ತಾರೆ.

೨೩. ಈ ಸುಸ್ವಧರೆಂಬ ಪಿತೃಗಳಿಗೆ ವಿರಜೆಯೆಂಬ ಮಾನಸಪುತ್ರಿಯು ಜನಿಸಿದಳು. ಅವಳು ನಹುಷನ ಪತ್ನಿಯೂ ಯಯಾತಿ ಮಹಾರಾಜನ ತಾಯಿಯೂ ಆದಳು. ಈ ಸಾಧ್ವೀಮಣಿಯು ಅಷ್ಟಕೆಯೆಂಬ ಹೆಸರಿನಿಂದ ಪಿತೃಲೋಕದಲ್ಲಿದ್ದು, ಆ ಮೇಲೆ ಬ್ರಹ್ಮಲೋಕವನ್ನು ಸೇರಿದಳು.

೨೪. ಈ ಮೂರು ಪಿತೃಗಣಗಳ ವಿಷಯವನ್ನು ತಿಳಿಸಿದೆನು. ಇನ್ನು ಮುಂದೆ ನಾಲ್ಕನೆಯದನ್ನು ಹೇಳುವೆನು.

**ಲೋಕಾಸ್ತು ಮಾನಸಾ ನಾಮ ಬ್ರಹ್ಮಾಂಡೋಪರಿ ಸಂಸ್ಥಿತಾಃ ।**
**ಯೇಷಾಂ ತು ಮಾನಸೀ ಕನ್ಯಾ ನರ್ಮದಾ ನಾಮ ವಿಶ್ರುತಾ ॥೨೫॥**

**ಸೋಮಪಾ ನಾಮ ಪಿತರೋ ಯತ್ರ ತಿಷ್ಠಂತಿ ಶಾಶ್ವತಾಃ ।**
**ಧರ್ಮಮೂರ್ತಿಧರಾಸ್ಸರ್ವೇ ಪರತೋ ಬ್ರಹ್ಮಣಃ ಸ್ಮೃತಾಃ ॥೨೬॥**

**ಉತ್ಪನ್ನಾಃ ಸ್ವಧಯಾ ತೇ ತು ಬ್ರಹ್ಮತ್ವಂ ಪ್ರಾಪ್ಯ ಯೋಗಿನಃ ।**
**ಕೃತ್ವಾ ಸೃಷ್ಟ್ಯಾದಿಕಂ ಸರ್ವಂ ಮಾನಸೇ ಸಾಂಪ್ರತಂ ಸ್ಥಿತಾಃ ॥೨೭॥**

**ನರ್ಮದಾ ನಾಮ ತೇಷಾಂ ತು ಕನ್ಯಾ ತೋಯವಹಾ ಸರಿತ್ ।**
**ಭೂತಾನಿ ಯಾ ಪಾವಯತಿ ದಕ್ಷಿಣಾಪಥಗಾಮಿನೀ ॥೨೮॥**

**ತೇಭ್ಯಸ್ಸರ್ವೇ ತು ಮನವಃ ಪ್ರಜಾಃ ಸರ್ಗೇಷು ನಿರ್ಮಿತಾಃ ।**
**ಜ್ಞಾತ್ವಾ ಶ್ರಾದ್ಧಾನಿ ಕುರ್ವಂತಿ ಧರ್ಮಾಽಭಾವೇಽಪಿ ಸರ್ವದಾ ॥೨೯॥**

**ತೇಭ್ಯ ಏವ ಪುನಃ ಪ್ರಾಪ್ತುಂ ಪ್ರಸಾದಾದ್ಯೋಗಸಂತತಿಂ ।**
**ಪಿತ್ರ್ಯಾಣಾಮಾದಿಸರ್ಗೇ ತು ಶ್ರಾದ್ಧಮೇವ ವಿನಿರ್ಮಿತಂ ॥೩೦॥**

---

೨೫. ಬ್ರಹ್ಮಾಂಡದ ಮೇಲ್ಗಡೆಯಲ್ಲಿ ಮಾನಸಗಳೆಂಬ ಲೋಕಗಳಿವೆ. ಅಲ್ಲಿ ಸೋಮಪರೆಂದು ಪ್ರಸಿದ್ಧರಾದ ಪಿತೃಗಳು ಶಾಶ್ವತವಾಗಿ ನೆಲೆಸಿದ್ದಾರೆ. ಅವರ ಮಾನಸಪುತ್ರಿಯು ನರ್ಮದೆಯೆಂದು ಪ್ರಖ್ಯಾತಳಾಗಿರುವಳು.

೨೬-೨೭. ಅವರೆಲ್ಲರೂ ಧರ್ಮಸ್ವರೂಪರು. ಬ್ರಹ್ಮನಿಗಿಂತ ಮೇಲೆನಿಸಿದುವರು. ಸ್ವಧಾದೇವಿಯಿಂದ ಉತ್ಪನ್ನರಾಗಿ, ಸೃಷ್ಟ್ಯಾದಿಕಾರ್ಯವೆಲ್ಲವನ್ನೂ ಮಾಡಿ, ಬ್ರಹ್ಮಸ್ವರೂಪವನ್ನು ಪಡೆದು ಈಗ ಮಾನಸಲೋಕದಲ್ಲಿ ಅವರು ವಾಸಿಸುತ್ತಿರುವರು.

೨೮. ನರ್ಮದೆಯು ಅವರ ಮಗಳಷ್ಟೆ. ಅವಳು ಮಹಾನದಿಯ ರೂಪದಿಂದ ದಕ್ಷಿಣಾಪಥದಲ್ಲಿ ಹರಿಯುತ್ತ ಜೀವರಾಶಿಗಳನ್ನು ಪವಿತ್ರಗೊಳಿಸುತ್ತಿರುವಳು.

೨೯-೩೦. ಆಯಾ ಸೃಷ್ಟಿಕಾಲಗಳಲ್ಲಿ ಉತ್ಪನ್ನರಾದ ಮನುಗಳು ಮತ್ತು ಪ್ರಜೆಗಳೆಲ್ಲರೂ ಶಾಸ್ತ್ರವಿಧಿಯನ್ನರಿತು, ಆ ಪಿತೃದೇವತೆಗಳನ್ನುದ್ದೇಶಿಸಿ, ನಿರ್ಬಂಧವಿಲ್ಲದ ಸಂದರ್ಭಗಳಲ್ಲಿಯೂ ಸಹ ಶ್ರಾದ್ಧಗಳನ್ನು ಮಾಡುವರು. ಅದರ ಫಲವಾಗಿ ಅವರ ಅನುಗ್ರಹದಿಂದ ಯೋಗನಿರತರಾದ ಸತ್ಪುತ್ರರನ್ನು ಪಡೆಯುವರು. ಮೊತ್ತಮೊದಲಿನ ಸೃಷ್ಟಿಯಲ್ಲಿಯೇ ಪಿತೃಗಳ ಶ್ರಾದ್ಧವು ಏರ್ಪಟ್ಟಿತು.

**ಸರ್ವೇಷಾಂ ರಾಜತಂ ಪಾತ್ರಮಥವಾ ರಜತಾನ್ವಿತಂ ।**
**ದತ್ತಂ ಸ್ವಧಾ ಪುರೋಧಾಯ ಪಿತೄನ್ ಪ್ರೀಣಾತಿ ಸರ್ವದಾ ॥೩೧॥**

**ಅಗ್ನೀಷೋಮಯಮಾನಾಂ ತು ಕಾರ್ಯಮಾಪ್ಯಾಯನಂ ಬುಧೈಃ ।**
**ಅಗ್ನ್ಯಭಾವೇಽಪಿ ವಿಪ್ರಸ್ಯ ಪಾಣಾವಪಿ ಜಲೇಽಥವಾ ॥೩೨॥**

**ಅಜಾಕರ್ಣೇಽಶ್ವಕರ್ಣೇ ವಾ ಗೋಷ್ಠೇ ವಾ ಸಲಿಲಾಂತಿಕೇ ।**
**ಪಿತ್ರ್ಯಾಣಾಮಂಬರಂ ಸ್ಥಾನಂ ದಕ್ಷಿಣಾದಿಕ್ಪ್ರಶಸ್ಯತೇ ॥೩೩॥**

**ಪ್ರಾಚೀನಾವೀತಮುದಕಂ ತಿಲಾಃ ಸವ್ಯಾಂಗಮೇವ ಚ ।**
**ದರ್ಭಾ ಮಾಂಸಂ ಚ ಪಾಠೀನಂ ಗೋಕ್ಷೀರಂ ಮಧುರಾ ರಸಾಃ ॥೩೪॥**

**ಖಡ್ಗಲೋಹಾಮಿಷಮಧುಕುಶಶ್ಯಾಮಾಕಶಾಲಯಃ ।**
**ಯವನೀವಾರಮುದ್ಗೇಕ್ಷುಶುಕ್ಲಪುಷ್ಪಘೃತಾನಿ ಚ ॥೩೫॥**

---

೩೧. ಪಿತೃಕಾರ್ಯಗಳಲ್ಲೆಲ್ಲ ಬೆಳ್ಳಿಯ ಅಥವಾ ಬೆಳ್ಳಿಯ ಸಂಬಂಧವಾದರೂ ಇರುವ ಪಾತ್ರೆಗಳನ್ನು ಉಪಯೋಗಿಸಬೇಕು. ಬೆಳ್ಳಿಯ ಸ್ವಧಾ ಪಾತ್ರೆಯನ್ನು ಪುರೋಹಿತನಿಗೆ ಕೊಟ್ಟರೆ ಪಿತೃಗಳು ಯಾವಾಗಲೂ ತೃಪ್ತರಾಗುತ್ತಾರೆ.

೩೨. ಜ್ಞಾನಿಗಳು ಶ್ರಾದ್ಧದಲ್ಲಿ ಅಗ್ನಿ, ಸೋಮ ಮತ್ತು ಯಮ ಇವರ ತೃಪ್ತಿಗಾಗಿ ಹೋಮಮಾಡಬೇಕು. ಅಗ್ನಿಯಿಲ್ಲದಿದ್ದರೂ ಬ್ರಾಹ್ಮಣನ ಅಂಗೈಯಲ್ಲಿ, ನೀರಿನಲ್ಲಿ, ಆಡಿನ ಕಿವಿಯಲ್ಲಿ, ಕುದುರೆಯ ಕಿವಿಯಲ್ಲಿ, ಕೊಟ್ಟಿಗೆಯಲ್ಲಿ ಇಲ್ಲವೇ ನೀರಿನ ಸಮೀಪದಲ್ಲಿ ಈ ಕಾರ್ಯವನ್ನು ನಡೆಸಬಹುದು.

೩೩-೩೫. ಪಿತೃಗಳಿಗೆ ಗಗನಸ್ಥಲವೂ ದಕ್ಷಿಣದಿಕ್ಕೂ ಶ್ರೇಷ್ಠವಾದುವು. ಪ್ರಾಚೀನಾವೀತ, ನೀರು, ಎಳ್ಳು, ಎಡಭಾಗ, ದರ್ಭೆ, ಮಾಂಸ, ಪಾಠೀನವೆಂಬ ಮತ್ಸ್ಯವಿಶೇಷ, ಹಸುವಿನಹಾಲು, ಸಿಹಿಯಾದ ಪದಾರ್ಥಗಳು, ಖಡ್ಗಮಾಂಸ, ತಾಮ್ರ, ಭೋಗ್ಯವಸ್ತು, ಜೇನುತುಪ್ಪ, ಕುಶವೆಂಬ ದರ್ಭವಿಶೇಷ, ಸಾವೆ, ಬತ್ತ, ಗೋಧಿ, ಕಾಡುಬತ್ತ, ಹೆಸರು, ಕಬ್ಬು, ಬಿಳಿಯಹೂ, ತುಪ್ಪ ಇವೆಲ್ಲವೂ ಅವರಿಗೆ ಇಷ್ಟವಾದುವು ; ಆದುದರಿಂದ ಶ್ರಾದ್ಧದಲ್ಲಿ ಉಪಯೋಗಿಸಲು ಅರ್ಹವಾದುವು.

**ವಲ್ಲಭಾನಿ ಪ್ರಶಸ್ತಾನಿ ಪಿತೄಣಾಮಿಹ ಸರ್ವದಾ ।**
**ದ್ವೇಷ್ಯಾಣಿ ಸಂಪ್ರವಕ್ಷ್ಯಾಮಿ ಶ್ರಾದ್ಧೇ ವರ್ಜ್ಯಾನಿ ಯಾನಿ ತು ॥೩೬॥**
**ಮಸೂರಶಣನಿಷ್ಪಾವರಾಜಮಾಷಕುಸುಂಭಿಕಾಃ ।**
**ಪದ್ಮಬಿಲ್ವಾರ್ಕಧತ್ತೂರಪಾರಿಭದ್ರಾಟರೂಷಕಾಃ ॥೩೭॥**
**ನ ದೇಯಾಃ ಪಿತೃಕಾರ್ಯೇಷು ಪಯಶ್ಚಾಜಾವಿಕಂ ತಥಾ ।**
**ಕೋದ್ರವೋದಾರಚಣಕಾಃ ಕಪಿತ್ಥಂ ಮಧುಕಾತಸೀ ॥೩೮॥**
**ಏತಾನ್ಯಪಿ ನ ದೇಯಾನಿ ಪಿತೃಭ್ಯಃ ಪ್ರಿಯಮಿಚ್ಛತಾ ।**
**ಪಿತೄನ್ ಪ್ರೀಣಾತಿ ಯೋ ಭಕ್ತ್ಯಾ ತೇ ಪುನಃ ಪ್ರೀಣಯಂತಿ ತಂ ॥೩೯॥**
**ಯಚ್ಛಂತಿ ಪಿತರಃ ಪುಷ್ಟಿಂ ಸ್ವರ್ಗಾರೋಗ್ಯಂ ಪ್ರಜಾಫಲಂ ।**
**ದೇವಕಾರ್ಯಾದಪಿ ಪುನಃ ಪಿತೃಕಾರ್ಯಂ ವಿಶಿಷ್ಯತೇ ॥೪೦॥**
**ದೇವತಾನಾಂ ಚ ಪಿತರಃ ಪೂರ್ವಮಾಪ್ಯಾಯನಂ ಸ್ಮೃತಂ ।**
**ಶೀಘ್ರಪ್ರಸಾದಾಸ್ತ್ವಕ್ರೋಧಾ ನಿಃಸ್ನೇಹಾಃ ಸ್ಥಿರಸೌಹೃದಾಃ ॥೪೧॥**

---

೩೬-೩೮. ಪಿತೃದೇವತೆಗಳಿಗೆ ಇಷ್ಟವಿಲ್ಲದ, ಆದುದರಿಂದಲೇ ಶ್ರಾದ್ಧದಲ್ಲಿ ಉಪಯೋಗಿಸಲನರ್ಹವಾದ ಪದಾರ್ಥಗಳನ್ನು ಹೇಳುವೆನು. ಕಾಡುಕಡಲೆ, ಸೆಣಬು ಅವರೆ, ಹಲಸಂದೆ, ಕುಸುಬೆ, ತಾವರೆ, ಬಿಲ್ವ, ಎಕ್ಕ, ಉಮ್ಮತ್ತಿ, ಬೇವು, ಆಡಿನ ಹಾಲು, ಮುಂತಾದುವನ್ನು ಪಿತೃಕಾರ್ಯದಲ್ಲಿ ಉಪಯೋಗಿಸಬಾರದು. ಹಾರಕ, ಹಿರಿಗಡಲೆ, ಬೇಲದಹಣ್ಣು, ಹಿಪ್ಪೆಯೆಣ್ಣೆ ಅಥವಾ ಹೂ, ಅಗಸೆಯಸೊಪ್ಪು ಇಲ್ಲವೇ ಹೂ ಇವುಗಳೂ ಕೂಡ ನಿಷಿದ್ಧವಾದುವು.

೩೯-೪೦. ಭಕ್ತಿಯಿಂದ ಪಿತೃಗಳನ್ನು ಯಾವನು ತೃಪ್ತಿಗೊಳಿಸುವನೋ ಅವನನ್ನು ಅವರೂ ಸಂತೋಷಪಡಿಸುವರು. ಪುಷ್ಟಿಯನ್ನೂ ಕರುಣಿಸುವರು. ದೇವಕಾರ್ಯಕ್ಕಿಂತಲೂ ಪಿತೃಕಾರ್ಯವು ಹೆಚ್ಚಿನದು.

೪೧-೪೨. ದೇವತೆಗಳಿಗಿಂತಲೂ ಮೊದಲು ಪಿತೃಗಳನ್ನು ತೃಪ್ತಿಪಡಿಸಬೇಕೆಂದು ಹೇಳಿದೆ. ಇವರು ಬೇಗನೆ ಪ್ರಸನ್ನರಾಗುವರು. ಕೋಪರಹಿತರು, ನಿರಾಯುಧರು, ನಿಶ್ಚಲವಾದ ಪ್ರೀತಿಯನ್ನು ಇಟ್ಟಿರುವವರು, ಶಾಂತಾತ್ಮರು, ಶುಚಿರ್ಭೂತರು, ಯಾವಾಗಲೂ ಪ್ರಿಯವನ್ನು ಹೇಳುವವರು, ಭಕ್ತರಲ್ಲಿ ಅನುರಾಗಿಗಳು, ಮತ್ತು ಸುಖವನ್ನು ಕೊಡತಕ್ಕವರು. ಈ ಕಾರಣಗಳಿಂದಲೇ ಪಿತೃಗಳನ್ನು ಪೂರ್ವ

**ಶಾಂತಾತ್ಮಾನಃ ಶೌಚಪರಾಃ ಸತತಂ ಪ್ರಿಯವಾದಿನಃ।**
**ಭಕ್ತಾನುರಕ್ತಾಃ ಸುಖದಾಃ ಪಿತರಃ ಪೂರ್ವದೇವತಾಃ ॥೪೨॥**
**ಹವಿಷ್ಮತಾಮಾಧಿಪತ್ಯೇ ಶ್ರಾದ್ಧದೇವಃ ಸ್ಮೃತೋ ರವಿಃ।**
**ಏತದ್ವಃ ಸರ್ವಮಾಖ್ಯಾತಂ ಪಿತೃವಂಶಾನುಕೀರ್ತನಂ।**
**ಪುಣ್ಯಂ ಪವಿತ್ರಮಾಯುಷ್ಯಂ ಕೀರ್ತನೀಯಂ ಸದಾ ನೃಭಿಃ ॥೪೩॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಪಿತೃವಂಶಾನುಕೀರ್ತನಂ ನಾಮ ಪಂಚದಶೋಽಧ್ಯಾಯಃ**

---

ದೇವರು ಎಂದರೆ ದೇವತೆಗಳಿಗಿಂತಲೂ ಮೊದಲು ಗೌರವಾರ್ಹರು ಎಂದು ಕರೆಯುವರು.

೪೩. ಹವಿಷ್ಮಂತಪಿತೃಗಳ ಆಧಿಪತ್ಯದಲ್ಲಿ ಸೂರ್ಯನು ಶ್ರಾದ್ಧಾಭಿಮಾನ ದೇವತೆಯಾಗಿರುವನು. ಪಿತೃವಂಶವೆಲ್ಲವನ್ನೂ ಹೇಳಿದಂತಾಯಿತು. ಪುಣ್ಯಕರವೂ, ಪರಿಶುದ್ಧವೂ, ಆಯುರ್ವರ್ಧಕವೂ ಆದ ಈ ವರ್ಣನೆಯನ್ನು ಮನುಷ್ಯರು ನಿತ್ಯವೂ ಓದಬೇಕು.

## ಅಧ್ಯಾಯದ ಸಾರಾಂಶ

ಬರ್ಹಿಷದರೆಂಬ ಪಿತೃಗಳ ಕನ್ಯೆಯಾದ ಪೀವರಿಯು ತಪಸ್ಸುಮಾಡಿ ತನಗೆ ಅನುರೂಪನಾದ ಪತಿಯು ದೊರಕಬೇಕೆಂದು ಬೇಡಿದಳು. ಹರಿಯು ಪ್ರಸನ್ನನಾಗಿ ವ್ಯಾಸಪುತ್ರನಾದ ಶುಕಮಹಾಮುನಿಯು ಅವಳಿಗೆ ಪತಿಯಾಗುವನೆಂದೂ, ಬಳಿಕ ಕೃತ್ವಿಯೆಂಬ ಪುತ್ರಿಯೂ, ಕೃಷ್ಣ, ಗೌರ ಮುಂತಾದ ಪುತ್ರರೂ ಜನಿಸುವರೆಂದೂ, ತರುವಾಯ ಅವಳು ಯೋಗಮಹಿಮೆಯಿಂದ ಮೋಕ್ಷವನ್ನೈದುವಳೆಂದೂ ವರವನ್ನಿತ್ತನು. ಈ ಕೃತ್ವಿಯೇ ಪಾಂಚಾಲಾಧಿಪತಿಯ ಪತ್ನಿ ; ಬ್ರಹ್ಮದತ್ತನ ತಾಯಿ.

ಹವಿಷ್ಮಂತರೆಂಬವರು ಕ್ಷತ್ರಿಯರ ಪಿತೃಗಳು. ಇವರ ಮಗಳಾದ ಯಶೋದೆಯಲ್ಲಿ ದಿಲೀಪರಾಜನು ಜನಿಸಿದನು. ಹೀಗೆಯೇ ಮಾನಸರು, ಸೋಮಪರು ಮುಂತಾದ ಪಿತೃಗಳ ವೃತ್ತಾಂತವೂ, ಶ್ರಾದ್ಧದಲ್ಲಿ ಪಿತೃಗಳಿಗೆ ಇಷ್ಟವಾದ ಮತ್ತು ದ್ವೇಷ್ಯವಾದ ವಸ್ತುಗಳೂ ಈ ಅಧ್ಯಾಯದಲ್ಲಿ ನಿರೂಪಿತವಾಗಿವೆ.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪಿತೃವಂಶವರ್ಣನವೆಂಬ ಹದಿನೈದನೆಯ ಅಧ್ಯಾಯವು ಮುಗಿದುದು

## ಅಥ ಶ್ರೀಮತ್ಸ್ಯಮಹಾಪುರಾಣೇ ಷೋಡಶೋऽಧ್ಯಾಯಃ

॥ ಸೂತ ಉವಾಚ ॥

ಶ್ರುತ್ವೈತತ್ಸರ್ವಮಖಿಲಂ ಮನುಃ ಪಪ್ರಚ್ಛ ಕೇಶವಂ ।
ಶ್ರಾದ್ಧಕಾಲಂ ಚ ವಿವಿಧಂ ಶ್ರಾದ್ಧಭೇದಂ ತಥೈವ ಚ ॥ ೧ ॥

ಶ್ರಾದ್ಧೇಷು ಭೋಜನೀಯಾ ಯೇ ಯೇ ಚ ವರ್ಜ್ಯಾ ದ್ವಿಜಾತಯಃ ।
ಕಸ್ಮಿನ್ ವಾಸರಭಾಗೇ ವಾ ಪಿತೃಭ್ಯಃ ಶ್ರಾದ್ಧಮಾಚರೇತ್ ॥ ೨ ॥

ಕಸ್ಮಿನ್ ದತ್ತಂ ಕಥಂ ಯಾತಿ ಶ್ರಾದ್ಧಂ ತು ಮಧುಸೂದನ ।
ವಿಧಿನಾ ಕೇನ ಕರ್ತವ್ಯಂ ಕಥಂ ಪ್ರೀಣಾತಿ ತತ್ಪಿತೄನ್ ॥ ೩ ॥

॥ ಮತ್ಸ್ಯ ಉವಾಚ ॥

ಕುರ್ಯಾದಹರಹಃ ಶ್ರಾದ್ಧಮನ್ನಾದ್ಯೇನೋದಕೇನ ವಾ ।
ಪಯೋಮೂಲಫಲೈರ್ವಾऽಪಿ ಪಿತೃಭ್ಯಃ ಪ್ರೀತಿಮಾವಹನ್ ॥ ೪ ॥

---

೧-೩. ಸೂತಪೌರಾಣಿಕನು ಹೇಳಿದನು:—ಇವೆಲ್ಲವನ್ನೂ ಕೇಳಿದ ಬಳಿಕ ಮನುವು ಕೇಶವನನ್ನು ಪ್ರಶ್ನಿಸಿದನು. "ದೇವಾ, ಶ್ರಾದ್ಧಕಾಲವಾವುದು? ಶ್ರಾದ್ಧ ಭೇದಗಳಾವುವು? ಶ್ರಾದ್ಧಭೋಜನಕ್ಕೆ ಅರ್ಹರಾದ ಮತ್ತು ಅನರ್ಹರಾದ ಬ್ರಾಹ್ಮಣರ ಲಕ್ಷಣಗಳೇನು? ದಿನದ ಯಾವ ಭಾಗದಲ್ಲಿ ಪಿತೃಗಳಿಗೆ ಶ್ರಾದ್ಧವನ್ನು ಮಾಡಬೇಕು? ಯಾವನನ್ನು ಶ್ರಾದ್ಧಕ್ಕೆ ಕರೆಯಬೇಕು? ಅದು ಹೇಗೆ ಫಲಿಸುತ್ತದೆ? ಯಾವ ವಿಧಿಯಿಂದ ಅದನ್ನು ನೆರವೇರಿಸಬೇಕು? ಅದು ಪಿತೃಗಳನ್ನು ಹೇಗೆ ತೃಪ್ತಿಪಡಿಸುತ್ತದೆ."

೪. ಮತ್ಸ್ಯರೂಪನಾದ ಭಗವಂತನು ಹೇಳಿದನು. ಅನ್ನ ಮೊದಲಾದುದರಿಂದಲೋ, ನೀರಿನಿಂದಲೋ, ಇಲ್ಲವೇ ಹಾಲು, ಗೆಡ್ಡೆ, ಗೆಣಸು, ಹಣ್ಣು ಇವುಗಳಿಂದಲೋ ಪ್ರತಿದಿನವೂ ಪಿತೃಗಳಿಗೆ ಶ್ರಾದ್ಧವನ್ನು ಮಾಡಬೇಕು. ಇದರಿಂದ ಅವರು ಪ್ರೀತರಾಗುವರು.

ನಿತ್ಯಂ ನೈಮಿತ್ತಿಕಂ ಕಾಮ್ಯಂ ತ್ರಿವಿಧಂ ಶ್ರಾದ್ಧಮುಚ್ಯತೇ ।
ನಿತ್ಯಂ ತಾವತ್ಪ್ರವಕ್ಷ್ಯಾಮಿ ಅರ್ಘ್ಯಾವಾಹನವರ್ಜಿತಂ ॥ ೫ ॥

ಅದೈವಂ ತದ್ವಿಜಾನೀಯಾತ್ಪಾರ್ವಣಂ ಪರ್ವಸು ಸ್ಮೃತಂ ।
ಪಾರ್ವಣಂ ತ್ರಿವಿಧಂ ಪ್ರೋಕ್ತಂ ಶೃಣು ತಾವನ್ಮಹೀಪತೇ ॥ ೬ ॥

ಪಾರ್ವಣೇ ಯೇ ನಿಯೋಜ್ಯಾಸ್ತು ತಾಞ್ಶೃಣುಷ್ವ ನರಾಧಿಪ ।
ಪಂಚಾಗ್ನಿಃ ಸ್ನಾತಕಶ್ಚೈವ ತ್ರಿಸುಪರ್ಣಃ ಷಡಂಗವಿತ್ ॥ ೭ ॥

ಶ್ರೋತ್ರಿಯಃ ಶ್ರೋತ್ರಿಯಸುತೋ ವಿಧಿವಾಕ್ಯವಿಶಾರದಃ ।
ಸರ್ವಜ್ಞೋ ವೇದವಿನ್ಮಂತ್ರೀ ಜ್ಞಾತವಂಶಃ ಕುಲಾನ್ವಿತಃ ॥ ೮ ॥

ಪುರಾಣವೇತ್ತಾ ಧರ್ಮಜ್ಞಃ ಸ್ವಾಧ್ಯಾಯಜಪತತ್ಪರಃ ।
ಶಿವಭಕ್ತಃ ಪಿತೃಪರಃ ಸೂರ್ಯಭಕ್ತೋಽಥ ವೈಷ್ಣವಃ ॥ ೯ ॥

---

೫. ನಿತ್ಯ, ನೈಮಿತ್ತಿಕ ಮತ್ತು ಕಾಮ್ಯಗಳೆಂದು ಶ್ರಾದ್ಧವು ಮೂರು ಬಗೆಯಾಗಿರುವುದು. ಅರ್ಘ್ಯ, ಆವಾಹನ ಇವಿಲ್ಲದೆ, ವಿಶ್ವೇದೇವರನ್ನು ವರಣಮಾಡದೆ ನಡೆಸುವ ಶ್ರಾದ್ಧವು ನಿತ್ಯಶ್ರಾದ್ಧವೆನಿಸುವುದು. ಪರ್ವಕಾಲಗಳಲ್ಲಿ ಎಂದರೆ ಅಮಾವಾಸ್ಯೆ, ಹುಣ್ಣಿಮೆ, ಅಷ್ಟಮಿ, ಚತುರ್ದಶಿ ಇಂತಹ ದಿನಗಳಲ್ಲಿ ಮಾಡತಕ್ಕುದನ್ನು ಪಾರ್ವಣವೆನ್ನುವರು.

೬. ರಾಜಾ, ಪಾರ್ವಣಶ್ರಾದ್ಧವು ಮೂರು ವಿಧವಾಗಿರುವುದು. ಅದರಲ್ಲಿ ವಿನಿಯೋಗಿಸಬಹುದಾದ ಬ್ರಾಹ್ಮಣರ ಲಕ್ಷಣವನ್ನು ಹೇಳುವೆನು ಕೇಳು.

೭–೧೦. ದಕ್ಷಿಣ, ಗಾರ್ಹಪತ್ಯ, ಆಹವನೀಯ, ಸಭ್ಯ ಮತ್ತು ಆವಸಥ್ಯಗಳೆಂಬ ಪಂಚಾಗ್ನಿಗಳಲ್ಲಿ ಹೋಮಕಾರ್ಯ ನಡೆಸುವವನು, ಬ್ರಹ್ಮಚರ್ಯವ್ರತವನ್ನು ಸಾಂಗವಾಗಿ ನೆರವೇರಿಸಿ ಪ್ರಾಜಾಪತ್ಯಾದಿವ್ರತ ಚತುಷ್ಟಯಗಳನ್ನು ಆಚರಿಸಿದವನು, ತ್ರಿಸುಪರ್ಣವೆಂಬ ವೇದಮಂತ್ರಗಳನ್ನರಿತವನು, ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ ಮತ್ತು ಕಲ್ಪಗಳೆಂಬ ಆರು ವೇದಾಂಗಗಳನ್ನು ವ್ಯಾಸಂಗಮಾಡಿದವನು, ವೇದಾಧ್ಯಯನ ಸಂಪನ್ನನು, ಅಂತಹವನ ಮಗನು, ಶ್ರೌತಸೂತ್ರಗಳಲ್ಲಿ

ಬ್ರಹ್ಮಣ್ಯೋ ಯೋಗವಿಚ್ಛಾಂತೋ ವಿಜಿತಾತ್ಮಾ ಚ ಶೀಲವಾನ್ ।
ಭೋಜಯೇಚ್ಚಾಪಿ ದೌಹಿತ್ರಂ ಯತ್ನತಃ ಸ್ವಸುಹೃದ್ಗುರೂನ್ ॥೧೦॥

ವಿಟ್ಪತಿಂ ಮಾತುಲಂ ಬಂಧುಮೃತ್ವಿಜಾಚಾರ್ಯಸೋಮಪಾನ್ ।
ಯಶ್ಚ ವ್ಯಾಕುರುತೇ ವಾಕ್ಯಂ ಯಶ್ಚ ಮೀಮಾಂಸತೇಽಧ್ವರಂ ॥೧೧॥

ಸಾಮಸ್ವರವಿಧಿಜ್ಞಶ್ಚ ಪಜ್ಕ್ತಿಪಾವನಪಾವನಃ ।
ಸಾಮಗೋ ಬ್ರಹ್ಮಚಾರೀ ಚ ವೇದಯುಕ್ತೋಽಥ ಬ್ರಹ್ಮವಿತ್ ॥೧೨॥

ಯತ್ರೈತೇ ಭುಂಜತೇ ಶ್ರಾದ್ಧೇ ತದೇವ ಪರಮಾರ್ಥವತ್ ।
ಏತೇ ಭೋಜ್ಯಾಃ ಪ್ರಯತ್ನೇನ ವರ್ಜನೀಯಾನ್ನಿಭೋಧ ಮೇ ॥೧೩॥

---

ನಿಪುಣನು, ಅನೇಕ ಶಾಸ್ತ್ರಗಳನ್ನು ತಿಳಿದವನು, ವೇದಾರ್ಥಜ್ಞಾನಿಯು, ಮಂತ್ರ ಶಾಸ್ತ್ರಜ್ಞನು, ಪ್ರಸಿದ್ಧವಾದ ವಂಶದಲ್ಲಿ ಅಥವಾ ಮನೆತನದಲ್ಲಿ ಜನಿಸಿದವನು, ಪುರಾಣಗಳನ್ನು ತಿಳಿದವನು, ಧರ್ಮಜ್ಞನು, ವೇದಾಧ್ಯಯನಮಾಡುವವನು, ಶಿವಭಕ್ತನು, ಪಿತೃಭಕ್ತನು, ಸೂರ್ಯಭಕ್ತನು, ವಿಷ್ಣುಭಕ್ತನು, ವೈಷ್ಣವನು, ಬ್ರಹ್ಮಜ್ಞಾನ ತತ್ಪರನು, ಯೋಗಶಾಸ್ತ್ರಜ್ಞನು, ಶಮಗುಣ ಯುಕ್ತನು, ಜಿತೇಂದ್ರಿಯನು, ಸದಾ ಚಾರಸಂಪನ್ನನು ಇವರೆಲ್ಲರೂ ಶ್ರಾದ್ಧಭೋಜನಕ್ಕೆ ಅರ್ಹರಾದವರು.

೧೧. ಮಗಳ ಮಗ, ಸ್ನೇಹಿತ, ಗುರು, ಜ್ಞಾನಿ, ಅಳಿಯ, ಸೋದರಮಾವ, ಬಂಧು, ಋತ್ವಿಕ್ಕು, ಆಚಾರ್ಯ, ಯಜ್ಞದಲ್ಲಿ ಸೋಮಪಾನಮಾಡಿದವನು ಇವರನ್ನು ಪ್ರಯತ್ನಪೂರ್ವಕವಾಗಿ ವಿನಿಯೋಗಿಸಬೇಕು

೧೨. ವ್ಯಾಕರಣಶಾಸ್ತ್ರಜ್ಞನು, ಯಜ್ಞವಿಚಾರತತ್ಪರನು, ಸಾಮವೇದದ ಸ್ವರವಿಧಿಯನ್ನು ಬಲ್ಲವನು, ತನ್ನ ಪಜ್ಕ್ತಿಯಲ್ಲಿ ಕುಳಿತವರನ್ನು ಕೂಡ ಪರಿಶುದ್ಧ ರನ್ನಾಗಿಮಾಡುವ ಮಹಾಜ್ಞಾನಿಯು, ಸಾಮವೇದಾಧ್ಯಾಯಿಯು, ಬ್ರಹ್ಮಚಾರಿಯು, ತನ್ನ ಶಾಖೆ ಮಾತ್ರವಲ್ಲದೆ ಇತರ ವೇದಗಳನ್ನೂ ಗ್ರಹಿಸಿರುವವನು, ಬ್ರಹ್ಮಸಾಕ್ಷಾತ್ಕಾರ ಪಡೆದವನು ಇವರೆಲ್ಲರೂ ಭೋಜನಕ್ಕೆ ಅತಿಶ್ರೇಷ್ಠರೆಂದೆನಿಸುವರು.

೧೩. ಅವರು ಯಾವ ಶ್ರಾದ್ಧದಲ್ಲಿ ಭೋಜನಮಾಡುವರೋ ಅದೇ ಸಾರ್ಥ ಕವೆನಿಸುವುದು. ಆದುದರಿಂದ ಅವರನ್ನು ಪ್ರಯತ್ನದಿಂದ ನಿಮಂತ್ರಿಸಬೇಕು. ಇನ್ನು ನಿಷಿದ್ಧರಾದವರನ್ನು ಹೇಳುವೆನು ಕೇಳು.

**ಪತಿತೋಽಭಿಶಸ್ತಃ ಕ್ಲೀಬಃ ಪಿಶುನವ್ಯಂಗರೋಗಿಣಃ ।**
**ಕುನಖೀ ಶ್ಯಾವದಂತಶ್ಚ ಕುಂಡಗೋಲಾಶ್ವಪಾಲಕಾಃ ॥೧೪॥**

**ಪರಿವಿತ್ತಿರ್ನಿಯುಕ್ತಾತ್ಮಾ ಪ್ರಮತ್ತೋನ್ಮತ್ತದಾರುಣಾಃ ।**
**ಬೈಡಾಲೀ ಬಕವೃತ್ತಿಶ್ಚ ದಂಭೋ ದೇವಲಕಾದಯಃ ॥೧೫॥**

**ಕೃತಘ್ನಾನ್ನಾಸ್ತಿಕಾಂಸ್ತದ್ವನ್ಮ್ಲೇಚ್ಛದೇಶನಿವಾಸಿನಃ ।**
**ತ್ರಿಶಂಕುಬರ್ಬರದ್ರಾವವೀತದ್ರವಿಡಕೋಂಕಣಾನ್ ॥೧೬॥**

**ವರ್ಜಯೇಲ್ಲಿಂಗಿನಃ ಸರ್ವಾನ್ಛ್ರಾದ್ಧಕಾಲೇ ವಿಶೇಷತಃ ।**
**ಪೂರ್ವೇದ್ಯುರಪರೇದ್ಯುರ್ವಾ ವಿನೀತಾತ್ಮಾ ನಿಮಂತ್ರಯೇತ್ ॥೧೭॥**

---

೧೪-೧೫. ಧರ್ಮಭ್ರಷ್ಟ, ಅಪವಾದಗ್ರಸ್ತ, ನಪುಂಸಕ, ಚಾಡಿಕೋರ, ಅಂಗಹೀನ, ರೋಗಿ, ವಕ್ರವಾದ ಉಗುರಿನವನು, ದಂತಪಾಟವವಿಲ್ಲದವನು, ವ್ಯಭಿಚಾರದಿಂದ ಹುಟ್ಟಿದವನು—ಪತಿಯು ಬದುಕಿರುವಾಗ ಸ್ತ್ರೀಯು ವ್ಯಭಿಚಾರಮಾಡಿ ಪಡೆದ ಮಗನಿಗೆ ಕುಂಡನೆಂದೂ, ಸತ್ತಬಳಿಕ ಪಡೆದವನಿಗೆ ಗೋಳನೆಂದೂ ಹೆಸರು—ಕುದುರೆ ಸಾಕುವವನು, ಅಣ್ಣನಿಗೆ ಮದುವೆಯಾಗುವುದಕ್ಕೆ ಮೊದಲು ತಾನು ಮದುವೆಮಾಡಿಕೊಳ್ಳುವವನು, ನಿಷಿದ್ಧ ವಿಷಯಗಳಲ್ಲಿ ಮನಸ್ಸನ್ನು ಇಟ್ಟವನು, ಬುದ್ಧಿ ಸ್ವಾಧೀನದಲ್ಲಿಲ್ಲದವನು, ಹುಚ್ಚ, ಕ್ರೂರಸ್ವಭಾವದವನು, ಬೆಕ್ಕಿನಂತೆಯೂ ಬಕಪಕ್ಷಿಯಂತೆಯೂ ಕಪಟವೃತ್ತಿಯಿಂದ ಹೊಟ್ಟೆತುಂಬಿಸಿಕೊಳ್ಳುವವನು, ಡಾಂಭಿಕನು, ದುಡ್ಡಿಗಾಗಿ ದೇವರನ್ನು ಪೂಜಿಸುವವನು ಇವರೆಲ್ಲರೂ ಶ್ರಾದ್ಧಭೋಜನಕ್ಕೆ ಅನರ್ಹರು.

೧೬. ಕೃತಘ್ನರು, ನಾಸ್ತಿಕರು, ಮ್ಲೇಚ್ಛದೇಶನಿವಾಸಿಗಳು, ತ್ರಿಶಂಕು, ಬರ್ಬರ, ದ್ರಾವ, ವೀತ, ದ್ರವಿಡ, ಮತ್ತು ಕೊಂಕಣದೇಶದ ನಿವಾಸಿಗಳು ಇವರನ್ನು ಶ್ರಾದ್ಧಕ್ಕೆ ನಿಮಂತ್ರಿಸಬಾರದು. ಅಂತಶ್ಶುದ್ಧಿಯಿಲ್ಲದ ಎಲ್ಲಬಗೆಯ ವೇಷಧಾರಿಗಳನ್ನೂ ಶ್ರಾದ್ಧಕಾಲದಲ್ಲಿ ತಪ್ಪದೆ ದೂರಮಾಡಬೇಕು.

೧೭-೧೮. ಶ್ರಾದ್ಧಕ್ಕೆ ಮೊದಲದಿನವೂ ಮರುದಿನವೂ ಬ್ರಾಹ್ಮಣರನ್ನು ವಿನಯದಿಂದ ಪ್ರಾರ್ಥಿಸಿ ಭೋಜನಕ್ಕೆ ಕರೆಯಬೇಕು. ಹಾಗೆ ನಿಮಂತ್ರಿತರಾದ ದ್ವಿಜರ

**ನಿಮಂತ್ರಿತಾನ್ ಹಿ ಪಿತರ ಉಪತಿಷ್ಠಂತಿ ತಾನ್ ದ್ವಿಜಾನ್ ।**
**ವಾಯುಭೂತಾನುಗಚ್ಛಂತಿ ತಥಾಽಽಸೀನಾನುಪಾಸತೇ ॥೧೮॥**

**ದಕ್ಷಿಣಂ ಜಾನುಮಾಲಭ್ಯ ತ್ವಂ ಮಯಾ ತು ನಿಮಂತ್ರಿತಃ ।**
**ಏವಂ ನಿಮಂತ್ರ್ಯ ನಿಯಮಂ ಶ್ರಾವಯೇತ್ಪಿತೃಬಾಂಧವಾನ್ ॥೧೯॥**

**ಅಕ್ರೋಧನೈಃ ಶೌಚಪರೈಃ ಸತತಂ ಬ್ರಹ್ಮಚಾರಿಭಿಃ ।**
**ಭವಿತವ್ಯಂ ಭವದ್ಭಿಶ್ಚ ಮಯಾ ಚ ಶ್ರಾದ್ಧಕಾರಿಣಾ ॥೨೦॥**

**ಪಿತೃಯಜ್ಞಂ ವಿನಿರ್ವರ್ತ್ಯ ತರ್ಪಣಾಖ್ಯಂ ತು ಯೋಽಗ್ನಿಮಾನ್ ।**
**ಪಿಂಡಾನ್ವಾಹಾರ್ಯಕಂ ಕುರ್ಯಾಚ್ಛ್ರಾದ್ಧಮಿಂದುಕ್ಷಯೇ ಸದಾ ॥೨೧॥**

**ಗೋಮಯೇನೋಪಲಿಪ್ತೇ ತು ದಕ್ಷಿಣಪ್ರವಣೇ ಸ್ಥಲೇ ।**
**ಶ್ರಾದ್ಧಂ ಸಮಾಚರೇದ್ಭಕ್ತ್ಯಾ ಗೋಷ್ಠೇ ವಾ ಜಲಸನ್ನಿಧೌ ॥೨೨॥**

---

ಸಮೀಪದಲ್ಲಿಯೇ ಪಿತೃಗಳು ಇರುತ್ತಾರೆ. ವಾಯುರೂಪದಿಂದ ಅವರನ್ನು ಅನುಸರಿಸಿ ಹೋಗುತ್ತಾರೆ. ಅವರು ಕುಳಿತಾಗ ತಾವೂ ಸಮೀಪದಲ್ಲಿ ಕುಳಿತುಕೊಳ್ಳುತ್ತಾರೆ.

೧೯-೨೦. ಬ್ರಾಹ್ಮಣರ ಬಲಮೊಣಗಾಲನ್ನು ಸ್ಪರ್ಶಿಸಿ, "ನಿಮ್ಮನ್ನು ನಿಮಂತ್ರಣಕ್ಕೆ ಹೇಳಿದ್ದೇನೆ" ಎಂದು ಪಾರ್ಥಿಸಿ, "ನೀವು ಕೋಪರಹಿತರೂ, ಶುಚಿರ್ಭೂತರೂ, ವೇದಾಧ್ಯಾಯಿಗಳೂ ಆಗಿರಬೇಕು; ಶ್ರಾದ್ಧವನ್ನು ಮಾಡುವ ನಾನೂ ಸಹ ಹೀಗೆಯೇ ಇರುವೆನು" ಎಂದು ನಿಯಮವನ್ನು ತಿಳಿಸಬೇಕು.

೨೧. ಆಹಿತಾಗ್ನಿಯಾದ ಶ್ರಾದ್ಧಕರ್ತನು ಅಮಾವಾಸ್ಯೆಯ ದಿನ ತರ್ಪಣ ರೂಪವಾದ ಪಿತೃಯಜ್ಞವನ್ನು ಮೊದಲು ನೆರವೇರಿಸಿ ಬಳಿಕ ಅನ್ವಾಹಾರ್ಯಕಶ್ರಾದ್ಧವನ್ನು ಮಾಡಬೇಕು.

೨೨. ಕೊಟ್ಟಿಗೆಯಲ್ಲೋ, ನೀರಿನ ಬಳಿಯಲ್ಲೋ ದಕ್ಷಿಣದ ಕಡೆಗೆ ಇಳಿಜಾರಾಗಿರುವ ಸ್ಥಳದಲ್ಲಿ ಗೋಮಯದಿಂದ ನೆಲವನ್ನು ಸಾರಿಸಿ ಭಕ್ತಿಯಿಂದ ಶ್ರಾದ್ಧವನ್ನು ನಡೆಸಬೇಕು.

ಅಗ್ನಿಮಾನ್ನಿರ್ವಪೇತ್ಪಿತ್ರ್ಯಂ ಚರುಂ ಚ ಸಮಮುಷ್ಟಿಭಿಃ ।
ಪಿತೃಭ್ಯೋ ನಿರ್ವಪಾಮೀತಿ ಸರ್ವಂ ದಕ್ಷಿಣತೋ ನ್ಯಸೇತ್ ॥೨೩॥

ಅಭಿಘಾರ್ಯಂ ತತಃ ಕುರ್ಯಾನ್ನಿರ್ವಾಪತ್ರಯಮಗ್ರತಃ ।
ತೇ ವಿತಸ್ತ್ಯಾಯತಾಃ ಕಾರ್ಯಾಶ್ಚತುರಂಗುಲವಿಸ್ತೃತಾಃ ॥೨೪॥

ದರ್ವೀತ್ರಯಂ ಪ್ರಕುರ್ವೀತ ಖಾದಿರಂ ರಜತಾನ್ವಿತಂ ।
ರತ್ನಿಮಾತ್ರಂ ಪರಿಶ್ಲಕ್ಷ್ಣಂ ಹಸ್ತಾಕಾರಾಗ್ರಮುತ್ತಮಂ ॥೨೫॥

ಉದಪಾತ್ರಂ ಚ ಕಾಂಸ್ಯಂ ಚ ಮೇಕ್ಷಣಂ ಚ ಸಮಿತ್ಕುಶಾ ।
ತಿಲಾಃ ಪಾತ್ರಾಣಿ ಸದ್ವಾಸೋ ಗಂಧಧೂಪಾನುಲೇಪನಂ ॥೨೬॥

ಆಹರೇದಪಸವ್ಯಂ ತು ಸರ್ವಂ ದಕ್ಷಿಣತಃ ಶನೈಃ ।
ಏವಮಾಸಾದ್ಯ ತತ್ಸರ್ವಂ ಭವನಸ್ಯಾಗ್ರತೋ ಭುವಿ ॥೨೭॥

---

೨೩-೨೪. ಆಹಿತಾಗ್ನಿಯು ಒಂದೇ ಅಳತೆಯ ಮುಷ್ಟಿಗಳಿಂದ ಧಾನ್ಯವನೆತ್ತಿಕೊಂಡು ಪಿತೃಹೋಮಕ್ಕೆ ಬೇಕಾದ ಅನ್ನವನ್ನು ಮಾಡಬೇಕು. "ಇಗೋ ಈ ಧಾನ್ಯವನ್ನು ಪಿತೃಗಳಿಗಾಗಿ ತೆಗೆದಿರಿಸುತ್ತೇನೆ" ಎಂದು ಹೇಳಿ, ತನ್ನ ಮುಂದೆ ಅಗ್ನಿಗೆ ದಕ್ಷಿಣದಿಕ್ಕಿನಲ್ಲಿ ಮೂರುಸಾರಿ ತೆಗೆದಿಡಬೇಕು. ಆಹಿಡಿಗಾಳುಗಳ ಗುಡ್ಡೆ ನಾಲ್ಕಂಗುಲ ಅಗಲವೂ, ಹನ್ನೆರಡಂಗುಲ ಉದ್ದವೂ ಆಗುವಷ್ಟಿರಬೇಕು. ಚರುವು ಸಿದ್ಧವಾದ ಬಳಿಕ ಅವಕ್ಕೆ ತುಪ್ಪವನ್ನು ಸೇರಿಸಿ ತೆಗೆದಿಡಬೇಕು.

೨೫. ಕಗ್ಗಲಿಯ ಮರದ ಮೂರು ದರ್ವಿಗಳನ್ನು ಹೋಮಕ್ಕಾಗಿ ಇಡಬೇಕು. ಅವು ಹಿಡಿಮೊಳದಷ್ಟು ಉದ್ದವಾಗಿದ್ದು ತುದಿಯಲ್ಲಿ ಕೈಯ ಆಕಾರದಿಂದರಬೇಕು; ಮತ್ತು ಬೆಳ್ಳಿಯ ಕಟ್ಟುಗಳಿಂದ ಕೂಡಿ ನುಣುಪಾಗಿರಬೇಕು.

೨೬. ನೀರಿನಪಾತ್ರೆ, ಕಂಚು, ಮೇಕ್ಷಣ, ಸಮಿತ್ತು, ದರ್ಭೆ, ಎಳ್ಳು, ಪಾತ್ರೆಗಳು, ಒಳ್ಳೆಯವಸ್ತ್ರ, ಗಂಧ, ಧೂಪ ಮುಂತಾದುವೆಲ್ಲವನ್ನೂ ಅಗ್ನಿಗೆ ದಕ್ಷಿಣವಲ್ಲಿ ನಿಧಾನವಾಗಿ ಅಪಸವ್ಯವಾಗಿ ಇರಿಸಬೇಕು.

೨೭-೨೮. ಹೀಗೆ ಸಾಮುಗ್ರಿಗಳೆಲ್ಲವನ್ನೂ ಕ್ರಮವಾಗಿರಿಸಿ, ಮನೆಯ ಮುಂದೆ ಗೋಮಯದಿಂದ ಸಾರಿಸಿದ ನೆಲದಲ್ಲಿ ಗೋಮೂತ್ರದಿಂದ ಮಂಡಲವನ್ನು ಮಾಡಿ,

**ಗೋಮಯೇನೋಪಲಿಪ್ತಾಯಾಂ ಗೋಮೂತ್ರೇಣ ತು ಮಂಡಲಂ ।**
**ಅಕ್ಷತಾಭಿಸ್ಸಪುಷ್ಪಾಭಿಸ್ತದಭ್ಯರ್ಚ್ಯಾಪಸವ್ಯವತ್ ॥೨೮॥**

**ವಿಪ್ರಾಣಾಂ ಕ್ಷಾಲಯೇತ್ಪಾದಾವಭಿನಂದ್ಯ ಪುನಃ ಪುನಃ ।**
**ಆಸನೇಷೂಪಕ್ಲೃಪ್ತೇಷು ದರ್ಭವತ್ಸು ವಿಧಾನವತ್ ॥೨೯॥**

**ಉಪಸ್ಪೃಷ್ಟೋದಕಾನ್ ವಿಪ್ರಾನುಪವೇಶ್ಯಾನುಮಂತ್ರಯೇತ್ ।**
**ದ್ವೌ ದೈವೇ ಪಿತೃಕೃತ್ಯೇ ತ್ರೀನೇಕೈಕಮುಭಯತ್ರ ಚ ॥೩೦॥**

**ಭೋಜಯೇದೀಶ್ವರೋಽಪೀಹ ನ ಕುರ್ಯಾದ್ವಿಸ್ತರಂ ಬುಧಃ ।**
**ದೇವಪೂರ್ವಂ ನಿಯೋಜ್ಯಾಥ ವಿಪ್ರಾನರ್ಘ್ಯಾದಿನಾ ಬುಧಃ ॥೩೧॥**

**ಅಗ್ನೌ ಕುರ್ಯಾದನುಜ್ಞಾತೋ ವಿಪ್ರೈರ್ವಿಪ್ರೋ ಯಥಾವಿಧಿ ।**
**ಸ್ವಗೃಹ್ಯೋಕ್ತವಿಧಾನೇನ ಕಾಂಸ್ಯೇ ಕೃತ್ವಾ ಚರುಂ ತತಃ ॥೩೨॥**

**ಅಗ್ನೀಷೋಮಯಮಾನಾಂ ತು ಕುರ್ಯಾದಾಪ್ಯಾಯನಂ ಬುಧಃ ।**
**ದಕ್ಷಿಣಾಗ್ನೌ ಪ್ರತೀತೇ ವಾ ಯ ಏಕಾಗ್ನಿರ್ದ್ವಿಜೋತ್ತಮಃ ॥೩೩॥**

---

ಅದನ್ನು ಅಕ್ಷತೆಗಳಿಂದಲೂ ಹೂಗಳಿಂದಲೂ ಅಪಸವ್ಯವಾಗಿ ಅರ್ಚಿಸಿ ಬ್ರಾಹ್ಮಣರ ಪಾದಗಳನ್ನು ಅತ್ಯಾದರದಿಂದ ತೊಳೆಯಬೇಕು.

೨೯-೩೦. ಆಚಮನಾನಂತರ ದರ್ಭಸಹಿತವಾದ ಆಸನಗಳಲ್ಲಿ ಬ್ರಾಹ್ಮಣರನ್ನು ಕುಳ್ಳಿರಿಸಿ, ವಿಶ್ವೇದೇವಸ್ಥಾನದಲ್ಲಿ ಇಬ್ಬರು, ಪಿತೃಸ್ಥಾನದಲ್ಲಿ ಮೂವರು, ಇಲ್ಲದಿದ್ದರೆ ಎರಡು ಸ್ಥಾನಗಳಲ್ಲಿಯೂ ಒಬ್ಬೊಬ್ಬರು ಹೀಗೆ ಭೋಜನಕ್ಕಾಗಿ ವರಿಸಬೇಕು. ಧನಿಕನಾಗಿನಾದ್ದಾಗ್ಯೂ ಈ ಸಂಖ್ಯೆಯನ್ನು ಹೆಚ್ಚಿಸಬಾರದು.

೩೧-೩೨. ವಿಶ್ವೇದೇವರಿಂದ ಪ್ರಾರಂಭಿಸಿ ಬ್ರಾಹ್ಮಣರಿಗೆ ಅರ್ಘ್ಯಾದಿಗಳನ್ನಿತ್ತು, ಅವರಿಂದ ಅನುಜ್ಞೆಯನ್ನು ಪಡೆದು, ಕಂಚಿನ ಪಾತ್ರೆಯಲ್ಲಿ ಚರುವನಿಟ್ಟುಕೊಂಡು, ತನ್ನ ಗೃಹ್ಯಸೂತ್ರದಲ್ಲಿ ಹೇಳಿದ ವಿಧಿಯನ್ನನುಸರಿಸಿ ಅಗ್ನಿಯಲ್ಲಿ ಹೋಮ ಮಾಡಬೇಕು.

೩೩-೩೪. ಆಹಿತಾಗ್ನಿಯಾದ ಬ್ರಾಹ್ಮಣನು ಅಗ್ನಿ, ಸೋಮ, ಯಮ ಇವರ ತೃಪ್ತಿಗಾಗಿ ದಕ್ಷಿಣಾಗ್ನಿಯಲ್ಲಿ ಹೋಮವನ್ನು ಮಾಡಬೇಕು. ಏಕಾಗ್ನಿಯಾಗಿದ್ದರೆ

ಯಜ್ಞೋಪವೀತೀ ನಿರ್ವರ್ತ್ಯ ತತಃ ಪರ್ಯುಕ್ಷಣಾದಿಕಂ ।
ಪ್ರಾಚೀನಾವೀತಿನಾ ಕಾರ್ಯಮತಃ ಸರ್ವಂ ವಿಜಾನತಾ ॥೩೪॥

ಷಟ್ಚ ತಸ್ಮಾದ್ಧವಿಶ್ಶೇಷಾತ್ಪಿಂಡಾನ್ ಕೃತ್ವಾ ತತೋದಕಂ ।
ದದ್ಯಾದುದಕಪಾತ್ರೈಸ್ತು ಸಲಿಲಂ ಸವ್ಯಪಾಣಿನಾ ॥೩೫॥

ಜಾನ್ವಾಚ್ಯ ಸವ್ಯಂ ಯತ್ನೇನ ದರ್ಭಯುಕ್ತೋ ವಿಮತ್ಸರಃ ।
ವಿಧಾಯ ಲೇಖಾ ಯತ್ನೇನ ನಿರ್ವಾಪೇಷ್ವವನೇಜನಂ ॥೩೬॥

ದಕ್ಷಿಣಾಭಿಮುಖಃ ಕುರ್ಯಾತ್ಕರೇ ದರ್ವೀಂ ನಿಧಾಯ ವೈ ।
ನಿಧಾಯ ಪಿಂಡಮೇಕೈಕಂ ಸರ್ವದರ್ಭೇಷ್ವನುಕ್ರಮಾತ್ ॥೩೭॥

ನಿನಯೇದಥ ದರ್ಭೇಷು ನಾಮಗೋತ್ರಾನುಕೀರ್ತನೈಃ ।
ತೇಷು ದರ್ಭೇಷು ತಂ ಹಸ್ತಂ ವಿಮೃಜ್ಯಾಲ್ಲೇಪಭಾಗಿನಾಂ ॥೩೮॥

---

ತನ್ನ ಅಗ್ನಿ ಯಾವುದೋ ಅದರಲ್ಲಿಯೇ ನಡೆಸಬಹುದು. ಪರಿಷೇಚನಾದಿ ಕರ್ಮವನ್ನು ಉಪವೀತದಿಂದಲೂ ಉಳಿದುದನ್ನೆಲ್ಲ ಪ್ರಾಚೀನಾವೀತದಿಂದಲೂ ಮಾಡಬೇಕು.

೩೫. ಆ ಹವಿಶ್ಶೇಷದಿಂದ ಆರು ಪಿಂಡಗಳನ್ನು ಮಾಡಿ, ತರುವಾಯ ಉದಕ ಪಾತ್ರದಿಂದ ಜಲವನ್ನು ಎಡಗೈಯಿಂದ ಪಿತೃತೀರ್ಥದಲ್ಲಿ ಬಿಡಬೇಕು.

೩೬–೩೮. ದಕ್ಷಿಣಕ್ಕೆ ತಿರುಗಿಕೊಂಡು, ಎಡಮಂಡಿಯನ್ನೂರಿ, ಪವಿತ್ರ ಹಸ್ತನಾಗಿ, ಶುದ್ಧಮನಸ್ಸಿನಿಂದ ಪಿಂಡದಾನದ ಸ್ಥಲದಲ್ಲಿ ಗೆರೆಗಳನ್ನೆಳೆದು, ದರ್ವಿಯಿಂದ ನೀರನ್ನೆತ್ತಿಕೊಂಡು, ನೆಲದಲ್ಲಿ ಹಾಸಿದ ದರ್ಭೆಗಳಮೇಲೆ ಆಯಾ ಸ್ಥಳಗಳಲ್ಲಿ ಮಾರ್ಜನ ಮಾಡಬೇಕು. ಒಂದೊಂದಾಗಿ ಪಿಂಡಗಳನ್ನೆತ್ತಿಕೊಂಡು, ಪಿತೃಗಳ ಹೆಸರನ್ನೂ ಗೋತ್ರವನ್ನೂ ಉಚ್ಚರಿಸಿ ದರ್ಭೆಗಳ ಮೇಲೆ ಕ್ರಮವಾಗಿ ಇಡಬೇಕು. ಪಿತೃಗಳನ್ನು ಅನುಸರಿಸಿ ಬರತಕ್ಕವರಿಗಾಗಿ ಕೈಯನ್ನು ಆ ದರ್ಭೆಗಳ ಮೇಲೆ ಒದರಬೇಕು. ಅದರಲ್ಲಿ ಅಂಟಿಕೊಂಡಿರುವ ಅನ್ನದ ಅಗುಳನ್ನು ಪಡೆಯಲು ಅವರಿಗೆ ಅರ್ಹತೆಯುಂಟು. ಅವರಿಗೆ ಲೇಪಭಾಗಿಗಳೆಂದು ಹೆಸರು.

**ತಥೈವ ಚ ತತಃ ಕುರ್ಯಾತ್ಪುನಃ ಪ್ರತ್ಯವನೇಜನಂ ।**
**ಷಡಪ್ಯೇತಾನ್ನಮಸ್ಕೃತ್ಯ ಗಂಧಧೂಪಾರ್ಹಣಾದಿಭಿಃ ॥೩೯॥**

**ಏವಮಾವಾಹ್ಯ ತತ್ಸರ್ವಂ ವೇದಮಂತ್ರೈರ್ಯಥೋದಿತೈಃ ।**
**ಏಕಾಗ್ನೇರೇಕ ಏವ ಸ್ಯಾನ್ನಿರ್ವಾಪೋ ದರ್ವಿಕಾ ತಥಾ ॥೪೦॥**

**ತತಃ ಕೃತ್ವಾಂತರೇ ದದ್ಯಾತ್ಪತ್ನೀಭ್ಯೋಽನ್ನಂ ಕುಶೇಷು ಸಃ ।**
**ತದ್ವತ್ಪಿಂಡಾದಿಕಂ ಕುರ್ಯಾದಾವಾಹನವಿಸರ್ಜನಂ ॥೪೧॥**

**ತತೋ ಗೃಹೀತ್ವಾ ಪಿಂಡೇಭ್ಯೋ ಮಾತ್ರಾಃ ಸರ್ವಾಃ ಕ್ರಮೇಣ ತು ।**
**ತಾನೇವ ವಿಪ್ರಾನ್ ಪ್ರಥಮಂ ಪ್ರಾಶಯೇದ್ಯತ್ನತೋ ನರಃ ॥೪೨॥**

**ಯಸ್ಮಾದನ್ನಾದ್ಧೃತಾ ಮಾತ್ರಾ ಭಕ್ಷಯಂತಿ ದ್ವಿಜಾತಯಃ ।**
**ಅನ್ವಾಹಾರ್ಯಕಮಿತ್ಯುಕ್ತಂ ತಸ್ಮಾತ್ತಚ್ಚಂದ್ರಸಂಕ್ಷಯೇ ॥೪೩॥**

---

೩೯. ಮತ್ತೆ ನಾಮಗೋತ್ರಗಳನ್ನುಚ್ಚರಿಸುತ್ತ ಪಿಂಡಗಳಮೇಲೆ ನೀರನ್ನು ಚಿಮುಕಿಸಿ, ಉದ್ದಿಷ್ಟರಾದ ಆರು ಜನ ಪಿತೃಗಳನ್ನೂ ಗಂಧಪುಷ್ಪಾದಿಗಳಿಂದ ಸತ್ಕರಿಸಿ ನಮಸ್ಕರಿಸಬೇಕು.

೪೦. ಹೀಗೆಯೇ ಯಥಾವಿಧಿಯಾಗಿ ವೇದಮಂತ್ರಗಳಿಂದ ಆವಾಹನಾದಿ ಸಕಲೋಪಚಾರಗಳನ್ನೂ ಸಮರ್ಪಿಸಬೇಕು. ಅಥರ್ವಣಶಾಖೆಯವನು ಒಂದು ಸಾರಿ ನಿರ್ವಾಪಮಾಡಬೇಕು. ಅವನು ಉಪಯೋಗಿಸಬೇಕಾದ ದರ್ವಿಯೂ ಸಹ ಒಂದೇ.

೪೧. ತರುವಾಯ ಈ ಪಿತೃಗಳ ಪತ್ನಿಯರಿಗೆ ಪಿಂಡಗಳನ್ನು ನಡುವೆ ದರ್ಭಗಳ ಮೇಲೆ ಇಟ್ಟು ಮೇಲೆ ಹೇಳಿದಂತೆಯೇ ಆವಾಹನ ವಿಸರ್ಜನಗಳನ್ನು ಮಾಡಬೇಕು.

೪೨. ಎಲ್ಲ ಪಿಂಡಗಳಿಂದಲೂ ಕ್ರಮವಾಗಿ ಸ್ವಲ್ಪಸ್ವಲ್ಪ ಭಾಗವನ್ನು ತೆಗೆದುಕೊಂಡು ಮೊದಲು ಆ ಬ್ರಾಹ್ಮಣರಿಗೇ ಅದನ್ನು ತಿನ್ನುವುದಕ್ಕೆ ಕೊಡಬೇಕು.

೪೩. ಪಿಂಡಗಳಿಂದ ತೆಗೆದ ಅನ್ನಭಾಗವನ್ನು ಬ್ರಾಹ್ಮಣರು ಭುಂಜಿಸುವ ಕಾರಣ ಅಮಾವಾಸ್ಯೆಯ ದಿನ ಮಾಡುವ ಈ ಶ್ರಾದ್ಧಕ್ಕೆ ಅನ್ವಾಹಾರ್ಯಕವೆಂಬ ಹೆಸರು ಬಂದಿತು.

**ಪೂರ್ವಂ ದತ್ವಾ ತು ತದ್ಧಸ್ತೇ ಸಪವಿತ್ರಂ ತಿಲೋದಕಂ ।**
**ತತ್ಪಿಂಡಾಗ್ರಂ ಪ್ರಯಚ್ಛೇತ ಸ್ವಧೈಷಾಮಸ್ತ್ವಿತಿ ಬ್ರುವನ್ ॥೪೪॥**

**ವರ್ಣಯನ್ ಭೋಜಯೇದನ್ನಂ ಮಿಷ್ಟಂ ಪೂತಂ ಚ ಸರ್ವದಾ ।**
**ವರ್ಜಯೇತ್ಕ್ರೋಧಪರತಾಂ ಸ್ಮರನ್ನಾರಾಯಣಂ ಹರಿಂ ॥೪೫॥**

**ತೃಪ್ತಾಞ್ಜ್ಞಾತ್ವಾ ತತಃ ಕುರ್ಯಾದ್ವಿಕಿರಂ ಸಾರ್ವವರ್ಣಿಕಂ ।**
**ಸೋದಕಂ ಚಾನ್ನಮುದ್ಧೃತ್ಯ ಸಲಿಲಂ ಪ್ರಕ್ಷಿಪೇದ್ಭುವಿ ॥೪೬॥**

**ಆಚಾಂತೇಷು ಪುನರ್ದದ್ಯಾಜ್ಜಲಪುಷ್ಪಾಕ್ಷತೋದಕಂ ।**
**ಸ್ವಸ್ತಿವಾಚನಿಕಂ ಸರ್ವಂ ಪಿಂಡೋಪರಿ ಸಮಾಹರೇತ್ ॥೪೭॥**

**ದೈವಾಯತ್ತಂ ಪ್ರಕುರ್ವೀತ ಶ್ರಾದ್ಧನಾಶೋಽನ್ಯಥಾ ಭವೇತ್ ।**
**ವಿಸೃಜ್ಯ ಬ್ರಾಹ್ಮಣಾಂಸ್ತದ್ವತ್ತೇಷಾಂ ಕೃತ್ವಾ ಪ್ರದಕ್ಷಿಣಂ ॥೪೮॥**

---

೪೪. ಬ್ರಾಹ್ಮಣರ ಹಸ್ತದಲ್ಲಿ ಪವಿತ್ರಸಹಿತವಾಗಿ ತಿಲೋದಕವನ್ನು ಮೊದಲು ಕೊಟ್ಟು, "ಪಿತೃಗಳಿಗೆ ಸ್ವಧಾ" ಎಂದು ಹೇಳುತ್ತ ಆ ಪಿಂಡಭಾಗವನ್ನು ನೀಡಬೇಕು.

೪೫. ಶ್ರಾದ್ಧಕರ್ತನು ಕ್ರೋಧಾದಿಗಳನ್ನು ಬಿಟ್ಟು, ನಾರಾಯಣನ ಸ್ಮರಣೆ ಮಾಡುತ್ತ, ಬ್ರಾಹ್ಮಣರ ಗುಣಗಳನ್ನು ವರ್ಣಿಸುತ್ತ ಮಧುರವೂ, ಪರಿಶುದ್ಧವೂ ಆದ ಅನ್ನಾದಿಪದಾರ್ಥಗಳನ್ನು ಸಮರ್ಪಿಸಬೇಕು.

೪೬. ಬ್ರಾಹ್ಮಣರು ತೃಪ್ತರಾದ ಬಳಿಕ ಯಜ್ಞಭಾಗರಹಿತರಾದ ದೇವತೆಗಳು, ಸಂಸ್ಕಾರಾದಿಗಳಿಲ್ಲದೆ ಮೃತರಾದ ನಿರ್ಗತಿಕರು, ಅನಾಥೆಯರಾದ ಕುಲಸ್ತ್ರೀಯರು ಮೊದಲಾದವರೆಲ್ಲರಿಗಾಗಿ ಜಲಸಹಿತವಾದ ಅನ್ನವನ್ನು ಭೂಮಿಯಲ್ಲಿಟ್ಟು ನೀರನ್ನು ಬಿಡಬೇಕು.

೪೭. ಭೋಜನಾನಂತರ ಬ್ರಾಹ್ಮಣರು ಕೈತೊಳೆದುಕೊಂಡು ಆಚಮನ ಮಾಡುವರು. ಬಳಿಕ ಅವರಿಗೆ ಹಸ್ತಶುದ್ಧಿಗಾಗಿ ಜಲವನ್ನಿತ್ತು, ಪುಷ್ಪಾಕ್ಷತೆಗಳನ್ನು ಕೊಡಬೇಕು. ಸ್ವಸ್ತಿವಾಚನವನ್ನು ನಡೆಸಿ, ಉಪಚಾರಗಳನ್ನು ಸಮರ್ಪಿಸಿ ಪಿಂಡೋದ್ವಾಸನವನ್ನು ಮಾಡಬೇಕು.

೪೮-೫೧. ಮಾಡಿದ ಶ್ರಾದ್ಧಕರ್ಮವನ್ನು ಭಗವತ್ಸಮರ್ಪಣಮಾಡಬೇಕು. ಇಲ್ಲದಿದ್ದರೆ ಅದು ಕೆಟ್ಟುಹೋಗುವುದು. ಬ್ರಾಹ್ಮಣರಿಗೆ ಪ್ರದಕ್ಷಿಣಮಾಡಿ ಅವರನ್ನು

**ದಕ್ಷಿಣಾಂ ದಿಶಮಾಕಾಂಕ್ಷ ಪಿತೄನ್ಯಾಚೇತ ಮಾನವಃ ।**
**ದಾತಾರೋ ನೋಽಭಿವರ್ಧಂತಾಂ ವೇದಾಃ ಸಂತತಿರೇವ ಚ** ॥೪೯॥

**ಶ್ರದ್ಧಾ ಚ ನೋ ಮಾ ವ್ಯಗಮದ್ಬಹುದೇಯಂ ಚ ನೋಽಸ್ತ್ವಿತಿ ।**
**ಅನ್ನಂ ಚ ನೋ ಬಹು ಭವೇದತಿಥೀಂಶ್ಚ ಲಭೇಮಹಿ** ॥೫೦॥

**ಯಾಚಿತಾರಶ್ಚ ನಸ್ಸಂತು ಮಾ ಚ ಯಾಚಿಷ್ಮ ಕಂಚನ ।**
**ಏತದಸ್ತ್ವಿತಿ ತತ್ಪ್ರೋಕ್ತಮನ್ವಾಹಾರ್ಯಂ ತು ಪಾರ್ವಣಂ** ॥೫೧॥

**ಯಥೇಂದುಸಂಕ್ಷಯೇ ತದ್ವದನ್ಯತ್ರಾಪಿ ನಿಗದ್ಯತೇ ।**
**ಪಿಂಡಾಂಸ್ತು ಗೋಽಜವಿಪ್ರೇಭ್ಯೋ ದದ್ಯಾದಗ್ನೌ ಜಲೇಽಪಿ ವಾ** ॥೫೨॥

**ವಿಪ್ರಾಗ್ರತೋ ವಾ ವಿಕಿರೇದ್ವಯೋಭಿರಭಿವಾಶಯೇತ್ ।**
**ಪತ್ನೀ ತು ಮಧ್ಯಮಂ ಪಿಂಡಂ ಪ್ರಾಶಯೇದ್ವಿನಯಾನ್ವಿತಾ** ॥೫೩॥

---

ಬೀಳ್ಕೊಡುವಾಗ, ದಕ್ಷಿಣದಿಕ್ಕಿಗೆ ಅವರೊಡನೆ ಸ್ವಲ್ಪದೂರ ಹೋಗಿ ಪಿತೃಗಳನ್ನಿಂತು ಬೇಡಬೇಕು. "ನಮಗೆ ಅನ್ನಾದಿಗಳನ್ನು ಕೊಡುವವರೂ, ವೇದಗಳೂ, ನಮ್ಮ ವಂಶವೂ ಬೆಳೆಯಲಿ; ನಮಗೆ ಶ್ರದ್ಧೆಯು ಅಳಿಯದಿರಲಿ; ನಾವು ಬಹಳವಾಗಿ ದಾನಮಾಡುವಂತಾಗಲಿ! ನಮಗೆ ಯಥೇಷ್ಟವಾಗಿ ಅನ್ನವು ದೊರಕಲಿ; ಅತಿಥಿಗಳು ನಮ್ಮಲ್ಲಿಗೆ ಬರಲಿ; ನಮ್ಮನ್ನು ಯಾಚಕರು ಬಂದು ಬೇಡಲಿ; ನಾವು ಮಾತ್ರ ಯಾರನ್ನೂ ಬೇಡುವಂತಾಗದಿರಲಿ." ಹೀಗೆಯೇ ಆಗಲೆಂದು ಅವರು ಉತ್ತರಕೊಡುವರು. ಇದೇ ಪರ್ವಕಾಲದಲ್ಲಿ ಮಾಡಬೇಕಾದ ಅನ್ವಾಹಾರ್ಯ ಶ್ರಾದ್ಧದ ವಿಧಿ.

೫೨. ಅಮಾವಾಸ್ಯೆಯಂತೆಯೇ ಮಿಕ್ಕ ಪರ್ವಗಳಲ್ಲಿಯೂ ಅನ್ವಾಹಾರ್ಯ ಶ್ರಾದ್ಧವನ್ನು ಮಾಡಬೇಕು. ಪಿಂಡಗಳನ್ನು ಹಸು, ಆಡು, ಅಥವಾ ಬ್ರಾಹ್ಮಣರಿಗೆ ಕೊಡಬಹುದು; ಇಲ್ಲವೇ ಬೆಂಕಿಯಲ್ಲೋ ನೀರಿನಲ್ಲೋ ಹಾಕಬಹುದು; ಅಥವಾ ಬ್ರಾಹ್ಮಣರ ಮುಂದೆ ಎರಚಬಹುದು; ಇಲ್ಲದಿದ್ದರೆ ಪಕ್ಷಿಗಳಿಗೆ ತಿನ್ನಿಸಬಹುದು.

೫೩-೫೪. ಮಧ್ಯಮಪಿಂಡವನ್ನು ಯಜಮಾನನ ಪತ್ನಿಯು ಶ್ರದ್ಧೆಯಿಂದ ಭುಂಜಿಸಬೇಕು. ಪಿತೃಗಳ ಅನುಗ್ರಹದಿಂದ ಆಕೆ ಗರ್ಭವತಿಯಾಗುವಳು. ವಂಶವು

ಅಥತ್ತ ಪಿತರೋ ಗರ್ಭಮತ್ರ ಸಂತಾನವರ್ಧನಂ ।
ತಾವದುಚ್ಛೇಷಣಂ ತಿಷ್ಠೇದ್ಯಾವದ್ವಿಪ್ರಾ ವಿಸರ್ಜಿತಾಃ ॥೫೪॥

ವೈಶ್ವದೇವಂ ತತಃ ಕುರ್ಯಾನ್ನಿವೃತ್ತೇ ಪಿತೃಕರ್ಮಣಿ ।
ಇಷ್ಟೈಃ ಸಹ ತತಃ ಶಾಂತೋ ಭುಂಜೀತ ಪಿತೃಸೇವಿತಂ ॥೫೫॥

ಪುನರ್ಭೋಜನಮಧ್ವಾನಂ ಯಾನಮಾಯಾಸಮೈಥುನಂ ।
ಶ್ರಾದ್ಧಕೃಚ್ಛ್ರಾದ್ಧಭುಕ್ಚೈವ ಸರ್ವಮೇತದ್ವಿವರ್ಜಯೇತ್ ॥೫೬॥

ಸ್ವಾಧ್ಯಾಯಂ ಕಲಹಂ ಚೈವ ದಿವಾಸ್ವಾಪಂ ಚ ಸರ್ವದಾ ।
ಅನೇನ ವಿಧಿನಾ ಶ್ರಾದ್ಧಂ ನಿರುದ್ವಾಸ್ಯೇಹ ನಿರ್ವಪೇತ್ ॥೫೭॥

ಕನ್ಯಾಕುಂಭವೃಷಸ್ಥೇಽರ್ಕೇ ಕೃಷ್ಣಪಕ್ಷೇಷು ಸರ್ವದಾ ।
ಯತ್ರ ಯತ್ರ ಪ್ರದಾತವ್ಯಂ ಸಪಿಂಡೀಕರಣಾತ್ಪರಂ ।
ತತ್ರಾನೇನ ವಿಧಾನೇನ ದೇಯಮಗ್ನಿಮತಾ ಸದಾ ॥೫೮॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇಽಗ್ನಿಮಚ್ಛ್ರಾದ್ಧೇ
ಶ್ರಾದ್ಧಕಲ್ಪೋ ನಾಮ ಷೋಡಶೋಽಧ್ಯಾಯಃ

---

ಅಭಿವೃದ್ಧಿಯಾಗುವುದು. ಬ್ರಾಹ್ಮಣರನ್ನು ಬೀಳ್ಕೊಡುವವರೆಗೂ ಊಟಮಾಡಿದ ಸ್ಥಳವನ್ನು ಶುದ್ಧಿಮಾಡಬಾರದು.

೫೫. ಪಿತೃಕಾರ್ಯವು ಮುಗಿದ ಬಳಿಕ ವೈಶ್ವದೇವವನ್ನು ಮಾಡಿ ಇಷ್ಟಜನರೊಡನೆ ಪಿತೃಶೇಷವನ್ನು ಭುಜಿಸಬೆಕು.

೫೬–೫೭. ಶ್ರಾದ್ಧಕರ್ತನೂ ಶ್ರಾದ್ಧಭೋಜಿಯೂ ಎರಡನೆಯ ಸಾರಿ ಊಟ ಮಾಡಬಾರದು. ದಾರಿನಡೆಯಬಾರದು. ವಾಹನವೇರುವುದೂ, ದಣಿಯುವುದೂ, ಸ್ತ್ರೀಸಂಗಮಮಾಡುವುದೂ ನಿಷಿದ್ಧವಾದುವು. ಆ ದಿನ ವೇದಾಧ್ಯಯನ, ಕಲಹ, ಹಗಲುನಿದ್ರೆ ಇವನ್ನು ಬಿಡಬೇಕು.

೫೮. ಅಗ್ನಿಯುಕ್ತನಾದ ದ್ವಿಜನು ಕೃಷ್ಣಪಕ್ಷಗಳಲ್ಲಿಯೂ, ಸೂರ್ಯನು ಕನ್ಯಾ, ಕುಂಭ, ಮತ್ತು ವೃಷಭರಾಶಿಗಳನ್ನು ಸೇರಿದಾಗಲೂ, ಶಾಸ್ತ್ರೋಕ್ತವಾದ ಇತರ ಸಂದರ್ಭಗಳಲ್ಲಿಯೂ ಈ ಮೇಲೆ ಹೇಳಿದ ವಿಧಾನವಲ್ಲಿ ಶ್ರಾದ್ಧವನ್ನು ಮಾಡಬೇಕು ಸಪಿಂಡೀಕರಣಾನಂತರ ನಡೆಸಬೇಕಾದ ಶ್ರಾದ್ಧದ ವಿಧಿಯಿದು.

## ಅಧ್ಯಾಯದ ಸಾರಾಂಶ

ಶ್ರಾದ್ಧದ ಪ್ರಭೇದಗಳು, ಶ್ರಾದ್ಧದಲ್ಲಿ ಉಪಯೋಗಿಸಲು ಅರ್ಹವಾದ ಮತ್ತು ಅನರ್ಹವಾದ ವಸ್ತುಗಳು, ನಿಮಂತ್ರಣಕ್ಕೆ ತಕ್ಕ ಮತ್ತು ತಗದ ಬ್ರಾಹ್ಮಣರ ಲಕ್ಷಣಗಳು ಇವುಗಳನ್ನು ಈ ಅಧ್ಯಾಯದಲ್ಲಿ ತಿಳಿಸಿದೆ.

ಆಹಿತಾಗ್ನಿಯಾದವನು ಅಮಾವಾಸ್ಯೆಯ ದಿನ ಅನ್ವಾಹಾರ್ಯಕವೆಂಬ ಪಾರ್ವಣ ಶ್ರಾದ್ಧವನ್ನು ಮಾಡಬೇಕು. ಬ್ರಾಹ್ಮಣರನ್ನು ವರಿಸಿ, ಪಾದಗಳನ್ನು ತೊಳೆದು, ಅರ್ಘ್ಯಾದಿಗಳನ್ನಿತ್ತು ಅಗ್ನಿಯಲ್ಲಿ ಹೋಮಮಾಡಬೇಕು. ಹೋಮಶೇಷದ ಅನ್ನದಿಂದ ಆರು ಪಿಂಡಗಳನ್ನು ಮಾಡಿ ಪಿತೃಗಳ ನಾಮಗೋತ್ರಗಳನ್ನು ಉಚ್ಚರಿಸಿ ಇಡಬೇಕು. ಆ ಪಿಂಡಗಳಿಂದ ಸ್ವಲ್ಪ ಸ್ವಲ್ಪ ಅನ್ನವನ್ನು ತೆಗೆದು ಬ್ರಾಹ್ಮಣರಿಗೆ ಭುಂಜಿಸುವುದಕ್ಕೆ ಕೊಡಬೇಕು. ಅನಂತರ ಅವರಿಗೆ ತೃಪ್ತಿಯಾಗುವಂತೆ ಮೃಷ್ಟಾನ್ನಭೋಜನವನ್ನು ಮಾಡಿಸಿ, ದಕ್ಷಿಣಾದಿಗಳಿಂದ ತೃಪ್ತಿಪಡಿಸಿ ಬೀಳ್ಕೊಡಬೇಕು. ಅವರ ಆಶೀರ್ವಾದವನ್ನು ಪಡೆಯಬೇಕು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಆಹಿತಾಗ್ನಿಯು ಮಾಡಬೇಕಾದ ಶ್ರಾದ್ಧದ ವಿಧಿಯಲ್ಲಿ ಅನ್ವಾಹಾರ್ಯಕಶ್ರಾದ್ಧಕಲ್ಪವೆಂಬ ಹದಿನಾರನೆಯ ಅಧ್ಯಾಯವು ಮುಗಿದುದು



## ಅಥ ಶ್ರೀಮತ್ಸ್ಯಮಹಾಪುರಾಣೇ ಸಪ್ತದಶೋಽಧ್ಯಾಯಃ

॥ ಸೂತ ಉವಾಚ ॥

ಅತಃ ಪರಂ ಪ್ರವಕ್ಷ್ಯಾಮಿ ವಿಷ್ಣುನಾ ಯದುದೀರಿತಂ ।
ಶ್ರಾದ್ಧಂ ಸಾಧಾರಣಂ ನಾಮ ಭುಕ್ತಿಮುಕ್ತಿಫಲಪ್ರದಂ ॥ ೧ ॥

ಅಯನೇ ವಿಷುವೇ ಯುಗ್ಮೇ ಸಾಮಾನ್ಯೇ ಚಾರ್ಕಸಂಕ್ರಮೇ ।
ಅಮಾವಾಸ್ಯಾಷ್ಟಕಾಕೃಷ್ಣಪಕ್ಷೇ ಪಂಚದಶೀಷು ಚ ॥ ೨ ॥

ಆರ್ದ್ರಾಮಘಾರೋಹಿಣೀಷು ದ್ರವ್ಯಬ್ರಾಹ್ಮಣಸಂಗಮೇ ।
*ಗಜಚ್ಛಾಯಾವ್ಯತೀಪಾತೇ ವಿಷ್ಟಿವೈಧೃತಿವಾಸರೇ ॥ ೩ ॥

ವೈಶಾಖಸ್ಯ ತೃತೀಯಾಯಾಂ ನವಮೀ ಕಾರ್ತಿಕಸ್ಯ ಚ ।
ಪಂಚದಶೀ ಚ ಮಾಘಸ್ಯ ನಭಸ್ಯೇ ಚ ತ್ರಯೋದಶೀ ॥ ೪ ॥

---

೧. ಸೂತಪೌರಾಣಿಕನು ಹೇಳಿದನು:—ಸ್ವರ್ಗಾದಿಸುಖವನ್ನೂ ಮೋಕ್ಷ ಫಲವನ್ನೂ ಕೊಡುವ ಸಾಧಾರಣಶ್ರಾದ್ಧದ ವಿಷಯವನ್ನು ಇನ್ನು ಮುಂದೆ ಹೇಳುವೆನು. ಇದನ್ನು ವಿಷ್ಣು ಮನುವಿಗೆ ಹೇಳಿದ್ದನು.

೨-೫. ಉತ್ತರಾಯಣ ದಕ್ಷಿಣಾಯನ ಪುಣ್ಯದಿನಗಳು, ಮೇಷ ತುಲಾ ಸಂಕ್ರಮಣಗಳು, ಸಾಮಾನ್ಯ ಸಂಕ್ರಮಣಗಳು, ಅಮಾವಾಸ್ಯೆ ಮತ್ತು ಕೃಷ್ಣಾಷ್ಟಮೀ ತಿಥಿಗಳು ಆರ್ದ್ರಾಮಘಾರೋಹಿಣೀ ನಕ್ಷತ್ರಗಳು, ಶ್ರಾದ್ಧಾರ್ಹವಾದ ಪದಾರ್ಥಗಳೂ ಯೋಗ್ಯರಾದ ಬ್ರಾಹ್ಮಣರೂ ದೊರೆತ ಸಂದರ್ಭಗಳು, ಭಾದ್ರಪದಮಾಸದ ಕೃಷ್ಣ ಪಕ್ಷದಲ್ಲಿ ಸೂರ್ಯನು ಕನ್ಯಾರಾಶಿಗತನಾಗಿರುವಕಾಲ, ವ್ಯತೀಪಾತ, ವಿಷ್ಟಿ ವೈಧೃತಿ

---

* ನಭಸ್ಯಾಪರಪಕ್ಷೇ ತು ಯತ್ರ ಕನ್ಯಾಂ ವ್ರಜೇದ್ರವಿಃ ।
ಸ ಮಹಾಲಯಸಂಜ್ಞಃ ಸ್ಯಾದ್ಗಜಚ್ಛಾಯಾಹ್ವಯಸ್ತಥಾ ॥
ಎಂದು ಗಜಚ್ಛಾಯಾ ಲಕ್ಷಣವನ್ನು ಹೇಳಿದ್ದಾರೆ.

ಯುಗಾದಯಃ ಸ್ಮೃತಾಹ್ಯೇತಾ ದತ್ತಸ್ಯಾಕ್ಷಯ್ಯಕಾರಿಕಾಃ ।
ತಥಾ ಮನ್ವಂತರಾದೌ ಚ ದೇಯಂ ಶ್ರಾದ್ಧಂ ವಿಜಾನತಾ । ॥ ೫ ॥

ಅಶ್ವಯುಕ್ಛುಕ್ಲನವಮೀ ದ್ವಾದಶೀ ಕಾರ್ತಿಕೇ ತಥಾ ।
ತೃತೀಯಾ ಚೈತ್ರಮಾಸಸ್ಯ ತಥಾ ಭಾದ್ರಪದಸ್ಯ ಚ ॥ ೬ ॥

ಫಾಲ್ಗುನಸ್ಯ ಹ್ಯಮಾವಾಸ್ಯಾ ಪೌಷಸ್ಯೈಕಾದಶೀ ತಥಾ ।
ಆಷಾಢಸ್ಯಾಪಿ ದಶಮೀ ಮಾಘಮಾಸಸ್ಯ ಸಪ್ತಮೀ ॥ ೭ ॥

ಶ್ರಾವಣಸ್ಯಾಷ್ಟಮೀ ಕೃಷ್ಣಾ ತಥಾಷಾಢೀ ಚ ಪೂರ್ಣಿಮಾ ।
ಕಾರ್ತಿಕೀ ಫಾಲ್ಗುನೀ ಚೈತ್ರೀ ಜ್ಯೈಷ್ಠಪಂಚದಶೀ ಸಿತಾ ।
ಮನ್ವಂತರಾದಯಶ್ಚೈತಾ ದತ್ತಸ್ಯಾಕ್ಷಯ್ಯಕಾರಿಕಾಃ ॥ ೮ ॥

ಯಸ್ಯಾಂ ಮನ್ವಂತರಸ್ಯಾದೌ ರಥಮಾಸ್ತೇ ದಿವಾಕರಃ ।
ಮಾಘಮಾಸಸ್ಯ ಸಪ್ತಮ್ಯಾಂ ಸಾ ತು ಸ್ಯಾದ್ರಥಸಪ್ತಮೀ ॥ ೯ ॥

---

ಗಳೆಂಬ ಯೋಗಗಳು, ವೈಶಾಖಮಾಸದ ತೃತೀಯೆ, ಕಾರ್ತಿಕ ನವಮಿ, ಮಾಘ ಮಾಸದ ಹುಣ್ಣಿಮೆ, ಭಾದ್ರಪದದ ತ್ರಯೋದಶಿ ಈ ದಿನಗಳೆಲ್ಲವೂ ಯುಗಾದಿಗಳೆನಿಸುವುವು. ಇವುಗಳಲ್ಲಿ ಮಾಡಿದ ಶ್ರಾದ್ಧವು ಅಕ್ಷಯ್ಯಫಲವನ್ನು ಕೊಡುವುದು.

೬-೮. ಅಲ್ಲದೆ ಜ್ಞಾನಿಯಾದ ಆಸ್ತಿಕನು ಮನ್ವಾದಿ ದಿನಗಳಲ್ಲೂ ಶ್ರಾದ್ಧವನ್ನು ಮಾಡಬೇಕು. ಆಶ್ವಯುಜ ಶುಕ್ಲ ನವಮಿ, ಕಾರ್ತಿಕ ದ್ವಾದಶಿ, ಚೈತ್ರಮಾಸದ ಮತ್ತು ಭಾದ್ರಪದಮಾಸದ ತೃತೀಯೆ, ಫಾಲ್ಗುನಮಾಸದ ಅಮಾವಾಸ್ಯೆ, ಪುಷ್ಯೈಕಾದಶಿ, ಆಷಾಢದಶಮಿ, ಮಾಘಸಪ್ತಮಿ, ಶ್ರಾವಣಕೃಷ್ಣಾಷ್ಟಮಿ, ಆಷಾಢ, ಕಾರ್ತಿಕ, ಫಾಲ್ಗುನ, ಚೈತ್ರ ಮತ್ತು ಜ್ಯೇಷ್ಠಮಾಸಗಳ ಪೂರ್ಣಿಮೆ ಇವೆಲ್ಲವೂ ಮನ್ವಂತರಾದಿಗಳೆನಿಸುವುವು. ಇವುಗಳಲ್ಲಿ ಮಾಡಿದ ದಾನಗಳು ಅನಂತಫಲವನ್ನು ಕೊಡುವುವು.

೯. ಮಾಘಮಾಸದಲ್ಲಿ ಶುಕ್ಲಪಕ್ಷದ ಸಪ್ತಮಿಯದಿನ ಸೂರ್ಯನು ಬೇರೆ ತೇರನ್ನೇರುವನು. ಆ ದಿನಕ್ಕೆ ರಥಸಪ್ತಮಿಯೆಂದು ಹೆಸರು. ಅದನ್ನೂ ಸಹ ಮನ್ವಾದಿಯೆಂದು ಹೇಳುವರು.

ಪಾನೀಯಮಪ್ಯತ್ರ ತಿಲೈರ್ವಿಮಿಶ್ರಂ।
ದದ್ಯಾತ್ಪಿತೃಭ್ಯಃ ಪ್ರಯತೋ ಮನುಷ್ಯಃ॥
ಶ್ರಾದ್ಧಂ ಕೃತಂ ತೇನ ಸಮಾಃ ಸಹಸ್ರಂ।
ರಹಸ್ಯಮೇತತ್ಪಿತರೋ ವದಂತಿ ॥೧೦॥

ವೈಶಾಖ್ಯಾಮುಪರಾಗೇಷು ತಥೋತ್ಸವಮಹಾಲಯೇ।
ತೀರ್ಥಾಯತನಗೋಷ್ಠೇಷು ದೀಪೋದ್ಯಾನಗೃಹೇಷು ಚ ॥೧೧॥

ವಿವಿಕ್ತೇಷೂಪಲಿಪ್ತೇಷು ಶ್ರಾದ್ಧಂ ದೇಯಂ ವಿಜಾನತಾ।
ವಿಪ್ರಾನ್ ಪೂರ್ವೇ ಪರೇ ಚಾಹ್ನಿ ವಿನೀತಾತ್ಮಾ ನಿಮಂತ್ರಯೇತ್ ॥೧೨॥

ಶೀಲವೃತ್ತಗುಣೋಪೇತಾನ್ ವಯೋರೂಪಸಮನ್ವಿತಾನ್।
ದ್ವೌ ದೈವೇ ತ್ರೀಂಸ್ತಥಾ ಪಿತ್ರ್ಯೇ ಏಕೈಕಮುಭಯತ್ರ ವಾ ॥೧೩॥

ಭೋಜಯೇತ್ಸುಸಮೃದ್ಧೋಽಪಿ ನ ಪ್ರಸಜ್ಯೇತ ವಿಸ್ತರೇ।
ವಿಶ್ವಾನ್ ದೇವಾನ್ ಯವೈಃ ಪುಷ್ಪೈರಭ್ಯರ್ಚ್ಯಾಸನಪೂರ್ವಕಂ ॥೧೪॥

---

೧೦. ಆ ದಿನ ಪಿತೃಗಳನ್ನುದ್ದೇಶಿಸಿ ತಿಲೋದಕ ತರ್ಪಣವನ್ನು ಬಿಡಬೇಕು. ಅದರಿಂದ ಸಾವಿರ ವರ್ಷಗಳಕಾಲ ಶ್ರಾದ್ಧಮಾಡಿದ ಫಲವು ಬರುವುದು. ಇದು ಪಿತೃಗಳು ತಿಳಿಸಿರುವ ರಹಸ್ಯ.

೧೧. ವೈಶಾಖಮಾಸದ ಹುಣ್ಣಿಮೆ, ಚಂದ್ರಸೂರ್ಯರ ಗ್ರಹಣ, ಪಿತೃಪಕ್ಷ, ಶುಭ ಕಾರ್ಯಗಳ ಸಮಯ ಇಂತಹ ಕಾಲಗಳಲ್ಲಿ ದೇವಾಲಯ, ಪುಣ್ಯತೀರ್ಥ, ಕೊಟ್ಟಿಗೆ, ದೀಪೋದ್ಯಾನಗೃಹಗಳು, ಪ್ರಶಸ್ತವಾಗಿ ಗೋಮಯಲಿಪ್ತವಾದ ವಿವಿಕ್ತಸ್ಥಳಗಳು ಇಂತಹ ಕಡೆ ಶ್ರಾದ್ಧವನ್ನು ಮಾಡಬೇಕು.

೧೨-೧೩. ಬ್ರಾಹ್ಮಣರನ್ನು ಶ್ರಾದ್ಧದ ಹಿಂದಿನ ಮತ್ತು ಮಾರನೆಯ ದಿನಗಳಲ್ಲಿ ವಿನಯದಿಂದ ಭೋಜನಕ್ಕೆ ಕರೆಯಬೇಕು. ಸ್ವಭಾವ, ನಡತೆ, ಗುಣ, ವಯಸ್ಸು, ರೂಪ ಇವೆಲ್ಲವೂ ಪ್ರಶಸ್ತವಾಗಿರುವವರನ್ನು ನೋಡಿ, ವಿಶ್ವೇದೇವರಿಗಾಗಿ ಇಬ್ಬರನ್ನೂ, ಪಿತೃಗಳಿಗಾಗಿ ಮೂವರನ್ನೂ, ಇಲ್ಲದಿದ್ದರೆ ಈ ಎರಡು ಸ್ಥಾನಗಳಲ್ಲೂ ಒಬ್ಬೊಬ್ಬರನ್ನೂ ವರಿಸಿ ಭೋಜನ ಮಾಡಿಸಬೇಕು.

೧೪-೧೬. ಅನುಕೂಲವಿರತಕ್ಕವನಾದರೂ ಶ್ರಾದ್ಧವನ್ನು ವಿಸ್ತರಿಸಬಾರದು. ವಿಶ್ವೇದೇವರಿಗೆ ಆಸನವನ್ನಿತ್ತು, ಗಂಧಾಕ್ಷತ ಪುಷ್ಪಾದಿಗಳಿಂದ ಅರ್ಚಿಸಿ, ದರ್ಭಪವಿತ್ರ

**ಪೂರಯೇತ್ಪಾತ್ರಯುಗ್ಮಂ ತು ಸ್ಥಾಪ್ಯ ದರ್ಭಪವಿತ್ರಕಂ |**
**ಶಂ ನೋ ದೇವೀತ್ಯಪಃ ಕುರ್ಯಾದ್ಯವೋಽಸೀತಿ ಯವಾನಪಿ ||೧೫||**

**ಗಂಧಪುಷ್ಪೈಶ್ಚ ಸಂಪೂಜ್ಯ ವೈಶ್ವದೇವಂ ಪ್ರತಿ ನ್ಯಸೇತ್ |**
**ವಿಶ್ವೇ ದೇವಾಸ ಇತ್ಯಾಭ್ಯಾಮಾವಾಹ್ಯ ವಿಕಿರೇದ್ಯವಾನ್ ||೧೬||**

**ಗಂಧಪುಷ್ಪೈರಲಂಕೃತ್ಯ ಯಾ ದಿವ್ಯೇತ್ಯರ್ಘ್ಯಮುತ್ಸೃಜೇತ್ |**
**ಅಭ್ಯರ್ಚ್ಯ ತಾಭ್ಯಾಮುತ್ಸೃಷ್ಟಃ ಪಿತೃಕಾರ್ಯಂ ಸಮಾರಭೇತ್ ||೧೭||**

**ದರ್ಭಾಸನಂ ತು ದತ್ವಾದೌ ತ್ರೀಣಿ ಪಾತ್ರಾಣಿ ಪೂರಯೇತ್ |**
**ಸಪವಿತ್ರಾಣಿ ಕೃತ್ವಾದೌ ಶಂ ನೋ ದೇವೀತ್ಯಪಃ ಕ್ಷಿಪೇತ್ ||೧೮||**

**ತಿಲೋಽಸೀತಿ ತಿಲಾನ್ ಕುರ್ಯಾದ್ಗಂಧಪುಷ್ಪಾದಿಕಂ ಪುನಃ |**
**ಪಾತ್ರಂ ವನಸ್ಪತಿಮಯಂ ತಥಾ ಪರ್ಣಮಯಂ ಪುನಃ ||೧೯||**

---

ಸಹಿತವಾದ ಎರಡು ಪಾತ್ರೆಗಳಿಗೆ "ಶಂ ನೋ ದೇವೀ" ಎಂಬ ಮಂತ್ರದಿಂದ ನೀರನ್ನು ತುಂಬಬೇಕು. "ಯವೋಽಸಿ" ಎಂಬ ಮಂತ್ರವನ್ನು ಹೇಳಿ ಅಕ್ಷತೆಗಳನ್ನು ಹಾಕಬೇಕು. ಗಂಧಪುಷ್ಪಗಳಿಂದ ಅರ್ಚಿಸಿ ಅವುಗಳನ್ನು ಸಹ ಪಾತ್ರೆಯೊಳಕ್ಕೆ ಹಾಕಬೇಕು. "ವಿಶ್ವೇ ದೇವಾಸಃ" ಎಂಬ ಎರಡು ಮಂತ್ರಗಳನ್ನು ಉಚ್ಚರಿಸಿ, ಬ್ರಾಹ್ಮಣರಲ್ಲಿ ಆವಾಹನೆಮಾಡಿ ಯವಾಕ್ಷತೆಗಳನ್ನು ಎರಚಬೇಕು.

೧೭. ಬಳಿಕ ಗಂಧಪುಷ್ಪಾದಿಗಳಿಂದ ಅಲಂಕರಿಸಿ, "ಯಾ ದಿವ್ಯಾ" ಎಂಬ ಮಂತ್ರದಿಂದ ಅರ್ಘ್ಯವನ್ನು ಕೊಡಬೇಕು. ಸತ್ಕರಿಸಿದ ತರುವಾಯ ಅವರಿಂದ ಅಪ್ಪಣೆಪಡೆದು ಪಿತೃಕಾರ್ಯವನ್ನು ಪ್ರಾರಂಭಿಸಬೇಕು.

೧೮. ಮೊದಲು ದರ್ಭಾಸನವನ್ನು ಹಾಕಿ, ಅದರ ಮೇಲೆ ಪವಿತ್ರಸಹಿತವಾದ ಮೂರು ಪಾತ್ರೆಗಳನ್ನಿರಿಸಿ, "ಶಂ ನೋ ದೇವೀ ಎಂಬ ಮಂತ್ರದಿಂದ ನೀರನ್ನು ತುಂಬಬೇಕು. "ತಿಲೋಽಸಿ" ಎಂಬ ಮಂತ್ರವನ್ನು ಹೇಳಿ, ಎಳ್ಳನ್ನು ಚೆಲ್ಲಿ ಗಂಧಪುಷ್ಪಾದಿಗಳನ್ನು ಅರ್ಘ್ಯಪಾತ್ರೆಯೊಳಕ್ಕೆ ಹಾಕಬೇಕು.

೧೯. ಅರ್ಘ್ಯಪಾತ್ರೆಯು ಮರದಿಂದಾಗಿರಬಹುದು; ದೊನ್ನೆಯಾಗಿರಬಹುದು. ಕೆರೆ ಕೊಳಗಳಲ್ಲಿ ಅಥವಾ ಸಾಗರದಲ್ಲಿ ಉತ್ಪನ್ನವಾದ ಶಂಖ, ಚಿಪ್ಪು ಮುಂತಾದ ರೂಪದಿಂದಿರಬಹುದು.

**ಜಲಜಂ ವಾಥ ಕುರ್ವೀತ ತಥಾ ಸಾಗರಸಂಭವಂ ।**
**ಸೌವರ್ಣಂ ರಾಜತಂ ವಾಪಿ ಪಿತೄಣಾಂ ಪಾತ್ರಮುಚ್ಯತೇ ॥೨೦॥**

**ರಜತಸ್ಯ ಕಥಾ ವಾಪಿ ದರ್ಶನಂ ದಾನಮೇವ ವಾ ।**
**ರಾಜತೈರ್ಭಾಜನೈರೇಷಾಮಥವಾ ರಜತಾನ್ವಿತೈಃ ॥೨೧॥**

**ವಾರ್ಯಪಿ ಶ್ರದ್ಧಯಾ ದತ್ತಮಕ್ಷಯಾಯೋಪಕಲ್ಪತೇ ।**
**ತಥಾರ್ಘ್ಯಪಿಂಡಭೋಜ್ಯಾದೌ ಪಿತೄಣಾಂ ರಾಜತಂ ಮತಂ ॥೨೨॥**

**ಶಿವನೇತ್ರೋದ್ಭವಂ ಯಸ್ಮಾತ್ತಸ್ಮಾತ್ತತ್ಪಿತೃವಲ್ಲಭಂ ।**
**ಅಮಂಗಲಂ ತದ್ಯತ್ನೇನ ದೇವಕಾರ್ಯೇಷು ವರ್ಜಯೇತ್ ॥೨೩॥**

**ಏವಂ ಪಾತ್ರಾಣಿ ಸಂಕಲ್ಪ್ಯ ಯಥಾಲಾಭಂ ವಿಮತ್ಸರಃ ।**
**ಯಾ ದಿವ್ಯೇತಿ ಪಿತುರ್ನಾಮಗೋತ್ರೈರ್ದರ್ಭಕರೋ ನ್ಯಸೇತ್ ॥೨೪॥**

---

೨೦-೨೨. ಬೆಳ್ಳಿಯ ಅಥವಾ ಚಿನ್ನದ ಪಾತ್ರೆಯು ಪಿತೃಗಳಿಗೆ ಪ್ರಶಸ್ತವಾದುದು. ಬೆಳ್ಳಿಯ ವಿಷಯವಾದ ಮಾತು, ನೋಟ, ದಾನ ಇವೆಲ್ಲ ಅವರಿಗೆ ಪ್ರಿಯವಾದುವು. ಬೆಳ್ಳಿಯ ಪಾತ್ರೆಗಳಿಂತ ಪಿತೃಗಳಿಗೆ ದಾನಮಾಡಿದ ಜಲವು ಅಕ್ಷಯಫಲವನ್ನು ಕೊಡುವುದು. ಹೀಗೆಯೇ ಅರ್ಘ್ಯ, ಪಿಂಡ, ಭೋಜನ ಇವನ್ನು ಸಮರ್ಪಣಮಾಡುವಾಗಲೂ ರಜತಪಾತ್ರವೇ ಶ್ರೇಷ್ಠವಾದುದು.

೨೩. ಬೆಳ್ಳಿಯು ಶಿವನ ನೇತ್ರದಿಂದ ಉತ್ಪನ್ನವಾದುದು ; ಆದುದರಿಂದ ಅದು ಪಿತೃಗಳಿಗೆ ಇಷ್ಟವಾಗಿದೆ. ಅದು ಅಮಂಗಲವಸ್ತು ; ಅದನ್ನು ದೇವಕಾರ್ಯದಲ್ಲಿ ಉಪಯೋಗಿಸಬಾರದು.

೨೪. ಹೀಗೆ ತನಗೆ ದೊರೆತಂತೆ ಪಾತ್ರೆಗಳನ್ನು ಸಿದ್ಧಪಡಿಸಿ, ಶುದ್ಧ ಮನಸ್ಕನಾಗಿ, ಪವಿತ್ರಹಸ್ತದಿಂದ "ಯಾ ದಿವ್ಯಾ" ಎಂಬ ಮಂತ್ರದೊಡನೆ ಪಿತೃವಿನ ಗೋತ್ರವನ್ನೂ ಹೆಸರನ್ನೂ ಹೇಳಿ ಆಸನಕ್ಕಾಗಿ ದರ್ಭಗಳನ್ನು ಹಾಕಬೇಕು.

**ಪಿತೄನಾವಾಹಯಿಷ್ಯಾಮಿ ಕುರ್ವಿತ್ಯುಕ್ತಸ್ತು ತೈಃ ಪುನಃ ।**
**ಉಶಂತಸ್ತ್ವಾ ತಥಾಯಂತು ಋಗ್ಭ್ಯಾಮಾವಾಹಯೇತ್ಪಿತೄನ್ ॥೨೫॥**

**ಯಾ ದಿವ್ಯೇತ್ಯರ್ಘ್ಯಮುತ್ಸೃಜ್ಯ ದದ್ಯಾದ್ಗಂಧಾದಿಕಾಂಸ್ತತಃ ।**
**ಹಸ್ತಾತ್ತದುದಕಂ ಪೂರ್ವಂ ದತ್ವಾ ಸಂಸ್ರವಮಾದಿತಃ ॥೨೬॥**

**ಪಿತೃಪಾತ್ರೇ ನಿಧಾಯಾಥ ನ್ಯುಬ್ಜಮುತ್ತರತೋ ನ್ಯಸೇತ್ ।**
**ಪಿತೃಭ್ಯಃ ಸ್ಥಾನಮಸೀತಿ ನಿಧಾಯ ಪರಿಷೇಚಯೇತ್ ॥೨೭॥**

**ತತ್ರಾಪಿ ಪೂರ್ವವತ್ಕುರ್ಯಾದಗ್ನಿಕಾರ್ಯಂ ವಿಮತ್ಸರಃ ।**
**ಉಭಾಭ್ಯಾಮಪಿ ಹಸ್ತಾಭ್ಯಾಮಾಹೃತ್ಯ ಪರೀವೇಷಯೇತ್ ॥೨೮॥**

**ಪ್ರಶಾಂತಚಿತ್ತಃ ಸತತಂ ದರ್ಭಪಾಣಿರಶೇಷತಃ ।**
**ಗುಣಾಢ್ಯೈಃ ಸೂಪಶಾಕೈಸ್ತು ನಾನಾಭಕ್ಷ್ಯೈರ್ವಿಶೇಷತಃ ॥೨೯॥**

---

೨೫. ಪಿತೃಗಳನ್ನು ಆವಾಹನಮಾಡುತ್ತೇನೆಂದು ಹೇಳಿ " ಮಾಡು " ಎಂದು ಅವರಿಂದ ಅನುಜ್ಞೆಯನ್ನು ಪಡೆಯಬೇಕು. " ಉಶಂತಸ್ತ್ವಾ " " ಆಯಂತು '' ಎಂಬ ಎರಡು ಮಂತ್ರಗಳನ್ನು ಹೇಳಿ ಆವಾಹನಮಾಡಬೇಕು.

೨೬–೨೭. '' ಯಾ ದಿವ್ಯಾಆಪಃ '' ಎಂಬ ಮಂತ್ರದಿಂದ ಅರ್ಘ್ಯವನ್ನಿತ್ತು ಗಂಧಾದಿಗಳನ್ನು ಸಮರ್ಪಿಸಬೇಕು. ಬ್ರಾಹ್ಮಣರ ಕೈಯಿಂದ ಕೆಳಗೆ ಸುರಿದ ಆ ಅರ್ಘ್ಯಜಲವನ್ನು ಪಿತೃಪಾತ್ರಕ್ಕೆ ಹಾಕಿ, ಉಳಿದ ಎರಡು ಪಾತ್ರೆಗಳನ್ನು ಅದರ ಮೇಲೆ ಬೋರಲಾಗಿರಿಸಿ, ಅಗ್ನಿಗೆ ಉತ್ತರದಲ್ಲಿ "ಪಿತೃಗಳಿಗೆ ಸ್ಥಾನವಾಗಿದ್ದೀಯೆ '' ಎಂಬ ಮಂತ್ರದೊಡನೆ ಇಡಬೇಕು. ಅನಂತರ ಅಗ್ನಿಗೆ ಪರಿಷೇಚನಮಾಡಬೇಕು.

೨೮. ಹಿಂದೆ ಹೇಳಿದಂತೆ ಇಲ್ಲಿಯೂ ಏಕಾಗ್ರಚಿತ್ತನಾಗಿ ಅಗ್ನಿಕಾರ್ಯವನ್ನು ಮಾಡಬೇಕು. ಎರಡು ಕೈಗಳಿಂದಲೂ ಪದಾರ್ಥಗಳನ್ನು ತಂದು ಬಡಿಸಬೇಕು.

೨೯. ಶಾಂತಚಿತ್ತನಾಗಿ ಸುಪಕ್ವವಾದ ತೊವ್ವೆ, ವ್ಯಂಜನಗಳು, ಬಗೆಬಗೆಯ ಭಕ್ಷ್ಯಗಳು ಇವೆಲ್ಲವನ್ನೂ ನೀಡಬೇಕು. ಕೈಯಲ್ಲಿ ದರ್ಭಪವಿತ್ರವಿಲ್ಲದೆ ಇರಬಾರದು.

ಅನ್ನಂ ತು ಸದಧಿಕ್ಷೀರಂ ಗೋಘೃತಂ ಶರ್ಕರಾನ್ವಿತಂ ।
ಮಾಂಸಂ ಪ್ರೀಣಾತಿ ವೈ ಸರ್ವಾನ್ ಪಿತೄನಿತ್ಯಾಹ ಕೇಶವಃ ||೩೦||

ದ್ವೌ ಮಾಸೌ ಮತ್ಸ್ಯಮಾಂಸೇನ ತ್ರೀನ್ ಮಾಸಾನ್ ಹಾರಿಣೇನ ತು ।
ಔರಭ್ರೇಣಾಥ ಚತುರಃ ಶಾಕುನೇನಾಥ ಪಂಚ ವೈ ||೩೧||

ಷಣ್ಮಾಸಂ ಛಾಗಮಾಂಸೇನ ತೃಪ್ಯಂತಿ ಪಿತರಸ್ತಥಾ ।
ಸಪ್ತ ಪಾರ್ಷತಮಾಂಸೇನ ತಥಾಷ್ಟಾವೇಣಜೇನ ತು ||೩೨||

ದಶ ಮಾಸಾಂಸ್ತು ತೃಪ್ಯಂತಿ ವರಾಹಮಹಿಷಾಮಿಷೈಃ ।
ಶಶಕೂರ್ಮಜಮಾಂಸೇನ ಮಾಸಾನೇಕಾದಶೈವ ತು ||೩೩||

ಸಂವತ್ಸರಂ ತು ಗವ್ಯೇನ ಪಯಸಾ ಪಾಯಸೇನ ಚ ।
ರೌರವೇಣ ಚ ತೃಪ್ಯಂತಿ ಮಾಸಾನ್ ಪಂಚದಶೈವ ತು ||೩೪||

---

೩೦. ಹಾಲುಮೊಸರುಗಳಿಂದ ಕೂಡಿದ ಅನ್ನ, ಸಕ್ಕರೆ ಬೆರಸಿದ ಹಸುವಿನ ತುಪ್ಪ, ಮಾಂಸ ಇವು ಪಿತೃಗಳಿಗೆ ತೃಪ್ತಿಯನ್ನುಂಟುಮಾಡುವುವೆಂದು ಕೇಶವನು ಹೇಳಿದನು.

೩೧-೩೩. ಪಿತೃಗಳು ಮಾಂಸಪ್ರಿಯರು. ಮತ್ಸ್ಯಮಾಂಸದಿಂದ ಎರಡು ತಿಂಗಳು, ಜಿಂಕೆಯ ಮಾಂಸದಿಂದ ಮೂರು ತಿಂಗಳು, ಕುರಿಯ ಮಾಂಸದಿಂದ ನಾಲ್ಕು ತಿಂಗಳು, ಪಕ್ಷಿಯ ಮಾಂಸದಿಂದ ಐದು ತಿಂಗಳು, ಆಡಿನ ಮಾಂಸದಿಂದ ಏಳು ತಿಂಗಳು, ಹುಲ್ಲೆಯ ಮಾಂಸದಿಂದ ಎಂಟು ತಿಂಗಳು, ಹಂದಿ ಮತ್ತು ಕೋಣಗಳ ಮಾಂಸದಿಂದ ಹತ್ತು ತಿಂಗಳು, ಮೊಲ ಮತ್ತು ಆಮೆಗಳ ಮಾಂಸದಿಂದ ಹನ್ನೊಂದು ತಿಂಗಳು ಅವರು ತೃಪ್ತಿಪಡುತ್ತಾರೆ.

೩೪. ಹಸುವಿನ ಹಾಲಿನಿಂದಲೂ, ಪಾಯಸದಿಂದಲೂ ಅವರು ಒಂದು ವರ್ಷ ತೃಪ್ತರಾಗುತ್ತಾರೆ. ರುರುವೆಂಬ ಜಿಂಕೆಯ ಮಾಂಸವು ಅವರಿಗೆ ಹದಿನೈದು ತಿಂಗಳ ತೃಪ್ತಿಯನ್ನು ಕೊಡುವುದು.

ವಾರ್ಧ್ರೀಣಸಸ್ಯ ಮಾಂಸೇನ ತೃಪ್ತಿರ್ದ್ವಾದಶವಾರ್ಷಿಕೀ ।
ಕಾಲಶಾಕೇನ ಚಾನಂತಾ ಖಡ್ಗಮಾಂಸೇನ ಚೈವ ಹಿ ॥೩೫॥

ಯತ್ಕಿಂಚಿನ್ಮಧುಸಂಮಿಶ್ರಂ ಗೋಕ್ಷೀರಂ ಘೃತಪಾಯಸಂ ।
ದತ್ತಮಕ್ಷಯಮಿತ್ಯಾಹುಃ ಪಿತರಃ ಪೂರ್ವದೇವತಾಃ ॥೩೬॥

ಸ್ವಾಧ್ಯಾಯಂ ಶ್ರಾವಯೇತ್ಪಿತ್ರ್ಯಂ ಪುರಾಣಾನ್ಯಖಿಲಾನಿ ಚ ।
ಬ್ರಹ್ಮವಿಷ್ಣ್ವರ್ಕರುದ್ರಾಣಾಂ ಸೂಕ್ತಾನಿ ವಿವಿಧಾನಿ ಚ ॥೩೭॥

ಇಂದ್ರಾಗ್ನಿಸೋಮಸೂಕ್ತಾನಿ ಪಾವನಾನಿ ಸ್ವಶಕ್ತಿತಃ ।
ಬೃಹದ್ರಥಂತರಂ ತದ್ವಜ್ಜ್ಯೇಷ್ಠಸಾಮ ಸರೌಹಿಣಂ ॥೩೮॥

ತಥೈವ ಶಾಂತಿಕಾಧ್ಯಾಯಂ ಮಧುಬ್ರಾಹ್ಮಣಮೇವ ಚ ।
ಮಂಡಲಂ ಬ್ರಾಹ್ಮಣಂ ತದ್ವತ್ಪ್ರೀತಿಕಾರಿ ತು ಯತ್ಪುನಃ ॥೩೯॥

---

೩೫. ಘೇಂಡಾಮೃಗದ ಮಾಂಸದಿಂದ ಹನ್ನೆರಡು ವರ್ಷಗಳ ಕಾಲ ಅವರು ತೃಪ್ತರಾಗುವರು. ಕಾಲಶಾಕವೆಂಬ ತರಕಾರಿಯು—ಇದಕ್ಕೆ ಶ್ರಾದ್ಧ ಶಾಕವೆಂದೇ ಹೆಸರು—ಅವರಿಗೆ ಅನಂತಕಾಲ ತೃಪ್ತಿಯನ್ನು ಹುಟ್ಟಿಸುವುದು. ಖಡ್ಗಮೃಗದ ಮಾಂಸವೂ ಹೀಗೆಯೇ.

೩೬. ಮಧುಮಿಶ್ರವಾದ ಪದಾರ್ಥವು ಯಾವುದೇ ಆಗಿರಲಿ ಅದು, ಹಸುವಿನ ಹಾಲು, ತುಪ್ಪ ಮತ್ತು ಪಾಯಸ ಇವೆಲ್ಲವೂ ಅನಂತವಾದ ಫಲವನ್ನು ಕೊಡುವುವು. ದೇವತೆಗಳಿಗಿಂತಲೂ ಮೊದಲು ಪಿತೃಗಳು ಗೌರವಕ್ಕೆ ಪಾತ್ರರು.

೩೭. ಬ್ರಾಹ್ಮಣರು ಭೋಜನಮಾಡುತ್ತಿರುವಾಗ ಪಿತೃಸೂಕ್ತವನ್ನೂ, ಎಲ್ಲ ಪುರಾಣಗಳನ್ನೂ ಪಾರಾಯಣಮಾಡಬೇಕು. ಬ್ರಹ್ಮ, ವಿಷ್ಣು, ಸೂರ್ಯ, ರುದ್ರ, ಇಂದ್ರ, ಅಗ್ನಿ ಮತ್ತು ಸೋಮ ಇವರ ಸೂಕ್ತಗಳನ್ನು ಆದಷ್ಟು ಜಪಿಸಬೇಕು.

೩೮–೩೯. ಹೀಗೆಯೇ ಬೃಹತ್ಸಾಮ, ರಥಂತರಸಾಮ, ಜ್ಯೇಷ್ಠಸಾಮ, ರೌಹಿಣಸಾಮ, ಶಾಂತಿಕಾಧ್ಯಾಯ, ಮಧುಬ್ರಾಹ್ಮಣ, ಮಂಡಲಬ್ರಾಹ್ಮಣ ಮೊದಲಾದ ವೇದಮಂತ್ರಗಳನ್ನೂ, ತನಗೂ ಬ್ರಾಹ್ಮಣರಿಗೂ ಇಷ್ಟವಾದ ಮಿಕ್ಕ ಸೂಕ್ತಗಳನ್ನೂ ಹೇಳಬಹುದು.

ವಿಪ್ರಾಣಾಮಾತ್ಮನಶ್ಚೈವ ತತ್ಸರ್ವಂ ಸಮುದೀರಯೇತ್ ।
ಭುಕ್ತವತ್ಸು ತತಸ್ತೇಷು ಭೋಜನೋಪಾಂತಿಕೇ ನೃಪ ॥೪೦॥

ಸಾರ್ವವರ್ಣಿಕಮನ್ನಾದ್ಯಂ ಸಂನೀಯಾಪ್ಲಾವ್ಯ ವಾರಿಣಾ ।
ಸಮುತ್ಸೃಜೇದ್ಭುಕ್ತವತಾಮಗ್ರತೋ ವಿಕಿರೇದ್ಭುವಿ ॥೪೧॥

ಅಗ್ನಿದಗ್ಧಾಸ್ತು ಯೇ ಜೀವಾ ಯೇಽಪ್ಯದಗ್ಧಾಃ ಕುಲೇ ಮಮ ।
ಭೂಮೌ ದತ್ತೇನ ತೃಪ್ಯಂತು ಪ್ರಯಾಂತು ಪರಮಾಂ ಗತಿಂ ॥೪೨॥

ಯೇಷಾಂ ನ ಮಾತಾ ನ ಪಿತಾ ನ ಬಂಧು-
ರ್ನ ಗೋತ್ರಶುದ್ಧಿರ್ನ ತಥಾನ್ನಮಸ್ತಿ ।
ತತ್ತೃಪ್ತಯೇಽನ್ನಂ ಭುವಿ ದತ್ತಮೇತ-
ತ್ಪ್ರಯಾಂತು ಲೋಕೇಷು ಸುಖಾಯ ತದ್ವತ್ ॥೪೩॥

ಅಸಂಸ್ಕೃತಪ್ರಮೀತಾನಾಂ ತ್ಯಕ್ತಾನಾಂ ಕುಲಯೋಷಿತಾಂ ।
ಉಚ್ಛಿಷ್ಟಭಾಗಧೇಯಃ ಸ್ಯಾದ್ದರ್ಭೇ ವಿಕಿರಯೋಶ್ಚ ಯಃ ॥೪೪॥

---

೪೦-೪೧. ಬ್ರಾಹ್ಮಣರು ಭೋಜನಮಾಡಿದ ಬಳಿಕ ಅವರ ಎಲೆಯ ಬಳಿಯಲ್ಲಿ ಹಿಂದೆ ಹೇಳಿದಂತೆ ಸಕಲರನ್ನೂ ಉದ್ದೇಶಿಸಿ ಅನ್ನಾದಿಪದಾರ್ಥಗಳನ್ನು ತಂದು, ನೀರಿನಿಂದ ಸ್ಥಲವನ್ನು ಶುದ್ಧಿಮಾಡಿ, ನೆಲದಮೇಲೆ ಚೆಲ್ಲಿ, ಮೇಲೆ ಜಲವನ್ನು ಬಿಡಬೇಕು.

೪೨. "ನಮ್ಮ ವಂಶದಲ್ಲಿ ಹುಟ್ಟಿ ಮಂತ್ರಾಗ್ನಿಯಿಂದ ಸಂಸ್ಕಾರವನ್ನು ಪಡೆದ ಅಥವಾ ಪಡೆಯದ ಜೀವರೆಲ್ಲರೂ ನೆಲದಲ್ಲಿ ನಾನು ಹಾಕಿದ ಅನ್ನಾದಿ ಪದಾರ್ಥಗಳಿಂದ ತೃಪ್ತಿಯನ್ನು ಪಡೆಯಲಿ; ಮತ್ತು ಸದ್ಗತಿಗೆ ಹೋಗಲಿ.

೪೩. ತಾಯಿ, ತಂದೆ, ಬಂಧು, ಇವರಾರೂ ಇಲ್ಲದವರು, ವಂಶದಲ್ಲಿ ಪಾರಿಶುಧ್ಯರಹಿತರು, ಪಿಂಡದಾನಾದಿಗಳನ್ನು ಪಡೆಯದವರು ಇಂತಹವರ ತೃಪ್ತಿಗಾಗಿ ನೆಲದಮೇಲೆ ಈ ಅನ್ನವನ್ನು ಹಾಕಿದ್ದೇನೆ. ಅವರು ಇದನ್ನು ಭುಂಜಿಸಿ ತಮ್ಮ ತಮ್ಮ ಲೋಕಗಳಲ್ಲಿ ಸುಖವಾಗಿರಲಿ.

೪೪. ಸಂಸ್ಕಾರವಿಲ್ಲದೆ ಮೃತರಾದ, ಪತಿಪುತ್ರಾದಿಗಳಿಂದ ತ್ಯಕ್ತರಾದ ನಮ್ಮ ಕುಲದ ಹೆಂಗಸರಿಗೆ ಉಚ್ಛಿಷ್ಟದಲ್ಲೂ, ಈ ಎರಡು ಕಡೆ ದರ್ಭೆಗಳ ಮೇಲೆ ಚೆಲ್ಲಿದ ಅನ್ನದಲ್ಲೂ ಭಾಗವು ಸಲ್ಲಲಿ" ಎಂದು ಹಾರೈಸಬೇಕು.

**ತೃಪ್ತಾಞ್ಜ್ಞಾತ್ವೋದಕಂ ದದ್ಯಾತ್ಸಕೃದ್ವಿಪ್ರಕರೇ ತಥಾ ।**
**ಉಪಲಿಪ್ತೇ ಮಹೀಪೃಷ್ಠೇ ಗೋಶಕೃನ್ಮೂತ್ರವಾರಿಣಾ ॥೪೫॥**

**ನಿಧಾಯ ದರ್ಭಾನ್ವಿಧಿವದ್ದಕ್ಷಿಣಾಗ್ರಾನ್ ಪ್ರಯತ್ನತಃ ।**
**ಸರ್ವವರ್ಣೇನ ಚಾನ್ನೇನ ಪಿಂಡಾಂಸ್ತು ಪಿತೃಯಜ್ಞವತ್ ॥೪೬॥**

**ಅವನೇಜನಪೂರ್ವಂ ತು ನಾಮಗೋತ್ರೇಣ ಮಾನವಃ ।**
**ಗಂಧಧೂಪಾದಿಕಂ ದದ್ಯಾತ್ಕೃತ್ವಾ ಪ್ರತ್ಯವನೇಜನಂ ॥೪೭॥**

**ಜಾನ್ವಾಚ್ಯ ಸವ್ಯಂ ಸವ್ಯೇನ ಪಾಣಿನಾಥ ಪ್ರದಕ್ಷಿಣಂ ।**
**ಪಿತ್ರ್ಯಮಾನೀಯ ತತ್ಕಾರ್ಯಂ ವಿಧಿವದ್ದರ್ಭಪಾಣಿನಾ ॥೪೮॥**

**ದೀಪಪ್ರಜ್ವಾಲನಂ ತದ್ವತ್ಕುರ್ಯಾತ್ಪುಷ್ಪಾರ್ಚನಂ ಬುಧಃ ।**
**ಅಥಾಚಾಂತೇಷು ಚಾಚಮ್ಯ ವಾರಿ ದದ್ಯಾತ್ಸಕೃತ್ಸಕೃತ್ ॥೪೯॥**

---

೪೫-೪೭. ಬ್ರಾಹ್ಮಣರು ತೃಪ್ತರಾದುದನ್ನರಿತು ಅವರ ಕೈಯಲ್ಲಿ ಒಂದು ಉದ್ಧರಣೆ ನೀರು ಕೊಡಬೇಕು. ಗೋಮಯ, ಗೋಮೂತ್ರ ಮತ್ತು ಶುದ್ಧೋದಕಗಳಿಂದ ಸಾರಿಸಿದ ನೆಲದಮೇಲೆ ದಕ್ಷಿಣಾಗ್ರವಾದ ದರ್ಭೆಗಳನ್ನು ಹಾಸಿ, ಅವುಗಳ ಮೇಲೆ ಜಲಸೇಚನಮಾಡಿ, ಪಿತೃಗಳ ನಾಮಗೋತ್ರಗಳನ್ನು ಉಚ್ಚರಿಸಿ ಪಿತೃಯಜ್ಞದಂತೆಯೇ ಪಿಂಡಗಳನ್ನು ಇಡಬೇಕು. ಪುನಃ ಜಲವನ್ನು ಮಾರ್ಜನ ಮಾಡಿ ಗಂಧಪುಷ್ಪಾದಿಗಳನ್ನು ಸಮರ್ಪಿಸಬೇಕು.

೪೮. ಎಡಮಂಡಿಯನ್ನು ನೆಲದ ಮೇಲೂರಿ, ದರ್ಭಪವಿತ್ರಸಹಿತವಾದ ಎಡಗೈಯಿಂದ ಪಿತೃಪಿಂಡವನ್ನೆತ್ತಿ, ಶಾಸ್ತ್ರವಿಧಿಯಂತೆ ಅದನ್ನು ದರ್ಭದ ಮೇಲೆ ಇಡಬೇಕು. ಅನಂತರ ಪ್ರದಕ್ಷಿಣನಮಸ್ಕಾರಗಳನ್ನು ಮಾಡಬೇಕು.

೪೯. ದೀಪವನ್ನು ಹತ್ತಿಸಿ ಪುಷ್ಪಗಳಿಂದ ಅರ್ಚನೆಮಾಡಬೇಕು. ಬ್ರಾಹ್ಮಣರು ಕೈತೊಳೆದುಕೊಂಡು ಆಚಮನಮಾಡಿದ ಬಳಿಕ ತಾನೂ ಆಚಮನಮಾಡಿ, ಒಬ್ಬೊಬ್ಬರ ಕೈಗೂ ಒಂದೊಂದು ಸಲ ನೀರನ್ನು ಕೊಡಬೇಕು.

**ಅಥ ಪುಷ್ಪಾಕ್ಷತಾನ್ ಪಶ್ಚಾದಕ್ಷಯ್ಯೋದಕಮೇವ ಚ ।**
**ಸತಿಲಂ ನಾಮಗೋತ್ರೇಣ ದದ್ಯಾಚ್ಛಕ್ತ್ಯಾ ಚ ದಕ್ಷಿಣಾಂ ॥೫೦॥**

**ಗೋಭೂಹಿರಣ್ಯವಾಸಾಂಸಿ ಭವ್ಯಾನಿ ಶಯನಾನಿ ಚ ।**
**ದದ್ಯಾದ್ಯದಿಷ್ಟಂ ವಿಪ್ರಾಣಾಮಾತ್ಮನಃ ಪಿತುರೇವ ಚ ॥೫೧॥**

**ವಿತ್ತಶಾಠ್ಯೇನ ರಹಿತಃ ಪಿತೃಭ್ಯಃ ಪ್ರೀತಿಮಾವಹನ್ ।**
**ತತಃ ಸ್ವಧಾವಾಚನಕಂ ವಿಶ್ವೇದೇವೇಷು ಚೋದಕಂ ॥೫೨॥**

**ದತ್ವಾಶೀಃ ಪ್ರತಿಗೃಹ್ಣೀಯಾದ್ದ್ವಿಜೇಭ್ಯಃ ಪ್ರಾಙ್ಮುಖೋ ಬುಧಃ ।**
**ಅಘೋರಾಃ ಪಿತರಸ್ಸಂತು ಸಂತ್ವಿತ್ಯುಕ್ತಃ ಪುನರ್ದ್ವಿಜೈಃ ॥೫೩॥**

**ಗೋತ್ರಂ ತಥಾ ವರ್ಧತಾಂ ನಸ್ತಥೇತ್ಯುಕ್ತಶ್ಚ ತೈಃ ಪುನಃ ।**
**ದಾತಾರೋ ನೋಽಭಿವರ್ಧಂತಾಮಿತಿಚೈವಮುದೀರಯೇತ್ ॥೫೪॥**

---

೫೦. ಬ್ರಾಹ್ಮಣರಿಗೆ ಹೂವನ್ನೂ ಅಕ್ಷತೆಯನ್ನೂ ಸಮರ್ಪಿಸಿ, ನಾಮ ಗೋತ್ರಗಳನ್ನುಚ್ಚರಿಸಿ, ಅಕ್ಷಯ್ಯವಾಗಲೆಂದು ಹೇಳುತ್ತ ಕೈಯಲ್ಲಿ ತಿಲೋದಕವನ್ನು ಬಿಡಬೇಕು. ತನ್ನ ಶಕ್ತಿಗೆ ತಕ್ಕಂತೆ ದಕ್ಷಿಣೆಯನ್ನು ಕೊಡಬೇಕು.

೫೧. ಹಸು, ಭೂಮಿ, ಚಿನ್ನ, ವಸ್ತ್ರ, ಒಳ್ಳೆಯ ಹಾಸಿಗೆ ಇವುಗಳನ್ನೂ, ಅಲ್ಲದೆ ದ್ವಿಜರಿಗೂ, ತನಗೂ, ತನ್ನ ತಂದೆಗೂ ಇಷ್ಟವಾದ ಇತರ ವಸ್ತುಗಳನ್ನೂ ದಾನಮಾಡಬಹುದು.

೫೨. ಜಿಪುಣತನವನ್ನು ಮಾ[illegible] ಪಿತೃಗಳಿಗೆ ತೃಪ್ತಿಯನ್ನುಂಟುಮಾಡಬೇಕು. ಪಿತೃಸ್ಥಾನದ ಬ್ರಾಹ್ಮಣರಿಂದ ಸ್ವಧಾಕಾರವನ್ನು ಹೇಳಿಸಿದ ಬಳಿಕ ವಿಶ್ವೇದೇವರ ಹಸ್ತದಲ್ಲಿ ಜಲವಿತ್ತು, ಪೂರ್ವಾಭಿಮುಖನಾಗಿ ನಿಂತು ಆಶೀರ್ವಾದಗಳನ್ನು ಎಲ್ಲರಿಂದಲೂ ಪಡೆಯಬೇಕು.

೫೩-೫೪. "ಪಿತೃಗಳು ಸೌಮ್ಯರಾಗಲಿ" ಎಂದು ಬೇಡಲು ಬ್ರಾಹ್ಮಣರು "ಹಾಗೆಯೇ ಆಗಲಿ" ಎನ್ನುವರು. "ನಮ್ಮ ವಂಶವು ಬೆಳೆಯಲಿ" ಎಂದು ಬೇಡಿದಾಗ ಅವರು ಅದಕ್ಕೆ ತಮ್ಮ ಸಮ್ಮತಿಯನ್ನು ಕೊಡುವರು. ತರುವಾಯ "ನಮಗೆ ಸುಖಸಂಪತ್ತುಗಳನ್ನು ಕೊಡುವವರು ಏಳ್ಗೆಹೊಂದಲಿ" ಎಂದು ಮುಂತಾಗಿ ಹಿಂದೆ ಹೇಳಿದಂತೆ ಪ್ರಾರ್ಥಿಸಬೇಕು.

**ಏತಾಃ ಸತ್ಯಾಶಿಷಃ ಸಂತು ಸಂತ್ವಿತ್ಯುಕ್ತಶ್ಚ ತೈಃ ಪುನಃ ।**
**ಸ್ವಸ್ತಿವಾಚನಿಕಂ ಕುರ್ಯಾತ್ಪಿಂಡಾನುದ್ಧೃತ್ಯ ಭಕ್ತಿತಃ** ॥೫೫॥

**ಉಚ್ಛೇಷಣಂ ತು ತತ್ತಿಷ್ಠೇದ್ಯಾವದ್ವಿಪ್ರಾ ವಿಸರ್ಜಿತಾಃ ।**
**ತತೋ ಗೃಹಬಲಿಂ ಕುರ್ಯಾದಿತಿ ಧರ್ಮವ್ಯವಸ್ಥಿತಿಃ** ॥೫೬॥

**ಉಚ್ಛೇಷಣಂ ಭೂಮಿಗತಮಜಿಹ್ಮಸ್ಯಾಸ್ತಿಕಸ್ಯ ಚ ।**
**ದಾಸವರ್ಗಸ್ಯ ತತ್ಪಿತ್ರ್ಯಂ ಭಾಗಧೇಯಂ ಪ್ರಚಕ್ಷತೇ** ॥೫೭॥

**ಪಿತೃಭಿರ್ನಿರ್ಮಿತಂ ಪೂರ್ವಮೇತದಾಪ್ಯಾಯನಂ ಸದಾ ।**
**ಅಪುತ್ರಾಣಾಂ ಸಪುತ್ರಾಣಾಂ ಸ್ತ್ರೀಣಾಮಪಿ ನರಾಧಿಪ** ॥೫೮॥

**ತತಸ್ತಾನಗ್ರತಃ ಕೃತ್ವಾ ಪರಿಗೃಹ್ಯೋದಪಾತ್ರಕಂ ।**
**ವಾಜೇ ವಾಜ ಇತಿ ಜಪನ್ ಕುಶಾಗ್ರೇಣ ವಿಸರ್ಜಯೇತ್** ॥೫೯॥

---

೫೫. "ಇದುವರೆಗೆ ತಾವು ಮಾಡಿದ ಆಶೀರ್ವಾದಗಳೆಲ್ಲ ಸತ್ಯವಾಗಲಿ" ಎಂದು ಯಜಮಾನನು ಬೇಡುವನು. "ಆಗಲಿ" ಎಂದು ಅವರು ಉತ್ತರ ಕೊಡುವರು. ಬಳಿಕ ಪಿಂಡಗಳನ್ನು ಭಕ್ತಿಯಿಂದ ಉದ್ವಾಸನಮಾಡಿ ಸ್ವಸ್ತಿವಾಚನವನ್ನು ಮಾಡಿಸಬೇಕು.

೫೬. ಬ್ರಾಹ್ಮಣರು ಬೀಳ್ಕೊಳ್ಳುವವರೆಗೂ ಊಟಮಾಡಿದ ಸ್ಥಳಕ್ಕೆ ಗೋಮಯವನ್ನು ಇಕ್ಕಬಾರದು. ಪಿತೃಕರ್ಮವು ಮುಗಿದ ಬಳಿಕ ವೈಶ್ವದೇವವನ್ನು ಮಾಡಬೇಕು. ಇದೀಗ ಧರ್ಮದ ವ್ಯವಸ್ಥೆ.

೫೭. ನೆಲದ ಮೇಲೆ ಬಿದ್ದಿರುವ ಎಂಜಲು ನಿಷ್ಕಪಟರೂ ಆಸ್ತಿಕರೂ ಆದ ಭೃತ್ಯರ ಪಿತೃಗಳಿಗೆ ಭಾಗರೂಪವಾಗಿ ಸಲ್ಲುವುದು.

೫೮. ಪಿತೃಗಳಿಗೆ ತೃಪ್ತಿಯನ್ನು ಕೊಡುವ ಈ ಕರ್ಮವನ್ನು ಅಪುತ್ರರೂ, ಸಪುತ್ರರೂ, ಸ್ತ್ರೀಯರೂ ಸಹ ಯಾವಾಗಲೂ ಆಚರಿಸಬೇಕು.

೫೯. ಬಳಿಕ ಜಲಪಾತ್ರವನ್ನು ಕೈಯಲ್ಲಿ ಹಿಡಿದುಕೊಂಡು, ಬ್ರಾಹ್ಮಣರ ಮುಂದೆ ನಿಂತು, "ವಾಜೇ ವಾಜೇ" ಎಂಬ ಮಂತ್ರವನ್ನು ಹೇಳುತ್ತ, ದರ್ಭಾಗ್ರವನ್ನು ಸೋಕಿಸಿ ಅವರನ್ನು ಕಳುಹಿಸಿಕೊಡಬೇಕು.

ಬಹಿಃ ಪ್ರದಕ್ಷಿಣಾಂ ಕುರ್ಯಾತ್ಪದಾನ್ಯಷ್ಟಾವನುವ್ರಜನ್ ।
ಬಂಧುವರ್ಗೇಣ ಸಹಿತಃ ಪುತ್ರಭಾರ್ಯಾಸಮನ್ವಿತಃ ||೬೦||

ನಿವೃತ್ಯ ಪ್ರಣಿಪತ್ಯಾಥ ಪರ್ಯುಕ್ಷ್ಯಾಗ್ನಿಂ ಸಮಂತ್ರವತ್ ।
ವೈಶ್ವದೇವಂ ಪ್ರಕುರ್ವೀತ ನೈತ್ಯಕಂ ಬಲಿಮೇವ ಚ ||೬೧||

ತತಸ್ತು ವೈಶ್ವದೇವಾಂತೇ ಸಭೃತ್ಯಸುತಬಾಂಧವಃ ।
ಭುಂಜೀತಾತಿಥಿಸಂಯುಕ್ತಃ ಸರ್ವಂ ಪಿತೃನಿಷೇವಿತಂ ||೬೨||

ಏತಚ್ಚಾನುಪನೀತೋಽಪಿ ಕುರ್ಯಾತ್ಸರ್ವೇಷು ಪರ್ವಸು ।
ಶ್ರಾದ್ಧಂ ಸಾಧಾರಣಂ ನಾಮ ಸರ್ವಕಾಮಫಲಪ್ರದಂ ||೬೩||

ಭಾರ್ಯಾವಿರಹಿತೋಽಪ್ಯೇತತ್ಪ್ರವಾಸಸ್ಥೋಽಪಿ ಭಕ್ತಿಮಾನ್ ।
ಶೂದ್ರೋಽಪ್ಯಮಂತ್ರವತ್ಕುರ್ಯಾದನೇನ ವಿಧಿನಾ ಬುಧಃ ||೬೪||

---

೬೦. ಹೊರಗಡೆ ಪ್ರದಕ್ಷಿಣನಮಸ್ಕಾರಗಳನ್ನು ಮಾಡಿ, ಪತ್ನೀಪುತ್ರರೊಡನೆಯೂ ಬಂಧುವರ್ಗದೊಡನೆಯೂ ಎಂಟು ಹೆಜ್ಜೆಗಳ ದೂರ ಅವರನ್ನು ಅನುಸರಿಸಿ ಹೋಗಬೇಕು.

೬೧. ಹಿಂದಿರುಗಿ ಬಂದು, ಅಗ್ನಿಗೆ ನಮಸ್ಕರಿಸಿ, ಮಂತ್ರೋಕ್ತವಾಗಿ ಪರಿಷೇಚನವನ್ನು ಮಾಡಬೇಕು. ವೈಶ್ವದೇವವನ್ನೂ ನಿತ್ಯಬಲಿಯನ್ನೂ ನೆರವೇರಿಸಬೇಕು.

೬೨. ವೈಶ್ವದೇವಾನಂತರ ಪುತ್ರಭೃತ್ಯಬಂಧುಸಮೇತನಾಗಿ ಅತಿಥಿಗಳೊಡಗೂಡಿ ಪಿತೃಶೇಷವನ್ನು ಭುಂಜಿಸಬೇಕು.

೬೩. ಸಕಲವಾದ ಇಷ್ಟಾರ್ಥಗಳನ್ನೂ ಸಲ್ಲಿಸುವ ಈ ಸಾಧಾರಣ ಶ್ರಾದ್ಧವನ್ನು ಉಪನಯನವಾಗದವನೂ ಕೂಡ ಎಲ್ಲ ಪರ್ವಕಾಲಗಳಲ್ಲಿಯೂ ಮಾಡಬೇಕು.

೬೪. ಪತ್ನಿಯಿಲ್ಲದವನೂ, ಪ್ರಯಾಣದಲ್ಲಿರುವವನೂ ಸಹ ಇದನ್ನು ನಡೆಸಬೇಕು. ಶೂದ್ರನಾದರೂ ಇದೇ ವಿಧಾನವನ್ನು ಅನುಸರಿಸಿ ಅಮಂತ್ರಕವಾಗಿ ಭಕ್ತಿಯೊಡನೆ ಆಚರಿಸಬೇಕು.

**ತೃತೀಯಮಾಭ್ಯುದಯಿಕಂ ವೃದ್ಧಿಶ್ರಾದ್ಧಂ ತದುಚ್ಯತೇ ।**
**ಉತ್ಸವಾನಂದಸಂಭಾರೇ ಯಜ್ಞೋದ್ವಾಹಾದಿಮಂಗಲೇ ॥೬೫॥**

**ಮಾತರಃ ಪ್ರಥಮಂ ಪೂಜ್ಯಾಃ ಪಿತರಸ್ತದನಂತರಂ ।**
**ತತೋ ಮಾತಾಮಹಾ ರಾಜನ್ ವಿಶ್ವೇ ದೇವಾಸ್ತಥೈವ ಚ ॥೬೬॥**

**ಪ್ರದಕ್ಷಿಣೋಪಚಾರೇಣ ದಧ್ಯಕ್ಷತಫಲೋದಕೈಃ ।**
**ಪ್ರಾಙ್ಮುಖೋ ನಿರ್ವಪೇತ್ಪಿಂಡಾನ್ ದರ್ವ್ಯಯಾ ಚ ಕುಶೈರ್ಯುತಾನ್ ॥೬೭॥**

**ಸಂಪನ್ನಮಿತ್ಯಭ್ಯುದಯೇ ದದ್ಯಾದರ್ಘ್ಯಂ ದ್ವಯೋರ್ದ್ವಯೋಃ ।**
**ಯುಗ್ಮಾ ದ್ವಿಜಾತಯಃ ಪೂಜ್ಯಾ ವಸ್ತ್ರಕಾರ್ತಸ್ವರಾದಿಭಿಃ ॥೬೮॥**

**ತಿಲಾರ್ಥಸ್ತು ಯವೈಃ ಕಾರ್ಯೋ ನಾಂದೀಶಬ್ದಾನುಪೂರ್ವಕಃ ।**
**ಮಾಂಗಲ್ಯಾನಿ ಚ ಸರ್ವಾಣಿ ವಾಚಯೇದ್ದ್ವಿಜಪುಂಗವೈಃ ॥೬೯॥**

---

೬೫. ಉತ್ಸವಕಾಲಗಳಲ್ಲೂ, ಸಂತೋಷಕಾರ್ಯಗಳಲ್ಲೂ, ಯಜ್ಞಗಳಲ್ಲೂ, ವಿವಾಹಾದಿಮಂಗಲಕರ್ಮಗಳಲ್ಲೂ ನಡೆಸುವ ಶ್ರಾದ್ಧವೇ ಮೂರನೆಯದು. ಇದಕ್ಕೆ ಅಭ್ಯುದಯ ಶ್ರಾದ್ಧವೆಂದೂ ವೃದ್ಧಿ ಶ್ರಾದ್ಧವೆಂದೂ ಹೆಸರು.

೬೬. ಮೊದಲು ಮಾತೃಗಳನ್ನೂ, ಬಳಿಕ ಪಿತೃಗಳನ್ನೂ, ತರುವಾಯ ಮಾತಾಮಹರನ್ನೂ ನಾಂದೀ ಶ್ರಾದ್ಧದಲ್ಲಿ ಪೂಜಿಸಬೇಕು. ಆ ಮೇಲೆ ವಿಶ್ವೇದೇವರನ್ನು ಅರ್ಚಿಸಬೇಕು.

೬೭. ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ, ಮೊಸರು, ಅಕ್ಷತೆ, ಹಣ್ಣು, ಉದಕ ಇವುಗಳಿಂದ ಅರ್ಚಿಸಿ, ಪೂರ್ವಾಭಿಮುಖವಾಗಿ ದರ್ಭೆಗಳ ಮೇಲೆ ದರ್ವಿಯಿಂದ ಪಿಂಡಗಳನ್ನು ಇಡಬೇಕು.

೬೮. ಅಭ್ಯುದಯ ಶ್ರಾದ್ಧದಲ್ಲಿ "ಸಂಪನ್ನ"ವೆಂದು ಹೇಳುತ್ತ ಇಬ್ಬಿಬ್ಬರಿಗೆ ಅರ್ಘ್ಯವನ್ನು ಕೊಡಬೇಕು. ಧನಕನಕವಸ್ತ್ರಾದಿಗಳನ್ನಿತ್ತು ಸಮಸಂಖ್ಯೆಯ ಬ್ರಾಹ್ಮಣರನ್ನು ಸತ್ಕರಿಸಬೇಕು.

೬೯. ಎಳ್ಳಿಗೆ ಬದಲಾಗಿ ಅಕ್ಷತೆಗಳನ್ನು ಉಪಯೋಗಿಸಬೇಕು. ನಾಂದೀಮುಖಾಭ್ಯುದಯವೆಂದು ಹೇಳುವುದಲ್ಲದೆ ಶುಭಮಯವಾದ ಸೂಕ್ತಗಳನ್ನೂ, ಆಶೀರ್ವಾದಗಳನ್ನೂ ಬ್ರಾಹ್ಮಣೋತ್ತಮರಿಂದ ಹೇಳಿಸಬೇಕು.

**ಏವಂ ಶೂದ್ರೋಽಪಿ ಸಾಮಾನ್ಯವೃದ್ಧಿಶ್ರಾದ್ಧೇಽಪಿ ಸರ್ವದಾ ।**
**ನಮಸ್ಕಾರೇಣ ಮಂತ್ರೇಣ ಕುರ್ಯಾದಾಮಾನ್ನತಃ ಸದಾ ॥೨೦॥**

**ದಾನಪ್ರಧಾನಃ ಶೂದ್ರಃ ಸ್ಯಾದಿತ್ಯಾಹ ಭಗವಾನ್ಪ್ರಭುಃ ।**
**ದಾನೇನ ಸರ್ವಕಾಮಾಪ್ತಿರಸ್ಯ ಸಂಜಾಯತೇ ಯತಃ ॥೨೧॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸಾಧಾರಣಾಭ್ಯುದಯಕೀರ್ತನಂ ನಾಮ ಸಪ್ತದಶೋಽಧ್ಯಾಯಃ**

---

೨೦. ಹೀಗೆ ಶೂದ್ರನೂ ಕೂಡ ಸಾಮಾನ್ಯ ಶ್ರಾದ್ಧವನ್ನೂ, ವೃದ್ಧಿ ಶ್ರಾದ್ಧವನ್ನೂ ಆಮರೂಪವಾಗಿ ಮಾಡಬೇಕು. ನಮಸ್ಕಾರವೇ ಅವನು ಹೇಳುವ ಮಂತ್ರ.

೨೧. ಶೂದ್ರನು ಮಾಡುವ ಕರ್ಮಗಳಲ್ಲಿ ದಾನವೇ ಪ್ರಧಾನವಾದುದು. ಏಕೆಂದರೆ ಇವನಿಗೆ ದಾನದಿಂದಲೇ ಸಕಲವಾದ ಇಷ್ಟಾರ್ಥಗಳೂ ಸಿದ್ಧಿಸುವುವು ಎಂದು ಸರ್ವೇಶ್ವರನಾದ ಭಗವಂತನು ಹೇಳಿರುವನು.

### ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಸಾಧಾರಣಶ್ರಾದ್ಧದ ಮತ್ತು ಅಭ್ಯುದಯಶ್ರಾದ್ಧದ ವಿಧಾನವನ್ನು ವಿವರಿಸಿದೆ.

ಸಂಕ್ರಮಣ, ಅಮಾವಾಸ್ಯೆ ಮುಂತಾದ ಯುಗಾದಿದಿನಗಳೂ, ಆಶ್ವಯುಜ ಶುದ್ಧನವಮಿ, ಕಾರ್ತಿಕದ್ವಾದಶಿ ಮೊದಲಾದ ಮನ್ವಾದಿದಿನಗಳೂ ಶ್ರಾದ್ಧಕ್ಕೆ ಪ್ರಶಸ್ತವಾದುವು. ಅನ್ನಾದಿ ಭಕ್ಷ್ಯಭೋಜ್ಯಗಳೂ, ವಿಧವಿಧವಾದ ಮಾಂಸಗಳೂ, ಶಾಕಗಳೂ ಪಿತೃಗಳಿಗೆ ಪ್ರಿಯವಾದುವು.

ವರಣ, ಆವಾಹನ, ಅರ್ಘ್ಯದಾನ, ಅಗ್ನಿಕಾರ್ಯ, ಬ್ರಾಹ್ಮಣಭೋಜನ, ಪಿಂಡ ದಾನ ಇವು ಕ್ರಮವಾಗಿ ನಡೆದ ಬಳಿಕ ಯಜಮಾನನು ಭಕ್ತಿಯಿಂದ ಸಕಲವಿಧವಾದ ಉಪಚಾರಗಳಿಂದಲೂ, ವಿಧವಿಧವಾದ ದಾನಗಳಿಂದಲೂ ಬ್ರಾಹ್ಮಣರನ್ನು ತೃಪ್ತಿ ಪಡಿಸಿ, ಅವರ ಆಶೀರ್ವಾದವನ್ನು ಪಡೆದು ಬೀಳ್ಕೊಡಬೇಕು. ಈ ಶ್ರಾದ್ಧವನ್ನು ಆಯಾ ಕಾಲಗಳಲ್ಲಿ ಸರ್ವವರ್ಣದವರೂ ಮಾಡಬೇಕು.

ವಿವಾಹಾದಿಶುಭಕಾಲಗಳಲ್ಲಿ ನಡೆಸುವ ಶ್ರಾದ್ಧಕ್ಕೆ ಅಭ್ಯುದಯ ಶ್ರಾದ್ಧವೆಂದೂ ವೃದ್ಧಿಶ್ರಾದ್ಧವೆಂದೂ ಹೆಸರು. ಇದರಲ್ಲಿ ಎಲ್ಲವೂ ಶುಭಮಯವಾಗಿರಬೇಕು. ಎಳ್ಳಿಗೆ ಬದಲಾಗಿ ಅಕ್ಷತೆಗಳನ್ನು ಉಪಯೋಗಿಸಬೇಕು. ಪಿತೃಗಳಿಗಿಂತ ಮೊದಲು ಮಾತೃ ಗಳನ್ನು ಪೂಜಿಸಬೇಕು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಸಾಧಾರಣಾಭ್ಯುದಯ ಶ್ರಾದ್ಧಕೀರ್ತನವೆಂಬ
ಹದಿನೇಳನೆಯ ಅಧ್ಯಾಯವು ಮುಗಿದುದು



## ಅಥ ಶ್ರೀಮತ್ಸ್ಯಮಹಾಪುರಾಣೇ ಅಷ್ಟಾದಶೋಽಧ್ಯಾಯಃ

॥ ಸೂತ ಉವಾಚ ॥

ಏಕೋದ್ದಿಷ್ಟಮತೋ ವಕ್ಷ್ಯೇ ಯದುಕ್ತಂ ಚಕ್ರಪಾಣಿನಾ।
ಮೃತೇ ಪುತ್ರೈರ್ಯಥಾ ಕಾರ್ಯಮಾಶೌಚಂ ಚ ಪಿತರ್ಯಪಿ ॥ ೧ ॥

ದಶಾಹಂ ಶಾವಮಾಶೌಚಂ ಬ್ರಾಹ್ಮಣೇಷು ವಿಧೀಯತೇ।
ಕ್ಷತ್ರಿಯೇಷು ದಶ ದ್ವೇ ಚ ಪಕ್ಷಂ ವೈಶ್ಯೇಷು ಚೈವ ಹಿ ॥ ೨ ॥

ಶೂದ್ರೇಷು ಮಾಸಮಾಶೌಚಂ ಸಪಿಂಡೇಷು ವಿಧೀಯತೇ।
ನೈಶಂ ವಾಽಕೃತಚೂಡಸ್ಯ ತ್ರಿರಾತ್ರಂ ಪರತಃ ಸ್ಮೃತಂ ॥ ೩ ॥

ಜನನೇಪ್ಯೇವಮೇವ ಸ್ಯಾತ್ಸರ್ವವರ್ಣೇಷು ಸರ್ವದಾ।
ತಥಾಸ್ಥಿಸಂಚಯಾದೂರ್ಧ್ವಮಂಗಸ್ಪರ್ಶೋ ವಿಧೀಯತೇ ॥ ೪ ॥

---

೧. ಸೂತಮಹರ್ಷಿ ಹೇಳಿದನು.—ಇನ್ನು ಮುಂದೆ ಶ್ರೀಮಹಾವಿಷ್ಣು ಹೇಳಿದ ಏಕೋದ್ದಿಷ್ಟಶ್ರಾದ್ಧದ ವಿಧಿಯನ್ನೂ, ತಂದೆ ಮೃತನಾದರೆ ಮಕ್ಕಳು ಆಚರಿಸಬೇಕಾದ ಆಶೌಚ ವಿಧಾನವನ್ನೂ ಹೇಳುವೆನು.

೨-೩. ಜ್ಞಾತಿಯಾದವನು ಮೃತನಾದರೆ (ಏಳು ತಲೆಯ ವರೆಗೆ) ಬ್ರಾಹ್ಮಣರಿಗೆ ಹತ್ತುದಿನವೂ, ಕ್ಷತ್ರಿಯರಿಗೆ ಹನ್ನೆರಡುದಿನವೂ, ವೈಶ್ಯರಿಗೆ ಒಂದು ಪಕ್ಷವೂ, ಶೂದ್ರರಿಗೆ ಒಂದು ತಿಂಗಳೂ ಸೂತಕವುಂಟು. ಚೌಲಕ್ಕಿಂತ ಪೂರ್ವದಲ್ಲಿ ಮೃತಪಟ್ಟರೆ ಒಂದು ರಾತ್ರಿಯೂ, ತರುವಾಯವಾದರೆ ಮೂರು ರಾತ್ರಿಯೂ ಆಶೌಚವಿರಬೇಕು.

೪. ಜನನವಾದಾಗಲೂ ಸಹ ಮೇಲಿನಂತೆಯೇ ಎಲ್ಲ ವರ್ಣದವರಿಗೂ ಆಶೌಚವುಂಟು. ಅಸ್ಥಿಸಂಚಯನವಾದ ಬಳಿಕ ಜ್ಞಾತಿಗಳು ಒಬ್ಬರನ್ನೊಬ್ಬರು ಮುಟ್ಟಬಹುದು.

**ಪ್ರೇತಾಯ ಪಿಂಡದಾನಂ ತು ದ್ವಾದಶಾಹಂ ಸಮಾಚರೇತ್ ।**
**ಪಾಥೇಯಂ ತಸ್ಯ ತತ್ಪ್ರೋಕ್ತಂ ಯತಃ ಪ್ರೀತಿಕರಂ ಮಹತ್ ॥ ೫ ॥**

**ತಸ್ಮಾತ್ಪ್ರೇತಪುರಂ ಪ್ರೇತೋ ದ್ವಾದಶಾಹಂ ನ ನೀಯತೇ ।**
**ಗೃಹಂ ಪುತ್ರಂ ಕಲತ್ರಂ ಚ ದ್ವಾದಶಾಹಂ ಪ್ರಪಶ್ಯತಿ ॥ ೬ ॥**

**ತಸ್ಮಾನ್ನಿಧೇಯಮಾಕಾಶೇ ದಶರಾತ್ರಂ ಪಯಸ್ತಥಾ ।**
**ಸರ್ವದಾಹೋಪಶಾಂತ್ಯರ್ಥಮಧ್ವಶ್ರಮವಿನಾಶನಂ ॥ ೭ ॥**

**ತತ ಏಕಾದಶಾಹೇ ತು ದ್ವಿಜಾನೇಕಾದಶೈವ ತು ।**
**ಕ್ಷತ್ರಾದಿಃ ಸೂತಕಾಂತೇ ತು ಭೋಜಯೇದಯುಜೋ ದ್ವಿಜಾನ್ ॥ ೮ ॥**

**ದ್ವಿತೀಯೇಽಹ್ನಿ ಪುನಸ್ತದ್ವದೇಕೋದ್ದಿಷ್ಟಂ ಸಮಾಚರೇತ್ ।**
**ಆವಾಹನಾಗ್ನೌಕರಣಂ ದೈವಹೀನಂ ವಿಧಾನತಃ ॥ ೯ ॥**

---

೫. ಹನ್ನೆರಡು ದಿನಗಳ ವರೆಗೆ ಪ್ರೇತವನ್ನು ಉದ್ದೇಶಿಸಿ ಪಿಂಡವನ್ನು ಹಾಕಬೇಕು. ಅದೇ ಅದಕ್ಕೆ ಬುತ್ತಿ; ಅದರಿಂದ ಅದಕ್ಕೆ ಬಹಳ ತೃಪ್ತಿಯಾಗುವುದು.

೬. ಪ್ರೇತವು ತನ್ನ ಪಟ್ಟಣಕ್ಕೆ ಹನ್ನೆರಡು ದಿನಗಳ ವರೆಗೂ ಹೋಗುವುದಿಲ್ಲ. ತನ್ನ ಮನೆ, ಮಗ, ಹೆಂಡಿತಿ ಇವರನ್ನು ಅಕ್ಕರೆಯಿಂದ ನೋಡುತ್ತಿರುತ್ತದೆ.

೭. ಆದುದರಿಂದ ದಾಹಶಾಂತಿಗಾಗಿಯೂ, ಪ್ರಯಾಣಶ್ರಮದ ಪರಿಹಾರಕ್ಕಾಗಿಯೂ ಹತ್ತುದಿವಸ ಅಂತರಾಳದಲ್ಲಿ ನೀರನ್ನಿಡಬೇಕು.

೮. ಬಳಿಕ ಹನ್ನೊಂದನೆಯ ದಿನದಲ್ಲಿ ಹನ್ನೊಂದು ಜನ ಬ್ರಾಹ್ಮಣರಿಗೆ ಮಾತ್ರ ಭೋಜನಮಾಡಿಸಬೇಕು. ಕ್ಷತ್ರಿಯರು, ವೈಶ್ಯರು ಮುಂತಾದವರಾದರೋ ತಮ್ಮ ಸೂತಕವು ಕಳೆದ ಮೇಲೆ ವಿಷಮ ಸಂಖ್ಯೆಯ ಬ್ರಾಹ್ಮಣರನ್ನು ಭೋಜನದಿಂದ ತೃಪ್ತಿಪಡಿಸಬೇಕು.

೯-೧೦. ಮಾರನೆಯ ದಿನ ಪ್ರೇತವನ್ನು ಮಾತ್ರವೇ ಉದ್ದೇಶಿಸಿ ಏಕೋದ್ದಿಷ್ಟ ಶ್ರಾದ್ಧವನ್ನು ಮಾಡಬೇಕು. ಆವಾಹನ, ಅಗ್ನಿಕಾರ್ಯ, ಇವುಗಳನ್ನು ಯಥಾವಿಧಿಯಾಗಿ ನಡೆಸಬೇಕು. ಈ ಶ್ರಾದ್ಧದಲ್ಲಿ ವಿಶ್ವೇದೇವರಿಗೆ ಆವಾಹನವಿಲ್ಲ. ಅರ್ಘ್ಯ

**ಏಕಂ ಪವಿತ್ರಮೇಕೋಽರ್ಘ್ಯ ಏಕಃ ಪಿಂಡೋ ವಿಧೀಯತೇ ।**
**ಉಪತಿಷ್ಠತಾಮಿತ್ಯೇತದ್ದೇಯಂ ಪಶ್ಚಾತ್ತಿಲೋದಕಂ ॥೧೦॥**

**ಸ್ವದಿತಂ ವಿಕಿರೇ ಬ್ರೂಯಾದ್ವಿಸರ್ಗೇ ಚಾಭಿರಮ್ಯತಾಂ ।**
**ಶೇಷಂ ಪೂರ್ವವದತ್ರಾಪಿ ಕಾರ್ಯಂ ವೇದವಿದಾ ಪಿತುಃ ॥೧೧॥**

**ಅನೇನ ವಿಧಿನಾ ಸರ್ವಮನುಮಾಸಂ ಸಮಾಚರೇತ್ ।**
**ಸೂತಕಾಂತಾದ್ದ್ವಿತೀಯೇಽಹ್ನಿ ಶಯ್ಯಾಂ ದದ್ಯಾದ್ವಿಲಕ್ಷಣಾಂ ॥೧೨॥**

**ಕಾಂಚನಂ ಪುರುಷಂ ತದ್ವತ್ಫಲವಸ್ತ್ರಸಮನ್ವಿತಾಂ ।**
**ಸಂಪೂಜ್ಯ ದ್ವಿಜದಾಂಪತ್ಯಂ ನಾನಾಭರಣಭೂಷಣೈಃ ॥೧೩॥**

**ವೃಷೋತ್ಸರ್ಗಂ ಪ್ರಕುರ್ವೀತ ದೇಯಾ ಚ ಕಪಿಲಾ ಶುಭಾ ।**
**ಉದಕುಂಭಶ್ಚ ದಾತವ್ಯೋ ಭಕ್ಷ್ಯಭೋಜ್ಯಸಮನ್ವಿತಃ ॥೧೪॥**

---

ಪಾತ್ರೆಯೂ, ಪಿಂಡವೂ, ಪವಿತ್ರವೂ ಒಂದೊಂದೇ ಇರುವುವು. ಪಿಂಡವನ್ನು ಹಾಕುವಾಗ "ಉಪತಿಷ್ಠತಾಂ" ಎಂದು ಹೇಳಬೇಕು. ಕೊನೆಗೆ ತಿಲೋದಕವನ್ನು ಬಿಡಬೇಕು.

೧೧. ವಿಕಿರದ ಸ್ಥಾನದಲ್ಲಿ ಸ್ವದಿತವೆಂದು ಉಚ್ಚರಿಸಬೇಕು. "ಅಭಿರಮ್ಯತಾಂ" ನಿಮ್ಮ ಇಚ್ಛೆಬಂದಂತೆ ಸಂತೋಷದಿಂದಿರಿ ಎಂದು ಹೇಳಿ ಬ್ರಾಹ್ಮಣರನ್ನು ಬೀಳ್ಕೊಡಬೇಕು. ಮಿಕ್ಕಿದೆಲ್ಲವನ್ನೂ ಹಿಂದಿನಂತೆಯೇ ಇಲ್ಲೂ ಮಾಡಬೇಕು. ಇದೇ ವೇದಜ್ಞಾನಿಯು ತನ್ನ ತಂದೆಗೆ ಮಾಡಬೇಕಾದ ಏಕೋದ್ದಿಷ್ಟಶ್ರಾದ್ಧದ ವಿಧಿ.

೧೨-೧೩. ಇದೇ ವಿಧಿಯನ್ನನುಸರಿಸಿ ಒಂದೊಂದು ತಿಂಗಳೂ ಶ್ರಾದ್ಧವನ್ನು ಮಾಡಬೇಕು. ಸೂತಕವು ಕಳೆದ ಮಾರನೆಯ ದಿನ ಬ್ರಾಹ್ಮಣ ದಂಪತಿಗಳನ್ನು ಬಗೆ ಬಗೆಯ ವಸ್ತ್ರಾಲಂಕಾರಗಳಿಂದ ಸತ್ಕರಿಸಿ, ಚಿನ್ನದ ಪುರುಷಪ್ರತಿಮೆ, ವಸ್ತ್ರ, ಹಣ್ಣು ಇವುಗಳೊಡನೆ ಒಳ್ಳೆಯ ಹಾಸಿಗೆಯನ್ನು ಅವರಿಗೆ ದಾನಮಾಡಬೇಕು.

೧೪. ಮೃತನ ಸದ್ಗತಿಪ್ರಾಪ್ತಿಗಾಗಿ ಹೋರಿಗರುವನ್ನು ಬಿಟ್ಟು, ಒಳ್ಳೆಯ ಹಸುವನ್ನು ದಾನಮಾಡಬೇಕು. ವರ್ಷಪೂರ್ತಿಯಾಗುವ ವರೆಗೂ ಭಕ್ಷ್ಯಭೋಜ್ಯಗಳೊಡನೆ ತಿಲೋದಕಪೂರ್ವಕವಾಗಿ ಜಲಪೂರ್ಣವಾದ ಕುಂಭವನ್ನು ದಾನ ಕೊಡುತ್ತಿರಬೇಕು.

**ಯಾವದಬ್ದಂ ಪ್ರಕುರ್ವೀತ ಸತಿಲೋದಕಪೂರ್ವಕಂ ।**
**ತತಸ್ಸಂವತ್ಸರೇ ಪೂರ್ಣೇ ಸಪಿಂಡೀಕರಣಂ ಭವೇತ್ ॥೧೫॥**

**ಸಪಿಂಡೀಕರಣಾದೂರ್ಧ್ವಂ ಪ್ರೇತಃ ಪಾರ್ವಣಭಾಗ್ಭವೇತ್ ।**
**ವೃದ್ಧಿಪೂರ್ವೇಷು ಯೋಗ್ಯಶ್ಚ ಗೃಹಸ್ಥಶ್ಚ ಭವೇತ್ತತಃ ॥೧೬॥**

**ಸಪಿಂಡೀಕರಣೇ ಶ್ರಾದ್ಧೇ ದೇವಪೂರ್ವಂ ನಿಯೋಜಯೇತ್ ।**
**ಪಿತ್ನೇವಾಸಯೇತ್ತತ್ರ ಪೃಥಕ್ಪ್ರೇತಂ ವಿನಿರ್ದಿಶೇತ್ ॥೧೭॥**

**ಗಂಧೋದಕತಿಲೈರ್ಯುಕ್ತಂ ಕುರ್ಯಾತ್ಪಾತ್ರಚತುಷ್ಟಯಂ ।**
**ಅರ್ಘಾರ್ಥಂ ಪಿತೃಪಾತ್ರೇಷು ಪ್ರೇತಪಾತ್ರಂ ಪ್ರಸೇಚಯೇತ್ ॥೧೮॥**

**ತದ್ವತ್ಸಂಕಲ್ಪ್ಯ ಚತುರಃ ಪಿಂಡಾನ್ ಪಿಂಡಪ್ರದಸ್ತಥಾ ।**
**ಯೇ ಸಮಾನಾ ಇತಿ ದ್ವಾಭ್ಯಾಮಂತ್ಯಂ ತು ವಿಭಜೇತ್ತ್ರಿಧಾ ॥೧೯॥**

---

೧೫-೧೬. ಬಳಿಕ ವರ್ಷಪೂರ್ತಿಯಾದ ಮೇಲೆ ಸಪಿಂಡೀಕರಣವನ್ನು ಮಾಡಬೇಕು. ಆ ತರುವಾಯ ಪ್ರೇತಕ್ಕೆ ಪಾರ್ವಣಶ್ರಾದ್ಧದಲ್ಲಿ ಭಾಗವೂ, ವೃದ್ಧಿ ಶ್ರಾದ್ಧಗಳಿಗೆ ಅರ್ಹತೆಯೂ, ಗಾರ್ಹಸ್ಥ್ಯಪ್ರಾಪ್ತಿಯೂ ಉಂಟಾಗುವುವು.

೧೭. ಸಪಿಂಡೀಕರಣ ಶ್ರಾದ್ಧದಲ್ಲಿ ವಿಶ್ವೇದೇವ ಪೂರ್ವಕವಾಗಿ ವರಣಮಾಡ ಬೇಕು. ಪಿತೃಗಳಿಗೂ ಪ್ರೇತಕ್ಕೂ ಬೇರೆಬೇರೆಯಾಗಿ ಆಸನಗಳನ್ನು ಹಾಕಿ ಆವಾಹನ ಮಾಡಬೇಕು.

೧೮. ಗಂಧೋದಕ, ತಿಲ ಇವುಗಳಿಂದ ಕೂಡಿದ ನಾಲ್ಕು ಅರ್ಘ್ಯಪಾತ್ರ ಗಳನ್ನು ಸಿದ್ಧಗೊಳಿಸಬೇಕು. ಅರ್ಘ್ಯಸಂಯೋಜನಕ್ಕಾಗಿ ಪಿತೃಪಾತ್ರೆಗೆ ಪ್ರೇತ ಪಾತ್ರೆಯ ಜಲವನ್ನು ಸೇರಿಸಬೇಕು.

೧೯. ಹಾಗೆಯೇ ಪಿಂಡಸಂಯೋಜನಕ್ಕಾಗಿ ಸಂಕಲ್ಪಮಾಡಿ, ನಾಲ್ಕು ಪಿಂಡಗಳನ್ನಿಟ್ಟು ಕೊನೆಯದನ್ನು ಮೂರು ಭಾಗವಾಗಿ ಮಾಡಬೇಕು. ಆ ಭಾಗ ಗಳನ್ನು "ಯೇ ಸಮಾನಾ" ಎಂಬ ಎರಡು ಮಂತ್ರಗಳಿಂದ ಮೊದಲಿನ ಮೂರು ಪಿಂಡಗಳೊಡನೆ ಸೇರಿಸಬೇಕು.

**ಚತುರ್ಥಸ್ಯ ಪುನಃ ಕಾರ್ಯಂ ನ ಕದಾಚಿತ್ತತೋ ಭವೇತ್ ।**
**ತತಃ ಪಿತೃತ್ವಮಾಪನ್ನಃ ಸರ್ವತಸ್ತುಷ್ಟಿಮಾಗತಃ ॥೨೦॥**

**ಅಗ್ನಿಷ್ವಾತ್ತಾದಿಮಧ್ಯತ್ವಂ ಪ್ರಾಪ್ನೋತ್ಯಮೃತಮುತ್ತಮಂ ।**
**ಸಪಿಂಡೀಕರಣಾದೂರ್ಧ್ವಂ ತಸ್ಮೈ ತಸ್ಮಾನ್ನ ದೀಯತೇ ॥೨೧॥**

**ಪಿತೃಷ್ವೇವ ತು ದಾತವ್ಯಂ ತತ್ಪಿಂಡೋ ಯೇಷು ಸಂಸ್ಥಿತಃ ।**
**ತತಃ ಪ್ರಭೃತಿ ಸಂಕ್ರಾಂತಾವುಪರಾಗಾದಿಪರ್ವಸು ॥೨೨॥**

**ತ್ರಿಪಿಂಡಮಾಚರೇಚ್ಛ್ರಾದ್ಧಮೇಕೋದ್ದಿಷ್ಟಂ ಮೃತೇಽಹನಿ ।**
**ಏಕೋದ್ದಿಷ್ಟಂ ಪರಿತ್ಯಜ್ಯ ಮೃತಾಹೇ ಯಸ್ಸಮಾಚರೇತ್ ॥೨೩॥**

**ಸದೈವ ಪಿತೃಹಾ ಸ ಸ್ಯಾನ್ಮಾತೃಭ್ರಾತೃವಿನಾಶಕಃ ।**
**ಮೃತಾಹೇ ಪಾರ್ವಣಂ ಕುರ್ವನ್ನಧೋಧೋ ಯಾತಿ ಮಾನವಃ ॥೨೪॥**

---

೨೦. ಅಲ್ಲಿಂದ ಮುಂದೆ ನಾಲ್ಕನೆಯ ಪಿಂಡಕ್ಕೆ ಎಂದಿಗೂ ಆವಶ್ಯಕತೆಯಿಲ್ಲ. ಪ್ರೇತವು ಆ ದಿನದಿಂದಲೇ ಪಿತೃತ್ವವನ್ನು ಹೊಂದಿ ಸಂಪೂರ್ಣವಾದ ತೃಪ್ತಿಯನ್ನು ಪಡೆಯಿತು.

೨೧. ಅಗ್ನಿಷ್ವಾತ್ತಾದಿ ಪಿತೃಗಳೊಡನೆ ಸೇರಿ ಉತ್ತಮಗತಿಯನ್ನು ಪಡೆದ ಕಾರಣ, ಸಪಿಂಡೀಕರಣಾನಂತರ ಪ್ರೇತವನ್ನುದ್ದೇಶಿಸಿ ಪಿಂಡವನ್ನಾಗಲಿ, ತಿಲೋದಕವನ್ನಾಗಲಿ ಕೊಡುವುದಿಲ್ಲ.

೨೨. ತಿಲೋದಕದಾನಾದಿಗಳನ್ನು ಪಿತೃಗಳೊಡನೆ ಸೇರಿಸಿಯೇ ಕೊಡಬೇಕು; ಏಕೆಂದರೆ ಇವನ ಪಿಂಡವು ಅವರ ಪಿಂಡದೊಡನೆ ಸೇರಿಹೋಗಿದೆ. ಇವನೂ ಅವರೊಡನೆ ಕೂಡಿಹೋಗಿದ್ದಾನೆ. ಅಲ್ಲಿಂದ ಮುಂದೆ ಸಂಕ್ರಮಣ, ಗ್ರಹಣ ಮುಂತಾದ ಪರ್ವಕಾಲಗಳಲ್ಲಿ ತ್ರಿಪಿಂಡಶ್ರಾದ್ಧವನ್ನು ಮಾಡಬೇಕು. ಮೃತತಿಥಿಯಲ್ಲಿ ಮಾತ್ರ ಏಕೋದ್ದಿಷ್ಟವನ್ನೇ ಆಚರಿಸಬೇಕು.

೨೩-೨೪. ಮೃತತಿಥಿಯಲ್ಲಿ ಏಕೋದ್ದಿಷ್ಟವನ್ನು ಬಿಟ್ಟು ಪಾರ್ವಣಶ್ರಾದ್ಧವನ್ನು ಮಾಡುವವನು ಪಿತೃಘಾತಕನೂ, ಮಾತೃಭ್ರಾತೃವಿನಾಶಕನೂ ಆಗುವನು; ಮತ್ತು ದುರ್ಗತಿಗೆ ಇಳಿಯುವನು.

**ಸಂಪೃಕ್ತೇಷ್ವಾಕುಲೀಭಾವಃ ಪ್ರೇತೇಷು ತು ಯತೋ ಭವೇತ್ ।**
**ಪ್ರತಿಸಂವತ್ಸರಂ ತಸ್ಮಾದೇಕೋದ್ದಿಷ್ಟಂ ಸಮಾಚರೇತ್ ॥೨೫॥**

**ಯಾವದಬ್ದಂ ತು ಯೋ ದದ್ಯಾದುದಕುಂಭಂ ವಿಮತ್ಸರಃ ।**
**ಪ್ರೇತಾಯಾನ್ನಸಮಾಯುಕ್ತಂ ಸೋಽಶ್ವಮೇಧಫಲಂ ಲಭೇತ್ ॥೨೬॥**

**ಆಮಶ್ರಾದ್ಧಂ ಯದಾ ಕುರ್ಯಾದ್ವಿಧಿಜ್ಞಃ ಶ್ರಾದ್ಧದಸ್ತದಾ ।**
**ತೇನಾಗ್ನೌಕರಣಂ ಕುರ್ಯಾತ್ಪಿಂಡಾಂಸ್ತೇನೈವ ನಿರ್ವಪೇತ್ ॥೨೭॥**

**ತ್ರಿಭಿಸ್ಸಪಿಂಡೀಕರಣೇ ಅಶೇಷತ್ರಿತಯೇ ಪಿತಾ ।**
**ಯದಾ ಪ್ರಾಪ್ಸ್ಯತಿ ಕಾಲೇನ ತದಾ ಮುಚ್ಯೇತ ಬಂಧನಾತ್ ॥೨೮॥**

**ಮುಕ್ತೋಽಪಿ ಲೇಪಭಾಗಿತ್ವಂ ಪ್ರಾಪ್ನೋತಿ ಕುಶಮಾರ್ಜನಾತ್ ।**
**ಲೇಪಭಾಜಶ್ಚತುರ್ಥಾದ್ಯಾಃ ಪಿತ್ರಾದ್ಯಾಃ ಪಿಂಡಭಾಗಿನಃ ।**
**ಪಿಂಡದಸ್ಸಪ್ತಮಸ್ತೇಷಾಂ ಸಾಪಿಂಡ್ಯಂ ಸಪ್ತಪೌರುಷಂ ॥೨೯॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸಪಿಂಡೀಕರಣ ಕಲ್ಪೋ ನಾಮಾಷ್ಟಾದಶೋಽಧ್ಯಾಯಃ**

---

೨೫. ಪಿತೃಗಳೊಡಗೂಡಿದ ಪ್ರೇತಗಳಿಗೆ ವ್ಯಾಕುಲತೆಯು ಹುಟ್ಟದಿರಲೆಂದು ಪ್ರತಿ ವರ್ಷವೂ ಮೃತತಿಥಿಯಲ್ಲಿ ಏಕೋದ್ದಿಷ್ಟವನ್ನು ನಡೆಸಬೇಕು.

೨೬. ವರ್ಷದ ವರೆಗೆ ಪ್ರೇತಕ್ಕಾಗಿ ಅನ್ನವನ್ನೂ ಜಲಕುಂಭವನ್ನೂ ಶುದ್ಧ ಮನಸ್ಸಿನಿಂದ ದಾನಮಾಡುವವನು ಅಶ್ವಮೇಧದ ಫಲವನ್ನು ಪಡೆಯುವನು.

೨೭. ವಿಧಿಯನ್ನು ಬಲ್ಲವನು ಆಮಶ್ರಾದ್ಧವನ್ನು ಮಾಡಿದಾಗ, ಆಮರೂಪಾನ್ನದಿಂದಲೇ ಅಗ್ನಿಕಾರ್ಯವನ್ನು ಮಾಡಬೇಕು. ಪಿಂಡಗಳನ್ನೂ ಸಹ ಅದರಿಂದಲೇ ಮಾಡಿ ಹಾಕಬೇಕು.

೨೮. ಸಪಿಂಡೀಕರಣದಲ್ಲಿ ಪಿತೃವು ಪಿತಾಮಹ, ಪ್ರಪಿತಾಮಹ, ಪಿತುಃ ಪ್ರಪಿತಾಮಹರೆಂಬ ಮೂವರೊಡನೆ ಸೇರಿದ ಬಳಿಕ, ಪಿತುಃ ಪ್ರಪಿತಾಮಹನು ಈ ಪರಂಪರೆಯಿಂದ ಬೇರೆಯಾಗುವನು.

೨೯. ಹೀಗೆ ಪ್ರತ್ಯೇಕವಾದರೂ ಕೂಡ ವೃದ್ಧಪ್ರಪಿತಾಮಹನು ಪಿಂಡದಾನ ಕಾಲದಲ್ಲಿ ದರ್ಭೆಯ ಮೇಲೆ ಮಾರ್ಜನಮಾಡುವಾಗ ಬೀಳುವ ಅನ್ನದ ಅಗುಳಿನಲ್ಲಿ

ಭಾಗವನ್ನು ಪಡೆಯುವನು. ಆದುದರಿಂದ ಲೇಪಭಾಗಿಯೆನಿಸುವನು. ವೃದ್ಧಪ್ರಪಿತಾಮಹನಿಂದ ಪ್ರಾರಂಭಿಸಿ ಮೇಲಕ್ಕೆ ಮೂರುತಲೆಗಳವರು ಲೇಪಭಾಗಿಗಳು. ತಂದೆಯಿಂದ ಮೇಲೆ ಮೂವರು ಪಿಂಡಭಾಗಿಗಳು. ಪಿಂಡವನ್ನು ಕೊಡುವ ಶ್ರಾದ್ಧಕರ್ತನು ಏಳನೆಯವನು. ಹೀಗೆ ಏಳು ತಲೆಯವರು ಸಪಿಂಡರೆನಿಸಿಕೊಳ್ಳುವರು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಸಪಿಂಡೀಕರಣ ಕಲ್ಪವನ್ನು ಹೇಳಿದೆ.

ದಾಯಾದಿಗಳಲ್ಲಿ ಜನನವು ಸಂಭವಿಸಲಿ; ಮರಣವು ಸಂಭವಿಸಲಿ; ಬ್ರಾಹ್ಮಣಾದಿ ಚತುರ್ವರ್ಣದವರಿಗೂ ಕ್ರಮವಾಗಿ ಹತ್ತು, ಹನ್ನೆರಡು, ಹದಿನೈದು ಮತ್ತು ಮೂವತ್ತು ದಿನಗಳ ಆಶೌಚವುಂಟು. ಮೃತದಿನದಿಂದ ಹಿಡಿದು ಸಪಿಂಡೀಕರಣವು ನಡೆಯುವವರೆಗೂ ಆಯಾ ಕಾಲಗಳಲ್ಲಿ ಪ್ರೇತಕ್ಕೆ ಪಿಂಡಾದಿಗಳನ್ನು ಕೊಡಬೇಕು.

ಆಶೌಚವು ನಿವೃತ್ತಿಯಾದ ದಿನ ಏಕೋದ್ದಿಷ್ಟ ಶ್ರಾದ್ಧವನ್ನು ಮಾಡಬೇಕು. ಪ್ರೇತವನ್ನು ಮಾತ್ರ ಉದ್ದೇಶಿಸಿ ಮಾಡುವ ಶ್ರಾದ್ಧವಿದು. ಇದರಲ್ಲಿ ವಿಶ್ವೇದೇವರ ಆವಾಹನವಿಲ್ಲ. ಅರ್ಘ್ಯಪಾತ್ರೆಯೂ, ಪಿಂಡವೂ ಒಂದೊಂದೇ ಇರುವುವು.

ಸಪಿಂಡೀಕರಣಶ್ರಾದ್ಧದಲ್ಲಿ ಪಿತೃಗಳಿಗೆ ಮೂರು, ಪ್ರೇತಕ್ಕೆ ಒಂದು ಹೀಗೆ ಅರ್ಘ್ಯಪಾತ್ರೆಗಳೂ ಪಿಂಡಗಳೂ ನಾಲ್ಕಿರುವುವು. ಪ್ರೇತಾರ್ಘ್ಯಜಲವನ್ನು ಪಿತೃಪಾತ್ರೆಗೆ ಸೇರಿಸುವರು. ಪ್ರೇತಪಿಂಡವನ್ನು ಮೂರು ಭಾಗಮಾಡಿ ಪಿತೃಪಿಂಡಗಳೊಡನೆ ಕೂಡಿಸುವರು. ಇಲ್ಲಿಗೆ ಪ್ರೇತವು ಪಿತೃತ್ವವನ್ನು ಪಡೆಯಿತೆಂದರ್ಥ.

ಶ್ರೀಮತ್ಸ್ಯಮಹಾಪುರಾಣದಲ್ಲಿ ಸಪಿಂಡೀಕರಣಕಲ್ಪವೆಂಬ ಹದಿನೆಂಟನೆಯ
ಅಧ್ಯಾಯವು ಮುಗಿದುದು



# ಅಥ ಶ್ರೀಮತ್ಸ್ಯಮಹಾಪುರಾಣೇ ಏಕೋನವಿಂಶೋಽಧ್ಯಾಯಃ

॥ ಋಷಯ ಊಚುಃ ॥

ಕಥಂ ಕವ್ಯಾನಿ ದೇಯಾನಿ ಹವ್ಯಾನಿ ಚ ಜನೈರಿಹ ।
ಗಚ್ಛಂತಿ ಪಿತೃಲೋಕಸ್ಥಾನ್ ಪ್ರಾಪಕಃ ಕೋಽತ್ರ ಗದ್ಯತೇ ॥ ೧ ॥

ಯದಿ ಮರ್ತ್ಯೋ ದ್ವಿಜೋ ಭುಙ್ಕ್ತೇ ಹೂಯತೇ ಯದಿ ಪಾವಕೇ ।
ಶುಭಾಶುಭಾತ್ಮಿಕೈಃ ಪ್ರೇತೈರ್ದತ್ತಂ ತದ್ಭುಜ್ಯತೇ ಕಥಂ ॥ ೨ ॥

॥ ಸೂತ ಉವಾಚ ॥

ವಸೂನ್ವದಂತಿ ಚ ಪಿತೄನ್ರುದ್ರಾಂಶ್ಚೈವ ಪಿತಾಮಹಾನ್ ।
ಪ್ರಪಿತಾಮಹಾಂಸ್ತಥಾದಿತ್ಯಾನಿತ್ಯೇವಂ ವೈದಿಕೀ ಶ್ರುತಿಃ ॥ ೩ ॥

ನಾಮ ಗೋತ್ರಂ ಪಿತೄಣಾಂ ತು ಪ್ರಾಪಕಂ ಹವ್ಯಕವ್ಯಯೋಃ ।
ಶ್ರಾದ್ಧಸ್ಯ ಮಂತ್ರಾಃ ಶ್ರದ್ಧಾ ಚ ಉಪಯೋಜ್ಯಾಽತಿಭಕ್ತಿತಃ ॥ ೪ ॥

---

೧. ಋಷಿಗಳು ಹೇಳಿದರು:—ಜನರು ಪಿತೃಕರ್ಮಗಳನ್ನೂ, ದೇವಕರ್ಮಗಳನ್ನೂ ಆಚರಿಸಬೇಕಾದುದು ಹೇಗೆ? ಪಿಂಡಾದಿಗಳು ಪಿತೃಲೋಕದಲ್ಲಿ ಇರುವವರಿಗೆ ಸೇರುವುದು ಹೇಗೆ? ಅವುಗಳನ್ನು ಕೊಂಡೊಯ್ಯುವವರು ಯಾರು?

೨. ಮನುಷ್ಯರೂಪನಾದ ಬ್ರಾಹ್ಮಣನೊಬ್ಬನು ಭೋಜನಮಾಡಿದ ಮಾತ್ರಕ್ಕೆ, ಅಗ್ನಿಯಲ್ಲಿ ಹೋಮಮಾಡಿದ ಮಾತ್ರಕ್ಕೆ, ಶುಭಾಶುಭ ಕರ್ಮಫಲಬದ್ಧರಾದ ಪ್ರೇತಗಳು ಅದನ್ನು ಭುಂಜಿಸುವುದೆಂತು?

೩. ಸೂತಮುನಿ ಹೇಳಿದನು:—ವಸುಗಳನ್ನು ಪಿತೃಗಳೆಂದೂ, ರುದ್ರರನ್ನು ಪಿತಾಮಹರೆಂದೂ, ಆದಿತ್ಯರನ್ನು ಪ್ರಪಿತಾಮಹರೆಂದೂ ಕರೆಯಬೇಕು. ವೇದದಲ್ಲಿ ಹೀಗೆ ಹೇಳಿರುವುದು.

೪. ಪಿತೃಗಳ ಹೆಸರೂ ಗೋತ್ರವೂ ಹವ್ಯಕವ್ಯಗಳನ್ನು ಅವರಿಗೆ ಒಯ್ಯುವುವು. ಶ್ರಾದ್ಧದ ಮಂತ್ರಗಳನ್ನು ಭಕ್ತಿಯಿಂದ ಉಚ್ಚರಿಸಿ ಕರ್ಮದಲ್ಲಿ ಶ್ರದ್ಧೆಯನ್ನು ವಹಿಸಬೇಕು.

ಅಗ್ನಿಷ್ವಾತ್ತಾದಯಸ್ತೇಷಾಮಾಧಿಪತ್ಯೇ ವ್ಯವಸ್ಥಿತಾಃ ।
ನಾಮಗೋತ್ರಕಾಲದೇಶಾ ಭವಾಂತರಗತಾನಪಿ ॥ ೫ ॥

ಪ್ರಾಣಿನಃ ಪ್ರೀಣಯಂತ್ಯೇತೇ ತದಾಹಾರತ್ವಮಾಗತಾಃ ।
ದೇವೋ ಯದಿ ಪಿತಾ ಜಾತಃ ಶುಭಕರ್ಮಾನುಯೋಗತಃ ॥ ೬ ॥

ತಸ್ಯಾನ್ನಮಮೃತಂ ಭೂತ್ವಾ ದಿವ್ಯತ್ವೇಽಪ್ಯನುಗಚ್ಛತಿ ।
ದೈತ್ಯತ್ವೇ ಭೋಗರೂಪೇಣ ಪಶುತ್ವೇ ಚ ತೃಣಂ ಭವೇತ್ ॥ ೭ ॥

ಶ್ರಾದ್ಧಾನ್ನಂ ವಾಯುರೂಪೇಣ ಸರ್ಪತ್ವೇಽಪ್ಯನುತಿಷ್ಠತಿ ।
ಪಾನಂ ಭವತಿ ಯಕ್ಷತ್ವೇ ರಾಕ್ಷಸತ್ವೇ ತಥಾಽಽಮಿಷಂ ॥ ೮ ॥

ದನುಜತ್ವೇ ತಥಾ ಮಾಯಾ ಪ್ರೇತತ್ವೇ ರುಧಿರೋದಕಂ ।
ಮನುಷ್ಯತ್ವೇಽನ್ನಪಾನಾನಿ ನಾನಾಭೋಗರಸಂ ಭವೇತ್ ॥ ೯ ॥

---

೫. ಅಗ್ನಿಷ್ವಾತ್ತಾದಿಗಳು ಪಿತೃಗಳೆಲ್ಲರ ಅಧಿಪತಿಗಳು. ನಾಮ, ಗೋತ್ರ, ಕಾಲ, ದೇಶಗಳನ್ನು ಉಚ್ಚಾರಮಾಡುವುದರಿಂದ, ಪಿತೃಗಳು ವಿಧವಿಧವಾದ ಜನ್ಮಗಳನ್ನು ತಳೆದಿದ್ದರೂ ಕೂಡ ತಮತಮಗೆ ಅನುಗುಣವಾದ ಆಹಾರರೂಪದಲ್ಲಿ ಶ್ರಾದ್ಧದತ್ತವಾದ ಅನ್ನವನ್ನು ಪಡೆದು ತೃಪ್ತಿಪಡುವರು.

೬-೭. ತಂದೆಯು ಶುಭಕರ್ಮಸಂಬಂಧದಿಂದ ದೇವತೆಯಾಗಿ ಜನಿಸಿದ್ದರೆ ಶ್ರಾದ್ಧಾನ್ನವು ಅಮೃತರೂಪವಾಗಿ ದಿವ್ಯದೇಹದಲ್ಲಿದ್ದರೂ ಅವನನ್ನು ಸೇರುವುದು. ದೈತ್ಯನಾಗಿದ್ದರೆ ಇಂದ್ರಿಯಸುಖರೂಪದಿಂದಲೂ, ಪಶುವಾಗಿದ್ದರೆ ತೃಣರೂಪದಿಂದಲೂ ಹೋಗುವುದು.

೮. ಪಿತೃಗಳು ಸರ್ಪದೇಹದಲ್ಲಿದ್ದರೆ ಶ್ರಾದ್ಧಾನ್ನವು ವಾಯುರೂಪದಿಂದಲೂ, ಯಕ್ಷರಾಗಿದ್ದರೆ ಪಾನರೂಪದಿಂದಲೂ, ರಾಕ್ಷಸರಾಗಿದ್ದರೆ ಮಾಂಸರೂಪದಿಂದಲೂ ಅವರನ್ನು ಸೇರುವುದು.

೯. ದನುಜರಾಗಿದ್ದರೆ ಮಾಯೆಯಾಗಿಯೂ, ಪ್ರೇತವಾಗಿದ್ದರೆ ರಕ್ತವಾಗಿಯೂ, ಮನುಷ್ಯರಾಗಿದ್ದರೆ ಅನ್ನಪಾನಾದಿರೂಪವಾದ ವಿವಿಧಭೋಗರಸವಾಗಿಯೂ ಆಗುವುದು.

**ರತಿಶಕ್ತಿಃ ಸ್ತ್ರಿಯಃ ಕಾಂತಾ ಭೋಜ್ಯಂ ಭೋಜನಶಕ್ತಿತಾ ।**
**ದಾನಶಕ್ತಿಃ ಸವಿಭವಾ ರೂಪಮಾರೋಗ್ಯಮೇವ ಚ** ॥೧೦॥

**ಶ್ರದ್ಧಾ ಪುಷ್ಪಮಿದಂ ಪ್ರೋಕ್ತಂ ಫಲಂ ಬ್ರಹ್ಮಸಮಾಗಮಃ ।**
**ಆಯುಃ ಪುತ್ರಾನ್ ಧನಂ ವಿದ್ಯಾಂ ಸ್ವರ್ಗಂ ಮೋಕ್ಷಂ ಸುಖಾನಿ ಚ** ॥೧೧॥

**ರಾಜ್ಯಂ ಚೈವ ಪ್ರಯಚ್ಛಂತಿ ಪ್ರೀತಾಃ ಪಿತೃಗಣಾ ನೃಣಾಂ ।**
**ಶ್ರೂಯತೇ ಚ ಪುರಾ ಮೋಕ್ಷಂ ಪ್ರಾಪ್ತಾಃ ಕೌಶಿಕಸೂನವಃ ।**
**ಪಂಚಭಿರ್ಜನ್ಮಸಂಬಂಧೈರ್ಗತಾ ವಿಷ್ಣೋಃ ಪರಂ ಪದಂ** ॥೧೨॥

**ಇತಿ ಶ್ರೀ ಮಾತ್ಸ್ಯೇ ಮಹಾಪುರಾಣೇ ಶ್ರಾದ್ಧಕಲ್ಪೇ ಫಲಾನುಗಮನಂ ನಾಮೈಕೋನವಿಂಶೋಽಧ್ಯಾಯಃ**

---

೧೦. ಶ್ರಾದ್ಧದಲ್ಲಿ ದಾನಮಾಡಿದ ಅನ್ನವು ಮನೋಹರವಾದ ರತಿಸಾಮರ್ಥ್ಯ, ಭೋಜ್ಯವಸ್ತು, ಭೋಜನಶಕ್ತಿ, ಸಕಲವಿಭವದಿಂದ ದಾನಮಾಡುವ ದಕ್ಷತೆ, ಸೌಂದರ್ಯ, ಆರೋಗ್ಯ ಈ ಆಕಾರವಾಗಿ ಪರಿಣಮಿಸಿ ಸ್ತ್ರೀಯರನ್ನು ಸೇರುವುದು.

೧೧. ಶ್ರದ್ಧೆಯೆಂಬುದೇ ಪುಷ್ಪ. ಬ್ರಹ್ಮಪ್ರಾಪ್ತಿಯೇ ಫಲ. ಪಿತೃಗಳು ತೃಪ್ತರಾದರೆ ಆಯುಸ್ಸು, ಸಂತಾನ, ಸಂಪತ್ತು, ವಿದ್ಯೆ, ಸ್ವರ್ಗ ಮೋಕ್ಷ, ಬಗೆಬಗೆಯ ಸುಖ, ರಾಜ್ಯಸಂಪತ್ತು ಇವೆಲ್ಲವನ್ನೂ ಮನುಷ್ಯರಿಗೆ ಕೊಡುವರು.

೧೨. ಶ್ರಾದ್ಧಾಚರಣೆಯಿಂದ ಕೌಶಿಕಪುತ್ರರು ಐದು ಜನ್ಮಗಳನ್ನೆತ್ತಿ ಮುಕ್ತರಾದರೆಂದೂ, ವಿಷ್ಣುವಿನ ದಿವ್ಯಸಾನ್ನಿಧ್ಯವನ್ನು ಸೇರಿದರೆಂದೂ ಕೇಳಿದ್ದೇವೆ.

## ಅಧ್ಯಾಯದ ಸಾರಾಂಶ

ವಸುಗಳು, ರುದ್ರರು ಮತ್ತು ಆದಿತ್ಯರು ಶ್ರಾದ್ಧ ದೇವತೆಗಳೆನಿಸಿಕೊಳ್ಳುವರು. ಇವರೇ ಕ್ರಮವಾಗಿ ಪಿತೃ-ಪಿತಾಮಹ-ಪ್ರಪಿತಾಮಹ-ಶಬ್ದವಾಚ್ಯರು. ಶ್ರಾದ್ಧ ಕರ್ತೃವಿನ ತಂದೆ ತಾಯಿ ಮುಂತಾದವರು ತಮ್ಮ ಕರ್ಮಾನುಸಾರವಾಗಿ ಬಗೆಬಗೆಯ ಜನ್ಮಗಳನ್ನೆತ್ತಿದ್ದರೂ, ಶ್ರಾದ್ಧಾನ್ನವು ಆಯಾ ದೇಹಗಳಿಗೆ ಅನುಗುಣವಾದ ಆಹಾರ ರೂಪದಿಂದ ಅವರನ್ನು ಸೇರಿ ತೃಪ್ತಿಯನ್ನು ಕೊಡುತ್ತದೆ. ಇದೆಲ್ಲವನ್ನೂ ವ್ಯವಸ್ಥೆಮಾಡ ತಕ್ಕವರು ಅಗ್ನಿಷ್ವಾತ್ತ ಮೊದಲಾದ ಪಿತೃದೇವತೆಗಳು. ಇವರು ತೃಪ್ತರಾದರೆ ಮನುಷ್ಯರಿಗೆ ಧನಕನಕಾದಿ ಸಕಲೇಷ್ಟಾರ್ಥಗಳನ್ನೂ ಕರುಣಿಸುವರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಶ್ರಾದ್ಧಕಲ್ಪದಲ್ಲಿ ಫಲಾನುಗಮನವೆಂಬ
ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು

## ಅಥ ಶ್ರೀಮತ್ಸ್ಯಮಹಾಪುರಾಣೇ ವಿಂಶೋಽಧ್ಯಾಯಃ

॥ ಋಷಯ ಊಚುಃ ॥

ಕಥಂ ಕೌಶಿಕದಾಯಾದಾಃ ಪ್ರಾಪ್ತಾಸ್ತೇ ಯೋಗಮುತ್ತಮಂ ।
ಪಂಚಭಿರ್ಜನ್ಮಸಂಬಂಧೈಃ ಕಥಂ ಕರ್ಮಕ್ಷಯೋ ಭವೇತ್ ॥ ೧ ॥

॥ ಸೂತ ಉವಾಚ ॥

ಕೌಶಿಕೋ ನಾಮ ಧರ್ಮಾತ್ಮಾ ಕುರುಕ್ಷೇತ್ರೇ ಮಹಾನೃಷಿಃ ।
ನಾಮತಃ ಕರ್ಮತಸ್ತಸ್ಯ ಸುತಾನ್ ಸಪ್ತ ನಿಬೋಧತ ॥ ೨ ॥

ಸ್ವಸೃಪಃ ಕ್ರೋಧನೋ ಹಿಂಸ್ರಃ ಪಿಶುನಃ ಕವಿರೇವ ಚ ।
ವಾಗ್ದುಷ್ಟಃ ಪಿತೃವರ್ತೀ ಚ ಗರ್ಗಶಿಷ್ಯಾಸ್ತದಾಽಭವನ್ ॥ ೩ ॥

ಪಿತರ್ಯುಪರತೇ ತೇಷಾಮಭೂದ್ದುರ್ಭಿಕ್ಷಮುಲ್ಬಣಂ ।
ಅನಾವೃಷ್ಟಿಶ್ಚ ಮಹತೀ ಸರ್ವಲೋಕಭಯಂಕರೀ ॥ ೪ ॥

---

೧. ಋಷಿಗಳು ಹೇಳಿದರು:—ಕೌಶಿಕನ ಪುತ್ರರು ಉತ್ತಮಗತಿಯನ್ನು ಎಂತು ಸೇರಿದರು ? ಐದು ಜನ್ಮಗಳಲ್ಲಿ ಅವರ ಕರ್ಮವೆಲ್ಲವೂ ಕ್ಷಯಿಸಿದ ಬಗೆ ಹೇಗೆ ?

೨. ಸೂತಪೌರಾಣಿಕನು ಹೇಳಿದನು:—ಕುರುಕ್ಷೇತ್ರದಲ್ಲಿ ಧರ್ಮಾತ್ಮನಾದ ಕೌಶಿಕನೆಂಬ ಮಹರ್ಷಿಯಿದ್ದನು. ಅವನಿಗೆ ಏಳು ಜನ ಮಕ್ಕಳಿದ್ದರು. ಅವರ ನಡತೆಯು ಹೆಸರಿಗೆ ತಕ್ಕಂತಿದ್ದಿತು.

೩. ಸ್ವಸೃಪ (ತನ್ನ ಇಷ್ಟಬಂದಂತೆ ನಡೆಯುವವನು), ಕ್ರೋಧನ (ಕೋಪಿಷ್ಠ), ಹಿಂಸ್ರ (ಹಿಂಸಕ), ಪಿಶುನ (ಚಾಡಿಕೋರ), ಕವಿ (ಕವನ ಮಾಡುವವನು), ವಾಗ್ದುಷ್ಟ (ಕೆಟ್ಟ ಮಾತಾಡುವವನು), ಪಿತೃವರ್ತಿ (ತಂದೆಯ ಇಷ್ಟದಂತೆ ನಡೆಯುವವನು) ಇವರೇ ಆ ಏಳು ಜನರು. ಇವರೆಲ್ಲರೂ ಗರ್ಗಮುನಿಯ ಶಿಷ್ಯರಾಗಿದ್ದರು.

೪. ಅವರ ತಂದೆ ಮೃತನಾದನು. ಭಯಂಕರವಾದ ಕ್ಷಾಮವೂ, ಸರ್ವ ಲೋಕದಾಹಕವಾದ ಅನಾವೃಷ್ಟಿಯೂ ತಲೆದೋರಿದುವು.

**ಗರ್ಗಾದೇಶಾದ್ವನೇ ದೋಗ್ಧ್ರೀಂ ರಕ್ಷಂತಸ್ತೇ ತಪೋಧನಾಃ ।**
**ಖಾದಾಮಃ ಕಪಿಲಾಮೇತಾಂ ವಯಂ ಕ್ಷುತ್ಪೀಡಿತಾ ಭೃಶಂ** ॥ ೫ ॥

**ಇತಿ ಚಿಂತಯತಾಂ ಪಾಪಂ ಲಘುಃ ಪ್ರಾಹ ತದಾನುಜಃ ।**
**ಯದ್ಯವಶ್ಯಮಿಯಂ ವಧ್ಯಾ ಶ್ರಾದ್ಧರೂಪೇಣ ಯೋಜ್ಯತಾಂ** ॥ ೬ ॥

**ಶ್ರಾದ್ಧೇ ನಿಯೋಜ್ಯಮಾನೇಯಂ ಪಾಪಾತ್ತ್ರಾಸ್ಯತಿ ನೋ ಧ್ರುವಂ ।**
**ಏವಂ ಕುರ್ವಿತ್ಯನುಜ್ಞಾತಃ ಪಿತೃವರ್ತೀ ತದಾನುಜೈಃ** ॥ ೭ ॥

**ಚಕ್ರೇ ಸಮಾಹಿತಃ ಶ್ರಾದ್ಧಮುಪಯುಜ್ಯ ಚ ತಾಂ ಪುನಃ ।**
**ದ್ವೌ ದೈವೇ ಭ್ರಾತರೌ ಕೃತ್ವಾ ಪಿತ್ರೇ ತ್ರೀನಪ್ಯನುಕ್ರಮಾತ್** ॥ ೮ ॥

**ತಥೈಕಮತಿಥಿಂ ಕೃತ್ವಾ ಶ್ರಾದ್ಧದಃ ಸ್ವಯಮೇವ ತು ।**
**ಚಕಾರ ಮಂತ್ರವಚ್ಛ್ರಾದ್ಧಂ ಸ್ಮರನ್ ಪಿತೃಪರಾಯಣಃ** ॥ ೯ ॥

---

೫. ಆ ಋಷಿಪುತ್ರರು ಗರ್ಗಮುನಿಯ ಅಪ್ಪಣೆಯಂತೆ ಕಾಡಿನಲ್ಲಿ ಹಸುವನ್ನು ಮೇಯಿಸುತ್ತಾ ಇದ್ದರು "ನಮಗೆ ಬಹಳ ಹಸಿವಾಗಿದೆ; ಈ ಹಸುವನ್ನು ತಿಂದುಬಿಡೋಣ" ಎಂದು ಅವರು ಯೋಚಿಸಿದರು.

೬. ಅವರು ಇಂತಹ ಪಾಪಕರವಾದ ಆಲೋಚನೆಯನ್ನು ಮಾಡಲು, ಎಲ್ಲರಿಗೂ ಕಿರಿಯವನಾದ ಪಿತೃವರ್ತಿಯು ಹೀಗೆ ಹೇಳಿದನು. "ಓ ಪಾಪಿಗಳೇ, ಈ ಹಸುವನ್ನು ಅವಶ್ಯವಾಗಿ ಕೊಲ್ಲಲೇ ಬೇಕಾದರೆ ಶ್ರಾದ್ಧರೂಪವಾಗಿ ಆ ಕಾರ್ಯವನ್ನು ಮಾಡಿರಿ; ಏಕೆಂದರೆ ಇದನ್ನು ಪಿತೃಕರ್ಮದಲ್ಲಿ ಉಪಯೋಗಿಸಿದರೆ ನಮ್ಮನ್ನು ಇದು ನಿಜವಾಗಿಯೂ ರಕ್ಷಿಸುವುದು."

೭-೯. ಹಾಗೆಯೇ ಮಾಡೆಂದು ಅವರು ಅಪ್ಪಣೆಯಿತ್ತರು. ಬಳಿಕ ಆ ಪಿತೃವರ್ತಿಯು ಹಸುವನ್ನು ಉಪಯೋಗಿಸಿ, ಸಹೋದರರೊಡಗೂಡಿ ಜಾಗರೂಕತೆಯಿಂದ ಶ್ರಾದ್ಧವನ್ನು ಮಾಡಿದನು. ಅಣ್ಣಂದಿರಲ್ಲಿ ಇಬ್ಬರು ವಿಶ್ವೇದೇವಸ್ಥಾನದವರು; ಮೂವರು ಪಿತೃಸ್ಥಾನದವರು; ಒಬ್ಬನು ಅತಿಥಿ; ತಾನೇ ಶ್ರಾದ್ಧಕರ್ತ. ಹೀಗೆ ಏರ್ಪಡಿಸಿಕೊಂಡು, ಪಿತೃಗಳನ್ನು ಸ್ಮರಿಸುತ್ತ, ಅವನು ಮಂತ್ರೋಕ್ತವಾಗಿ ಶ್ರಾದ್ಧವನ್ನು ನೆರವೇರಿಸಿದನು.

ವಿನಾ ಗವಾ ವತ್ಸಕೋऽಪಿ ಗುರವೇ ವಿನಿವೇದಿತಃ ।
ವ್ಯಾಘ್ರೇಣ ನಿಹತಾ ಧೇನುರ್ವತ್ಸೋऽಯಂ ಪ್ರತಿಗೃಹ್ಯತಾಂ ॥೧೦॥

ಏವಂ ಸಾ ಭಕ್ಷಿತಾ ಧೇನುಸ್ಸಪ್ತಭಿಸ್ತೈಸ್ತಪೋಧನೈಃ ।
ವೈದಿಕಂ ಬಲಮಾಶ್ರಿತ್ಯ ಕ್ರೂರೇ ಕರ್ಮಣಿ ನಿರ್ಭಯಾಃ ॥೧೧॥

ತತಃ ಕಾಲಾವಕೃಷ್ಟಾಸ್ತೇ ವ್ಯಾಧಾ ದಾಶಪುರೇऽಭವನ್ ।
ಜಾತಿಸ್ಮರತ್ವಂ ಪ್ರಾಪ್ತಾಸ್ತೇ ಪಿತೃಭಾವೇನ ಭಾವಿತಾಃ ॥೧೨॥

ಯತ್ಕೃತಂ ಕ್ರೂರಕರ್ಮಾಪಿ ಶ್ರಾದ್ಧರೂಪೇಣ ತೈಸ್ತದಾ ।
ತೇನ ತೇ ಭವನೇ ಜಾತಾ ವ್ಯಾಧಾನಾಂ ಕ್ರೂರಕರ್ಮಿಣಾಂ ॥೧೩॥

ಪಿತೃಣಾಂ ಚೈವ ಮಾಹಾತ್ಮ್ಯಾಜ್ಜ್ಞಾತಾ ಜಾತಿಸ್ಮರಾಸ್ತು ತೇ ।
ತೇ ತು ವೈರಾಗ್ಯಯೋಗೇನ ಆಸ್ಥಾಯಾನಶನಂ ಪುನಃ ॥೧೪॥

---

೧೦. "ಹುಲಿಯು ಹಸುವನ್ನು ಕೊಂದು ಬಿಟ್ಟಿತು; ಇಗೋ ! ಕರು ಮಾತ್ರ ಇಲ್ಲಿದೆ" ಎಂದು ಹೇಳಿ ಅವರು ತಬ್ಬಲಿಯಾದ ಕರುವನ್ನು ಗುರುವಿಗೆ ತಲುಪಿಸಿದರು.

೧೧. ಹೀಗೆ ಏಳು ಜನ ಮುನಿಪುತ್ರರೂ ಸೇರಿ ಆ ಹಸುವನ್ನು ತಿಂದು ಬಿಟ್ಟರು. ತಾವು ಮಾಡಿದುದು ಅತಿ ಭಯಂಕರವಾದ ವ್ಯಾಪಾರವಾದರೂ ಅದು ವೇದೋಕ್ತಕರ್ಮವೆಂಬ ನಂಬಿಕೆಯ ಬಲದಿಂದ ಅವರು ನಿರ್ಭಯರಾಗಿದ್ದರು.

೧೨. ಬಳಿಕ ಅವರು ಕಾಲಾಧೀನರಾಗಿ ದಾಶಪುರದಲ್ಲಿ ಬೇಡರಾಗಿ ಹುಟ್ಟಿದರು. ಅವರ ಮನಸ್ಸು ಪಿತೃಗಳಲ್ಲಿ ನೆಲೆಸಿದ್ದಿತಾದಕಾರಣ ಪೂರ್ವಜನ್ಮದ ಸ್ಮರಣವು ಅವರಿಗಿದ್ದಿತು.

೧೩. ಶ್ರಾದ್ಧರೂಪವಾದರೂ ಅವರು ಮಾಡಿದುದು ಕ್ರೂರಕರ್ಮವಾದ ಕಾರಣ, ಕೊಲೆಗೆಲಸಮಾಡುವ ಬೇಡರ ಮನೆಯಲ್ಲಿ ಅವರು ಹುಟ್ಟಬೇಕಾಯಿತು.

೧೪-೧೫. ಆದರೂ ಪಿತೃಗಳ ಮಾಹಾತ್ಮ್ಯದಿಂದ ಅವರಿಗೆ ಪೂರ್ವಜಾತಿಯ ಸ್ಮೃತಿಯುಂಟಾಯಿತು. ಅವರು ವೈರಾಗ್ಯಬಲದಿಂದ ಉಪವಾಸವ್ರತವನ್ನು ಕೈಗೊಂಡು ಕಾಲಂಜರಗಿರಿಯಲ್ಲಿ ಏಳು ಜಿಂಕೆಗಳಾಗಿ ಹುಟ್ಟಿದರು. ಆಗಲೂ

**ಜಾತಿಸ್ಮರಾಃ ಸಪ್ತ ಜಾತಾ ಮೃಗಾಃ ಕಾಲಂಜರೇ ಗಿರೌ ।**
**ನೀಲಕಂಠಸ್ಯ ಪುರತಃ ಪಿತೃಭಾವಾನುಭಾವಿತಾಃ ॥೧೫॥**

**ತತ್ರಾಪಿ ಜ್ಞಾನವೈರಾಗ್ಯಾತ್ಪ್ರಾಣಾನುತ್ಸೃಜ್ಯ ಧರ್ಮತಃ ।**
**ಲೋಕೈರವೇಕ್ಷ್ಯಮಾಣಾಸ್ತೇ ತೀರ್ಥಾಂತೇಽನಶನೇನ ತು ॥೧೬॥**

**ಮಾನಸೇ ಚಕ್ರವಾಕಾಸ್ತೇ ಸಂಜಾತಾಸ್ಸಪ್ತ ಯೋಗಿನಃ ।**
**ನಾಮತಃ ಕರ್ಮತಃ ಸರ್ವಾಞ್ಛೃಣುಧ್ವಂ ದ್ವಿಜಸತ್ತಮಾಃ ॥೧೭॥**

**ಸುಮನಾಃ ಕುಮುದಃ ಶುದ್ಧಶ್ಛಿದ್ರದರ್ಶೀ ಸುನೇತ್ರಕಃ ।**
**ಸುನೇತ್ರಶ್ಚಾಂಶುಮಾಂಶ್ಚೈವ ಸಪ್ತೈತೇ ಯೋಗಪಾರಗಾಃ ॥೧೮॥**

**ಯೋಗಭ್ರಷ್ಟಾಸ್ತ್ರಯಸ್ತೇಷಾಂ ಬಭ್ರಮುಶ್ಚಾಲ್ಪಚೇತನಾಃ ।**
**ದೃಷ್ಟ್ವಾ ವಿಭ್ರಾಜಮಾನಂ ತಮುದ್ಯಾನೇ ಸ್ತ್ರೀಭಿರನ್ವಿತಂ ॥೧೯॥**

**ಕ್ರೀಡಂತಂ ವಿವಿಧೈರ್ಭಾವೈರ್ಮಹಾಬಲಪರಾಕ್ರಮಂ ।**
**ಪಾಂಚಾಲಾನ್ವಯಸಂಭೂತಂ ಪ್ರಭೂತಬಲವಾಹನಂ ॥೨೦॥**

---

ಅವರಿಗೆ ಪೂರ್ವಜನ್ಮದ ಸ್ಮರಣೆಯಿದ್ದಿತು. ಅಲ್ಲಿ ನೆಲೆಸಿದ್ದ ಈಶ್ವರನ ಮೂರ್ತಿಯೆದುರಿಗೆ ಆ ಜಿಂಕೆಗಳು ಪಿತೃಗಳಲ್ಲೇ ಮನಸ್ಸನ್ನಿಟ್ಟು ಕಾಲ ಕಳೆಯುತ್ತಿದ್ದುವು.

೧೬. ಆ ಜನ್ಮದಲ್ಲೂ ಅವು ಜ್ಞಾನವೈರಾಗ್ಯಗಳಿಂದ ಕೂಡಿ, ಜನರೆಲ್ಲರಿಗೂ ತಿಳಿದಹಾಗೆ ಉಪವಾಸವ್ರತವನ್ನು ಕೈಗೊಂಡು, ಪುಣ್ಯತೀರ್ಥದ ಸಮೀಪದಲ್ಲಿ ಪ್ರಾಣಬಿಟ್ಟುವು. ಬಳಿಕ ಮಾನಸ ಸರೋವರದಲ್ಲಿ ಯೋಗಜ್ಞಾನವುಳ್ಳ ಏಳು ಚಕ್ರವಾಕಪಕ್ಷಿಗಳಾಗಿ ಜನ್ಮವೆತ್ತಿದುವು.

೧೭-೧೮. ನಡತೆಗೆ ಅನುಗುಣವಾದ ಆ ಏಳು ಹೆಸರುಗಳನ್ನು ಕೇಳಿ; ಸುಮನಸ (ವಿದ್ವಾಂಸ), ಕುಮುದ (ನೈದಿಲೆಯಂತೆ ಶುಭ್ರವಾದವನು), ಶುದ್ಧ (ನಿರ್ಮಲ), ಛಿದ್ರದರ್ಶೀ (ಲೋಪಗಳನ್ನರಿಯಬಲ್ಲವನು), ಸುನೇತ್ರಕ, ಸುನೇತ್ರ (ಲಕ್ಷಣವಾದ ಕಣ್ಣುಗಳಿರುವವನು), ಅಂಶುಮಂತ (ಕಾಂತಿಯುಕ್ತ) ಈ ಏಳು ಪಕ್ಷಿಗಳೂ ಯೋಗದಲ್ಲಿ ನೈಪುಣ್ಯವನ್ನು ಪಡೆದಿದ್ದುವು.

೧೯-೨೧. ಅವುಗಳಲ್ಲಿ ಮೂರು ಪಕ್ಷಿಗಳು ಯೋಗದಲ್ಲಿ ಸಿದ್ಧಿಯನ್ನು ಪಡೆಯದೆ ಇಂದ್ರಿಯಸುಖಗಳಿಗೆ ಮನಸ್ಸನ್ನು ಕೊಟ್ಟು ಅಲೆದಾಡತೊಡಗಿದುವು.

**ರಾಜ್ಯಕಾಮೋಽಭವಚ್ಚೈಕಸ್ತೇಷಾಂ ಮಧ್ಯೇ ಜಲೌಕಸಾಂ ।**
**ಪಿತೃವರ್ತೀ ಚ ಯೋ ವಿಪ್ರಃ ಶ್ರಾದ್ಧಕೃತ್ಪಿತೃವತ್ಸಲಃ ॥೨೧॥**
**ಅಪರೌ ಮಂತ್ರಿಣೌ ದೃಷ್ಟ್ವಾ ಪ್ರಭೂತಬಲವಾಹನೌ ।**
**ಮಂತ್ರಿತ್ವೇ ಚಕ್ರತುಶ್ಚೇಚ್ಛಾಮಸ್ಮಿನ್ಮರ್ತ್ಯೇ ದ್ವಿಜೋತ್ತಮಾಃ ॥೨೨॥**
**ತನ್ಮಧ್ಯೇ ಯೇ ತು ನಿಷ್ಕಾಮಾಸ್ತೇ ಬಭೂವುರ್ದ್ವಿಜೋತ್ತಮಾಃ ।**
**ವಿಭ್ರಾಜಪುತ್ರಸ್ತ್ವೇಕೋಽಭೂದ್ಬ್ರಹ್ಮದತ್ತ ಇತಿ ಸ್ಮೃತಃ ॥೨೩॥**
**ಮಂತ್ರಿಪುತ್ರೌ ತಥಾ ಚೋಭೌ ಕಂಡೀರಕಸುಬಾಲಕೌ ।**
**ಬ್ರಹ್ಮದತ್ತೋಽಭಿಷಿಕ್ತಸ್ಸ ಪುರೋಹಿತವಿಪಶ್ಚಿತಾ ॥೨೪॥**
**ಪಾಂಚಾಲರಾಜೋ ವಿಕ್ರಾಂತಃ ಸರ್ವಶಾಸ್ತ್ರವಿಶಾರದಃ ।**
**ಯೋಗವಿತ್ಸರ್ವಜಂತೂನಾಂ ರುತವೇತ್ತಾಽಭವತ್ತದಾ ॥೨೫॥**

---

ಒಂದು ದಿನ ಮಹಾಬಲಪರಾಕ್ರಮನಾದ ಪಾಂಚಾಲರಾಜವಂಶದ ವಿಭ್ರಾಜನೆಂಬ ಅರಸನು ವಿಪುಲವಾದ ಸೈನ್ಯದೊಡನೆಯೂ ವಾಹನಗಳೊಡನೆಯೂ ಬಂದು, ಸ್ತ್ರೀಯರೊಡಗೂಡಿ ಉದ್ಯಾನದಲ್ಲಿ ವಿಹರಿಸುತ್ತಿದ್ದನು. ಹಿಂದೆ ಪಿತೃವರ್ತಿಯೆಂಬ ಬ್ರಾಹ್ಮಣನಾಗಿ ಭಕ್ತಿಯಿಂದ ಶ್ರಾದ್ಧವನ್ನು ಮಾಡಿದ್ದ ಚಕ್ರವಾಕಪಕ್ಷಿಯು ಆ ರಾಜನನ್ನು ನೋಡಿ ತಾನೂ ರಾಜ್ಯವನ್ನು ಬಯಸಿತು.

೨೨. ಮಿಕ್ಕೆರಡು ಪಕ್ಷಿಗಳು ಪ್ರಭೂತ, ಬಲವಾಹನ ಎಂಬ ಇಬ್ಬರು ಮಂತ್ರಿಗಳನ್ನು ಕಂಡು, ಮನುಷ್ಯಜನ್ಮವನ್ನೆತ್ತಿ ತಾವೂ ಮಂತ್ರಿಗಳಾಗಬೇಕೆಂದು ಬಯಸಿದುವು.

೨೩. ಯಾವ ಬಗೆಯ ಆಸೆಯೂ ಇಲ್ಲದ ಮಿಕ್ಕ ಎರಡು ಪಕ್ಷಿಗಳಾದರೋ ಬ್ರಾಹ್ಮಣೋತ್ತಮರಾಗಿ ಜನಿಸಿದುವು. ಪಿತೃವರ್ತಿಯಾಗಿದ್ದ ಪಕ್ಷಿಯು ವಿಭ್ರಾಜನ ಮಗನಾಗಿ ಬ್ರಹ್ಮದತ್ತನೆಂಬ ಹೆಸರನ್ನು ಪಡೆಯಿತು. ಉಳಿದುವೆರಡೂ ಕಂಠೀರಕ, ಸುಬಾಲಕ ಎಂಬ ಹೆಸರಿನಿಂದ ಮಂತ್ರಿಪುತ್ರರಾದುವು.

೨೪-೨೫. ಬ್ರಹ್ಮದತ್ತನು ಜ್ಞಾನಿಯಾದ ಪುರೋಹಿತನಿಂದ ಪಟ್ಟಾಭಿಷೇಕವನ್ನು ಮಾಡಿಸಿಕೊಂಡು ಪಾಂಚಾಲದೇಶದ ಅರಸನಾದನು. ಅವನಿಗೆ ಸರ್ವಶಾಸ್ತ್ರಗಳಲ್ಲೂ ಪಾಂಡಿತ್ಯವಿತ್ತು; ಯೋಗದಲ್ಲಿ ನೈಪುಣ್ಯವಿತ್ತು; ಸಕಲಜಂತುಗಳ ಭಾಷೆಯೂ ಪರಿಚಿತವಾಗಿತ್ತು.

**ತಸ್ಯ ರಾಜ್ಞೋಽಭವದ್ಭಾರ್ಯಾ ದೇವಲಸ್ಯಾಽಽತ್ಮಜಾ ಶುಭಾ ।**
**ಸನ್ನತಿರ್ನಾಮ ವಿಖ್ಯಾತಾ ಕಪಿಲಾ ಯಾಽಭವತ್ಪುರಾ ॥೨೬॥**

**ಪಿತೃಕಾರ್ಯೇ ನಿಯುಕ್ತತ್ವಾದಭವದ್ಬ್ರಹ್ಮವಾದಿನೀ ।**
**ತಯಾ ಚಕಾರ ಸಹಿತಃ ಸ ರಾಜ್ಯಂ ರಾಜನಂದನಃ ॥೨೭॥**

**ಕದಾಚಿದುದ್ಯಾನಗತಸ್ತಯಾ ಸಹ ಸ ಪಾರ್ಥಿವಃ ।**
**ದದರ್ಶ ಕೀಟಮಿಥುನಮನಂಗಕಲಹಾಕುಲಂ ॥೨೮॥**

**ಪಿಪೀಲಿಕಾಮನುನಯನ್ ಪರಿತಃ ಕೀಟಕಾಮುಕಃ ।**
**ಪಂಚಬಾಣಾಭಿತಪ್ತಾಂಗಃ ಸಗದ್ಗದಮುವಾಚ ಹ ॥೨೯॥**

**ನ ತ್ವಯಾ ಸದೃಶೀ ಲೋಕೇ ಕಾಮಿನೀ ವಿದ್ಯತೇ ಕ್ವಚಿತ್ ।**
**ಮಧ್ಯಕ್ಷಾಮಾಽತಿಜಘನಾ ಬೃಹದ್ವಕ್ಷೋಽಭಿಗಾಮಿನೀ ॥೩೦॥**

**ಸುವರ್ಣವರ್ಣಾ ಸುಶ್ರೋಣೀ ಮಂಜೂಕಾ ಚಾರುಹಾಸಿನೀ ।**
**ಸುಲಕ್ಷ್ಯನೇತ್ರರಸನಾ ಗುಡಶರ್ಕರವತ್ಸಲಾ ॥೩೧॥**

---

೨೬-೨೭. ದೇವಲನ ಪುತ್ರಿಯಾದ ಸನ್ನತಿಯೆಂಬವಳು ಆ ರಾಜನ ಅರಸಿಯಾಗಿದ್ದಳು. ಹಿಂದೆ ಗರ್ಗಮುನಿಯ ಹಸುವಾಗಿದ್ದವಳು ಇವಳೇ. ಪಿತೃಕಾರ್ಯಕ್ಕೆ ತನ್ನ ಶರೀರವನ್ನು ಉಪಯೋಗಿಸಿದ ಕಾರಣ ಇವಳು ಬ್ರಹ್ಮಜ್ಞಾನಿಯಾಗಿದ್ದಳು. ರಾಜಪುತ್ರನು ಇವಳೊಡಗೂಡಿ ರಾಜ್ಯಭಾರಮಾಡುತ್ತಿದ್ದನು.

೨೮. ಒಂದು ದಿನ ಆ ರಾಜನು ಅವಳೊಡನೆ ಉದ್ಯಾನವಲ್ಲಿ ಸಂಚರಿಸುತ್ತಿರಲು, ಪ್ರಣಯಕಲಹವಲ್ಲಿ ತೊಡಗಿದ್ದ ಕೀಟದಂಪತಿಗಳನ್ನು ನೋಡಿದನು. (ಕೀಟ-ಹುಳು).

೨೯. ಮನ್ಮಥನ ಬಾಣದಿಂದ ನೊಂದ ಗಂಡಿರುವೆಯು ಹೆಣ್ಣಿರುವೆಯನ್ನು ಪರಿಪರಿಯಾಗಿ ಸಮಾಧಾನಪಡಿಸುತ್ತ ಗದ್ಗದ ಧ್ವನಿಯಿಂದ ಇಂತೆಂದಿತು.

೩೦-೩೧. "ನಿನ್ನಂತಹ ಹೆಣ್ಣು ಲೋಕದಲ್ಲೆಲ್ಲೂ ಇಲ್ಲ. ಸಣ್ಣನಡು, ದೊಡ್ಡ ಜಘನ, ಉಬ್ಬಿದೆದೆ, ಮೆಲ್ನಡೆ, ಚಿನ್ನದ ಬಣ್ಣ, ಅಂದವಾದ ನಡು, ಇಂಪಾದ ದನಿ, ಮುಗುಳುನಗೆ ಇವುಗಳಿಂದ ನೀನು ಮೆರೆಯುತ್ತಿರುವೆ. ನಿನ್ನ ಕಣ್ಣುಗಳೂ ನಾಲಗೆಯೂ ಲಕ್ಷಣವಾಗಿವೆ. ಬೆಲ್ಲ ಸಕ್ಕರೆಗಳನ್ನು ಕಂಡರೆ ನಿನಗೆ ಬಹಳ ಇಷ್ಟ.

**ಭೋಕ್ಷ್ಯಸೇ ಮಯಿ ಭುಕ್ತೇ ತ್ವಂ ಸ್ನಾಸಿ ಸ್ನಾತೇ ತಥಾ ಮಯಿ ।**
**ಪ್ರೋಷಿತೇ ಸತಿ ದೀನಾ ತ್ವಂ ಕ್ರುದ್ಧೇಽಪಿ ಭಯಚಂಚಲಾ ॥೩೨॥**

**ಕಿಮರ್ಥಂ ವದ ಕಲ್ಯಾಣಿ ಸರೋಷವದನಾ ಸ್ಥಿತಾ ।**
**ಸಾ ತಮಾಹ ಸಕೋಪಾ ತು ಕಿಮಾಲಪಸಿ ಮಾಂ ಶಠ ॥೩೩॥**

**ತ್ವಯಾ ಮೋದಕಚೂರ್ಣಂ ತು ಮಾಂ ಪಿಹಾಯ ವಿನೇಷ್ಯತಾ ।**
**ಪ್ರದತ್ತಂ ಸಮತಿಕ್ರಾಂತೇ ದಿನೇಽನ್ಯಸ್ಯಾಃ ಸಮನ್ಮಥ ॥೩೪॥**

**॥ ಪಿಪೀಲಿಕ ಉವಾಚ ॥**

**ತ್ವತ್ಸಾದೃಶ್ಯಾನ್ಮಯಾ ದತ್ತಮನ್ಯಸ್ಯೈ ವರವರ್ಣಿನಿ ।**
**ತದೇಕಮಪರಾಧಂ ಮೇ ಕ್ಷಂತುಮರ್ಹಸಿ ಭಾಮಿನಿ ॥೩೫॥**

**ನೈತದೇವಂ ಕರಿಷ್ಯಾಮಿ ಪುನಃ ಕ್ವಾಪೀಹ ಸುವ್ರತೇ ।**
**ಸ್ಪೃಶಾಮಿ ಪಾದೌ ಸತ್ಯೇನ ಪ್ರಸೀದ ಪ್ರಣತಸ್ಯ ಮೇ ॥೩೬॥**

**॥ ಸೂತ ಉವಾಚ ॥**

**ಇತಿ ತದ್ವಚನಂ ಶ್ರುತ್ವಾ ಸಾ ಪ್ರಸನ್ನಾಽಭವತ್ತತಃ ।**
**ಆತ್ಮಾನಮರ್ಪಯಾಮಾಸ ಮೋಹನಾಯ ಪಿಪೀಲಿಕಾ ॥೩೭॥**

---

ನಾನು ಊಟಮಾಡಿದರೆ ನೀನೂ ಮಾಡುವೆ; ಸ್ನಾನಮಾಡಿದರೆ ನೀನೂ ಸ್ನಾನ ಮಾಡುವೆ; ನಾನು ಕೋಪಿಸಿಕೊಂಡರೆ ಭಯದಿಂದ ನಡುಗುವೆ. ಹೀಗಿರುವಾಗ, ಎಲೌ ಸುಂದರೀ, ಬಾಯಿಬಿಟ್ಟು ಹೇಳು; ಮುಖದಲ್ಲೇಕೆ ನಿನಗಿಷ್ಟೊಂದು ಕೋಪ ?''

೩೩-೩೪. ಹೆಣ್ಣಿರುವೆ ಕೋಪದಿಂದ ಹೇಳಿತು. "ಎಲೈ ವಂಚಕಾ, ನನ್ನೊಡನೇಕೆ ಮಾತನಾಡುವೆ; ಎಲೈ ಕಾಮುಕನೇ, ನಿನ್ನೆಯ ದಿನ ಮಿಠಾಯಿಚೂರನ್ನು ತೆಗೆದುಕೊಂಡು ಹೋಗಿ ನನ್ನನ್ನು ಬಿಟ್ಟು ಬೇರೆಯವಳಿಗೆ ನೀನು ಕೊಡಲಿಲ್ಲವೆ ?"

೩೫-೩೬. ಗಂಡಿರುವೆ ಹೇಳಿತು.—"ಎಲೌ ಮಂಗಳಾಂಗೀ, ನಿನ್ನಂತೆಯೇ ಇದ್ದ ಕಾರಣ ಅವಳಿಗೆ ಅದನ್ನು ಕೊಟ್ಟೆನು. ಈ ನನ್ನದೊಂದು ತಪ್ಪನ್ನು ಮನ್ನಿಸು. ಓ ಪತಿವ್ರತೇ, ಮತ್ತೆಂದಿಗೂ ಹೀಗೆ ಮಾಡುವುದಿಲ್ಲ; ನಿನ್ನ ಪಾದಗಳನ್ನು ಮುಟ್ಟಿ ಹೇಳುತ್ತೇನೆ; ಇಗೋ! ನಮಸ್ಕಾರಮಾಡುವೆನು; ಪ್ರಸನ್ನಳಾಗು."

೩೭. ಸೂತಪೌರಾಣಿಕನು ಹೇಳಿದನು.—ಈ ಮಾತನ್ನು ಕೇಳಿ ಹೆಣ್ಣಿರುವೆಯು ಕೋಪವನ್ನು ಬಿಟ್ಟು ಪ್ರಸನ್ನವಾಯಿತು. ಮೋಹಪಾಶವನ್ನು ಬೀರಿ ತನ್ನ ಪತಿಗೆ ಆಲಿಂಗನ ಸೌಖ್ಯವನ್ನು ಕೊಟ್ಟಿತು.

**ಬ್ರಹ್ಮದತ್ತೋಽಪ್ಯಶೇಷಂ ತಂ ಜ್ಞಾತ್ವಾ ವಿಸ್ಮಯಮಾಗಮತ್ ।**
**ಸರ್ವಸತ್ವರುತಜ್ಞತ್ವಾತ್ಪ್ರಸಾದಾಚ್ಚಕ್ರಪಾಣಿನಃ ॥೩೮॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಶ್ರಾದ್ಧಕಲ್ಪೇ ಶ್ರಾದ್ಧಮಾಹಾತ್ಮ್ಯೇ ಪಿಪೀಲಿಕಾವಹಾಸೋ ನಾಮ ವಿಂಶೋಽಧ್ಯಾಯಃ**

---

೩೮. ಶ್ರೀ ಮಹಾವಿಷ್ಣುವಿನ ಅನುಗ್ರಹದಿಂದ ಎಲ್ಲ ಜಂತುಗಳ ಮಾತನ್ನೂ ಅರಿತಿದ್ದ ಕಾರಣ ಬ್ರಹ್ಮದತ್ತನು ಅದೆಲ್ಲವನ್ನೂ ಕೇಳಿ ಮನಸ್ಸಿನಲ್ಲಿ ಬಹಳ ಆಶ್ಚರ್ಯಪಟ್ಟನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯವು ಶ್ರಾದ್ಧದ ಮಹಿಮೆಯನ್ನು ತಿಳಿಸುತ್ತದೆ.

ಕೌಶಿಕಮುನಿಗೆ ಏಳು ಜನ ಮಕ್ಕಳಿದ್ದರು. ಅವರು ಗರ್ಗಮಹರ್ಷಿಯ ಶಿಷ್ಯರಾಗಿ ಅವರ ಹಸುವನ್ನು ಕಾಡಿನಲ್ಲಿ ಮೇಯಿಸುತ್ತಿದ್ದರು. ದೇಶವೆಲ್ಲೆಲ್ಲ ಕ್ಷಾಮವು ಆವರಿಸಿರಲು ಅವರು ಹಸಿವಿನ ಬಾಧೆಯನ್ನು ತಾಳಲಾರದೆ ಒಂದುದಿನ ಆ ಹಸುವನ್ನು ಕೊಂದು, ಅದರ ಮಾಂಸದಿಂದ ಪಿತೃಶ್ರಾದ್ಧವನ್ನು ನೆರವೇರಿಸಿ, ತಾವೂ ಹೊಟ್ಟೆತುಂಬ ತಿಂದರು. ಆ ಪಾಪಕರ್ಮದ ಫಲವಾಗಿ ಅವರಿಗೆ ಬೇಡರ ಜನ್ಮವೂ, ಜಿಂಕೆಯ ಜನ್ಮವೂ, ತರುವಾಯ ಚಕ್ರವಾಕಪಕ್ಷಿಯ ಜನ್ಮವೂ ಒಂದಾದ ಮೇಲೊಂದು ಬಂದವು. ಆದರೆ ಪಿತೃಗಳ ಅನುಗ್ರಹದಿಂದ ಅವರಿಗೆ ಪೂರ್ವಜನ್ಮದ ಸ್ಮರಣೆ ಮಾತ್ರ ಚೆನ್ನಾಗಿತ್ತು. ಅದರ ಫಲದಿಂದ ಎಲ್ಲ ಜನ್ಮಗಳಲ್ಲಿಯೂ ಅವರು ಜ್ಞಾನವೈರಾಗ್ಯಶಾಲಿಗಳಾಗಿದ್ದರು.

ಆ ಏಳು ಚಕ್ರವಾಕಪಕ್ಷಿಗಳಲ್ಲಿ ಒಂದು ಪಾಂಚಾಲದೇಶದ ರಾಜನಿಗೆ ಮಗನಾಗಿ ಹುಟ್ಟಿ ಬ್ರಹ್ಮದತ್ತನೆಂಬ ಹೆಸರನ್ನು ಪಡೆಯಿತು. ಆ ರಾಜಪುತ್ರನು ಸಕಲ ಶಾಸ್ತ್ರಜ್ಞನೂ, ಸಕಲ ಜೀವಜಂತುಗಳ ಭಾಷೆಯನ್ನು ಬಲ್ಲವನೂ ಆಗಿದ್ದನು. ಒಂದು ದಿನ ಉದ್ಯಾನದಲ್ಲಿ ರಾಣಿಯೊಡನೆ ಸಂಚರಿಸುತ್ತಿರುವಾಗ ಅವನು ಪ್ರಣಯ ಕಲಹದಲ್ಲಿ ತೊಡಗಿದ್ದ ಹೆಣ್ಣು ಮತ್ತು ಗಂಡಿರುವೆಗಳ ಸಂಭಾಷಣೆಯನ್ನು ಕೇಳಿ ಬಹಳ ವಿಸ್ಮಿತನಾದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಶ್ರಾದ್ಧಕಲ್ಪದೊಳಗೆ ಶ್ರಾದ್ಧಮಾಹಾತ್ಮ್ಯದಲ್ಲಿ ಇರುವೆಗಳ ಪರಿಹಾಸವೆಂಬ ಇಪ್ಪತ್ತನೆಯ ಅಧ್ಯಾಯವು ಮುಗಿದುದು

## ಅಥ ಶ್ರೀಮತ್ಸ್ಯಮಹಾಪುರಾಣೇ ಏಕವಿಂಶೋಽಧ್ಯಾಯಃ

|| ಋಷಯ ಊಚುಃ ||

ಕಥಂ ಸತ್ವರುತಜ್ಞೋಽಭೂದ್ಬ್ರಹ್ಮದತ್ತೋ ಧರಾತಲೇ ।
ತಚ್ಚಾಭವತ್ಕಸ್ಯ ಕುಲೇ ಚಕ್ರವಾಕಚತುಷ್ಟಯಂ || ೧ ||

|| ಸೂತ ಉವಾಚ ||

ತಸ್ಮಿನ್ನೇವ ಪುರೇ ಜಾತಾಸ್ತೇ ಚ ಚಕ್ರಾಹ್ವಯಾಸ್ತದಾ ।
ವೃದ್ಧದ್ವಿಜಸ್ಯ ದಾಯಾದಾ ವಿಪ್ರಾ ಜಾತಿಸ್ಮರಾಃ ಪುರಾ || ೨ ||
ಧೃತಿಮಾಂಸ್ತತ್ವದರ್ಶೀ ಚ ವಿದ್ಯಾಚಂಡ ಸ್ತಪೋತ್ಸುಕಃ ।
ನಾಮತಃ ಕರ್ಮತಶ್ಚೈತೇ ಸುದರಿದ್ರಸ್ಯ ತೇ ಸುತಾಃ || ೩ ||
ತಪಸೇ ಬುದ್ಧಿರಭವತ್ತದಾ ತೇಷಾಂ ದ್ವಿಜನ್ಮನಾಂ ।
ಯಾಸ್ಯಾಮಃ ಪರಮಾಂ ಸಿದ್ಧಿಮಿತ್ಯೂಚುಸ್ತೇ ದ್ವಿಜೋತ್ತಮಾಃ || ೪ ||

---

೧. ಋಷಿಗಳು ಹೇಳಿದರು.—ಬ್ರಹ್ಮದತ್ತನು ಪ್ರಾಣಿಗಳ ಮಾತನ್ನು ಅರ್ಥ ಮಾಡಿಕೊಂಡ ಬಗೆ ಹೇಗೆ? ಉಳಿದ ನಾಲ್ಕು ಚಕ್ರವಾಕ ಪಕ್ಷಿಗಳು ಯಾವ ವಂಶದಲ್ಲಿ ಜನಿಸಿದುವು?

೨. ಸೂತಪೌರಾಣಿಕನು ಹೇಳಿದನು.—ಆ ಚಕ್ರವಾಕಗಳೂ ಕೂಡ ಬ್ರಹ್ಮದತ್ತನ ಪಟ್ಟಣದಲ್ಲೇ ಒಬ್ಬಾನೊಬ್ಬ ವೃದ್ಧ ಬ್ರಾಹ್ಮಣಸಿಗೆ ಮಕ್ಕಳಾಗಿ ಹುಟ್ಟಿದುವು. ಅವರಿಗೆ ಎಂದಿನಂತೆ ಪೂರ್ವಜಾತಿಯ ಸ್ಮರಣೆಯಿತ್ತು.

೩. ಧೃತಿಮಂತ, ತತ್ವದರ್ಶಿ, ವಿದ್ಯಾಚಂಡ, ತಪೋತ್ಸುಕ ಎಂದು ಆ ನಾಲ್ವರ ಹೆಸರು. ಅವರ ಗುಣಗಳು ಹೆಸರಿಗೆ ತಕ್ಕಂತೆ ಇದ್ದುವು. ಸುದರಿದ್ರನೆಂಬುದು ಅವರ ತಂದೆಯ ಹೆಸರು.

೪. ಆ ಬ್ರಾಹ್ಮಣರಿಗೆ ತಪಸ್ಸುಮಾಡಬೇಕೆಂದು ಬುದ್ಧಿ ಹುಟ್ಟಿತು. "ನಾವು ತಪಸ್ಸಿನಲ್ಲಿ ಒಳ್ಳೆಯ ಸಿದ್ಧಿಯನ್ನು ಪಡೆಯೋಣ" ಎಂದು ಅವರು ಒಬ್ಬರಿಗೊಬ್ಬರು ಹೇಳಿಕೊಂಡರು.

ತತಸ್ತದ್ವಚನಂ ಶ್ರುತ್ವಾ ಸುದರಿದ್ರೋ ಮಹಾತಪಾಃ ।
ಉವಾಚ ದೀನಯಾ ವಾಚಾ ಕಿಮೇತದಿತಿ ಪುತ್ರಕಾಃ ॥ ೫ ॥

ಅಧರ್ಮ ಏಷ ಇತಿ ವಃ ಪಿತಾ ತಾನಭ್ಯವಾರಯತ್ ।
ವೃದ್ಧಂ ಪಿತರಮುತ್ಸೃಜ್ಯ ದರಿದ್ರಂ ವನವಾಸಿನಃ ॥ ೬ ॥

ಕೋ ನು ಧರ್ಮೋಽತ್ರ ಭವಿತಾ ಮತ್ತ್ಯಾಗಾದ್ಗತಿರೇವ ವಾ ।
ಊಚುಸ್ತೇ ಕಲ್ಪಿತಾ ವೃತ್ತಿಸ್ತವ ತಾತ ವದಸ್ವ ತತ್ ॥ ೭ ॥

ವಿತ್ತಮೇತತ್ಪುರೋ ರಾಜ್ಞಃ ಸ ತೇ ದಾಸ್ಯತಿ ಪುಷ್ಕಲಂ ।
ಧನಂ ಗ್ರಾಮಸಹಸ್ರಾಣಿ ಪ್ರಭಾತೇ ಪಠತಸ್ತವ ॥ ೮ ॥

ಯೇ ವಿಪ್ರಮುಖ್ಯಾಃ ಕುರುಜಾಂಗಲೇಷು
ದಾಶಾಸ್ತಥಾ ದಾಶಪುರೇ ಮೃಗಾಶ್ಚ ।
ಕಾಲಂಜರೇ ಸಪ್ತ ಚ ಚಕ್ರವಾಕಾ
ಯೇ ಮಾನಸೇ ತೇ ವಯಮತ್ರ ಸಿದ್ಧಾಃ ॥ ೯ ॥

---

೫-೬. ಬಳಿಕ ಆ ಮಾತನ್ನು ಕೇಳಿ ಮಹಾತಪಸ್ವಿಯಾದ ಸುದರಿದ್ರನು ದೀನ ವಚನದಿಂದ ಇಂತೆಂದನು. "ಮಕ್ಕಳಿರಾ, ಇದೇನು? ಇದು ಧರ್ಮವಲ್ಲ; ಮುದುಕನೂ ಬಡವನೂ ಆದ ತಂದೆಯನ್ನು ಬಿಟ್ಟು ಕಾಡಿಗೆ ಹೋಗುವಿರಾ? ಇದೆಂತಹ ಧರ್ಮ? ನನ್ನನ್ನು ತೊರೆದರೆ ನಿಮಗೆ ಸದ್ಗತಿ ತಾನೆ ಹೇಗೆ ದೊರೆತೀತು?"

೭-೮. "ಅಪ್ಪಾ, ನಿನಗೆ ಜೀವನವು ಸಿದ್ಧವಾಗಿದೆ" ಎಂದು ಅವರು ಹೇಳಿದರು. "ಅದು ಹೇಗೆ? ಹೇಳಿ" ಎಂದು ಅವನು ಕೇಳಿದನು." ನಾಳೆ ಬೆಳಗ್ಗೆ ರಾಜನ ಮುಂದೆ ಈ ಶ್ಲೋಕವನ್ನು ಹೇಳು; ಅವನು ನಿನಗೆ ಯಥೇಚ್ಛವಾಗಿ ಹಣವನ್ನೂ, ಸಾವಿರಾರು ಗ್ರಾಮಗಳನ್ನೂ ಕೊಡುವನು" ಎಂದು ಅವರು ಉತ್ತರವಿತ್ತರು.

೯. "ಕುರುಜಾಂಗಲ ದೇಶದಲ್ಲಿ ಬ್ರಾಹ್ಮಣಶ್ರೇಷ್ಠರಾಗಿಯೂ, ದಾಶಪುರದಲ್ಲಿ ಬೇಡರಾಗಿಯೂ, ಕಾಲಂಜರ ಗಿರಿಯಲ್ಲಿ ಜಿಂಕೆಗಳಾಗಿಯೂ, ಬಳಿಕ ಮಾನಸ ಸರೋವರದಲ್ಲಿ ಚಕ್ರವಾಕ ಪಕ್ಷಿಗಳಾಗಿಯೂ ಇದ್ದ ನಾವೇ ಈಗ ಇಲ್ಲಿ ಯೋಗಸಿದ್ಧರಾದ ಬ್ರಾಹ್ಮಣರಾಗಿ ಜನಿಸಿದ್ದೇವೆ."

ಇತ್ಯುಕ್ತ್ವಾ ಪಿತರಂ ಜಗ್ಮುಸ್ತೇ ವನಂ ತಪಸೇ ಪುನಃ ।
ವೃದ್ಧೋಽಪಿ ರಾಜಭವನಂ ಜಗಾಮಾತ್ಮಾರ್ಥಸಿದ್ಧಯೇ ॥೧೦॥

ಅನಘೋ ನಾಮ ವೈಭ್ರಾಜಃ ಪಾಂಚಾಲಾಧಿಪತಿಃ ಪುರಾ ।
ಪುತ್ರಾರ್ಥೀ ದೇವದೇವೇಶಂ ಹರಿಂ ನಾರಾಯಣಂ ಪ್ರಭುಂ ॥೧೧॥

ಆರಾಧಯಾಮಾಸ ವಿಭುಂ ತೀವ್ರವ್ರತಪರಾಯಣಃ ।
ತತಃ ಕಾಲೇನ ಮಹತಾ ತುಷ್ಟಸ್ತಸ್ಯ ಜನಾರ್ದನಃ ॥೧೨॥

ವರಂ ವೃಣೀಷ್ವ ಭದ್ರಂ ತೇ ಹೃದಯೇನೇಪ್ಸಿತಂ ನೃಪ ।
ಏವಮುಕ್ತಸ್ತು ದೇವೇನ ವವ್ರೇ ಸ ವರಮುತ್ತಮಂ ॥೧೩॥

ಪುತ್ರಂ ಮೇ ದೇಹಿ ದೇವೇಶ ಮಹಾಬಲಪರಾಕ್ರಮಂ ।
ಪಾರಗಂ ಸರ್ವಶಾಸ್ತ್ರಾಣಾಂ ಧಾರ್ಮಿಕಂ ಯೋಗಿನಾಂ ಪರಂ ॥೧೪॥

ಸರ್ವಸತ್ವರುತಜ್ಞಂ ಮೇ ದೇಹಿ ಯೋಗಿನಮಾತ್ಮಜಂ ।
ಏವಮಸ್ತ್ವಿತಿ ವಿಶ್ವಾತ್ಮಾ ತಮಾಹ ಪರಮೇಶ್ವರಃ ॥೧೫॥

---

೧೦. ತಂದೆಗೆ ಹೀಗೆ ಹೇಳಿ ಅವರು ಮತ್ತೆ ತಪಸ್ಸಿಗಾಗಿ ವನಕ್ಕೆ ತೆರಳಿದರು. ಆ ವೃದ್ಧನೂ ಸಹ ಸ್ವಪ್ರಯೋಜನಲಾಭಕ್ಕಾಗಿ ಅರಮನೆಗೆ ಹೋದನು.

೧೧. ಪೂರ್ವದಲ್ಲಿ ವಿಭ್ರಾಜಪುತ್ರನೂ ಪಾಂಚಾಲಾಧಿಪತಿಯೂ ಆದ ಅನಘ ನೆಂಬವನು ಪುತ್ರಾಪೇಕ್ಷೆಯಿಂದ ದೇವದೇವನಾದ ನಾರಾಯಣನನ್ನು ಅತಿಕಷ್ಟಕರ ವಾದ ನಿಯಮಗಳಿಂದ ಆರಾಧಿಸಿದನು.

೧೨. ಬಹು ಕಾಲಾನಂತರ ಅವನ ತಪಸ್ಸಿಗೆ ಮೆಚ್ಚಿ ಜನಾರ್ದನನು "ನಿನಗೆ ಮಂಗಳವಾಗಲಿ ; ಮನಸ್ಸಿಗೆ ಇಷ್ಟವಾದ ವರವನ್ನು ಬೇಡು" ಎಂದು ಹೇಳಿದನು.

೧೩-೧೪. ಭಗವಂತನು ಇಂತೆನಲು "ಓ ದೇವಾ, ಮಹಾಬಲ ಪರಾಕ್ರಮಿಯೂ, ಸರ್ವಶಾಸ್ತ್ರನಿಪುಣನೂ, ಧಾರ್ಮಿಕನೂ, ಯೋಗಿವರ್ಯನೂ, ಸಕಲ ಜಂತುಗಳ ಭಾಷೆಯನ್ನು ತಿಳಿದವನೂ ಆದ ಮಗನನ್ನು ನನಗೆ ಕರುಣಿಸು" ಎಂದು ಅನಘನು ಬೇಡಿದನು.

೧೫. ಹಾಗೆಯೇ ಆಗಲೆಂದು ಹೇಳಿ ಸರ್ವೇಶ್ವರನೂ, ವಿಶ್ವವ್ಯಾಪಿಯೂ ಆದ ಜನಾರ್ದನನು ದೇವತೆಗಳೆಲ್ಲರೂ ನೋಡುತ್ತಿದ್ದ ಹಾಗೆಯೇ ಅಲ್ಲಿ ಅದೃಶ್ಯನಾದನು.

ಪಶ್ಯತಾಂ ಸರ್ವದೇವಾನಾಂ ತತ್ರೈವಾಂತರಧೀಯತ ।
ತತಃ ಸ ತಸ್ಯ ಪುತ್ರೋಽಭೂದ್ಬ್ರಹ್ಮದತ್ತಃ ಪ್ರತಾಪವಾನ್ ॥೧೬॥

ಸರ್ವಸತ್ವಾನುಕಂಪೀ ಚ ಸರ್ವಸತ್ವಬಲಾಧಿಕಃ ।
ಸರ್ವಸತ್ವರುತಜ್ಞಶ್ಚ ಸರ್ವಸತ್ವೇಶ್ವರೇಶ್ವರಃ ॥೧೭॥

ಅಹಸತ್ತೇನ ಯೋಗಾತ್ಮಾ ಸ ಪಿಪೀಲಿಕರಾಗತಃ ।
ಯತ್ರ ತತ್ಕೀಟಮಿಥುನಂ ರಮಮಾಣಮವಸ್ಥಿತಂ ॥೧೮॥

ತತಸ್ಸಾ ಸನ್ನತಿರ್ದೃಷ್ಟ್ವಾ ತಂ ಹಸಂತಂ ಸುವಿಸ್ಮಿತಾ ।
ಕಿಮಪ್ಯಾಶಂಕ್ಯ ಮನಸಾ ತಮಪೃಚ್ಛನ್ನರೇಶ್ವರಂ ॥೧೯॥

॥ ಸನ್ನತಿರುವಾಚ ॥

ಅಕಸ್ಮಾದತಿಹಾಸಸ್ತೇ ಕಿಮರ್ಥಮಭವನ್ನೃಪ ।
ಹಾಸ್ಯಹೇತುಂ ನ ಜಾನಾಮಿ ಯದಕಾಲೇ ಕೃತಂ ತ್ವಯಾ ॥೨೦॥

---

೧೬-೧೭. ಬಳಿಕ ಅವನಿಗೆ ಪ್ರತಾಪಶಾಲಿಯಾದ ಬ್ರಹ್ಮದತ್ತನು ಮಗನಾದನು. ಅವನು ಎಲ್ಲ ಪ್ರಾಣಿಗಳಲ್ಲೂ ದಯಾಳುವಾಗಿದ್ದನು. ಎಲ್ಲ ಜಂತುಗಳ ಬಲವನ್ನೂ ಅವನ ಬಲವು ಮೀರಿಸಿತ್ತು. ಸಮಸ್ತ ಪ್ರಾಣಿಗಳ ಮಾತನ್ನೂ ಅವನು ಅರಿಯಬಲ್ಲವನಾಗಿದ್ದನು. ಎಲ್ಲ ಜೀವರಾಶಿಗಳಿಗೂ ಆತನು ಒಡೆಯನಾಗಿದ್ದನು.

೧೮. ಆದುದರಿಂದ ಉದ್ಯಾನದಲ್ಲಿ ಇರುವೆಗಳೆರಡೂ ಸಂತೋಷದಿಂದಿರುವಾಗ, ಗಂಡಿರುವೆಯ ಅನುರಾಗವನ್ನು ಕಂಡು ಯೋಗಜ್ಞಾನಿಯಾದ ಆ ರಾಜನು ನಕ್ಕನು.

೧೯. ಬಳಿಕ ರಾಜನ ಪತ್ನಿಯಾದ ಸನ್ನತಿಯು ಅವನು ನಕ್ಕುದನ್ನು ಕಂಡು ಆಶ್ಚರ್ಯಪಟ್ಟು, ಮನಸ್ಸಿನಲ್ಲೇನೋ ಭಾವಿಸಿಕೊಂಡು ಅವನನ್ನು ಕೇಳಿದಳು.

೨೦. ಸನ್ನತಿಯು ಹೇಳಿದಳು.—ಓ ರಾಜಾ, ಇದ್ದಕ್ಕಿದ್ದಹಾಗೆ ನೀನು ಇಷ್ಟೊಂದು ನಕ್ಕೆಯೇಕೆ? ಅಸಮಯದಲ್ಲಿ ನೀನು ನಗುವುದಕ್ಕೆ ಕಾರಣವೇನೋ ನನಗೆ ತಿಳಿಯಲಿಲ್ಲ.

|| ಸೂತ ಉವಾಚ ||

**ಅವದದ್ರಾಜಪುತ್ರೋಽಪಿ ಸ ಪಿಪೀಲಿಕಭಾಷಿತಂ ।**
**ರಾಗವಾಗ್ಭಿಃ ಸಮುತ್ಪನ್ನಮೇತದ್ಧಾಸ್ಯಂ ವರಾಂಗನೇ** ||೨೧||

**ನ ಚಾನ್ಯತ್ಕಾರಣಂ ಕಿಂಚಿದ್ಧಾಸ್ಯಹೇತೌ ಶುಚಿಸ್ಮಿತೇ ।**
**ನ ಸಾಽಮನ್ಯತ್ತದಾ ದೇವೀ ಪ್ರಾಹಾಲೀಕಮಿದಂ ವಚಃ** ||೨೨||

**ಅಹಮೇವಾದ್ಯ ಹಸಿತಾ ನ ಜೀವಿಷ್ಯೇ ತ್ವಯಾಽಧುನಾ ।**
**ಕಥಂ ಪಿಪೀಲಿಕಾಲಾಪಂ ಮರ್ತ್ಯೋ ವೇತ್ತಿ ವಿನಾ ಸುರಾನ್** ||೨೩||

**ತಸ್ಮಾತ್ತ್ವಯಾಽಹಮೇವೇಹ ಹಸಿತಾ ಕಿಮತಃ ಪರಂ ।**
**ತತೋ ನಿರುತ್ತರೋ ರಾಜಾ ಜಿಜ್ಞಾಸುಸ್ತತ್ಪರೋ ಹರೇಃ** ||೨೪||

**ಆಸ್ಥಾಯ ನಿಯಮಂ ತಸ್ಥೌ ಸಪ್ತರಾತ್ರಮಕಲ್ಮಷಃ ।**
**ಸ್ವಪ್ನೇ ಪ್ರಾಹ ಹೃಷೀಕೇಶಃ ಪ್ರಭಾತೇ ಪರ್ಯಟನ್ ಪುರೀಂ** ||೨೫||

**ವೃದ್ಧದ್ವಿಜೋ ಯಸ್ತದ್ವಾಕ್ಯಾತ್ಸರ್ವಂ ಜ್ಞಾಸ್ಯಸ್ಯಶೇಷತಃ ।**
**ಇತ್ಯುಕ್ತ್ವಾಂತರ್ದಧೇ ವಿಷ್ಣುಃ ಪ್ರಭಾತೇಽಥ ನೃಪಃ ಪುರಾತ್** ||೨೬||

---

೨೧. ಸೂತಪೌರಾಣಿಕನು ಹೇಳಿದನು.—ರಾಜನೂ ಸಹ ಇರುವೆಯಾಡಿದ ಮಾತನ್ನು ಆಕೆಗೆ ತಿಳಿಸಿ "ಎಲೌ ಮಂಗಳಾಂಗೀ, ಪ್ರಣಯವಚನಗಳಿಂದ ನನಗೆ ನಗೆ ಬಂದಿತು ; ಇನ್ನಾವ ಕಾರಣದಿಂದಲೂ ಅಲ್ಲ" ಎಂದು ಹೇಳಿದನು.

೨೨-೨೩. ರಾಣಿ ಅದನ್ನು ನಂಬಲಿಲ್ಲ. "ಈ ಮಾತು ಸುಳ್ಳು ; ನನ್ನನ್ನೇ ನೋಡಿ ನೀನು ನಕ್ಕೆ; ನಾನಿನ್ನು ಬದುಕಲಾರೆನು. ದೇವತೆಗಳಲ್ಲದೆ ಮನುಷ್ಯರು ಇರುವೆಯ ಮಾತನ್ನು ಹೇಗೆ ಅರಿಯಬಲ್ಲರು ? ನನ್ನನ್ನೇ ನೀನು ಹಾಸ್ಯಮಾಡಿರುವೆ. ಅಲ್ಲದೆ ಇನ್ನೇನು ?" ಎಂದು ಹೇಳಿದಳು.

೨೪. ಬಳಿಕ ನಿರ್ಮಲನಾದ ಆ ರಾಜನು ಉತ್ತರ ಹೇಳಲಾರದೆ, ಅದರ ರಹಸ್ಯವನ್ನರಿಯಲು ಮೌನವ್ರತಾದಿ ನಿಯಮಗಳನ್ನು ತಾಳಿ ವಿಷ್ಣುಸಾನ್ನಿಧ್ಯದಲ್ಲಿ ಏಳು ರಾತ್ರಿಗಳವರೆಗೆ ಧ್ಯಾನಮಗ್ನನಾಗಿದ್ದನು.

೨೫-೨೬. ವಿಷ್ಣು ರಾಜನಿಗೆ ಕನಸಿನಲ್ಲಿ ಕಾಣಿಸಿಕೊಂಡು "ನಾಳೆ ಬೆಳಗ್ಗೆ ನಗರದಲ್ಲೆಲ್ಲ ಅಲೆಯುತ್ತ ವೃದ್ಧ ಬ್ರಾಹ್ಮಣನೊಬ್ಬನು ಬರುವನು ; ಅವನ ಮಾತಿನಿಂದ ನಿನಗೆಲ್ಲವೂ ಚೆನ್ನಾಗಿ ತಿಳಿಯುವುದು" ಹೀಗೆಂದು ಹೇಳಿ ಅದೃಶ್ಯನಾದನು.

**ನಿರ್ಗಚ್ಛನ್ ಮಂತ್ರಿಸಹಿತಃ ಸಭಾರ್ಯೋ ವೃದ್ಧಮಗ್ರತಃ ।**
**ಗದಂತಂ ವಿಪ್ರಮಾಯಾಂತಂ ತಂ ವಿಪ್ರಂ ಸಂದದರ್ಶ ಹ ॥೨೭॥**

**॥ ಬ್ರಾಹ್ಮಣ ಉವಾಚ ॥**

**ಯೇ ವಿಪ್ರಮುಖ್ಯಾಃ ಕುರುಜಾಂಗಲೇಷು**
**ದಾಶಾಸ್ತಥಾ ದಾಶಪುರೇ ಮೃಗಾಶ್ಚ ।**
**ಕಾಲಂಜರೇ ಸಪ್ತ ಚ ಚಕ್ರವಾಕಾ**
**ಯೇ ಮಾನಸೇ ತೇ ವಯಮತ್ರ ಸಿದ್ಧಾಃ ॥೨೮॥**

**॥ ಸೂತ ಉವಾಚ ॥**

**ಇತ್ಯಾಕರ್ಣ್ಯ ವಚಸ್ತಾಭ್ಯಾಂ ಸ ಪಪಾತ ಶುಚಾ ತತಃ ।**
**ಜಾತಿಸ್ಮರತ್ವಮಗಮತ್ತೌ ಚ ಮಂತ್ರಿವರಾವುಭೌ ॥೨೯॥**

**ಕಾಮಶಾಸ್ತ್ರಪ್ರಣೇತಾ ಚ ಬಾಭ್ರವ್ಯಸ್ತು ಸುಬಾಲಕಃ ।**
**ಪಾಂಚಾಲ ಇತಿ ಲೋಕೇಷು ವಿಶ್ರುತಸ್ಸರ್ವಶಾಸ್ತ್ರವಿತ್ ॥೩೦॥**

---

೨೭. ಮರುದಿನ ಪ್ರಾತಃಕಾಲದಲ್ಲಿ ರಾಜನು ಮಂತ್ರಿಯೊಡನೆಯೂ, ಪತ್ನಿಯೊಡನೆಯೂ ಪಟ್ಟಣದಿಂದ ಹೊರಟು, ಶ್ಲೋಕವನ್ನು ಹೇಳುತ್ತ ಬರುತ್ತಿರುವ ಬ್ರಾಹ್ಮಣನನ್ನು ನೋಡಿದನು.

೨೮. ಬ್ರಾಹ್ಮಣನು ಹೇಳಿದನು.—ಕುರುಜಾಂಗಲ ದೇಶದಲ್ಲಿ ಬ್ರಾಹ್ಮಣ ಶ್ರೇಷ್ಠರಾಗಿಯೂ, ದಾಶಪುರದಲ್ಲಿ ಬೇಡರಾಗಿಯೂ, ಕಾಲಂಜರ ಗಿರಿಯಲ್ಲಿ ಜಿಂಕೆಗಳಾಗಿಯೂ, ಬಳಿಕ ಮಾನಸ ಸರೋವರದಲ್ಲಿ ಚಕ್ರವಾಕ ಪಕ್ಷಿಗಳಾಗಿಯೂ ಇದ್ದ ನಾವೇ ಈಗ ಇಲ್ಲಿ ಯೋಗಸಿದ್ಧರಾದ ಬ್ರಾಹ್ಮಣರಾಗಿ ಜನಿಸಿದ್ದೇವೆ.

೨೯. ಸೂತಪೌರಾಣಿಕನು ಹೇಳಿದನು.—ಈ ಮಾತನ್ನು ಕೇಳಿ ದುಃಖದಿಂದ ರಾಜನೂ ಆ ಇಬ್ಬರು ಮಂತ್ರಿಗಳೂ ನೆಲದಲ್ಲಿ ಬಿದ್ದರು. ಅವರಿಗೆ ಪೂರ್ವ ಜನ್ಮದ ಸ್ಮರಣೆ ಬಂದಿತು.

೩೦. ಕಾಮಶಾಸ್ತ್ರವನ್ನು ರಚಿಸಿದ ಬಾಭ್ರವ್ಯನೇ ಈ ಸುಬಾಲಕನು. ಸಕಲ ಶಾಸ್ತ್ರಜ್ಞನಾದ ಇವನು ಪಾಂಚಾಲಾಧಿಪತಿಯೆಂದು ಲೋಕದಲ್ಲಿ ಪ್ರಸಿದ್ಧನಾಗಿರುವನು.

**ಕಂಡರೀಕೋಽಪಿ ಧರ್ಮಾತ್ಮಾ ವೇದಶಾಸ್ತ್ರಪ್ರವರ್ತಕಃ ।**
**ಭೂತ್ವಾ ಜಾತಿಸ್ಮರೌ ಶೋಕಾತ್ಪತಿತಾವಗ್ರತಸ್ತದಾ ॥೩೧॥**

**ಹಾ ವಯಂ ಯೋಗವಿಭ್ರಷ್ಟಾಃ ಕಾಮತಃ ಕರ್ಮಬಂಧನಾಃ ।**
**ಏವಂ ವಿಲಪ್ಯ ಬಹುಶಸ್ತ್ರಯಸ್ತೇ ಯೋಗಪಾರಗಾಃ ॥೩೨॥**

**ವಿಸ್ಮಯಾಚ್ಛ್ರಾದ್ಧಮಾಹಾತ್ಮ್ಯಮಭಿನಂದ್ಯ ಪುನಃ ಪುನಃ ।**
**ತತಸ್ತಸ್ಮೈ ಧನಂ ದತ್ತ್ವಾ ಪ್ರಭೂತಗ್ರಾಮಸಂಯುತಂ ॥೩೩॥**

**ವಿಸೃಜ್ಯ ಬ್ರಾಹ್ಮಣಂ ತಂ ಚ ವೃದ್ಧಂ ಧನಮುದಾನ್ವಿತಂ ।**
**ಆತ್ಮೀಯಂ ನೃಪತಿಃ ಪುತ್ರಂ ನೃಪಲಕ್ಷಣಸಂಯುತಂ ॥೩೪॥**

**ವಿಷ್ವಕ್ಸೇನಾಭಿಧಾನಂ ತು ರಾಜಾ ರಾಜ್ಯೇಽಭ್ಯಷೇಚಯತ್ ।**
**ಮಾನಸೇ ಮಿಲಿತಾಸ್ಸರ್ವೇ ತತಸ್ತೇ ಯೋಗಿನೋ ವರಾಃ । ॥೩೫॥**

---

೩೧. ಧರ್ಮಾತ್ಮನಾದ ಕಂಡರೀಕನೂ ಸಹ ಹಿಂದೆ ವೇದಶಾಸ್ತ್ರ ಪ್ರವರ್ತಕನಾದ ಬ್ರಾಹ್ಮಣನಾಗಿದ್ದನು. ಇವರಿಬ್ಬರೂ ಪೂರ್ವಜನ್ಮದ ವೃತ್ತಾಂತವನ್ನು ಸ್ಮರಿಸಿಕೊಂಡು ದುಃಖದಿಂದ ಬ್ರಾಹ್ಮಣನ ಮುಂದೆ ಬಿದ್ದುಬಿಟ್ಟರು.

೩೨. "ಅಯ್ಯೋ! ಕರ್ಮಪಾಶಕ್ಕೆ ಸಿಕ್ಕಿ ಕಾಮವಶದಿಂದ ನಾವೆಲ್ಲರೂ ಯೋಗಸಿದ್ಧಿಯನ್ನು ಪಡೆಯದೆ ಹೋದೆವಲ್ಲಾ!" ಎಂದು ಯೋಗಜ್ಞರಾದ ಆ ಮೂವರೂ ಬಹಳವಾಗಿ ದುಃಖಿಸುತ್ತ, ಆಶ್ಚರ್ಯದಿಂದ ಶ್ರಾದ್ಧದ ಮಹಿಮೆಯನ್ನು ಮತ್ತೆ ಮತ್ತೆ ಶ್ಲಾಘಿಸಿದರು.

೩೩-೩೪. ಬಳಿಕ ರಾಜನು ಆ ವೃದ್ಧ ಬಾಹ್ಮಣನಿಗೆ ಯಥೇಚ್ಛವಾಗಿ ಧನವನ್ನೂ ಹಲವು ಗ್ರಾಮಗಳನ್ನೂ ಕೊಟ್ಟು, ಸಂತೋಷಪಡಿಸಿ ಕಳುಹಿಸಿದನು. ರಾಜಲಕ್ಷಣಗಳಿಂದ ಕೂಡಿದ ತನ್ನ ಮಗನಾದ ವಿಷ್ವಕ್ಸೇನನೆಂಬವನಿಗೆ ಪಟ್ಟಾಭಿಷೇಕ ಮಾಡಿದನು.

೩೫. ತರುವಾಯ ಪಿತೃಧ್ಯಾನನಿರತರೂ, ಮತ್ಸರರಹಿತರೂ ಆದ ಬ್ರಹ್ಮದತ್ತನೇ ಮೊದಲಾದ ಆ ಯೋಗಿಗಳೆಲ್ಲರೂ ಮಾನಸತೀರ್ಥದಲ್ಲಿ ಒಟ್ಟುಗೂಡಿದರು.

ಬ್ರಹ್ಮದತ್ತಾದಯಸ್ತಸ್ಮಿನ್ ಪಿತೃಸಕ್ತಾ ವಿಮತ್ಸರಾಃ ।
ಸನ್ನತಿಶ್ಚಾಭವದ್ಭ್ರಷ್ಟಾ ಮಯ್ಯೈತತ್ಕಿಲ ಕಾರಿತಂ ॥೩೬॥
ರಾಜ್ಯತ್ಯಾಗಫಲಂ ಸರ್ವಂ ಯದೇತದಭಿಲಷ್ಯತೇ ।
ತಥೇತಿ ಪ್ರಾಹ ರಾಜಾ ತು ಪುನಸ್ತಾಮಭಿನಂದಯನ್ ॥೩೭॥
ತ್ವತ್ಪ್ರಸಾದಾದಿದಂ ಸರ್ವಂ ಮಯ್ಯೈತತ್ಪ್ರಾಪ್ಯತೇ ಫಲಂ ।
ತತಸ್ತೇ ಯೋಗಮಾಸ್ಥಾಯ ಸರ್ವ ಏವ ವನೌಕಸಃ ॥೩೮॥
ಬ್ರಹ್ಮರಂಧ್ರೇಣ ಪರಮಂ ಪದಮಾಪುಸ್ತಪೋಬಲಾತ್ ।
ಏವಮಾಯುರ್ಧನಂ ವಿದ್ಯಾಂ ಸ್ವರ್ಗಂ ಮೋಕ್ಷಂ ಸುಖಾನಿ ಚ ॥೩೯॥
ಪ್ರಯಚ್ಛಂತಿ ಸುತಾನ್ರಾಜ್ಯಂ ನೃಣಾಂ ಪ್ರೀತಾಃ ಪಿತಾಮಹಾಃ ।
ಯ ಇದಂ ಪಿತೃಮಾಹಾತ್ಮ್ಯಂ ಬ್ರಹ್ಮದತ್ತಸ್ಯ ಚ ದ್ವಿಜಾಃ ॥೪೦॥
ದ್ವಿಜೇಭ್ಯಃ ಶ್ರಾವಯೇದ್ಯೋ ವಾ ಶೃಣೋತ್ಯಥ ಪಠೇತ್ತು ವಾ ।
ಕಲ್ಪಕೋಟಿಶತಂ ಸಾಗ್ರಂ ಬ್ರಹ್ಮಲೋಕೇ ಮಹೀಯತೇ ॥೪೧॥

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಶ್ರಾದ್ಧಕಲ್ಪೇ ಪಿತೃಮಾಹಾತ್ಮ್ಯಂ ನಾಮೈಕವಿಂಶೋಽಧ್ಯಾಯಃ**

---

೩೬. “ಎಲ್ಲರೂ ಬಯಸುವಂತಹ ರಾಜ್ಯಸುಖವನ್ನು ನನ್ನ ಪತಿಯು ಬಿಡುವಂತೆ ಮಾಡಿದವಳು ನಾನೇ ಅಲ್ಲವೇ!” ಎನ್ನುತ್ತ ಸನ್ನತಿಯೂ ಸಹ ಹರ್ಷರಹಿತಳಾದಳು.

೩೭. “ನಿಜ! ನಿನ್ನ ಪ್ರಸಾದದಿಂದಲೇ ಈ ಫಲವೆಲ್ಲವೂ ನನಗೆ ಲಭಿಸಿತು” ಎಂದು ಹೇಳಿ ರಾಜನು ಅವಳನ್ನು ಪುನಃ ಶ್ಲಾಘಿಸಿದನು.

೩೮. ಬಳಿಕ ತಪೋವನವಾಸಿಗಳಾದ ಅವರೆಲ್ಲರೂ ತಮ್ಮ ತಪಸ್ಸಿನ ಬಲದಿಂದ ಯೋಗಾರೂಢರಾಗಿ ಬ್ರಹ್ಮರಂಧ್ರದ ಮೂಲಕ ಪರಮಪದವನ್ನು ಪಡೆದರು.

೩೯. ಹೀಗೆ ಸುಪ್ರೀತರಾದ ಪಿತೃಗಳು ಮನುಷ್ಯರಿಗೆ ಆಯುಸ್ಸು, ಧನ, ವಿದ್ಯೆ, ಸ್ವರ್ಗ, ಮೋಕ್ಷ, ಬಗೆಬಗೆಯ ಸುಖಗಳು, ಮಕ್ಕಳು ಮತ್ತು ರಾಜ್ಯ ಇವೆಲ್ಲವನ್ನೂ ಕರುಣಿಸುವರು.

೪೦-೪೧. ದ್ವಿಜವರ್ಯರೇ, ಈ ಪಿತೃಮಾಹಾತ್ಮ್ಯವನ್ನೂ ಬ್ರಹ್ಮದತ್ತನ ಮಹಿಮೆಯನ್ನೂ ಬ್ರಾಹ್ಮಣರಿಗೆ ಹೇಳುವವನೂ, ಅವರಿಂದ ಕೇಳುವವನೂ, ಅಲ್ಲದೆ ತಾನೇ ಪಾರಾಯಣಮಾಡುವವನೂ ಅನಂತಕಾಲ ಬ್ರಹ್ಮಲೋಕದಲ್ಲಿ ಮನ್ನಣೆಯನ್ನು ಪಡೆಯುವರು.

ಅಧ್ಯಾಯ ೨೧

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಪಿತೃಮಾಹಾತ್ಮ್ಯವು ಮುಂದುವರಿದಿದೆ.

ಮಾನಸಸರೋವರದಲ್ಲಿದ್ದ ಏಳು ಚಕ್ರವಾಕಗಳಲ್ಲಿ ನಿಷ್ಕಾಮಿಗಳಾದ ನಾಲ್ಕು ಪಕ್ಷಿಗಳು ಬ್ರಹ್ಮದತ್ತನ ನಗರದಲ್ಲಿ ಒಬ್ಬ ವೃದ್ಧ ಬ್ರಾಹ್ಮಣನಿಗೆ ಮಕ್ಕಳಾಗಿ ಹುಟ್ಟಿದುವು. ಆ ನಾಲ್ವರೂ ತಪಸ್ಸಿಗಾಗಿ ಹೊರಟರು. ಅವರ ತಂದೆಯು ತಾನು ದರಿದ್ರನೆಂದೂ, ತನಗೆ ಯಾರೂ ದಿಕ್ಕಿಲ್ಲವೆಂದೂ ಹೇಳಿ ಅವರನ್ನು ತಡೆದನು. ತಮ್ಮ ಪೂರ್ವ ವೃತ್ತಾಂತವನ್ನು ತಿಳಿಸುವ ಒಂದು ಪದ್ಯವನ್ನು ಅವನಿಗೆ ಹೇಳಿಕೊಟ್ಟು, ಅದನ್ನು ರಾಜನ ಮುಂದೆ ಹೇಳಿದರೆ ಯಥೇಷ್ಟವಾದ ಸಂಪತ್ತು ದೊರಕುವುದೆಂದು ಹೇಳಿ ಅವರು ತಪೋವನಕ್ಕೆ ತೆರಳಿದರು.

ಇತ್ತ, ಇರುವೆಯ ಮಾತನ್ನು ತಿಳಿದ ಬಗೆ ಹೇಗೆಂದು ತನ್ನ ಪತ್ನಿಯು ಒತ್ತಾಯಪಡಿಸಲು, ಅದನ್ನು ತಿಳಿಯುವುದಕ್ಕಾಗಿ ಬ್ರಹ್ಮದತ್ತನು ಮಹಾ ವಿಷ್ಣುವನ್ನು ಏಕಚಿತ್ತದಿಂದ ಧ್ಯಾನಿಸಿದನು. ಭಗವಂತನು ಅವನ ಕನಸಿನಲ್ಲಿ ಗೋಚರನಾದನು. ಅವನ ಅಪ್ಪಣೆಯಂತೆ ರಾಜನು ಮರುದಿನ ಬೆಳಗ್ಗೆ ನಗರದಿಂದ ಹೊರಗೆ ಬರುತ್ತಿರುವಾಗ ಹಿಂದೆ ಹೇಳಿದ ದರಿದ್ರ ಬ್ರಾಹ್ಮಣನು ಎದುರಿಗೆ ಸಿಕ್ಕಿದನು. ಅವನು ಹೇಳಿದ ಶ್ಲೋಕವನ್ನು ಕೇಳಿದ ಕೂಡಲೆ ದೊರೆಗೂ ಅವನ ಇಬ್ಬರು ಮಂತ್ರಿಗಳಿಗೂ ಪೂರ್ವಜನ್ಮದ ಸ್ಮೃತಿಯು ಬಂದಿತು. ಯೋಗದಲ್ಲಿ ಸಿದ್ಧಿ ದೊರಕದೆ ಹೋದುದಕ್ಕಾಗಿ ಅವರು ಬಹಳವಾಗಿ ದುಃಖಿಸಿದರು. ತರುವಾಯ ರಾಜನು ಆ ಬ್ರಾಹ್ಮಣನಿಗೆ ವಿಪುಲವಾದ ಸಂಪತ್ತನ್ನು ಕೊಟ್ಟು, ಅವನನ್ನು ಕಳುಹಿಸಿ, ತನ್ನ ಮಗನಾದ ವಿಷ್ವಕ್ಸೇನನಿಗೆ ಪಟ್ಟವನ್ನು ಕಟ್ಟಿ ತಪೋವನಕ್ಕೆ ಹೋದನು. ಏಳು ಜನರೂ ಮತ್ತೆ ಮಾನಸ ತೀರ್ಥದಲ್ಲಿ ಒಟ್ಟುಗೂಡಿದರು. ತಮ್ಮ ಯೋಗ ಬಲದಿಂದ ಪರಮಪದವನ್ನು ಸೇರಿದರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಶ್ರಾದ್ಧಕಲ್ಪದೊಳಗೆ ಪಿತೃಮಾಹಾತ್ಮ್ಯವೆಂಬ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು



## ಅಥ ಶ್ರೀಮತ್ಸ್ಯಮಹಾಪುರಾಣೇ ದ್ವಾವಿಂಶೋಽಧ್ಯಾಯಃ

|| ಋಷಯ ಊಚುಃ ||

**ಕಸ್ಮಿನ್ ಕಾಲೇ ಚ ತಚ್ಛ್ರಾದ್ಧಮನಂತಫಲದಂ ಭವೇತ್ ।**
**ಕಸ್ಮಿನ್ ವಾಸರಭಾಗೇ ತು ಶ್ರಾದ್ಧಕೃಚ್ಛ್ರಾದ್ಧಮಾಚರೇತ್ ॥**
**ತೀರ್ಥೇಷು ಕೇಷು ಚ ಕೃತಂ ಶ್ರಾದ್ಧಂ ಬಹುಫಲಂ ಭವೇತ್ || ೧ ||**

|| ಸೂತ ಉವಾಚ ||

**ಅಪರಾಹ್ಣೇ ತು ಸಂಪ್ರಾಪ್ತೇ ಅಭಿಜಿದ್ರೌಹಿಣೋದಯೇ ।**
**ಯತ್ಕಿಂಚಿದ್ದೀಯತೇ ತತ್ರ ತದಕ್ಷಯಮುದಾಹೃತಂ || ೨ ||**
**ತೀರ್ಥಾನಿ ಯಾನಿ ಸರ್ವಾಣಿ ಪಿತೄಣಾಂ ವಲ್ಲಭಾನಿ ಚ ।**
**ನಾಮತಸ್ತಾನಿ ವಕ್ಷ್ಯಾಮಿ ಸಂಕ್ಷೇಪೇಣ ದ್ವಿಜೋತ್ತಮಾಃ || ೩ ||**

---

೧. ಋಷಿಗಳು ಹೇಳಿದರು.—ಯಾವ ಕಾಲದಲ್ಲಿ ಶ್ರಾದ್ಧವು ಅನಂತವಾದ ಫಲವನ್ನು ಕೊಡುವುದು? ಹಗಲಿನ ಯಾವ ಭಾಗದಲ್ಲಿ ಶ್ರಾದ್ಧವನ್ನು ಆಚರಿಸಬೇಕು. ಯಾವ ಯಾವ ಪುಣ್ಯತೀರ್ಥಗಳಲ್ಲಿ ಶ್ರಾದ್ಧಮಾಡಿದರೆ ಅತಿಶಯವಾದ ಫಲವು ಲಭಿಸುವುದು?

೨. ಸೂತಮಹರ್ಷಿ ಹೇಳಿದನು.—ಅಪರಾಹ್ಣದಲ್ಲಿ ಅಭಿಜಿತ್ ಮತ್ತು ರೌಹಿಣಗಳೆಂಬ ಎರಡು ಮುಹೂರ್ತಗಳಲ್ಲಿ ಪಿತೃಗಳನ್ನುದ್ದೇಶಿಸಿ ಏನನ್ನು ದಾನ ಮಾಡಿದರೂ ಅದು ಅಕ್ಷಯವಾಗುವುದು.*

೩. ಎಲೈ ಬ್ರಾಹ್ಮಣೋತ್ತಮರೇ, ಪಿತೃಗಳಿಗೆ ಪ್ರಿಯವಾದ ತೀರ್ಥಗಳ ಹೆಸರೆಲ್ಲವನ್ನೂ ಸಂಕ್ಷೇಪವಾಗಿ ಹೇಳುವೆನು ಕೇಳಿರಿ.

---

*ಒಂದು ಹಗಲನ್ನು ಹದಿನೈದು ಮುಹೂರ್ತಗಳಾಗಿ ವಿಭಾಗಿಸಿ ಒಂದೊಂದಕ್ಕೂ ಬೇರೆ ಬೇರೆ ಹೆಸರುಗಳನ್ನು ಕೊಟ್ಟಿದ್ದಾರೆ. ಸೂರ್ಯೋದಯದಿಂದ ಎಂಟನೆಯ ಮುಹೂರ್ತಕ್ಕೆ ಅಭಿಜಿತ್ತೆಂದೂ, ಒಂಬತ್ತನೆಯದಕ್ಕೆ ರೌಹಿಣವೆಂದೂ ಹೆಸರು.

ಪಿತೃತೀರ್ಥಂ ಗಯಾ ನಾಮ ಸರ್ವತೀರ್ಥವರಂ ಶುಭಂ ।
ಯತ್ರಾಸ್ತೇ ದೇವದೇವೇಶಃ ಸ್ವಯಮೇವ ಪಿತಾಮಹಃ ॥ ೪ ॥

ತತ್ರೈಷಾ ಪಿತೃಭಿರ್ಗೀತಾ ಗಾಥಾ ಭಾಗಮಭೀಪ್ಸುಭಿಃ ॥ ೫ ॥

ಏಷ್ಟವ್ಯಾ ಬಹವಃ ಪುತ್ರಾ ಯದ್ಯೇಕೋಽಪಿ ಗಯಾಂ ವ್ರಜೇತ್ ।
ಯಜೇತವಾಽಶ್ವಮೇಧೇನ ನೀಲಂ ವಾ ವೃಷಮುತ್ಸೃಜೇತ್ ॥ ೬ ॥

ತಥಾ ವಾರಾಣಸೀ ಪುಣ್ಯಾ ಪಿತೄಣಾಂ ವಲ್ಲಭಾ ಸದಾ ।
ಯತ್ರಾಽವಿಮುಕ್ತಸಾನ್ನಿಧ್ಯಂ ಭುಕ್ತಿಮುಕ್ತಿಫಲಪ್ರದಂ ॥ ೭ ॥

ಪಿತೄಣಾಂ ವಲ್ಲಭಂ ತದ್ವತ್ಪುಣ್ಯಂ ಚ ವಿಮಲೇಶ್ವರಂ ।
ಪಿತೃತೀರ್ಥಂ ಪ್ರಯಾಗಂ ತು ಸರ್ವಕಾಮಫಲಪ್ರದಂ ॥ ೮ ॥

---

೪. ಗಯೆಯೆಂಬುದು ಮಿಕ್ಕ ಕ್ಷೇತ್ರಗಳನ್ನೆಲ್ಲ ಮೀರಿಸಿದ ಪವಿತ್ರವಾದ ಪಿತೃತೀರ್ಥವು. ಅಲ್ಲಿ ದೇವ ದೇವೇಶನಾದ ಸಾಕ್ಷಾದ್ಬ್ರಹ್ಮನೇ ನೆಲೆಸಿದ್ದಾನೆ.

೫. ಶ್ರಾದ್ಧಭಾಗಾಭಿಲಾಷಿಗಳಾದ ಪಿತೃಗಳು ಗಯೆಯ ವಿಷಯದಲ್ಲಿ ಈ ಮುಂದಿನ ಪದ್ಯವನ್ನು ಹೇಳುವರು.

೬. ಹಲವರು ಪುತ್ರರನ್ನು ಬಯಸಬೇಕು; ಏಕೆಂದರೆ ಅವರಲ್ಲಿ ಒಬ್ಬ ನಾವರೂ ಗಯೆಗೆ ಹೋಗಿ ಪಿಂಡವನ್ನು ಹಾಕಿಯಾನು; ಅಶ್ವಮೇಧವನ್ನು ಮಾಡಿಯಾನು; ಪಿತೃಗಳನ್ನುದ್ದೇಶಿಸಿ ನೀಲ ವೃಷಭವನ್ನಾದರೂ ಬಿಟ್ಟಾನು.

೭. ಹಾಗೆಯೇ ಪುಣ್ಯಪ್ರದವಾದ ವಾರಾಣಸೀ ಕ್ಷೇತ್ರವೂ ಸಹ ಪಿತೃಗಳಿಗೆ ಯಾವಾಗಲೂ ಪ್ರಿಯವಾದುದು. ಅಲ್ಲಿ ಅವಿಮುಕ್ತೇಶ್ವರನು ಇದ್ದಾನೆ. ಅವನ ಸಾನ್ನಿಧ್ಯದಿಂದ ಸ್ವರ್ಗಾದಿಭೋಗವೂ ಮೋಕ್ಷಸುಖವೂ ಅನಾಯಾಸವಾಗಿ ಲಭಿಸುವುವು.

೮. ಪುಣ್ಯಪ್ರದವಾದ ವಿಮಲೇಶ್ವರವೂ ಕೂಡ ಪಿತೃಗಳಿಗೆ ಇಷ್ಟವಾದುದು. ಪ್ರಯಾಗತೀರ್ಥವಂತು ಸಕಲೇಷ್ಟಾರ್ಥಗಳನ್ನೂ ಕರುಣಿಸುವ ಶ್ರೇಷ್ಠವಾದ ಪಿತೃಕ್ಷೇತ್ರವೆನಿಸಿರುವುದು.

**ವಟೇಶ್ವರಸ್ತು ಭಗವಾನ್ ಮಾಧವೇನ ಸಮನ್ವಿತಃ ।**
**ಯೋಗನಿದ್ರಾಶಯಸ್ತದ್ವತ್ಸದಾ ವಸತಿ ಕೇಶವಃ ॥ ೯ ॥**

**ದಶಾಶ್ವಮೇಧಿಕಂ ಪುಣ್ಯಂ ಗಂಗಾದ್ವಾರಂ ತಥೈವ ಚ ।**
**ನಂದಾಥ ಲಲಿತಾ ತದ್ವತ್ತೀರ್ಥಂ ಮಾಯಾಪುರೀ ಶುಭಾ ॥೧೦॥**

**ತಥಾ ಮಿತ್ರಪದಂ ನಾಮ ತತಃ ಕೇದಾರಮುತ್ತಮಂ ।**
**ಗಂಗಾಸಾಗರಮಿತ್ಯಾಹುಃ ಸರ್ವತೀರ್ಥಮಯಂ ಶುಭಂ ॥೧೧॥**

**ತೀರ್ಥಂ ಬ್ರಹ್ಮಸರಸ್ತದ್ವಚ್ಛತದ್ರುಸಲಿಲೇ ಹ್ರದೇ ।**
**ತೀರ್ಥಂ ತು ನೈಮಿಶಂ ನಾಮ ಸರ್ವತೀರ್ಥಫಲಪ್ರದಂ ॥೧೨॥**

**ಗಂಗೋದ್ಭೇದಸ್ತು ಗೋಮತ್ಯಾಂ ಯತ್ರೋದ್ಭೂತಸ್ಸನಾತನಃ ।**
**ತಥಾ ಯಜ್ಞವರಾಹಶ್ಚ ದೇವದೇವಶ್ಚ ಶೂಲಭೃತ್ ॥೧೩॥**

---

೯. ಅಕ್ಷಯವಟವೆಂಬುದು ಅತಿಪ್ರಸಿದ್ಧವಾದ ಪಿತೃತೀರ್ಥ; ಪೂಜ್ಯನಾದ ವಟೇಶ್ವರನು ಅಲ್ಲಿ ಮಾಧವನೊಡಗೂಡಿ ನೆಲೆಸಿರುವನು. ಮಹಾವಿಷ್ಣು ಯಾವಾಗಲೂ ಯೋಗನಿದ್ರೆಯಲ್ಲಿ ನಿರತನಾಗಿರುವನು.

೧೦. ದಶಾಶ್ವಮೇಧ, ಗಂಗಾದ್ವಾರ, ನಂದಾತೀರ್ಥ, ಲಲಿತಾತೀರ್ಥ, ಮಾಯಾಪುರಿ ಇವೆಲ್ಲವೂ ಪವಿತ್ರವಾದ ಕ್ಷೇತ್ರಗಳೆಂದು ಪ್ರಖ್ಯಾತವಾಗಿವೆ.

೧೧. ಹಾಗೆಯೇ ಮಿತ್ರಪದಕ್ಷೇತ್ರವೂ ಕೇದಾರಕ್ಷೇತ್ರವೂ ಉತ್ತಮವಾದುವು. ಶುಭಕರವಾದ ಗಂಗಾಸಾಗರವು ಸರ್ವತೀರ್ಥಮಯವೆನಿಸಿದೆ.

೧೨. ಶತದ್ರೂ ನದಿಯ ಮಡುವಿನಲ್ಲಿರುವ ಬ್ರಹ್ಮಸರಸ್ಸೆಂಬುದು ಸುಪ್ರಸಿದ್ಧವಾದ ತೀರ್ಥ. ನೈಮಿಶವು ಸಕಲ ತೀರ್ಥಗಳ ಫಲವನ್ನೂ ಕೊಡುವುದು.

೧೩. ಗೋಮತೀನದಿಯ ಗಂಗೋದ್ಭೇದಕ್ಷೇತ್ರವು ಅತಿ ಪ್ರಸಿದ್ಧವಾದದು. ಏಕೆಂದರೆ ಸನಾತನನಾದ ಯಜ್ಞವರಾಹಮೂರ್ತಿಯೂ, ಶೂಲಪಾಣಿಯಾದ ಪರಮೇಶ್ವರನೂ ಅಲ್ಲಿ ಉದ್ಭವಿಸಿದರು.

**ಯತ್ರ ತತ್ಕಾಂಚನಂ ದ್ವಾರಮಷ್ಟಾದಶಭುಜೋ ಹರಃ ।**
**ನೇಮಿಸ್ತು ಹರಿಚಕ್ರಸ್ಯ ಶೀರ್ಣಾ ಯತ್ರಾಭವತ್ಪುರಾ ॥೧೪॥**

**ತದೇತನ್ನೈಮಿಶಾರಣ್ಯಂ ಸರ್ವತೀರ್ಥನಿಷೇವಿತಂ ।**
**ದೇವದೇವಸ್ಯ ತತ್ರಾಪಿ ವಾರಾಹಸ್ಯ ತು ದರ್ಶನಂ ॥೧೫॥**

**ಯಃ ಪ್ರಯಾತಿ ಸ ಪೂತಾತ್ಮಾ ನಾರಾಯಣಪದಂ ವ್ರಜೇತ್ ।**
**ಕೃತಶೌಚಂ ಮಹಾಪುಣ್ಯಂ ಸರ್ವಪಾಪನಿಷೂದನಂ ॥೧೬॥**

**ಯತ್ರಾಸ್ತೇ ನಾರಸಿಂಹಸ್ತು ಸ್ವಯಮೇವ ಜನಾರ್ದನಃ ।**
**ತೀರ್ಥಮಿಕ್ಷುಮತೀ ನಾಮ ಪಿತೄಣಾಂ ವಲ್ಲಭಂ ಸದಾ ॥೧೭॥**

**ಸಂಗಮೇ ಯತ್ರ ತಿಷ್ಠಂತಿ ಗಂಗಾಯಾಃ ಪಿತರಃ ಸದಾ ।**
**ಕುರುಕ್ಷೇತ್ರಂ ಮಹಾಪುಣ್ಯಂ ಸರ್ವತೀರ್ಥಸಮನ್ವಿತಂ ॥೧೮॥**

**ತಥಾ ಚ ಸರಯೂಃ ಪುಣ್ಯಾ ಸರ್ವದೇವನಮಸ್ಕೃತಾ ।**
**ಇರಾವತೀ ನದೀ ತದ್ವತ್ಪಿತೃತೀರ್ಥಾಧಿವಾಸಿನೀ ॥೧೯॥**

---

೧೪. ಕಾಂಚನದ್ವಾರದಲ್ಲಿ ಶಿವನು ಹದಿನೆಂಟು ಭುಜಗಳಿಂದ ಮೆರೆಯುತ್ತಿರುವನು. ಹಿಂದೆ ಮಹಾವಿಷ್ಣುವಿನ ಸುದರ್ಶನಚಕ್ರದ ಅಂಚು ಇಲ್ಲಿ ಮುರಿಯಿತು.

೧೫. ಸರ್ವತೀರ್ಥಸಹಿತವಾದ ನೈಮಿಶಾರಣ್ಯಕ್ಷೇತ್ರವೇ ನಾವೀಗ ವಾಸಿಸುತ್ತಿರುವುದು. ದೇವದೇವನಾದ ವರಾಹಮೂರ್ತಿಯ ದರ್ಶನವು ಇಲ್ಲೂ ಲಭಿಸುವುದು. ಈ ಕ್ಷೇತ್ರದಲ್ಲಿ ಸಂಚರಿಸುವವನು ಪರಿಶುದ್ಧಮನಸ್ಕನಾಗಿ ನಾರಾಯಣನ ಸಾನ್ನಿಧ್ಯವನ್ನು ಸೇರುವನು.

೧೬. ಕೃತಶೌಚವೆಂಬ ತೀರ್ಥವು ಮಹಾಪುಣ್ಯಪ್ರದವಾದುದು; ಎಲ್ಲ ಪಾಪಗಳನ್ನೂ ಕಳೆಯುವಂತಹುದು. ನರಸಿಂಹರೂಪನಾದ ಮಹಾವಿಷ್ಣುವು ಅಲ್ಲಿ ನೆಲೆಸಿರುವನು.

೧೭-೧೮. ಇಕ್ಷುಮತೀತೀರ್ಥವು ಯಾವಾಗಲೂ ಪಿತೃಗಳಿಗೆ ಪ್ರಿಯವಾದುದು. ಗಂಗಾಸಂಗಮದಲ್ಲಿ ಪಿತೃಗಳು ನಿತ್ಯವೂ ವಾಸಿಸುವರು. ಕುರುಕ್ಷೇತ್ರವು ಸರ್ವತೀರ್ಥಯುಕ್ತವಾಗಿ ಮಹಾಪುಣ್ಯಕರವೆನಿಸುವುದು.

೧೯. ಪುಣ್ಯನದಿಯಾದ ಸರಯುವನ್ನು ಎಲ್ಲ ದೇವತೆಗಳೂ ನಮಸ್ಕರಿಸುವರು. ಇರಾವತೀ ನದಿಯು ಪಿತೃತೀರ್ಥಗಳಲ್ಲೆಲ್ಲ ಮೇಲಾದುದು.

ಯಮುನಾ ದೇವಿಕಾ ಕಾಲೀ ಚಂದ್ರಭಾಗಾ ದೃಷದ್ವತೀ ।
ನದೀ ವೇಣುಮತೀ ಪುಣ್ಯಾ ಪರಾ ವೇತ್ರವತೀ ತಥಾ ॥೨೦॥

ಪಿತೄಣಾಂ ವಲ್ಲಭಾ ಹ್ಯೇತಾಃ ಶ್ರಾದ್ಧೇ ಕೋಟಿಗುಣಾ ಮತಾಃ ।
ಜಂಬೂಮಾರ್ಗಂ ಮಹಾಪುಣ್ಯಂ ಯತ್ರ ಮಾರ್ಗೋ ಹಿ ಲಕ್ಷ್ಯತೇ ॥೨೧॥

ಅದ್ಯಾಪಿ ಪಿತೃತೀರ್ಥಂ ತತ್ಸರ್ವಕಾಮಫಲಪ್ರದಂ ।
ನೀಲಕುಂಡಮಿತಿ ಖ್ಯಾತಂ ಪಿತೃತೀರ್ಥಂ ದ್ವಿಜೋತ್ತಮಾಃ ॥೨೨॥

ತಥಾ ರುದ್ರಸರಃ ಪುಣ್ಯಂ ಸರೋ ಮಾನಸಮೇವ ಚ ।
ಮಂದಾಕಿನೀ ತಥಾಚ್ಛೋದಾ ವಿಪಾಶಾಥ ಸರಸ್ವತೀ ॥೨೩॥

ಪೂರ್ವಮಿತ್ರಪದಂ ತದ್ವದ್ವೈದ್ಯನಾಥಂ ಮಹಾಫಲಂ ।
ಕ್ಷಿಪ್ರಾ ನದೀ ಮಹಾಕಾಲಸ್ತಥಾ ಕಾಲಂಜರಂ ಶುಭಂ ॥೨೪॥

ವಂಶೋದ್ಭೇಧಂ ಹರೋದ್ಭೇದಂ ಗಂಗೋದ್ಭೇದಂ ಮಹಾಫಲಂ ।
ಭದ್ರೇಶ್ವರಂ ವಿಷ್ಣುಪದಂ ನರ್ಮದಾದ್ವಾರಮೇವ ಚ ॥೨೫॥

---

೨೦. ಯಮುನೆ, ದೇವಿಕ, ಕಾಲಿ, ಚಂದ್ರಭಾಗೆ, ದೃಷದ್ವತಿ, ವೇಣುಮತಿ ಮತ್ತು ವೇತ್ರವತಿ ಇವುಗಳೆಲ್ಲ ಪುಣ್ಯನದಿಗಳು.

೨೧-೨೨. ಎಲೈ ದ್ವಿಜವರ್ಯರೇ, ಈ ನದಿಗಳೆಲ್ಲ ಪಿತೃಗಳಿಗೆ ಇಷ್ಟವಾದುವು. ಇವುಗಳ ತೀರದಲ್ಲಿ ಮಾಡಿದ ಶ್ರಾದ್ಧವು ಕೋಟಿಪಾಲು ಹೆಚ್ಚಾಗಿ ಫಲವನ್ನು ಕೊಡುವುದು. ಪುಣ್ಯಕರವಾದ ಜಂಬೂಮಾರ್ಗದಲ್ಲಿ ಸಕಲ ಮನೋರಥಗಳ ಫಲವನ್ನು ಕೊಡುವ ನೀಲಕುಂಡವೆಂಬ ಪಿತೃತೀರ್ಥವು ಇಂದಿಗೂ ಕಾಣಬರುತ್ತಿದೆ.

೨೩-೨೫. ರುದ್ರಸರಸ್ಸು, ಪುಣ್ಯಕರವಾದ ಮಾನಸಸರೋವರ, ಮಂದಾಕಿನೀ, ಅಚ್ಛೋದಾ, ವಿಪಾಶಾ, ಸರಸ್ವತೀ ಎಂಬ ನದಿಗಳು, ಪೂರ್ವಮಿತ್ರಕ್ಷೇತ್ರ, ಮಹಾಫಲಪ್ರದವಾದ ವೈದ್ಯನಾಥಕ್ಷೇತ್ರ, ಕ್ಷಿಪ್ರಾನದಿ, ಮಹಾಕಾಲಕ್ಷೇತ್ರ, ಶುಭಕರವಾದ ಕಾಲಂಜರಗಿರಿ, ವಂಶೋದ್ಭೇದ, ಹರೋದ್ಭೇದ, ಗಂಗೋದ್ಭೇದ, ಭದ್ರೇಶ್ವರ, ವಿಷ್ಣುಪದ, ನರ್ಮದಾದ್ವಾರ ಈ ಕ್ಷೇತ್ರಗಳೆಲ್ಲವೂ ಅತಿಪ್ರಸಿದ್ಧವಾದುವು. ಪಿತೃಗಳಿಗೆ ಇಲ್ಲಿ ಪಿಂಡವನ್ನಿತ್ತರೆ ಗಯೆಯಲ್ಲಿ ಪಿಂಡದಾನಮಾಡಿದ ಫಲ ಬರುವುದೆಂದು ಮಹರ್ಷಿಗಳು ಹೇಳುತ್ತಾರೆ.

ಗಯಾಪಿಂಡಪ್ರದಾನೇನ ಸಮಾನ್ಯಾಹುರ್ಮಹರ್ಷಯಃ ।
ಏತಾನಿ ಪಿತೃತೀರ್ಥಾನಿ ಸರ್ವಪಾಪಹರಾಣಿ ಚ ॥೨೬॥

ಸ್ಮರಣಾದಪಿ ಲೋಕಾನಾಂ ಕಿಮು ಶ್ರಾದ್ಧಕೃತಾಂ ನೃಣಾಂ ।
ಓಂಕಾರಂ ಪಿತೃತೀರ್ಥಂ ಚ ಕಾವೇರೀ ಕಪಿಲೋದಕಂ ॥೨೭॥

ಸಂಭೇದಶ್ಚಂಡವೇಗಾಯಾಸ್ತಥೈವಾಮರಕಂಟಕಂ ।
ಕುರುಕ್ಷೇತ್ರಾಚ್ಛತಗುಣಂ ತಸ್ಮಿನ್ ಸ್ನಾನಾದಿಕಂ ಭವೇತ್ ॥೨೮॥

ಶುಕತೀರ್ಥಂ ಚ ವಿಖ್ಯಾತಂ ತೀರ್ಥಂ ಸೋಮೇಶ್ವರಂ ಪರಂ ।
ಸರ್ವವ್ಯಾಧಿಹರಂ ಪುಣ್ಯಂ ಶತಕೋಟಿಫಲಾಧಿಕಂ ॥೨೯॥

ಶ್ರಾದ್ಧೇ ದಾನೇ ತಥಾ ಹೋಮೇ ಸ್ವಾಧ್ಯಾಯೇ ಜಲಸನ್ನಿಧೌ ।
ಕಾಯಾವರೋಹಣಂ ನಾಮ ತಥಾ ಚರ್ಮಣ್ವತೀ ನದೀ ॥೩೦॥

ಗೋಮತೀ ವರಣಾ ತದ್ವತ್ತೀರ್ಥಮೌಶೀನಸಂ ಪರಂ ।
ಭೈರವಂ ಭೃಗುತುಂಗಶ್ಚ ಗೌರೀತೀರ್ಥಮನುತ್ತಮಂ ॥೩೧॥

---

೨೬. ಈ ಪಿತೃತೀರ್ಥಗಳನ್ನು ನೆನೆದ ಮಾತ್ರದಿಂದಲೇ ಪಾಪಗಳೆಲ್ಲವೂ ಪರಿಹಾರವಾಗುವುವು. ಹೀಗಿರುವಾಗ ಇವುಗಳ ಸಾನ್ನಿಧ್ಯದಲ್ಲಿ ಶ್ರಾದ್ಧವನ್ನು ಮಾಡಿದ ಮನುಜರ ವಿಷಯವನ್ನು ಹೇಳಬೇಕಾದುದೇನು ?

೨೭–೨೮. ಓಂಕಾರವೆಂಬ ಪಿತೃತೀರ್ಥ, ಕಾವೇರೀ ಮತ್ತು ಕಪಿಲಾ ನದಿಗಳು, ಚಂಡವೇಗಾಸಂಗಮ, ಅಮರಕಂಟಕ ಇವುಗಳಲ್ಲಿ ಸ್ನಾನಾದಿಕರ್ಮಗಳನ್ನು ಆಚರಿಸಿದರೆ ಕುರುಕ್ಷೇತ್ರದ ನೂರರಷ್ಟು ಫಲವು ಬರುತ್ತದೆ.

೨೯. ಶುಕತೀರ್ಥವು ಪ್ರಖ್ಯಾತವಾದುದು. ಸೋಮೇಶ್ವರ ತೀರ್ಥವು ಸಕಲ ವ್ಯಾಧಿಗಳನ್ನೂ ನಿವಾರಣಮಾಡುವುದು. ಈ ಪವಿತ್ರತೀರ್ಥದ ಬಳಿಯಲ್ಲಿ ಶ್ರಾದ್ಧ, ದಾನ, ಹೋಮ, ವೇದಾಧ್ಯಯನ ಇವುಗಳನ್ನು ಮಾಡಿದರೆ ಕೋಟಿಪಾಲು ಅಧಿಕವಾಗಿ ಫಲವು ಪ್ರಾಪ್ತವಾಗುವುದು.

೩೦–೩೬. ಕಾಯಾವರೋಹಣಕ್ಷೇತ್ರ, ಚರ್ಮಣ್ವತೀ, ಗೋಮತೀ ಮತ್ತು ವರಣಾನದಿಗಳು, ಶ್ರೇಷ್ಠವಾದ ಔಶೀನಸ, ಭೈರವ ಮತ್ತು ಭೃಗುತುಂಗಗಳೆಂಬ

ತೀರ್ಥಂ ವೈನಾಯಕಂ ನಾಮ ಭದ್ರೇಶ್ವರಮತಃ ಪರಂ ।
ತಥಾ ಪಾಪಹರಂ ನಾಮ ಪುಣ್ಯಾಥ ತಪತೀ ನದೀ ॥೩೨॥

ಮೂಲತಾಪೀ ಪಯೋಷ್ಣೀ ಚ ಪಯೋಷ್ಣೀಸಂಗಮಸ್ತಥಾ ।
ಮಹಾಬೋಧಿಃ ಪಾಟಲಾ ಚ ನಾಗತೀರ್ಥಮವಂತಿಕಾ ॥೩೩॥

ತಥಾ ವೇಣಾನದೀ ಪುಣ್ಯಾ ಮಹಾಶಾಲಂ ತಥೈವ ಚ ।
ಮಹಾರುದ್ರಂ ಮಹಾಲಿಂಗಂ ದಶಾರ್ಣಾ ಚ ನದೀ ಶುಭಾ ॥೩೪॥

ಶತರುದ್ರಾ ಶತಾಹ್ವಾ ಚ ತಥಾ ವಿಶ್ವಪದಂ ಪರಂ ।
ಅಂಗಾರವಾಹಿಕಾ ತದ್ವನ್ನದೌ ತೌ ಶೋಣಘರ್ಘರೌ ॥೩೫॥

ಕಾಲಿಕಾ ಚ ನದೀ ಪುಣ್ಯಾ ವಿತಸ್ತಾ ಚ ನದೀ ತಥಾ ।
ಏತಾನಿ ಪಿತೃತೀರ್ಥಾನಿ ಶಸ್ಯಂತೇ ಸ್ನಾನದಾನಯೋಃ ॥೩೬॥

ಶ್ರಾದ್ಧಮೇತೇಷು ಯದ್ದತ್ತಂ ತದನಂತಫಲಂ ಸ್ಮೃತಂ ।
ದ್ರೋಣೀ ವಾಟನದೀ ಧಾರಾಸರಿತ್ಕ್ಷೀರನದೀ ತಥಾ ॥೩೭॥

ಗೋಕರ್ಣಂ ಗಜಕರ್ಣಂ ಚ ತಥಾ ಚ ಪುರುಷೋತ್ತಮಃ ।
ದ್ವಾರಕಾ ಕೃಷ್ಣತೀರ್ಥಂ ಚ ತಥಾರ್ಬುದಸರಸ್ವತೀ ॥೩೮॥

---

ಕ್ಷೇತ್ರಗಳು, ಅತ್ಯುತ್ತಮವಾದ ಗೌರೀತೀರ್ಥ, ವೈನಾಯಕತೀರ್ಥ, ಭದ್ರೇಶ್ವರ ಕ್ಷೇತ್ರ ಪಾಪಹರತೀರ್ಥ, ಪುಣ್ಯಕರಗಳಾದ ತಪತೀ, ಮೂಲತಾಪೀ, ಮತ್ತು ಪಯೋಷ್ಣೀ ನದಿಗಳು, ಪಯೋಷ್ಣೀಸಂಗಮ, ಮಹಾಬೋಧಿ ತೀರ್ಥ, ಪಾಟಲಾನದಿ, ನಾಗ ತೀರ್ಥ, ಅವಂತಿಕಾ ಮತ್ತು ವೇಣಾ ನದಿಗಳು, ಮಹಾಶಾಲ, ಮಹಾರುದ್ರ ಮತ್ತು ಮಹಾಲಿಂಗಗಳೆಂಬ ಕ್ಷೇತ್ರಗಳು, ಶುಭಕರವಾದ ದಶಾರ್ಣಾ, ಶತರುದ್ರಾ ಮತ್ತು ಶತಾಹ್ವಾನದಿಗಳು, ಶ್ರೇಷ್ಠವೆನಿಸಿದ ವಿಶ್ವಪದಕ್ಷೇತ್ರ, ಅಂಗಾರವಾಹಿಕಾನದಿ, ಶೋಣ ಮತ್ತು ಘರ್ಘರವೆಂಬ ನದಗಳು, ಪುಣ್ಯಪ್ರದವಾದ ಕಾಲಿಕಾ ಮತ್ತು ವಿತಸ್ತಾ ನದಿಗಳು ಇವೆಲ್ಲವೂ ಸ್ನಾನದಾನಾದಿಗಳಿಗೆ ಪ್ರಶಸ್ತವಾದ ಪಿತೃತೀರ್ಥಗಳು. ಇವುಗಳಲ್ಲಿ ಮಾಡಿದ ಶ್ರಾದ್ಧವು ಅನಂತವಾದ ಫಲವನ್ನು ಕೊಡುತ್ತದೆ.

೩೭-೩೮. ದ್ರೋಣೀ ನದಿ, ವಾಟನದಿ, ಧಾರಾ ಮತ್ತು ಕ್ಷೀರ ನದಿಗಳು, ಗೋಕರ್ಣ, ಗಜಕರ್ಣ ಮತ್ತು ಪುರುಷೋತ್ತಮವೆಂಬ ಕ್ಷೇತ್ರಗಳು, ದ್ವಾರಕಾತೀರ್ಥ,

ನದೀ ಮಣಿಮತೀ ನಾಮ ತಥಾ ಚ ಗಿರಿಕರ್ಣಿಕಾ ।
ಧೂತಪಾಪಂ ತಥಾ ತೀರ್ಥಂ ಸಮುದ್ರೋ ದಕ್ಷಿಣಸ್ತಥಾ ॥೩೯॥

ಏತೇಷು ಪಿತೃತೀರ್ಥೇಷು ಶ್ರಾದ್ಧಮಾನಂತ್ಯಮಶ್ನುತೇ ।
ತೀರ್ಥಂ ಮೇಘಕರಂ ನಾಮ ಸ್ವಯಮೇವ ಜನಾರ್ದನಃ ॥೪೦॥

ಯತ್ರ ಶಾರ್ಙ್ಗಧರೋ ವಿಷ್ಣುರ್ಮೇಖಲಾಯಾಮವಸ್ಥಿತಃ ।
ತಥಾ ಮಂದೋದರೀತೀರ್ಥಂ ತೀರ್ಥಂ ಚಂಪಾನದೀ ಶುಭಾ ॥೪೧॥

ತಥಾ ಸಾಮಲನಾಥಶ್ಚ ಮಹಾಶಾಲನದೀ ತಥಾ ।
ಚಕ್ರವಾಕಂ ಚರ್ಮಕೋಟಂ ತಥಾ ಜನ್ಮೇಶ್ವರಂ ಮಹತ್ ॥೪೨॥

ಅರ್ಜುನಂ ತ್ರಿಪುರಂ ಚೈವ ಸಿದ್ಧೇಶ್ವರಮತಃ ಪರಂ ।
ಶ್ರೀಶೈಲಂ ಶಾಂಕರಂ ತೀರ್ಥಂ ನಾರಸಿಹ್ಮಮತಃ ಪರಂ ॥೪೩॥

ಮಹೇಂದ್ರಂ ಚ ತಥಾ ಪುಣ್ಯಮಥ ಶ್ರೀರಂಗಸಂಜ್ಞಿತಂ ।
ಏತೇಷ್ವಪಿ ಸದಾ ಶ್ರಾದ್ಧಮನಂತಫಲದಂ ಸ್ಮೃತಂ ॥೪೪॥

---

ಕೃಷ್ಣತೀರ್ಥ, ಅರ್ಬುದತೀರ್ಥ, ಸರಸ್ವತೀ, ಮಣಿಮತೀ ಮತ್ತು ಗಿರಿಕರ್ಣಿಕಾ ನದಿಗಳು, ಧೂತ ಪಾಪತೀರ್ಥ, ದಕ್ಷಿಣಸಮುದ್ರ ಇವು ಪಿತೃಗಳಿಗೆ ಪ್ರಿಯವಾಗಿವೆ. ಇವುಗಳಲ್ಲಿ ನಡೆಸಿದ ಶ್ರಾದ್ಧವು ಅಕ್ಷಯ್ಯವೆನಿಸುವುದು.

೪೦. ಮೇಘಕರವೆಂದು ಪ್ರಸಿದ್ಧವಾದ ಪಿತೃತೀರ್ಥವುಂಟು. ಅಲ್ಲಿ ಶಾರ್ಙ್ಗಧಾರಿಯಾದ ಸಾಕ್ಷಾದ್ವಿಷ್ಣು ನೆಲೆಸಿದ್ದಾನೆ. ಮತ್ತು ಅದರ ಸುತ್ತಮುತ್ತಲಿನ ಪ್ರದೇಶದಲ್ಲಿ ಸಂಚರಿಸುತ್ತಾನೆ.

೪೧-೪೪. ಮಂಮೋದರೀ ತೀರ್ಥ, ಶುಭಕರವಾದ ಚಂಪಾನದಿ, ಅಮಲನಾಥಕ್ಷೇತ್ರ, ಮಹಾಶಾಲ ನದಿ, ಚಕ್ರವಾಕ, ಚರ್ಮಕೋಟ, ಜನ್ಮೇಶ್ವರ, ಅರ್ಜುನ, ತ್ರಿಪುರ, ಸಿದ್ಧೇಶ್ವರ, ಶ್ರೀಶೈಲ, ಶಾಂಕರ, ನಾರಸಿಹ್ಮ, ಮಹೇಂದ್ರ, ಶ್ರೀರಂಗ ಇವೆಲ್ಲವೂ ದಿವ್ಯಕ್ಷೇತ್ರಗಳು. ಇವುಗಳಲ್ಲಿ ಶ್ರಾದ್ಧವನ್ನಾಚರಿಸಿದರೆ ಅನಂತಫಲ ಪ್ರಾಪ್ತಿಯುಂಟು. ಇವುಗಳ ದರ್ಶನ ಮಾತ್ರದಿಂದಲೇ ಪಾಪಗಳೆಲ್ಲ ತೊಲಗುವುವು.

**ದರ್ಶನಾದಪಿ ಚೈತಾನಿ ಸದ್ಯಃ ಪಾಪಹರಾಣಿ ವೈ ।**
**ತುಂಗಭದ್ರಾ ನದೀ ಪುಣ್ಯಾ ತಥಾ ಭೀಮರಥೀ ಸರಿತ್ ॥೪೫॥**

**ಭೀಮೇಶ್ವರಂ ಕೃಷ್ಣವೇಣಾ ಕಾವೇರೀ ಕುಟ್ಮಲಾ ನದೀ ।**
**ನದೀ ಗೋದಾವರೀ ನಾಮ ತ್ರಿಸಂಧ್ಯಾ ತೀರ್ಥಮುತ್ತಮಂ ॥೪೬॥**

**ತೀರ್ಥಂ ತ್ರೈಯಂಬಕಂ ನಾಮ ಸರ್ವತೀರ್ಥನಮಸ್ಕೃತಂ ।**
**ಯತ್ರಾಸ್ತೇ ಭಗವಾನೀಶಃ ಸ್ವಯಮೇವ ತ್ರಿಲೋಚನಃ ॥೪೭॥**

**ಶ್ರಾದ್ಧಮೇತೇಷು ಸರ್ವೇಷು ಕೋಟಿಕೋಟಿಗುಣಂ ಭವೇತ್ ।**
**ಸ್ಮರಣಾದಪಿ ಪಾಪಾನಿ ನಶ್ಯಂತಿ ಶತಧಾ ದ್ವಿಜಾಃ ॥೪೮॥**

**ಶ್ರೀಪರ್ಣೀ ತಾಮ್ರಪರ್ಣೀ ಚ ಜಯಾತೀರ್ಥಮನುತ್ತಮಂ ।**
**ತಥಾ ಮತ್ಸ್ಯನದೀ ಪುಣ್ಯಾ ಶಿವಧಾರಂ ತಥೈವ ಚ ॥೪೯॥**

**ಭದ್ರತೀರ್ಥಂ ಚ ವಿಖ್ಯಾತಂ ಪಂಪಾತೀರ್ಥಂ ಚ ಶಾಶ್ವತಂ ।**
**ಪುಣ್ಯಂ ರಾಮೇಶ್ವರಂ ತದ್ವದೇಲಾಪುರಮಲಂಪುರಂ ॥೫೦॥**

**ಅಂಗಭೂತಂ ಚ ವಿಖ್ಯಾತಮಾಮರ್ದಕಮಲಂಭುಷಂ ।**
**ಆಮ್ರಾತಕೇಶ್ವರಂ ತದ್ವದೇಕಾಂಭಕಮತಃ ಪರಂ ॥೫೧॥**

---

೪೫-೪೮. ತುಂಗಭದ್ರಾನದಿ, ಭೀಮರಥೀನದಿ, ಭೀಮೇಶ್ವರಕ್ಷೇತ್ರ, ಕೃಷ್ಣವೇಣಾ, ಕಾವೇರೀ, ಕುಟ್ಮಲಾ ಮತ್ತು ಗೋದಾವರೀ ನದಿಗಳು, ತ್ರಿಸಂಧ್ಯಾತೀರ್ಥ, ಇವೆಲ್ಲವೂ ಪಾವನವಾದುವು. ತ್ರ್ಯಂಬಕತೀರ್ಥವು ಮಿಕ್ಕೆಲ್ಲವುಗಳಿಗಿಂತ ಅತ್ಯಂತ ಪೂಜ್ಯವಾದುದು. ಪರಮೇಶ್ವರನೇ ಇಲ್ಲಿ ನೆಲೆಸಿರುವನು. ಈ ಕ್ಷೇತ್ರಗಳಲ್ಲೆಲ್ಲ ಮಾಡಿದ ಶ್ರಾದ್ಧವು ಕೋಟಿಗುಣವಾಗಿ ಫಲವನ್ನು ಕೊಡುವುದು. ಇವುಗಳನ್ನು ಸ್ಮರಿಸಿದರೆ ಸಾಕು ; ಪಾಪವೆಲ್ಲ ನಶಿಸುವುದು.

೪೯-೫೪. ಶ್ರೀಪರ್ಣೀ ಮತ್ತು ತಾಮ್ರಪರ್ಣೀ ನದಿಗಳು, ಜಯಾ ತೀರ್ಥ, ಮತ್ಸ್ಯನದಿ, ಶಿವಧಾರಕ್ಷೇತ್ರ, ಭದ್ರತೀರ್ಥ, ಪಂಪಾತೀರ್ಥ, ರಾಮೇಶ್ವರಕ್ಷೇತ್ರ, ಏಲಾಪುರ, ಅಲಂಪುರ, ಅಂಗಭೂತ, ಆಮರ್ದಕ, ಅಲಂಭುಷ, ಆಮ್ರಾತಕೇಶ್ವರ, ಏಕಾಂಭಕಕ್ಷೇತ್ರ, ಗೋವರ್ಧನ, ಹರಿಶ್ಚಂದ್ರ, ಕೃಪುಚಂದ್ರ, ಪೃಥೂದಕ, ಸಹಸ್ರಾಕ್ಷ,

ಗೋವರ್ಧನಂ ಹರಿಶ್ಚಂದ್ರಂ ಕೃಪುಚಂದ್ರಂ ಪೃಥೂದಕಂ।
ಸಹಸ್ರಾಕ್ಷಂ ಹಿರಣ್ಯಾಕ್ಷಂ ತಥಾ ಚ ಕದಲೀ ನದೀ ॥೫೨॥

ರಾಮಾಧಿವಾಸಸ್ತತ್ರಾಪಿ ತಥಾ ಸೌಮಿತ್ರಿಸಂಗಮಃ।
ಇಂದ್ರಕೀಲಂ ಮಹಾನಾದಂ ತಥಾ ಚ ಪ್ರಿಯಮೇಲಕಂ ॥೫೩॥

ಏತಾನ್ಯಪಿ ಸದಾ ಶ್ರಾದ್ಧೇ ಪ್ರಶಸ್ತಾನ್ಯಧಿಕಾನಿ ತು।
ಏತೇಷು ಸರ್ವದೇವಾನಾಂ ಸಾನ್ನಿಧ್ಯಂ ದೃಶ್ಯತೇ ಯತಃ ॥೫೪॥

ದಾನಮೇತೇಷು ಸರ್ವೇಷು ದತ್ತಂ ಕೋಟಿಶತಾಧಿಕಂ।
ಬಾಹುದಾ ಚ ನದೀ ಪುಣ್ಯಾ ತಥಾ ಸಿದ್ಧವನಂ ಶುಭಂ ॥೫೫॥

ತೀರ್ಥಂ ಪಾಶುಪತಂ ನಾಮ ನದೀ ಪಾರ್ವತಿಕಾ ಶುಭಾ।
ಶ್ರಾದ್ಧಮೇತೇಷು ಸರ್ವೇಷು ದತ್ತಂ ಕೋಟಿಶತೋತ್ತರಂ ॥೫೬॥

ತಥೈವ ಪಿತೃತೀರ್ಥಂ ತು ಯತ್ರ ಗೋದಾವರೀ ನದೀ।
ಯುತಾ ಲಿಂಗಸಹಸ್ರೇಣ ಸರ್ವಾಂತರಜಲಾವಹಾ ॥೫೭॥

ಜಾಮದಗ್ನ್ಯಸ್ಯ ತತ್ತೀರ್ಥಂ ಕ್ರಮಾದಾಯಾತಮುತ್ತಮಂ।
ಪ್ರತೀಕಸ್ಯ ಭಯಾದ್ಭಿನ್ನಂ ಯತ್ರ ಗೋದಾವರೀ ನದೀ ॥೫೮॥

---

ಹಿರಣ್ಯಾಕ್ಷ ಇವೆಲ್ಲವೂ ಪವಿತ್ರವಾದ ಕ್ಷೇತ್ರಗಳು. ಕದಲೀನದಿ, ರಾಮಾಧಿವಾಸ, ಸೌಮಿತ್ರಿಸಂಗಮ, ಇಂದ್ರಕೀಲ, ಮಹಾನಾದ ಮತ್ತು ಪ್ರಿಯಮೇಲಕಕ್ಷೇತ್ರಗಳು ಬಹು ಶ್ರೇಷ್ಠವಾದುವು. ಇವುಗಳಲ್ಲಿ ಸಕಲ ದೇವತೆಗಳ ಸಾನ್ನಿಧ್ಯವಿದೆ. ಇಲ್ಲಿ ಮಾಡಿದ ಪಿಂಡದಾನಾದಿಗಳು ಅಕ್ಷಯಫಲವನ್ನು ಕೊಡುತ್ತವೆ.

೫೫-೫೬. ಬಾಹುದಾನದಿ, ಸಿದ್ಧವನ, ಪಾಶುಪತತೀರ್ಥ, ಪಾರ್ವತೀನದಿ ಇವುಗಳ ಸಾನ್ನಿಧ್ಯದಲ್ಲಿ ನಡೆಸಿದ ಶ್ರಾದ್ಧಕ್ಕೆ ಕೋಟಿಮಡಿ ಹೆಚ್ಚಾಗಿ ಫಲವು ಪ್ರಾಪ್ತವಾಗುತ್ತದೆ.

೫೭-೫೮. ಗೋದಾವರೀ ನದಿಯಲ್ಲಿ ಜಾಮದಗ್ನ್ಯತೀರ್ಥವೆಂಬುದೊಂದುಂಟು; ಅಲ್ಲಿ ಸಾವಿರಾರು ಲಿಂಗಗಳಿವೆ. ಎಲ್ಲ ತೀರ್ಥಗಳಿಂದಲೂ ಪುಣ್ಯಜಲವು ಅಂತರ್ಗಾಮಿಯಾಗಿ ಅಲ್ಲಿ ಬಂದು ಸೇರುತ್ತದೆ. ಪ್ರತೀಕರಾಜನ ಭಯದಿಂದ ಒಮ್ಮೆ ಗೋದಾವರೀನದಿಯು ದಡವನ್ನು ಒಡೆದುಕೊಂಡು ಹರಿಯಿತು. ಆ ಸ್ಥಳದಲ್ಲಿ

**ತತ್ತೀರ್ಥಂ ಹವ್ಯಕವ್ಯಾನಾಮಪ್ಸರೋಯುಗಸಂಜ್ಞಿತಂ ।**
**ಶ್ರಾದ್ಧಾಗ್ನಿಕಾರ್ಯದಾನೇಷು ತಥಾ ಕೋಟಿಶತಾಧಿಕಂ ॥೫೯॥**

**ತಥಾ ಸಹಸ್ರಲಿಂಗಂ ಚ ರಾಘವೇಶ್ವರಮುತ್ತಮಂ ।**
**ಸೇಂದ್ರಫೇನಾ ನದೀ ಪುಣ್ಯಾ ಯತ್ರೇಂದ್ರಃ ಪತಿತಃ ಪುರಾ ॥೬೦॥**

**ನಿಹತ್ಯ ನಮುಚಿಂ ಶಕ್ರಸ್ತಪಸಾ ಸ್ವರ್ಗಮಾಪ್ತವಾನ್ ।**
**ತತ್ರ ದತ್ತಂ ನರೈಃ ಶ್ರಾದ್ಧಮನಂತಫಲದಂ ಭವೇತ್ ॥೬೧॥**

**ತೀರ್ಥಂ ತು ಪುಷ್ಕರಂ ನಾಮ ಶಾಲಗ್ರಾಮಂ ತಥೈವ ಚ ।**
**ಸೋಮಪಾನಂ ಚ ವಿಖ್ಯಾತಂ ಯತ್ರ ವೈಶ್ವಾನರಾಲಯಂ ॥೬೨॥**

**ತೀರ್ಥಂ ಸಾರಸ್ವತಂ ನಾಮ ಸ್ವಾಮಿತೀರ್ಥಂ ತಥೈವ ಚ ।**
**ಮಲಂದರಾ ನದೀ ಪುಣ್ಯಾ ಕೌಶಿಕೀ ಚಂದ್ರಿಕಾ ತಥಾ ॥೬೩॥**

**ವೈದರ್ಭಾ ವಾಥ ವೈರಾ ಚ ಪಯೋಷ್ಣೀ ಪ್ರಾಙ್ಮುಖಾ ಪರಾ ।**
**ಕಾವೇರೀ ಚೋತ್ತರಾ ಪುಣ್ಯಾ ತಥಾ ಜಾಲಂಧರೋ ಗಿರಿಃ ॥೬೪॥**

---

ಅಪ್ಸರೋಯುಗವೆಂಬ ತೀರ್ಥವಿದೆ. ಅದು ಹವ್ಯಕವ್ಯಗಳಿಗೆ ಪ್ರಶಸ್ತವಾದುದು. ಶ್ರಾದ್ಧವನ್ನೂ, ಅಗ್ನಿಕಾರ್ಯವನ್ನೂ, ಪಿಂಡದಾನವನ್ನೂ ಇಲ್ಲಿ ಮಾಡಿದರೆ ಅನಂತ ಫಲವು ದೊರಕುವುದು.

೬೦-೬೧. ಸಹಸ್ರಲಿಂಗ ಮತ್ತು ರಾಘವೇಶ್ವರಕ್ಷೇತ್ರಗಳು ಉತ್ತಮವಾದುವು. ಇಂದ್ರಫೇನಾನದಿಯು ಪುಣ್ಯಪ್ರದವಾದುದು. ನಮುಚಿಯನ್ನು ಕೊಂದು ದೇವೇಂದ್ರನು ಆ ಪಾಪದಿಂದ ಗ್ರಸ್ತನಾಗಿ ಇಲ್ಲಿ ಬಿದ್ದನು. ಬಳಿಕ ತಪಸ್ಸುಮಾಡಿ ಸ್ವರ್ಗವನ್ನೇರಿದನು. ಇಲ್ಲಿ ಶ್ರಾದ್ಧವನ್ನು ಮಾಡಿದರೆ ಅಪಾರವಾದ ಫಲವು ಬರುವುದು.

೬೨-೬೪. ಪುಷ್ಕರತೀರ್ಥವೂ ಸಾಲಗ್ರಾಮತೀರ್ಥವೂ ಪವಿತ್ರವಾದುವು. ಸೋಮಪಾನಕ್ಷೇತ್ರದಲ್ಲಿ ಅಗ್ನಿದೇವನ ದೇವಾಲಯವಿದೆ. ಸಾರಸ್ವತ ಮತ್ತು ಸ್ವಾಮಿತೀರ್ಥಗಳು ಪುಣ್ಯಕರವಾದುವು. ಮಲಂಧರಾ, ಕೌಶಿಕೀ, ಚಂದ್ರಿಕಾ, ವೈದರ್ಭಾ, ವೈರಾ, ಪೂರ್ವಗಾಮಿನಿಯಾದ ಪಯೋಷ್ಣೀ, ಮತ್ತು ಉತ್ತರವಾಹಿನಿಯಾದ ಕಾವೇರೀ ನದಿಗಳೂ, ಜಾಲಂಧರಗಿರಿಯೂ ಶ್ರಾದ್ಧಕಾರ್ಯಕ್ಕೆ ಬಹು ಪ್ರಶಸ್ತವಾಗಿವೆ. ಅಕ್ಷಯಫಲವನ್ನು ಕೊಡುತ್ತವೆ.

**ಏತೇಷು ಶ್ರಾದ್ಧತೀರ್ಥೇಷು ಶ್ರಾದ್ಧಮಾನಂತ್ಯಮುಶ್ನುತೇ ।**
**ಲೋಹದಂಡಂ ತಥಾ ತೀರ್ಥಂ ಚಿತ್ರಕೂಟಸ್ತಥೈವ ಚ ॥೬೫॥**

**ವಿಂಧ್ಯಯೋಗಶ್ಚ ಗಂಗಾಯಾಸ್ತಥಾ ನಂದಾತಟಂ ಶುಭಂ ।**
**ಕುಬ್ಜಾಭ್ರಂ ತು ತಥಾ ತೀರ್ಥಮುರ್ವಶೀಪುಲಿನಂ ತಥಾ ॥೬೬॥**

**ಸಂಸಾರಮೋಚನಂ ತೀರ್ಥಂ ತಥೈವ ಋಣಮೋಚನಂ ।**
**ಏತೇಷು ಪಿತೃತೀರ್ಥೇಷು ಶ್ರಾದ್ಧಮಾನಂತ್ಯಮುಶ್ನುತೇ ॥೬೭॥**

**ಅಟ್ಟಹಾಸಂ ತಥಾ ತೀರ್ಥಂ ಗೌತಮೇಶ್ವರಮೇವ ಚ ।**
**ತಥಾ ವಸಿಷ್ಠಂ ತೀರ್ಥಂ ತು ಹಾರೀತಂ ತು ತತಃ ಪರಂ ॥೬೮॥**

**ಬ್ರಹ್ಮಾವರ್ತಂ ಕುಶಾವರ್ತಂ ಹಯತೀರ್ಥಂ ತಥೈವ ಚ ।**
**ಪಿಂಡಾರಕಂ ಚ ವಿಖ್ಯಾತಂ ಶಂಖೋದ್ಧಾರಂ ತಥೈವ ಚ ॥೬೯॥**

**ಘಂಟೇಶ್ವರಂ ಬಿಲ್ವಕಂ ಚ ನೀಲಪರ್ವತಮೇವ ಚ ।**
**ತಥಾ ಚ ಧರಣೀತೀರ್ಥಂ ರಾಮತೀರ್ಥಂ ತಥೈವ ಚ ॥೭೦॥**

**ಅಶ್ವತೀರ್ಥಂ ಚ ವಿಖ್ಯಾತಮನಂತಂ ಶ್ರಾದ್ಧದಾನಯೋಃ ।**
**ತೀರ್ಥಂ ವೇದಶಿರೋ ನಾಮ ತಥೈವೌಘವತೀ ನದೀ ॥೭೧॥**

**ತೀರ್ಥಂ ವಸುಪ್ರದಂ ನಾಮ ಚ್ಛಾಗಲಾಂಡಂ ತಥೈವ ಚ ।**
**ಏತೇಷು ಶ್ರಾದ್ಧದಾತಾರಃ ಪ್ರಯಾಂತಿ ಪರಮಂ ಪದಂ ॥೭೨॥**

---

೬೫-೬೭. ಲೋಹದಂಡ, ಚಿತ್ರಕೂಟ, ವಿಂಧ್ಯಯೋಗ, ಗಂಗಾ ಮತ್ತು ನಂದಾನದಿಗಳ ತಟಪ್ರದೇಶ, ಕುಬ್ಜಾಭ್ರ, ಉರ್ವಶೀಪುಲಿನ, ಸಂಸಾರಮೋಚನ, ಋಣಮೋಚನ ಇವೆಲ್ಲವೂ ಅಕ್ಷಯಫಲದಾಯಕಗಳಾದ ಪಿತೃತೀರ್ಥಗಳು.

೬೮-೭೦. ಅಟ್ಟಹಾಸತೀರ್ಥ, ಗೌತಮೇಶ್ವರ, ವಸಿಷ್ಠತೀರ್ಥ, ಹಾರೀತ ತೀರ್ಥ ಬ್ರಹ್ಮಾವರ್ತ, ಕುಶಾವರ್ತ, ಹಯತೀರ್ಥ, ಪಿಂಡಾರಕಕ್ಷೇತ್ರ, ಶಂಖೋದ್ಧಾರತೀರ್ಥ, ಘಂಟೇಶ್ವರ, ಬಿಲ್ವಕಕ್ಷೇತ್ರ, ನೀಲಪರ್ವತ, ಧರಣೀತೀರ್ಥ, ರಾಮತೀರ್ಥ, ಅಶ್ವತೀರ್ಥ ಇವೆಲ್ಲವೂ ಶ್ರಾದ್ಧಾರ್ಹವಾದ ಕ್ಷೇತ್ರಗಳು. ಇಲ್ಲಿ ಪಿಂಡ ದಾನಮಾಡುವುದರಿಂದ ಪಿತೃಗಳಿಗೆ ಅಪರಿಮಿತವಾದ ತೃಪ್ತಿಯುಂಟಾಗುವುದು.

೭೧-೭೨. ವೇದಶಿರಸ್ತೀರ್ಥ, ಓಘವತೀನದಿ, ವಸುಪ್ರದತೀರ್ಥ, ಛಾಗ ಲಾಂಡಕ್ಷೇತ್ರ ಇವುಗಳಲ್ಲಿ ಶ್ರಾದ್ಧಮಾಡುವವರು ಉತ್ತಮಗತಿಯನ್ನು ಪಡೆಯುವರು.

**ತಥಾ ಚ ಬದರೀತೀರ್ಥಂ ಗಣತೀರ್ಥಂ ತಥೈವ ಚ ।**
**ಜಯಂತಂ ವಿಜಯಂ ಚೈವ ಶಕ್ರತೀರ್ಥಂ ತಥೈವ ಚ ॥೭೩॥**

**ಶ್ರೀಪತೇಶ್ಚ ತಥಾ ತೀರ್ಥಂ ತೀರ್ಥಂ ರೈವತಕಂ ತಥಾ ।**
**ತಥೈವ ಶಾರದಾತೀರ್ಥಂ ಭದ್ರಕಾಲೇಶ್ವರಂ ತಥಾ ॥೭೪॥**

**ವೈಕುಂಠತೀರ್ಥಂ ಚ ಪರಂ ಭೀಮೇಶ್ವರಮಥಾಽಪಿ ವಾ ।**
**ಏತೇಷು ಶ್ರಾದ್ಧದಾತಾರಃ ಪ್ರಯಾಂತಿ ಪರಮಾಂ ಗತಿಂ ॥೭೫॥**

**ತೀರ್ಥಂ ಮಾತೃಗೃಹಂ ನಾಮ ಕರವೀರಪುರಂ ತಥಾ ।**
**ಕುಶೇಶಯಂ ಚ ವಿಖ್ಯಾತಂ ಗೌರೀಶಿಖರಮೇವ ಚ ॥೭೬॥**

**ನಕುಲೇಶಸ್ಯ ತೀರ್ಥಂ ಚ ಕರ್ದಮಾಲಂ ತಥೈವ ಚ ।**
**ದಿಂಡಿಪುಣ್ಯಕರಂ ತದ್ವತ್ಪುಂಡರೀಕಪುರಂ ತಥಾ ॥೭೭॥**

**ಸಪ್ತಗೋದಾವರೀತೀರ್ಥಂ ಸರ್ವತೀರ್ಥೇಶ್ವರೇಶ್ವರಂ ।**
**ತತ್ರ ಶ್ರಾದ್ಧಂ ಪ್ರದಾತವ್ಯಮನಂತಫಲಮೀಪ್ಸುಭಿಃ ॥೭೮॥**

**ಏಷ ತೂದ್ದೇಶತಃ ಪ್ರೋಕ್ತಸ್ತೀರ್ಥಾನಾಂ ಸಂಗ್ರಹೋ ಮಯಾ ।**
**ವಾಗೀಶೋಽಪಿ ನ ಶಕ್ನೋತಿ ವಿಸ್ತರಾತ್ಕಿಮು ಮಾನುಷಃ ॥೭೯॥**

---

೭೩-೭೫. ಬದರೀತೀರ್ಥ, ಗಣತೀರ್ಥ, ಜಯಂತಕ್ಷೇತ್ರ, ವಿಜಯಕ್ಷೇತ್ರ, ಶಕ್ರತೀರ್ಥ, ಶ್ರೀಪತಿತೀರ್ಥ, ರೈವತಕತೀರ್ಥ, ಶಾರದಾತೀರ್ಥ, ಭದ್ರಕಾಲೇಶ್ವರ ಕ್ಷೇತ್ರ, ವೈಕುಂಠತೀರ್ಥ ಮತ್ತು ಭೀಮೇಶ್ವರತೀರ್ಥ ಇವುಗಳಲ್ಲಿ ಪಿತೃಕಾರ್ಯವನ್ನು ನೆರವೇರಿಸಿದವರು ಉತ್ತಮಲೋಕವನ್ನೈದುವರು.

೭೬-೭೮, ಮಾತೃಗೃಹತೀರ್ಥ, ಕರವೀರಪುರ, ಕುಶೇಶಯ, ಪ್ರಸಿದ್ಧವಾದ ಗೌರೀಶಿಖರ, ನಕುಲೇಶತೀರ್ಥ, ಕರ್ದಮಾಲಕ್ಷೇತ್ರ, ಪುಣ್ಯಕರವಾದ ದಿಂಡಿತೀರ್ಥ, ಪುಂಡರೀಕಪುರ, ಸಕಲತೀರ್ಥಗಳ ಅಧಿರಾಜನೆನಿಸಿದ ಸಪ್ತಗೋದಾವರೀತೀರ್ಥ ಇವುಗಳಲ್ಲಿ ಶ್ರಾದ್ಧಕರ್ಮವನ್ನು ಆಚರಿಸಿದರೆ ಅಕ್ಷಯ್ಯಫಲಪ್ರಾಪ್ತಿಯುಂಟು.

೭೯. ಹೀಗೆ ಪುಣ್ಯತೀರ್ಥಗಳ ಸಮುದಾಯವನ್ನು ಸಂಗ್ರಹವಾಗಿ ತಿಳಿಸಿರುವೆನು. ಎಲ್ಲವನ್ನೂ ವಿಸ್ತಾರವಾಗಿ ಹೇಳುವುದಕ್ಕೆ ಬೃಹಸ್ಪತಿಯಿಂದಲೂ ಆಗದು; ಹೀಗಿರಲು ಮನುಷ್ಯನಿಂದೇನಾದೀತು?

**ಸತ್ಯಂ ತೀರ್ಥಂ ದಯಾ ತೀರ್ಥಂ ತೀರ್ಥಮಿಂದ್ರಿಯನಿಗ್ರಹಃ ।**
**ವರ್ಣಾಶ್ರಮಾಣಾಂ ಗೇಹೋಽಪಿ ತೀರ್ಥಂ ತು ಸಮುದಾಹೃತಂ** ||೮೦||

**ಏತತ್ತೀರ್ಥೇಷು ಯಚ್ಛ್ರಾದ್ಧಂ ತತ್ಕೋಟಿಗುಣಮಿಷ್ಯತೇ ।**
**ಯಸ್ಮಾತ್ತಸ್ಮಾತ್ಪ್ರಯತ್ನೇನ ತೀರ್ಥೇ ಶ್ರಾದ್ಧಂ ಸಮಾಚರೇತ್** ||೮೧||

**ಪ್ರಾತಃಕಾಲೋ ಮುಹೂರ್ತಾಂಸ್ತ್ರೀನ್ ಸಂಗವಸ್ತಾವದೇವ ತು ।**
**ಮಧ್ಯಾಹ್ನಸ್ತ್ರಿಮುಹೂರ್ತಃ ಸ್ಯಾದಪರಾಹ್ಣಸ್ತತಃ ಪರಂ** ||೮೨||

**ಸಾಯಾಹ್ನಸ್ತ್ರಿಮುಹೂರ್ತಃ ಸ್ಯಾಚ್ಛ್ರಾದ್ಧಂ ತತ್ರ ನ ಕಾರಯೇತ್ ।**
**ರಾಕ್ಷಸೀ ನಾಮ ಸಾ ವೇಲಾ ಗರ್ಹಿತಾ ಸರ್ವಕರ್ಮಸು** ||೮೩||

---

೮೦. ಸತ್ಯವೊಂದುತೀರ್ಥ, ದಯೆಯೊಂದುತೀರ್ಥ, ಜಿತೇಂದ್ರಿಯತ್ವವೂ ಒಂದು ತೀರ್ಥ, ವರ್ಣಾಶ್ರಮಧರ್ಮವನ್ನು ತಪ್ಪದೆ ನಡೆಸುವವರ ಮನೆಯೂ ಸಹ ಒಂದು ಪುಣ್ಯತೀರ್ಥವೇ ಸರಿ.

೮೧. ಮೇಲೆ ಹೇಳಿದ ಈ ಪವಿತ್ರ ಸ್ಥಲಗಳಲ್ಲಿ ಮಾಡಿದ ಶ್ರಾದ್ದವು ಕೋಟಿ ಗಟ್ಟಲೆ ಅಧಿಕವಾದ ಫಲವನ್ನು ಕೊಡುವುದಾದಕಾರಣ ಪ್ರಯತ್ನಪೂರ್ವಕವಾಗಿ ಪುಣ್ಯತೀರ್ಥಗಳಲ್ಲಿ ಪಿತೃಕರ್ಮವನ್ನು ನಡೆಸಬೇಕು.

೮೨. ಹಗಲಿನಲ್ಲಿ ಮೊದಲನೆಯ ಮೂರು ಮುಹೂರ್ತಗಳಿಗೆ ಪ್ರಾತಃಕಾಲ ವೆಂದು ಹೆಸರು. ಬಳಿಕ ಸಂಗವ, ಮಧ್ಯಾಹ್ನ ಮತ್ತು ಅಪರಾಹ್ಣಗಳೆಂಬ ಕಾಲಗಳು ಕ್ರಮವಾಗಿ ಬರುವುವು. ಇವುಗಳಲ್ಲೊಂದೊಂದರ ಅವಧಿಯೂ ಮೂರು ಮೂರು ಮುಹೂರ್ತಗಳೆಂದರಿಯಬೇಕು. (ಒಂದು ಮುಹೂರ್ತಕ್ಕೆ ಎರಡು ಗಳಿಗೆ ಅಥವಾ ನಲವತ್ತೆಂಟು ನಿಮಿಷಗಳು)

೮೩. ಕೊನೆಯ ಭಾಗವಾದ ಸಾಯಾಹ್ನವೆಂಬುದೂ ಸಹ ಮೂರು ಮೂಹೂರ್ತಗಳ ಕಾಲ ವ್ಯಾಪಿಸಿರುವುದು. ಅದರಲ್ಲಿ ಶ್ರಾದ್ಧವನ್ನು ಮಾಡಬಾರದು. ಅದಕ್ಕೆ ರಾಕ್ಷಸಕಾಲವೆಂದೇ ಹೆಸರು. ಯಾವ ಕರ್ಮಕ್ಕೂ ಅದು ಪ್ರಶಸ್ತವಲ್ಲ.

**ಅಹ್ನೋ ಮುಹೂರ್ತಾ ವಿಖ್ಯಾತಾ ದಶ ಪಂಚ ಚ ಸರ್ವದಾ ।**
**ತತ್ರಾಷ್ಟಮೋ ಮುಹೂರ್ತೋಽಯಂ ಸ ಕಾಲಃ ಕುತುಪಃ ಸ್ಮೃತಃ ॥೮೪॥**

**ಮಧ್ಯಾಹ್ನೇ ಸರ್ವದಾ ಯಸ್ಮಾನ್ಮಂದೀಭವತಿ ಭಾಸ್ಕರಃ ।**
**ತಸ್ಮಾದನಂತಫಲದಸ್ತದಾರಂಭೋ ಭವಿಷ್ಯತಿ ॥೮೫॥**

**ಮಧ್ಯಾಹ್ನಂ ಖಡ್ಗಪಾತ್ರಂ ಚ ತಥಾ ನೇಪಾಲಕಂಬಲಃ ।**
**ರೂಪ್ಯಂ ದರ್ಭಾಸ್ತಿಲಾ ಗಾವೋ ದೌಹಿತ್ರಶ್ಚಾಷ್ಟಮಃ ಸ್ಮೃತಃ ॥೮೬॥**

**ಪಾಪಂ ಕುತ್ಸಿತಮಿತ್ಯಾಹುಸ್ತಸ್ಯ ಸಂತಾಪಕಾರಿಣಃ ।**
**ಅಷ್ಟಾವೇತೇ ಯತಸ್ತಸ್ಮಾತ್ಕುತಪಾ ಇತಿ ವಿಶ್ರುತಾಃ ॥೮೭॥**

**ಊರ್ಧ್ವಂ ಮುಹೂರ್ತಾತ್ಕುತಪಾದ್ಯನ್ಮುಹೂರ್ತಚತುಷ್ಟಯಂ ।**
**ಮುಹೂರ್ತಪಂಚಕಂ ಚೈತತ್ಸ್ವಧಾಭವನಮಿಷ್ಯತೇ ॥೮೮॥**

---

೮೪. ಹಗಲಿನಲ್ಲಿ ಒಟ್ಟು ಹದಿನೈದು ಮುಹೂರ್ತಗಳಿವೆ. ಅವುಗಳಲ್ಲಿ ಎಂಟನೆಯದಕ್ಕೆ ಕುತುಪವೆಂದು ಹೆಸರು.*

೮೫. ನಡುಹಗಲಿನಲ್ಲಿ ಯಾವಾಗಲೂ ಸೂರ್ಯನ ನಡೆಗೆ ಮೆತ್ತನಾಗುತ್ತದೆ. ಆದುದರಿಂದ ಆ ವೇಳೆಯಲ್ಲಿ ತೊಡಗಿದ ಕರ್ಮವು ಅನಂತವಾದ ಫಲವನ್ನು ಕೊಡುವುದು.

೮೬-೮೭. ಮಧ್ಯಾಹ್ನ, ಖಡ್ಗಮೃಗದ ಕೊಂಬಿನ ಪಾತ್ರೆ, ನೇಪಾಲದೇಶದ ಕಂಬಳಿ, ಬೆಳ್ಳಿ, ದರ್ಭೆ, ಎಳ್ಳು, ಹಸುಗಳು, ಮಗಳ ಮಗ, ಇವೆಂಟು ಪದಾರ್ಥಗಳಿಗೂ ಕುತಪಗಳೆಂದು ಹೆಸರು. ಕುತ್ಸಿತವೆಂದರೆ ಪಾಪವೆಂದರ್ಥ. ಅದನ್ನು ಸಂತಾಪಗೊಳಿಸಿ ಪರಿಹರಿಸುವ ಕಾರಣ ಇವುಗಳಿಗೆ ಕುತಪಗಳೆಂಬ ಹೆಸರು ಬಂದಿದೆ.

೮೮. ಕುತಪಮುಹೂರ್ತದಿಂದ ತೊಡಗಿ ನಾಲ್ಕು ಅಥವಾ ಐದು ಮುಹೂರ್ತಗಳ ಕಾಲಕ್ಕೆ ಸ್ವಧಾಭವನ ಎಂದರೆ ಪಿತೃಗಳ ವಾಸದ ಕಾಲವೆಂದು ಹೆಸರು.

---

* ರೌದ್ರ, ಶ್ವೇತ, ಮೈತ್ರ, ಶಾರಭಟ, ಸಾವಿತ್ರ, ವಿಜಯ, ಗಾಂಧರ್ವ, ಕುತುಪ, ರೌಹಿಣ, ವಿರಿಂಚ, ಸೋಮ, ನಿರ್ಋತಿ, ಮಾಹೇಂದ್ರ, ವರುಣ, ಭಟ ಇವೇ ಹದಿನೈದು ಮುಹೂರ್ತಗಳು.

ವಿಷ್ಣೋರ್ದೇಹಸಮುದ್ಭೂತಾಃ ಕುಶಾಃ ಕೃಷ್ಣಾಸ್ತಿಲಾಸ್ತಥಾ ।
ಶ್ರಾದ್ಧಸ್ಯ ರಕ್ಷಣಾಯಾಲಮೇತತ್ಪ್ರಾಹುರ್ದಿವೌಕಸಃ ॥೮೯॥

ತಿಲೋದಕಾಂಜಲಿರ್ದೇಯೋ ಜಲಸ್ಥೈಸ್ತೀರ್ಥವಾಸಿಭಿಃ ।
ಸದರ್ಭಹಸ್ತೇನೈಕೇನ ಶ್ರಾದ್ಧಮೇವಂ ವಿಶಿಷ್ಯತೇ ॥೯೦॥

ಶ್ರಾದ್ಧಸಾಧನಕಾಲೇ ತು ಪಾಣಿನೈಕೇನ ದೀಯತೇ ।
ತರ್ಪಣಂ ತೂಭಯೇನೈವ ವಿಧಿರೇಷ ಸದಾ ಸ್ಮೃತಃ ॥೯೧॥

॥ ಸೂತ ಉವಾಚ ॥

ಪುಣ್ಯಂ ಪವಿತ್ರಮಾಯುಷ್ಯಂ ಸರ್ವಪಾಪವಿನಾಶನಂ ।
ಪುರಾ ಮತ್ಸ್ಯೇನ ಕಥಿತಂ ತೀರ್ಥಶ್ರಾದ್ಧಾನುಕೀರ್ತನಂ ।
ಶೃಣೋತಿ ಯಃ ಪಠೇದ್ವಾಪಿ ಶ್ರೀಮಾನ್ ಸಂಜಾಯತೇ ನರಃ ॥೯೨॥

---

೮೯. ದರ್ಭೆಗಳೂ, ಕರಿಯ ಎಳ್ಳೂ ವಿಷ್ಣುವಿನ ದೇಹದಿಂದ ಉತ್ಪನ್ನ ವಾದುವು; ಇವು ಶ್ರಾದ್ಧವನ್ನು ರಕ್ಷಣೆಮಾಡತಕ್ಕುವು ಎಂದು ದೇವತೆಗಳು ಹೇಳುತ್ತಾರೆ.

೯೦-೯೧. ಪುಣ್ಯ ತೀರ್ಥಗಳಿಗೆ ಹೋದವರು ನೀರಿನಲ್ಲಿ ನಿಂತು ತಿಲೋದ ಕವನ್ನು ಬೊಗಸೆಯಿಂದ ಎತ್ತಿ ಬಿಡಬೇಕು. ಶ್ರಾದ್ಧಮಾಡುವ ಕಾಲದಲ್ಲಾದರೆ ದರ್ಭಪವಿತ್ರಸಹಿತವಾದ ಒಂದೇ ಕೈಯಿಂದ ತಿಲೋದಕವನ್ನೀಯಬೇಕು. ತರ್ಪಣ ವನ್ನು ಮಾತ್ರ ಎರಡು ಕೈಗಳಿಂದಲೂ ಕೊಡಬೇಕು. ಇದೇ ಶ್ರಾದ್ಧಕ್ಕೂ ತರ್ಪಣಕ್ಕೂ ಇರುವ ವಿಶೇಷ.

೯೨. ಸೂತಪೌರಾಣಿಕನು ಹೇಳಿದನು.—ಪುಣ್ಯತೀರ್ಥಗಳ ವಿಷಯವನ್ನೂ, ಅಲ್ಲಿ ಶ್ರಾದ್ಧಮಾಡುವುದರಿಂದ ಬರುವ ಫಲವನ್ನೂ ಮತ್ಸ್ಯರೂಪಿಯಾದ ಭಗ ವಂತನು ವೈವಸ್ವತ ಮನುಚಕ್ರವರ್ತಿಗೆ ಪೂರ್ವದಲ್ಲಿ ಹೇಳಿದನು. ಇದು ಪುಣ್ಯ ಪ್ರದವೂ, ಶ್ರೇಷ್ಠವೂ, ಆಯುರ್ವರ್ಧಕವೂ, ಸಕಲ ಪಾಪ ಪರಿಹಾರಕವೂ ಆಗಿದೆ. ಈ ವೃತ್ತಾಂತವನ್ನು ಕೇಳಲಿ ಅಥವಾ ಓದಲಿ ಮನುಷ್ಯನು ಶ್ರೀಮಂತನಾಗುವನು.

**ಶ್ರಾದ್ಧಕಾಲೇ ಚ ವಕ್ತವ್ಯಂ ತಥಾ ತೀರ್ಥನಿವಾಸಿಭಿಃ ।**
**ಸರ್ವಪಾಪೋಪಶಾಂತ್ಯರ್ಥಮಲಕ್ಷ್ಮೀನಾಶನಂ ಪರಂ ॥೯೩॥**

**ಇದಂ ಪವಿತ್ರಂ ಯಶಸೋ ನಿಧಾನ**
**ಮಿದಂ ಮಹಾಪಾಪಹರಂ ಚ ಪುಂಸಾಂ ।**
**ಬ್ರಹ್ಮಾರ್ಕರುದ್ರೈರಪಿ ಪೂಜಿತಂ ಚ**
**ಶ್ರಾದ್ಧಸ್ಯ ಮಾಹಾತ್ಮ್ಯಮುಶಂತಿ ತಜ್ಞಾಃ ॥೯೪॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಶ್ರಾದ್ಧಕಲ್ಪೇ**
**ದ್ವಾವಿಂಶೋಽಧ್ಯಾಯಃ**

---

೯೩. ಅಮಂಗಲಪರಿಹಾರಕವಾದ ಈ ಸದ್ವಿಷಯವನ್ನು ತೀರ್ಥವಾಸಿಗಳು ಶ್ರಾದ್ಧಕಾಲದಲ್ಲಿ ಪಠಿಸಬೇಕು. ಇದರಿಂದ ಸರ್ವಪಾಪಗಳೂ ಹೋಗುವುವು.

೯೪. ಈ ಶ್ರಾದ್ಧಮಹಿಮೆಯ ಪ್ರಕರಣವು ಪವಿತ್ರವಾದುದು; ಯಶಸ್ಕರವಾದುದು. ಬ್ರಹ್ಮ, ಸೂರ್ಯ, ರುದ್ರ ಮುತಾದ ದೇವತೆಗಳೂ ಕೂಡ ಇದನ್ನು ಗೌರವಿಸುವರು.

## ಅಧ್ಯಾಯದ ಸಾರಾಂಶ

ಶ್ರಾದ್ಧವನ್ನು ಮಾಡುವುದಕ್ಕೆ ಬಹು ಶ್ರೇಷ್ಠವೆನಿಸಿದ ನೂರಾರು ದಿವ್ಯಕ್ಷೇತ್ರಗಳ ಹೆಸರನ್ನು ಈ ಅಧ್ಯಾಯದಲ್ಲಿ ಹೇಳಿದೆ.

ಅಪರಾಹ್ಣಕಾಲವು ಪಿತೃಕಾರ್ಯಕ್ಕೆ ಬಹಳ ಪ್ರಶಸ್ತವಾದುದು. ಗಯಾ, ಪ್ರಯಾಗ ಮುಂತಾದ ಕ್ಷೇತ್ರಗಳೂ, ಗಂಗಾ ಯಮುನಾದಿ ಪುಣ್ಯ ನದಿಗಳೂ ಪಿತೃಗಳಿಗೆ ಬಹಳ ಪ್ರಿಯವಾದುವು. ಇವುಗಳ ಸಾನ್ನಿಧ್ಯದಲ್ಲಿ ಮಾಡುವ ಶ್ರಾದ್ಧವು ಅನಂತಫಲವನ್ನು ಕೊಡುವುದು. ಒಂದು ಹಗಲಿನಲ್ಲಿ ಹದಿನೈದು ಮುಹೂರ್ತಗಳಿವೆ. ಅವುಗಳಲ್ಲಿ ಎಂಟನೆಯದಾದ ಕುತಪ ಮುಹೂರ್ತವು ಶ್ರಾದ್ಧಕ್ಕೆ ಅತ್ಯಂತ ಪ್ರಶಸ್ತವಾದುದು. ಈ ಶ್ರಾದ್ಧಮಾಹಾತ್ಮ್ಯವನ್ನೂ, ಪುಣ್ಯ ತೀರ್ಥಗಳ ಮಹಿಮೆಯನ್ನೂ ಕೇಳಿದರೆ ಸಕಲ ಪಾಪಗಳೂ ಪರಿಹಾರವಾಗುವುವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಶ್ರಾದ್ಧಕಲ್ಪದಲ್ಲಿ ಇಪ್ಪತ್ತೆರಡನೆಯ
ಅಧ್ಯಾಯವು ಮುಗಿದುದು

## ಅಥ ಶ್ರೀಮತ್ಸ್ಯಮಹಾಪುರಾಣೇ ತ್ರಯೋವಿಂಶೋಽಧ್ಯಾಯಃ

॥ ಋಷಯ ಊಚುಃ ॥

ಸೋಮಃ ಪಿತೄಣಾಮಧಿಪಃ ಕಥಂ ಶಾಸ್ತ್ರವಿಶಾರದ ।
ತದ್ವಂಶ್ಯಾ ಯೇ ಚ ರಾಜಾನೋ ಬಭೂವುಃ ಕೀರ್ತಿವರ್ಧನಾಃ ॥ ೧ ॥

॥ ಸೂತ ಉವಾಚ ॥

ಆದಿಷ್ಟೋ ಬ್ರಹ್ಮಣಾ ಪೂರ್ವಮತ್ರಿಃ ಸರ್ಗವಿಧೌ ಪುರಾ ।
ಅನುತ್ತಮಂ ನಾಮ ತಪಃ ಸೃಷ್ಟ್ಯರ್ಥಂ ತಪ್ತವಾನ್ ಪ್ರಭುಃ ॥ ೨ ॥

ಯದಾನಂದಕರಂ ಬ್ರಹ್ಮ ಜಗತ್ಕ್ಲೇಶವಿನಾಶನಂ ।
ಬ್ರಹ್ಮವಿಷ್ಣ್ವರ್ಕರುದ್ರಾಣಾಮಭ್ಯಂತರಮತೀಂದ್ರಿಯಂ ॥ ೩ ॥

ಶಾಂತಿಕೃಚ್ಛಾಂತಮನಸಸ್ತದಂತರ್ನಯನೇ ಸ್ಥಿತಂ ।
ಮಾಹಾತ್ಮ್ಯತ್ತಪಸಾ ವಿಪ್ರಾಃ ಪರಮಾನಂದಕಾರಕಂ ।
ಯಸ್ಮಾದುಮಾಪತಿಃ ಸಾರ್ಧಮುಮಯಾ ತಮಧಿಷ್ಠಿತಃ ॥ ೪ ॥

---

೧. ಋಷಿಗಳು ಹೇಳಿದರು.—ಎಲೈ ಶಾಸ್ತ್ರಜ್ಞನೇ, ಚಂದ್ರನು ಪಿತೃಗಳಿಗೆ ಅಧಿಪತಿಯೆಂತಾದನು? ಅವನ ವಂಶದಲ್ಲಿ ಹುಟ್ಟಿದ ಕೀರ್ತಿವಂತರಾದ ರಾಜರು ಯಾರು ಯಾರು?

೨. ಸೂತಮಹರ್ಷಿ ಹೇಳಿದನು.—ಸೃಷ್ಟಿಕಾರ್ಯವನ್ನು ಮಾಡುವಂತೆ ಬ್ರಹ್ಮನು ಅಪ್ಪಣೆಮಾಡಲು, ಅತ್ರಿಮಹರ್ಷಿಯು ಪೂರ್ವದಲ್ಲಿ ಅನುತ್ತಮವೆಂಬ ಅತಿ ಶ್ರೇಷ್ಠವಾದ ತಪಸ್ಸನ್ನು ಮಾಡಿದನು.

೩-೪. ಅತ್ರಿಯು ಆಚರಿಸುತ್ತಿದ್ದ ಆ ಮಹಾತಪಸ್ಸು ಆನಂದಕರವಾದುದು. ಜಗತ್ತಿನ ಕ್ಲೇಶವೆಲ್ಲವನ್ನೂ ಕಳೆಯತಕ್ಕುದು. ಬಹ್ಮ, ವಿಷ್ಣು, ಸೂರ್ಯ, ರುದ್ರ ಇವರ ಹೃದಯಾಂತರಾಳದಲ್ಲಿರತಕ್ಕುದು. ಇಂದ್ರಿಯಾತೀತವಾದುದು. ಚಿತ್ತ ಪ್ರಸಾದವನ್ನು ಹುಟ್ಟಿಸಿ ಶಾಶ್ವತವಾದ ಶಾಂತಿಯನ್ನು ಕೊಡತಕ್ಕುದು. ಎಲೈ ವಿಪ್ರರೇ, ಅದು ಮಹಾಮಹಿಮೆಯುಳ್ಳುದಾಗಿ ಬ್ರಹ್ಮಾನಂದವನ್ನುಂಟುಮಾಡತಕ್ಕುದು. ಅಂತಹ ತಪಸ್ಸಿನ ಬಲದಿಂದ ಭೃಗುಮಹರ್ಷಿ ಪರಮೇಶ್ವರನನ್ನು ಮೆಚ್ಚಿಸಿದನು. ಪಾರ್ವತೀಸಹಿತವಾದ ಮಹಾದೇವನು ಆ ಮಹರ್ಷಿಯ ಬಳಿಗೆ ಬಂದು ನಿಂತನು.

**ತಂ ದೃಷ್ಟ್ವಾ ಚಾಷ್ಟಮಾಂಶೇನ ತಸ್ಮಾತ್ಸೋಮೋಽಭವಚ್ಛಿಶುಃ ॥ ೫ ॥**

**ಅಥಃ ಸುಸ್ರಾವ ನೇತ್ರಾಭ್ಯಾಂ ಧಾಮ ತಚ್ಚಾಂಬುಸಂಭವಂ ।**
**ದೀಪಯದ್ವಿಶ್ವಮಖಿಲಂ ಜ್ಯೋತ್ಸ್ನಯಾ ಸಚರಾಚರಂ ॥ ೬ ॥**

**ತದ್ದಿಶೋ ಜಗೃಹುರ್ಧಾಮ ಸ್ತ್ರೀರೂಪೇಣ ಸುತೇಚ್ಛಯಾ ।**
**ಗರ್ಭೋಽಭೂತ್ತೋದರೇ ತಾಸಾಮಾಸ್ಥಿತೋಽಬ್ದಶತತ್ರಯಂ ॥ ೭ ॥**

**ಆಶಾಸ್ತಂ ಮುಮುಚುರ್ಗರ್ಭಮಶಕ್ತಾ ಧಾರಣೇ ತತಃ ।**
**ಸಮಾದಾಯಾಥ ತಂ ಗರ್ಭಮೇಕೀಕೃತ್ಯ ಚತುರ್ಮುಖಃ ॥ ೮ ॥**

**ಯುವಾನಮಕರೋದ್ಬ್ರಹ್ಮಾ ಸರ್ವಾಯುಧಧರಂ ನರಂ ।**
**ಸ್ಯಂದನೇಽಥ ಸಹಸ್ರಾಶ್ವೇ ವೇದಶಕ್ತಿಮಯೇ ಪ್ರಭುಃ ॥ ೯ ॥**

---

೫-೬. ಮಹಾದೇವನನ್ನು ನೋಡಿ, ಅತ್ರಿಮಹರ್ಷಿಯು ತನ್ನ ತೇಜಸ್ಸಿನ ಎಂಟರಲ್ಲೊಂದು ಪಾಲಿನಿಂದ ಚಂದ್ರನೆಂಬ ಮಗುವನ್ನು ಉತ್ಪತ್ತಿಮಾಡಿದನು. ಅದರ ವಿವರವೆಂತೆಂದರೆ:—ಋಷಿಯ ಕಣ್ಣುಗಳಿಂದ ನೀರು ಹರಿಯಿತು. ಚರಾಚರಾತ್ಮಕವಾದ ಜಗತ್ತೆಲ್ಲವನ್ನೂ ಬೆಳಗುತ್ತ ಒಂದು ದಿವ್ಯಜ್ಯೋತಿ ಅದರಿಂದ ಹುಟ್ಟಿತು.

೭. ದಿಕ್ಕುಗಳು ಸ್ತ್ರೀರೂಪವನ್ನು ಧರಿಸಿ ಪುತ್ರಾಭಿಲಾಷೆಯಿಂದ ಆ ತೇಜಸ್ಸನ್ನು ತೆಗೆದುಕೊಂಡುವು. ಅದು ಅವರ ಹೊಟ್ಟೆಯಲ್ಲಿ ಗರ್ಭರೂಪವನ್ನು ತಾಳಿ ಮುನ್ನೂರು ವರ್ಷಗಳ ಕಾಲ ಬೆಳೆಯಿತು.

೮-೯. ದಿಗ್ದೇವತೆಯರು ಬಳಿಕ ತೇಜೋಮಯವಾದ ಆ ಗರ್ಭವನ್ನು ಧರಿಸಲಾರದೆ ಹೊರಗೆ ಬಿಟ್ಟು ಬಿಟ್ಟರು. ಚತುರ್ಮುಖ ಬ್ರಹ್ಮನು ಅದೆಲ್ಲವನ್ನೂ ತಂದು ಒಟ್ಟಿಗೆ ಸೇರಿಸಿದನು; ಸಕಲ ಶಸ್ತ್ರಾಸ್ತ್ರಗಳನ್ನೂ ಧರಿಸಿದ ಒಬ್ಬ ಯುವಕನಾಗಿ ಅವನನ್ನು ಮಾಡಿ, ಸಾವಿರ ಕುದುರೆಗಳನ್ನು ಕಟ್ಟಿದ ವೇದಶಕ್ತಿಮಯವಾದ ತೇರಿನಲ್ಲಿ ಕುಳ್ಳಿರಿಸಿಕೊಂಡು ತನ್ನ ಲೋಕಕ್ಕೊಯ್ದನು.

ಆರೋಪ್ಯ ಲೋಕಮನಯದಾತ್ಮೀಯಂ ಸ ಪಿತಾಮಹಃ ।
ತತ್ರ ಬ್ರಹ್ಮರ್ಷಿಭಿಃ ಪ್ರೋಕ್ತಮಸ್ಮತ್ಸ್ವಾಮೀ ಭವತ್ವಯಂ ॥೧೦॥
ಪಿತೃಭಿರ್ದೇವಗಂಧರ್ವೈರೋಷಧೀಭಿಸ್ತಥೈವ ಚ ।
ತುಷ್ಟುವುಃ ಸೋಮದೇವತ್ಯೈರ್ಬ್ರಹ್ಮಾದ್ಯಾ ಮಂತ್ರಸಂಗ್ರಹೈಃ ॥೧೧॥
ಸ್ತೂಯಮಾನಸ್ಯ ತಸ್ಯಾಭೂದಧಿಕೋ ಧಾಮಸಂಭವಃ ।
ತೇಜೋವಿತಾನಾದಭವದ್ಭುವಿ ದಿವ್ಯೌಷಧೀಗಣಃ ॥೧೨॥
ತದ್ದೀಪ್ತಿರಧಿಕಾ ತಸ್ಮಾದ್ರಾತ್ರೌ ಭವತಿ ಸರ್ವದಾ ।
ತೇನೌಷಧೀಶಃ ಸೋಮೋಽಭೂದ್ದ್ವಿಜೇಶಶ್ಚಾಪಿ ಗದ್ಯತೇ ॥೧೩॥
ವೇದಧಾಮರಸಂ ಚಾಪಿ ಯದಿದಂ ಚಂದ್ರಮಂಡಲಂ ।
ಕ್ಷೀಯತೇ ವರ್ಧತೇ ಚೈವ ಶುಕ್ಲೇ ಕೃಷ್ಣೇ ಚ ಸರ್ವದಾ ॥೧೪॥
ವಿಂಶತಿಂ ಚ ತಥಾ ಸಪ್ತ ದಕ್ಷಃ ಪ್ರಾಚೇತಸೋ ದದೌ ।
ರೂಪಲಾವಣ್ಯಸಂಯುಕ್ತಾಸ್ತಸ್ಮೈ ಕನ್ಯಾಸ್ಸುವರ್ಚಸಃ ॥೧೫॥

---

೧೦-೧೧. "ಇವನು ನಮಗೆ ಒಡೆಯನಾಗಲಿ" ಎಂದು ಬ್ರಹ್ಮರ್ಷಿಗಳೂ, ಪಿತೃಗಳೂ, ಓಷಧಿಗಳೂ, ಗಂಧರ್ವರೂ ಹೇಳಿದರು. ಬ್ರಹ್ಮಾದಿ ದೇವತೆಗಳು ಸೋಮದೇವತಾಕವಾದ ಮಂತ್ರಗಳಿಂದ ಅವನನ್ನು ಸ್ತುತಿಸಿದರು.

೧೨. ಬ್ರಹ್ಮಾದಿಗಳು ಹೀಗೆ ಸ್ತೋತ್ರಮಾಡುತ್ತಿರಲು ಅವನಿಗೆ ತೇಜಸ್ಸು ಹೆಚ್ಚುತ್ತ ಬಂದಿತು. ಆ ತೇಜೋರಾಶಿಯಿಂದ ಅತಿ ಶ್ರೇಷ್ಠವಾದ ಮೂಲಿಕೆಗಳು ಪ್ರಪಂಚದಲ್ಲಿ ಹುಟ್ಟಿದುವು.

೧೩. ಅವುಗಳ ಪ್ರಕಾಶವು ಯಾವಾಗಲೂ ರಾತ್ರಿಯಲ್ಲಿ ಹೆಚ್ಚುವುದು. ಆದುದರಿಂದ ಚಂದ್ರನನ್ನು ಮೂಲಿಕೆಗಳ ಒಡೆಯನೆಂದೂ, ಬ್ರಾಹ್ಮಣರ ಅಧಿಪತಿಯೆಂದೂ ಹೇಳುವರು.

೧೪. ಈ ಚಂದ್ರಮಂಡಲವು ವೇದತೇಜೋಮಯವಾದ ದಿವ್ಯರಸದಿಂದ ತುಂಬಿದೆ. ಅದು ಶುಕ್ಲಪಕ್ಷದಲ್ಲಿ ಹೆಚ್ಚುವುದು; ಕೃಷ್ಣಪಕ್ಷದಲ್ಲಿ ಕುಗ್ಗುವುದು.

೧೫. ದಕ್ಷಬ್ರಹ್ಮನು ರೂಪಲಾವಣ್ಯಗಳಿಂದ ತುಂಬಿ ಕಾಂತಿಯುಕ್ತರಾದ ತನ್ನ ಇಪ್ಪತ್ತೇಳುಜನ ಕನ್ಯೆಯರನ್ನು ಅವನಿಗೆ ಕೊಟ್ಟನು.

ತತಃ ಪದ್ಮಸಹಸ್ರಾಣಾಂ ಸಹಸ್ರಾಣಿ ದಶೈವ ತು ।
ತಪಶ್ಚಚಾರ ಶೀತಾಂಶುರ್ವಿಷ್ಣುಧ್ಯಾನೈಕತತ್ಪರಃ ॥೧೬॥

ತತಸ್ತುಷ್ಟಸ್ತು ಭಗವಾಂಸ್ತಸ್ಮೈ ನಾರಾಯಣೋ ಹರಿಃ ।
ವರಂ ವೃಣೀಷ್ವ ಪ್ರೋವಾಚ ಪರಮಾತ್ಮಾ ಜನಾರ್ದನಃ ॥೧೭॥

ತತೋ ವವ್ರೇ ವರಾನ್ಸೋಮಃ ಶಕ್ರಲೋಕಂ ಜಯಾಮ್ಯಹಂ ।
ಪ್ರತ್ಯಕ್ಷಮೇವ ಭೋಕ್ತಾರೋ ಭವಂತು ಮಮ ಮಂದಿರೇ ॥೧೮॥

ರಾಜಸೂಯೇ ಸುರಗಣಾ ಬ್ರಹ್ಮಾದ್ಯಾಃ ಸಂತು ಮೇ ದ್ವಿಜಾಃ ।
ರಕ್ಷಃ ಪಾಲಃ ಶಿವೋಽಸ್ಮಾಕಮಾಸ್ತಾಂ ಶೂಲಧರೋ ಹರಃ ॥೧೯॥

ತಥೇತ್ಯುಕ್ತಃ ಸ ಆಜಹ್ರೇ ರಾಜಸೂಯಂ ತು ವಿಷ್ಣುನಾ ।
ಹೋತಾಽತ್ರಿರ್ಭೃಗುರಧ್ವರ್ಯುರುದ್ಗಾತಾಽಭೂಚ್ಚತುರ್ಮುಖಃ ॥೨೦॥

ಬ್ರಹ್ಮತ್ವಮಗಮತ್ತಸ್ಯ ಉಪದ್ರಷ್ಟಾ ಹರಿಃ ಸ್ವಯಂ ।
ಸದಸ್ಯಾಸ್ಸನಕಾದ್ಯಾಸ್ತು ರಾಜಸೂಯವಿಧೌ ಸ್ಮೃತಾಃ ॥೨೧॥

---

೧೬. ಬಳಿಕ ಚಂದ್ರನು ಸಾವಿರಾರು ಕೋಟಿ ವರ್ಷಗಳ ಕಾಲ ವಿಷ್ಣುವನ್ನು ಧ್ಯಾನಮಾಡುತ್ತ ತಪಸ್ಸನ್ನು ಆಚರಿಸಿದನು.

೧೭. ಬಳಿಕ ಲೋಕಪೂಜ್ಯನಾದ ನಾರಾಯಣನು ಅವನ ತಪಸ್ಸಿನಿಂದ ತೃಪ್ತನಾಗಿ " ಬೇಕಾದ ವರವನ್ನು ಬೇಡು " ಎಂದು ಅಪ್ಪಣೆಯಿತ್ತನು.

೧೮-೧೯. " ಇಂದ್ರಲೋಕವನ್ನು ನಾನು ಗೆಲ್ಲಬೇಕು. ನಾನು ಕೈಗೊಳ್ಳಬೇಕೆಂದಿರುವ ರಾಜಸೂಯ ಯಾಗದಲ್ಲಿ ಬ್ರಹ್ಮಾದಿ ದೇವತೆಗಳೂ, ಬ್ರಾಹ್ಮಣರೂ ಮನೆಗೆ ಬಂದು ಸಾಕ್ಷಾತ್ತಾಗಿ ಭೋಜನಮಾಡಬೇಕು. ಪರಮೇಶ್ವರನು ಶೂಲಪಾಣಿಯಾಗಿ ಬಂದು, ರಾಕ್ಷಸರಿಂದ ವಿಘ್ನಬಾರದಂತೆ ನನ್ನ ಯಾಗವನ್ನು ರಕ್ಷಿಸಬೇಕು " ಎಂದು ಚಂದ್ರನು ವರಗಳನ್ನು ಬೇಡಿದನು.

೨೦-೨೧. ಹಾಗೆಯೇ ಆಗಲೆಂದು ವಿಷ್ಣು ಅನುಗ್ರಹಿಸಿದನು· ಚಂದ್ರನು ಬಳಿಕ ರಾಜಸೂಯ ಯಾಗವನ್ನು ನೆರವೇರಿಸಿದನು. ಅದರಲ್ಲಿ ಅತ್ರಿ ಮಹರ್ಷಿಯು ಹೋತೃವೂ, ಭೃಗುವು ಅಧ್ವರ್ಯುವೂ, ಬ್ರಹ್ಮದೇವನು ಉದ್ಗಾತೃವೂ ಆದರು.

ಚಮಸಾಧ್ವರ್ಯವಸ್ತತ್ರ ವಿಶ್ವೇ ದೇವಾ ದಶೈವ ತು ।
ತ್ರೈಲೋಕ್ಯಂ ದಕ್ಷಿಣಾ ತೇನ ಋತ್ವಿಗ್ಭ್ಯಃ ಪ್ರತಿಪಾದಿತಂ ॥೨೨॥

ತತಸ್ಸಮಾಪ್ತೇಽವಭೃಥೇ ತದ್ರೂಪಾಲೋಕನೇಚ್ಛವಃ ।
ಕಾಮಬಾಣಾಭಿತಪ್ತಾಂಗ್ಯೋ ನವ ದೇವ್ಯಃ ಸಿಷೇವಿರೇ ॥೨೩॥

ಲಕ್ಷ್ಮೀರ್ನಾರಾಯಣಂ ತ್ಯಕ್ತ್ವಾ ಸಿನೀವಾಲೀ ಚ ಕರ್ದಮಂ ।
ದ್ಯುತಿರ್ವಿಭಾವಸುಂ ತದ್ವತ್ತುಷ್ಟಿರ್ಧಾತಾರಮವ್ಯಯಂ ॥೨೪॥

ಪ್ರಭಾ ಪ್ರಭಾಕರಂ ತ್ಯಕ್ತ್ವಾ ಹವಿಷ್ಮಂತಂ ಕುಹೂಃ ಸ್ವಯಂ ।
ಕೀರ್ತಿರ್ಜಯಂತಂ ಭರ್ತಾರಂ ವಸುರ್ಮಾರೀಚಕಶ್ಯಪಂ ॥೨೫॥

ಧೃತಿಸ್ತ್ಯಕ್ತ್ವಾ ಪತಿಂ ನಂದಿಂ ಸೋಮಮೇವಾಭಜಂಸ್ತದಾ ।
ಸ್ವಕೀಯಾ ಇವ ಸೋಮೋಽಪಿ ಕಾಮಯಾಮಾಸ ತಾಸ್ತದಾ ॥೨೬॥

---

ಸಾಕ್ಷಾದ್ವಿಷ್ಣುವೇ ಬಂದು, ಬ್ರಹ್ಮತ್ವವನ್ನು ವಹಿಸಿ ಕರ್ಮವು ಸಾಂಗವಾಗಿ ನಡೆಯುವಂತೆ ನೋಡಿಕೊಳ್ಳುತ್ತಿದ್ದನು. ಸನಕಾದಿಯೋಗಿಗಳು ಸದಸ್ಯರಾದರು. ಹತ್ತು ಜನ ವಿಶ್ವೇದೇವತೆಗಳು ಚಮಸಾಧ್ವರ್ಯುಗಳಾದರು. ಚಂದ್ರನು ಋತ್ವಿಕ್ಕುಗಳಿಗೆ ಮೂರು ಲೋಕಗಳನ್ನೂ ದಕ್ಷಿಣೆಯಾಗಿ ಕೊಟ್ಟನು.

೨೩. ಬಳಿಕ ಸಾಂಗವಾಗಿ ಯಜ್ಞವು ಪೂರ್ಣವಾಗಲು, ಚಂದ್ರನ ದಿವ್ಯ ರೂಪವನ್ನು ನೋಡುವ ಬಯಕೆಯಿಂದ ಕಾಮಪೀಡಿತೆಯರಾದ ಒಂಬತ್ತು ಜನ ದೇವಿಯರು ಅವನನ್ನು ಸೇವಿಸಿದರು.

೨೪-೨೬. ನಾರಾಯಣನ ಪತ್ನಿಯಾದ ಲಕ್ಷ್ಮಿಯೂ, ಕರ್ದಮನ ಸತಿಯಾದ ಸಿನೀವಾಲಿಯೂ, ಅಗ್ನಿದೇವನ ಪ್ರಿಯೆಯಾದ ದ್ಯುತಿಯೂ, ಧಾತೃವಿನ ಭಾರ್ಯೆಯಾದ ತುಷ್ಟಿಯೂ, ಸೂರ್ಯನ ಧರ್ಮಪತ್ನಿಯಾದ ಪ್ರಭೆಯೂ, ಹವಿಷ್ಮಂತನ ಜಾಯೆಯಾದ ಕುಹೂದೇವಿಯೂ, ಜಯಂತನ ಮಹಿಷಿಯಾದ ಕೀರ್ತಿಯೂ, ಕಶ್ಯಪನ ಸಹಧರ್ಮಿಣಿಯಾದ ವಸುವೂ, ನಂದಿಯ ಅರ್ಧಾಂಗಿಯಾದ ಧೃತಿಯೂ ತಮ್ಮ ತಮ್ಮ ಪತಿಗಳನ್ನು ತೊರೆದು ಚಂದ್ರನನ್ನೇ ಸೇರಿದರು. ಅವನೂ ಸಹ ಅವರನ್ನು ತನ್ನ ಪತ್ನಿಯರಂತೆಯೇ ಕಾಮಿಸಿದನು.

**ಏವಂ ಕೃತಾಪಚಾರಸ್ಯ ತಾಸಾಂ ಭರ್ತೃಗಣಸ್ತದಾ ।**
**ನ ಶಶಾಕಾಪಚಾರಾಯ ಶಾಪೈಃ ಶಸ್ತ್ರಾದಿಭಿಃ ಪುನಃ ॥೨೭॥**

**ತಥಾಪ್ಯರಾಜತ ವಿಧುರ್ದಶಧಾ ಭಾವಯನ್ದಿಶಃ ।**
**ಸೋಮಃ ಪ್ರಾಪ್ಯಾಥ ದುಷ್ಪ್ರಾಪಮೈಶ್ವರ್ಯಮೃಷಿಸಂಸ್ಕೃತಂ**
**ಸಪ್ತಲೋಕೈಕನಾಥತ್ವಮವಾಪ ತಪಸಾ ತದಾ ॥೨೮॥**

**ಕದಾಚಿದುದ್ಯಾನಗತಾಮಪಶ್ಯ**
**ದನೇಕಪುಷ್ಪಾಭರಣೈಶ್ಚ ಶೋಭಿತಾಂ ।**
**ಬೃಹನ್ನಿತಂಬಸ್ತನಭಾರಖೇದಾ**
**ತ್ಪುಷ್ಪಸ್ಯ ಭಂಗೇಪ್ಯತಿದುರ್ಬಲಾಂಗೀಂ ॥೨೯॥**

**ಭಾರ್ಯಾಂ ಚ ತಾಂ ದೇವಗುರೋರನಂಗ**
**ಬಾಣಾಭಿರಾಮಾಯತಚಾರುನೇತ್ರಾಂ ।**
**ತಾರಾಂ ಸ ತಾರಾಧಿಪತಿಃ ಸ್ಮರಾರ್ತಃ**
**ಕೇಶೇಷು ಜಗ್ರಾಹ ವಿವಿಕ್ತಭೂಮೌ ॥೩೦॥**

---

೨೭. ಚಂದ್ರನು ಹೀಗೆ ನೀತಿತಪ್ಪಿ ನಡೆದರೂ, ಆ ದೇವಿಯರ ಪತಿಗಳು ಅವನಿಗೆ ಶಾಪದಿಂದಲಾಗಲಿ, ಶಸ್ತ್ರಾದಿಗಳಿಂದಲಾಗಲಿ ಏನೂ ಕೇಡುಮಾಡಲಾರದೆ ಹೋದರು.

೨೮. ಆದರೂ ಚಂದ್ರನು ಹತ್ತು ದಿಕ್ಕುಗಳನ್ನೂ ಬೆಳಗುತ್ತ ಪ್ರಕಾಶಿಸಿದನು. ತನ್ನ ತಪಸ್ಸಿನಿಂದ ದುರ್ಲಭವಾದ ಐಶ್ವರ್ಯವನ್ನು ಪಡೆದು ಏಳು ಲೋಕಗಳ ಏಕಾಧಿಪತಿಯೆನಿಸಿದನು. ಋಷಿಗಳ ಅನುಗ್ರಹದಿಂದ ಅವನ ಸಂಪತ್ತು ಮತ್ತಷ್ಟು ಹೆಚ್ಚಿತು.

೨೯-೩೦. ಒಂದಾನೊಂದು ಸಾರಿ ಚಂದ್ರನು ಉದ್ಯಾನದಲ್ಲಿ ದೇವಗುರುವಾದ ಬೃಹಸ್ಪತಿಯ ಪತ್ನಿ ತಾರಾದೇವಿಯನ್ನು ಕಂಡನು. ಅವಳು ಹೂಗಳಿಂದಲೂ ಅನೇಕ ಆಭರಣಗಳಿಂದಲೂ ಅಲಂಕರಿಸಿಕೊಂಡಿದ್ದಳು. ಹಿರಿದಾದ ನಿತಂಬದಿಂದಲೂ ಕುಚಗಳಿಂದಲೂ ಶೋಭಿಸುತ್ತಿದ್ದಳು. ಹೂವನ್ನು ಕೀಳುವುದೂ ಕೂಡ ಆಕೆಗೆ ಆಯಾಸಕರವಾಗಿತ್ತು. ಅವಳ ಕಣ್ಣುಗಳು ಮನ್ಮಥನ ಬಾಣಗಳಂತೆ ಸುಂದರವಾಗಿಯೂ ದೀರ್ಘವಾಗಿಯೂ ಇದ್ದುವು. ಏಕಾಂತ ಸ್ಥಳವಲ್ಲಿದ್ದುದರಿಂದ ಕಾಮಪೀಡಿತನಾಗಿ ಚಂದ್ರನು ಅವಳ ಜಡೆಯನ್ನು ಹಿಡಿದುಕೊಂಡನು.

ಸಾಪಿ ಸ್ಮರಾರ್ತಾ ಸಹ ತೇನ ರೇಮೇ
ತದ್ರೂಪಕಾಂತ್ಯಾ ಹೃತಮಾನಸೇನ ।
ಚಿರಂ ವಿಹೃತ್ಯಾಥ ಜಗಾಮ ತಾರಾಂ
ವಿಧುರ್ಗೃಹೀತ್ವಾ ಸ್ವಗೃಹಂ ತತೋಽಪಿ ॥೩೧॥

ನ ತೃಪ್ತಿರಾಸೀಚ್ಚ ಗೃಹೇಪಿ ತಸ್ಯ
ತಾರಾನುರಕ್ತಸ್ಯ ಸುಖಾಗಮೇಷು ।
ಬೃಹಸ್ಪತಿಸ್ತದ್ವಿರಹಾಗ್ನಿದಗ್ಧ
ಸ್ತದ್ಧ್ಯಾನ ನಿಷ್ಠೈಕಮನಾ ಬಭೂವ ॥೩೨॥

ಶಶಾಕ ಶಾಪಂ ನ ಚ ದಾತುಮಸ್ಮೈ
ನ ಮಂತ್ರಶಸ್ತ್ರಾಗ್ನಿವಿಷೈರಶೇಷೈಃ ।
ತಸ್ಯಾಪಕರ್ತುಂ ವಿವಿಧೈರುಪಾಯೈ
ರ್ನೈವಾಭಿಚಾರೈರಪಿ ವಾಗಧೀಶಃ ॥೩೩॥

---

೩೧. ಅವನ ರೂಪವನ್ನೂ, ಕಾಂತಿಯನ್ನೂ ಕಂಡು ತಾರೆಯೂ ಮನ ಸೋತಳು; ಮನ್ಮಥನ ಬಾಧೆಗೆ ಸಿಲುಕಿ ಅವನೊಡನೆ ರಮಿಸಿದಳು. ಚಂದ್ರನಾದರೋ, ಅವಳೊಡನೆ ಬಹಳ ಕಾಲ ಕ್ರೀಡಿಸಿದುದು ಮಾತ್ರವೇ ಅಲ್ಲದೆ ಅವಳನ್ನು ತನ್ನ ಮನೆಗೂ ಕರೆದೊಯ್ದನು.

೩೨. ಮನೆಯಲ್ಲಿ ಕೂಡ ತಾರೆಯಲ್ಲಿ ಅನುರಕ್ತನಾಗಿ ಎಷ್ಟು ಸುಖಿಸಿದರೂ ಅವನಿಗೆ ತೃಪ್ತಿಯೇ ಇರಲಿಲ್ಲ. ಇತ್ತ ಬೃಹಸ್ಪತಿಯಾದರೋ, ಅವಳ ಅಗಲಿಕೆಯಿಂದ ಸಂತಪ್ತನಾಗಿ ಅವಳ ಯೋಚನೆಯಲ್ಲಿಯೇ ಮನಸ್ಸನ್ನು ಇಟ್ಟಿದ್ದನು.

೩೩. ಶಾಪ, ಮಂತ್ರ, ಶಸ್ತ್ರ, ವಿಷ, ಅಗ್ನಿ ಇವುಗಳ ಪ್ರಯೋಗದಿಂದಲಾಗಲಿ, ಮಾಯಮಾಟಗಳಿಂದಾಗಲಿ, ಚಂದ್ರನಿಗೆ ಅಪಕಾರ ಮಾಡಲು ಸಕಲ ಶಾಸ್ತ್ರಜ್ಞನಾದ ಬೃಹಸ್ಪತಿಗೂ ಸಾಧ್ಯವಾಗಲಿಲ್ಲ.

ಸ ಯಾಚಯಾಮಾಸ ತತಸ್ತು ದೈನ್ಯಾ
ತ್ಸೋಮಂ ಸ್ವಭಾರ್ಯಾರ್ಥಮನಂಗತಪ್ತಃ ।
ಸ ಯಾಚ್ಯಮಾನೋಽಪಿ ದದೌ ನ ತಾರಾಂ
ಬೃಹಸ್ಪತೇಸ್ತತ್ಸುಖಪಾಶಬದ್ಧಃ ॥೩೪॥

ಮಹೇಶ್ವರೇಣಾಥ ಚತುರ್ಮುಖೇನ
ಸಾಧ್ಯೈರ್ಮರುದ್ಭಿಸ್ಸಹ ಲೋಕಪಾಲೈಃ ।
ದದೌ ಯದಾ ತಾಂ ನ ಕಥಂಚಿದಿಂದು
ಸ್ತದಾ ಶಿವಃ ಕ್ರೋಧಪರೋ ಬಭೂವ ॥೩೫॥

ಯೋ ವಾಮದೇವಃ ಪ್ರಥಿತಃ ಪೃಥಿವ್ಯಾ
ಮನೇಕರುದ್ರಾರ್ಚಿತಪಾದಪದ್ಮಃ ।
ತತಸ್ಸಶಿಷ್ಯೋ ಗಿರಿಶಃ ಪಿನಾಕೀ
ಬೃಹಸ್ಪತಿಸ್ನೇಹವಶಾನುಬದ್ಧಃ ॥೩೬॥

---

೩೪. ಬಳಿಕ ದೇವಗುರುವು ಕಾಮಪೀಡಿತನಾಗಿ, ತನ್ನ ಪತ್ನಿಯನ್ನು ಬಿಟ್ಟು ಕೊಡುವಂತೆ ಚಂದ್ರನನ್ನು ದೈನ್ಯದಿಂದ ಬೇಡಿದನು. ಆದರೂ ತಾರೆಯ ಪ್ರೇಮ ಪಾಶಕ್ಕೆ ಕಟ್ಟುಬಿದ್ದ ಚಂದ್ರನು ಅವಳನ್ನು ಕೊಡಲಿಲ್ಲ.

೩೫. ಮಹೇಶ್ವರ, ಬ್ರಹ್ಮ, ಸಾಧ್ಯರು, ದೇವತೆಗಳು ಮತ್ತು ಲೋಕಪಾಲಕರು ಎಷ್ಟು ಹೇಳಿದರೂ ಕೂಡ ಚಂದ್ರನು ಅವಳನ್ನು ಕೊಡದೆ ಹೋದನು. ಆಗ ಶಿವನಿಗೆ ಬಹಳ ಸಿಟ್ಟು ಬಂದಿತು.

೩೬. ಏಕಾದಶರುದ್ರರಿಂದ ಪಾದಸೇವೆಯನ್ನು ಕೈಗೊಂಡ, ಜಗತ್ಪ್ರಸಿದ್ಧನೂ ಪಿನಾಕಪಾಣಿಯೂ ಆದ ಮಹೇಶ್ವರನು ತನ್ನ ಪ್ರಮಥಗಣಗಳ ಸಹಿತವಾಗಿ ಬೃಹಸ್ಪತಿಯ ಸ್ನೇಹಕ್ಕೆ ಕಟ್ಟುಬಿದ್ದನು.

ಧನುರ್ಗೃಹೀತ್ವಾಽಜಗವಂ ಪುರಾರಿ
ರ್ಜಗಾಮ ಭೂತೇಶ್ವರಸಿದ್ಧಜುಷ್ಟಃ ।
ಯುದ್ಧಾಯ ಸೋಮೇನ ವಿಶೇಷದೀಪ್ತ
ತೃತೀಯನೇತ್ರಾನಲಭೀಮವಕ್ತ್ರಃ ॥೩೭॥

ಸಹೈವ ಜಗ್ಮುಶ್ಚ ಗಣೇಶಕಾದ್ಯಾ
ವಿಂಶಚ್ಚತುಷ್ಷಷ್ಟಿಗಣಾಸ್ತ್ರಯುಕ್ತಾಃ ।
ಯಕ್ಷೇಶ್ವರಃ ಕೋಟಿಶತೈರನೇಕೈ
ರ್ಯುತೋಽನ್ವಗಾತ್ಸ್ಯಂದನಸಂಸ್ಥಿತಾನಾಂ ॥೩೮॥

ವೇತಾಲಯಕ್ಷೋರಗಕಿನ್ನರಾಣಾಂ
ಪದ್ಮೇನ ಚೈಕೇನ ತಥಾರ್ಬುದೇನ ।
ಲಕ್ಷೈಸ್ತ್ರಿಭಿರ್ದ್ವಾದಶಭೀ ರಥಾನಾಂ
ಸೋಮೋಽಪ್ಯಗಾತ್ತತ್ರ ವಿವೃದ್ಧಮನ್ಯುಃ ॥೩೯॥

---

೩೭. ತ್ರಿಪುರಸಂಹಾರಕನಾದ ಈಶ್ವರನು ಅಜಗವವೆಂಬ ತನ್ನ ಬಿಲ್ಲನ್ನು ಹಿಡಿದು ಚಂದ್ರನ ಮೇಲೆ ಯುದ್ಧಕ್ಕೆ ನಡೆದನು. ಅವನೊಡನೆ ಭೂತಾಧಿಪತಿಗಳೂ, ಸಿದ್ಧರೂ ಹೊರಟರು. ಮೂರನೆಯ ಕಣ್ಣು ಉರಿಯುತ್ತ ಕಿಡಿಗಳನ್ನು ಕೆದರುತ್ತಿರಲು, ಅವನ ಮುಖವು ಬಹಳ ಭಯಂಕರವಾಗಿತ್ತು.

೩೮. ಗಣಪತಿಯೇ ಮೊದಲಾದ ಎಂಬತ್ತನಾಲ್ಕುಜನ ಪ್ರಮಥಗಣಾಧಿಪತಿಗಳು ಅಸ್ತ್ರಸಹಿತರಾಗಿ ಜೊತೆಯಲ್ಲೇ ಹೋದರು. ಕುಬೇರನು ನೂರುಕೋಟಿ ವೀರರಥಿಕರೊಡನೆ ಈಶ್ವರನ ಹಿಂದೆ ನಡೆದನು.

೩೯. ಚಂದ್ರನಿಗೂ ಕೂಡ ಬಹಳ ಸಿಟ್ಟು ಬಂದಿತು. ಇವನು ಕೋಟಿ ಲೆಕ್ಕದ ಬೇತಾಲರು, ಯಕ್ಷರು, ಉರಗರು ಮತ್ತು ಕಿನ್ನರರೊಡನೆಯೂ, ಮೂವತ್ತಾರು ಲಕ್ಷದ ರಥಗಳೊಡನೆಯೂ ಕೂಡಿ ಯುದ್ಧಾಭಿಮುಖನಾದನು.

ನಕ್ಷತ್ರದೈತ್ಯಾಸುರಸೈನ್ಯಯುಕ್ತಃ
ಶನೈಶ್ಚರಾಂಗಾರಕವೃದ್ಧತೇಜಾಃ ।
ಜಗ್ಮುರ್ಭಯಂ ಸಪ್ತ ತಥೈವ ಲೋಕಾ
ಶ್ಚಚಾಲ ಭೂರ್ದ್ವೀಪಸಮುದ್ರಗರ್ಭಾ ॥೪೦॥

ಸ ಸೋಮಮೇವಾಭ್ಯಗಮತ್ಪಿನಾಕೀ
ಗೃಹೀತದೀಪ್ತಾಸ್ತ್ರವಿಶಾಲವಹ್ನಿಃ
ಅಥಾಭವದ್ಭೀಷಣಭೀಮಸೇನ
ಸೈನ್ಯದ್ವಯಸ್ಯಾಪಿ ಮಹಾಹವೋಽಸೌ ॥೪೧॥

ಅಶೇಷಸತ್ವಕ್ಷಯಕೃತ್ಪ್ರವೃದ್ಧ
ಸ್ತೀಕ್ಷ್ಣಾಯುಧಾಸ್ತ್ರಜ್ವಲನೈಕರೂಪಃ ।
ಶಸ್ತ್ರೈರಥಾನ್ಯೋನ್ಯಮಶೇಷಸೈನ್ಯಂ
ದ್ವಯೋರ್ಜಗಾಮ ಕ್ಷಯಮುಗ್ರತೀಕ್ಷ್ಣೈಃ ॥೪೨॥

---

೪೦. ನಕ್ಷತ್ರಗಳು, ದೈತ್ಯರು, ಅಸುರರು ಇವರ ಸೈನ್ಯವೆಲ್ಲ ಚಂದ್ರನೊಡನೆ ಕೂಡಿತು. ಶನಿ ಮತ್ತು ಅಂಗಾರಕರಿಂದ ಅವನ ತೇಜಸ್ಸು ಮತ್ತಷ್ಟು ಹೆಚ್ಚಿತು. ಸಪ್ತಲೋಕಗಳೂ ಈ ಪ್ರಚಂಡ ಸೈನ್ಯವನ್ನು ಕಂಡು ಹೆದರಿದುವು. ಸಪ್ತದ್ವೀಪಗಳಿಂದಲೂ, ಸಪ್ತಸಮುದ್ರಗಳಿಂದಲೂ ಆವೃತವಾದ ಭೂಮಿ ನಡುಗಿತು.

೪೧. ಕೈಯಲ್ಲಿ ಹಿಡಿದಿದ್ದ ಅಸ್ತ್ರಗಳು ಬೆಳಗುತ್ತಿರಲು, ಹಣೆಗಣ್ಣಿನ ಉರಿಯು ಎತ್ತೆತ್ತಲೂ ವ್ಯಾಪಿಸುತ್ತಿರಲು ಈಶ್ವರನು ಚಂದ್ರನ ಮೇಲೆ ಬಿದ್ದನು. ಬಳಿಕ ಭಯಂಕರವಾದ ಆ ಎರಡು ಸೈನ್ಯಗಳಿಗೂ ದೊಡ್ಡ ಯುದ್ಧವು ನಡೆಯಿತು.

೪೨. ತೀಕ್ಷ್ಣವಾದ ಆಯುಧಗಳಿಂದೆದ್ದ ಮಹಾಜ್ವಾಲೆಯು ಎಲ್ಲ ಪ್ರಾಣಿಗಳನ್ನೂ ನಿರ್ಮೂಲಮಾಡಿತು. ಎರಡು ಸೈನ್ಯದವರೂ ಕ್ರೂರಶಸ್ತ್ರಗಳಿಂದ ಹೊಡೆದಾಡಿ ಕ್ಷಯಿಸಿದರು.

ಪತಂತಿ ಶಸ್ತ್ರಾಣಿ ತಥೋಜ್ವಲಾನಿ
ಸ್ವರ್ಭೂಮಿಪಾತಾಲಮಥೋ ದಹಂತಿ ।
ರುದ್ರಃ ಕೋಪಾದ್ಬ್ರಹ್ಮಶೀರ್ಷಂ ಮುಮೋಚ
ಸೋಮೋಽಪಿ ಸೋಮಾಸ್ತ್ರಮಮೋಘವೀರ್ಯಂ ॥೪೩॥

ತಯೋರ್ನಿಪಾತೇನ ಸಮುದ್ರಭೂಮ್ಯೋ
ರಥಾಂತರಿಕ್ಷಸ್ಯ ಚ ಭೀತಿರಾಸೀತ್ ।
ತದಸ್ತ್ರಯುಗ್ಮಂ ಜಗತಾಂ ಕ್ಷಯಾಯ
ಪ್ರವೃದ್ಧಮಾಲೋಕ್ಯ ಪಿತಾಮಹೋಽಪಿ ॥೪೪॥

ಅಂತಃ ಪ್ರವಿಶ್ಯಾಥ ಕಥಂ ಕಥಂಚಿ
ನ್ನಿವಾರಯಾಮಾಸ ಸುರೈಃ ಸಹೈವ ।
ಅಕಾರಣಂ ಕಿಂ ಕ್ಷಯಕೃಜ್ಜನಾನಾಂ
ಸೋಮ ತ್ವಯಾಪೀತ್ಥಮಕಾರಿ ಕಾರ್ಯಂ ॥೪೫॥

---

೪೩. ಇಬ್ಬರ ಕಡೆಯಿಂದಲೂ ಉರಿಯುತ್ತಿರುವ ಶಸ್ತ್ರಗಳು ಹೊರಬೀಳುತ್ತಿದ್ದುವು. ಅವು ಸ್ವರ್ಗಮರ್ತ್ಯಪಾತಾಳಗಳೆಂಬ ಮೂರು ಲೋಕಗಳನ್ನೂ ಸುಡುತ್ತಿದ್ದುವು. ಆಗ ಮಹೇಶ್ವರನು ಸಿಟ್ಟಾಗಿ ಬ್ರಹ್ಮಶೀರ್ಷವೆಂಬ ಅಸ್ತ್ರವನ್ನು ಬಿಟ್ಟನು. ಚಂದ್ರನೂ ಸಹ ಮಹಾತೇಜಸ್ವಿಯಾದ ಸೋಮಾಸ್ತ್ರವನ್ನು ಪ್ರಯೋಗಿಸಿದನು.

೪೪. ಆ ದಿವ್ಯಾಸ್ತ್ರಗಳೆರಡೂ ಹೊರಟು ಬರಲು ಸಮುದ್ರ, ಭೂಮಿ, ಅಂತರಿಕ್ಷ ಇವೆಲ್ಲವೂ ಹೆದರಿದುವು. ಲೋಕಗಳನ್ನು ಹಾಳುಮಾಡಬೇಕೆಂದು ಅವು ಒಂದನ್ನೊಂದು ಮೀರಿಸಿ ಬೆಳೆಯುತ್ತಿದ್ದುವು. ಲೊಕಪಿತಾಮಹನಾದ ಬ್ರಹ್ಮನು ಇದನ್ನು ನೋಡಿದನು.

೪೫-೪೬. ಅವನು ದೇವತೆಗಳೊಡನೆ ಸೈನ್ಯದೊಳಗೆ ನುಗ್ಗಿ ಅತಿ ಪ್ರಯಾಸದಿಂದ ಚಂದ್ರನನ್ನು ತಡೆದನು. "ಎಲೈ ಚಂದ್ರನೇ, ಇದೇನು? ಜನರೆಲ್ಲರನ್ನೂ ಲಯಮಾಡುವ ಈ ಕಾರ್ಯವನ್ನೇಕೆ ನಿಷ್ಕಾರಣವಾಗಿ ಕೈಗೊಂಡೆ? ಪರಸ್ತ್ರೀ

**ಯಸ್ಮಾತ್ಪರಸ್ತ್ರೀಹರಣಾಯ ಸೋಮ**
**ತ್ವಯಾ ಕೃತಂ ಯುದ್ಧಮತೀವ ಭೀಮಂ।**
**ಪಾಪಗ್ರಹಸ್ತ್ವಂ ಭವಿತಾ ಜನೇಷು**
**ಶಾಂತೋಽಪ್ಯಲಂ ನೂನಮಥೋ ಸಿತಾಂತೇ।**
**ಭಾರ್ಯಾಮಿಮಾಮರ್ಪಯ ವಾಕ್ಪತೇಸ್ತ್ವಂ**
**ನ ಚಾವಮಾನೋಽಸ್ತಿ ಪರಸ್ವಹಾರೇ** ||೪೬||

**|| ಸೂತ ಉವಾಚ ||**

**ತಥೇತಿ ಚೋವಾಚ ಹಿಮಾಂಶುಮಾಲೀ**
**ಯುದ್ಧಾದಪಾಕ್ರಾಮದತಃ ಪ್ರಶಾಂತಃ।**
**ಬೃಹಸ್ಪತಿಃ ಸ್ವಾಮುಪಗೃಹ್ಯ ತಾರಾಂ**
**ಹೃಷ್ಟೋ ಜಗಾಮ ಸ್ವಗೃಹಂ ಸರುದ್ರಃ** ||೪೭||

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸೋಮವಂಶಾಖ್ಯಾನೇ**
**ಸೋಮಾಪಚಾರೋ ನಾಮ ತ್ರಯೋವಿಂಶೋಽಧ್ಯಾಯಃ**

---

ಹರಣಕ್ಕಾಗಿ ಅತಿಭಯಂಕರವಾದ ಯುದ್ಧವನ್ನು ಮಾಡಿದೆಯಲ್ಲಾ! ಆದುದರಿಂದ ನೀನು ಸೌಮ್ಯನಾಗಿದ್ದರೂ ಶುಕ್ಲಪಕ್ಷವು ಕಳೆದ ಮೇಲೆ ಎಂದರೆ ಕೃಷ್ಣಪಕ್ಷದಲ್ಲಿ ಪಾಪ ಗ್ರಹವೆಂದು ನಿನ್ನನ್ನು ಹೇಳಲಿ. ಬೃಹಸ್ಪತಿಗೆ ಅವನ ಭಾರ್ಯೆಯನ್ನು ಒಪ್ಪಿಸು. ಕಂಡವರ ಪದಾರ್ಥವನ್ನು ಅಪಹರಿಸಲು ನಿನಗೆ ನಾಚಿಕೆಯಾಗುವುದಿಲ್ಲವೆ?'' ಎಂದು ಹೇಳಿದನು.

೪೭. ಸೂತಪೌರಾಣಿಕನು ಹೇಳಿದನು.—ಚಂದ್ರನು ಹಾಗೆಯೇ ಆಗಲೆಂದು ಒಪ್ಪಿಕೊಂಡು, ಪ್ರಶಾಂತಚಿತ್ತನಾಗಿ ಯುದ್ಧದಿಂದ ಹಿಂದೆಗೆದನು. ಬೃಹಸ್ಪತಿಯು ತನ್ನ ಪತ್ನಿಯೊಡಗೊಂಡು ಸಂತೋಷದಿಂದ ರುದ್ರನೊಡನೆ ತನ್ನ ಮನೆಗೆ ಹೋದನು.

## ಅಧ್ಯಾಯ ೨೩

### ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಚಂದ್ರನ ವೃತ್ತಾಂತವನ್ನು ಹೇಳಿದೆ.

ಅತ್ರಿಮಹರ್ಷಿಯ ಕಣ್ಣೀರಿನಿಂದ ದಿವ್ಯ ತೇಜಸ್ಸೊಂದು ಹುಟ್ಟಿತು. ದಿಗ್ದೇವತೆಯರು ಅದನ್ನು ಗರ್ಭರೂಪದಿಂದ ಧರಿಸಿದರು. ಆದರೆ ಅದರ ವೇಗವನ್ನು ತಡೆಯಲಾರದೆ ಹೊರಗೆ ಬಿಟ್ಟುಬಿಟ್ಟರು. ಬ್ರಹ್ಮನು ಅದೆಲ್ಲವನ್ನೂ ಒಟ್ಟಿಗೆ ಕೂಡಿಸಿ ಒಬ್ಬ ಯುವಕನನ್ನಾಗಿ ಮಾಡಿದನು. ಅವನೇ ಚಂದ್ರ. ಅವನು ಬ್ರಾಹ್ಮಣರಿಗೂ, ಓಷಧಿಗಳಿಗೂ ಅಧಿಪತಿಯಾದನು.

ಒಂದು ದಿನ ಅವನು ಉದ್ಯಾನದಲ್ಲಿ ಸಂಚರಿಸುತ್ತಿರುವಾಗ ಬೃಹಸ್ಪತಿಯ ಪತ್ನಿಯಾದ ತಾರಾದೇವಿಯನ್ನು ಕಂಡು, ಮೋಹಿಸಿ, ಅವಳನ್ನು ತನ್ನ ಮನೆಗೊಯ್ದು ಬಹುಕಾಲ ಅವಳೊಡನೆ ಸುಖವಾಗಿದ್ದನು. ಚಂದ್ರನ ಈ ಪಾಪಕಾರ್ಯಕ್ಕಾಗಿ ಬೃಹಸ್ಪತಿಯ ಪಕ್ಷವನ್ನು ವಹಿಸಿ ಪರಮೇಶ್ವರನು ಸಕಲಸೈನ್ಯಸಮೇತನಾಗಿ ಅವನ ಮೇಲೆ ಯುದ್ಧಕ್ಕೆ ಬಂದನು. ಇಬ್ಬರಿಗೂ ಭಯಂಕರವಾದ ಯುದ್ಧವಾಯಿತು. ಬಳಿಕ ಬ್ರಹ್ಮನು ಮಧ್ಯದಲ್ಲಿ ಪ್ರವೇಶಿಸಿ, ಚಂದ್ರನಿಗೆ ಬುದ್ಧಿ ಹೇಳಿ, ಅವನ ಅವಿವೇಕವನ್ನು ತೋರಿಸಿಕೊಟ್ಟು ಬೃಹಸ್ಪತಿಗೆ ಅವನ ಪತ್ನಿಯನ್ನು ಕೊಡಿಸಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಚಂದ್ರವಂಶವರ್ಣನದೊಳಗೆ ಚಂದ್ರನ
ಅಪಚಾರವರ್ಣನವೆಂಬ ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು



## ಅಥ ಶ್ರೀಮತ್ಸ್ಯಮಹಾಪುರಾಣೇ ಚತುರ್ವಿಂಶೋಽಧ್ಯಾಯಃ

॥ ಸೂತ ಉವಾಚ ॥

ತತಸ್ಸಂವತ್ಸರಸ್ಯಾಂತೇ ದ್ವಾದಶಾದಿತ್ಯಸನ್ನಿಭಃ।
ದಿವ್ಯಪೀತಾಂಬರಧರೋ ದಿವ್ಯಾಭರಣಭೂಷಿತಃ ॥ ೧ ॥

ತಾರೋದರಾದ್ವಿನಿಷ್ಕ್ರಾಂತಃ ಕುಮಾರಶ್ಚಂದ್ರಸನ್ನಿಭಃ।
ಸರ್ವಾರ್ಥಶಾಸ್ತ್ರವಿದ್ಧೀಮಾನ್ಹಸ್ತಿಶಾಸ್ತ್ರಪ್ರವರ್ತಕಃ ॥ ೨ ॥

ನಾಮ ಯದ್ರಾಜಪುತ್ರೀಯಂ ವಿಶ್ರುತಂ ಗಜವೈದ್ಯಕಂ।
ರಾಜ್ಞಃ ಸೋಮಸ್ಯ ಪುತ್ರತ್ವಾದ್ರಾಜಪುತ್ರೋ ಬುಧಃ ಸ್ಮೃತಃ ॥ ೩ ॥

ಜಾತಮಾತ್ರಃ ಸ ತೇಜಾಂಸಿ ಸರ್ವಾಣ್ಯೇವಾಜಯದ್ಬಲೀ।
ಬ್ರಹ್ಮಾದ್ಯಾಸ್ತತ್ರ ಚಾಽಽಜಗ್ಮುರ್ದೇವಾ ದೇವರ್ಷಿಭಿಃ ಸಹ ॥ ೪ ॥

---

೧-೨. ಸೂತಪೌರಾಣಿಕನು ಹೇಳಿದನು.—ಬಳಿಕ ಒಂದು ವರ್ಷವು ಪೂರ್ಣವಾದ ಮೇಲೆ, ತಾರಾದೇವಿಯು ಗರ್ಭದಲ್ಲಿ ಚಂದ್ರನನ್ನು ಹೋಲುವ ಮಗನೊಬ್ಬನು ಹುಟ್ಟಿದನು. ಅವನು ದ್ವಾದಶಾದಿತ್ಯರಂತೆ ತೇಜೋವಂತನಾಗಿದ್ದನು. ದಿವ್ಯ ಪೀತಾಂಬರವನ್ನುಟ್ಟು ದಿವ್ಯಾಭರಣಗಳನ್ನು ತೊಟ್ಟಿದ್ದನು. ಸಕಲ ಶಾಸ್ತ್ರಜ್ಞನಾಗಿ ಗಜಶಾಸ್ತ್ರ ಪ್ರವರ್ತಕನೆಂಬ ಪ್ರಖ್ಯಾತಿಯನ್ನು ಪಡೆದನು.

೩. ಗಜವೈದ್ಯಶಾಸ್ತ್ರಕ್ಕೆ ರಾಜಪುತ್ರೀಯವೆಂದೂ ಹೆಸರುಂಟು. ಏಕೆಂದರೆ ಬುಧನು ರಾಜನಾದ ಚಂದ್ರನ ಮಗನಾದುದರಿಂದ ರಾಜಪುತ್ರನೆನಿಸಿದನು. ಅವನು ಪ್ರಚಾರಕ್ಕೆ ತಂದ ಶಾಸ್ತ್ರವು ರಾಜಪುತ್ರೀಯವೆಂದೇ ಪ್ರಖ್ಯಾತಿಗೆ ಬಂದಿತು.

೪. ಹುಟ್ಟಿದ ಕೂಡಲೆ ಅವನು ಎಲ್ಲ ತೇಜಸ್ಸುಗಳನ್ನೂ ಮೀರಿಸುವಷ್ಟು ತೇಜೋಬಲವನ್ನು ಪಡೆದಿದ್ದನು. ಬ್ರಹ್ಮಾದಿದೇವತೆಗಳೂ ದೇವರ್ಷಿಗಳೂ ಅಲ್ಲಿಗೆ ಬಂದರು.

ಬೃಹಸ್ಪತಿಗೃಹೇ ಸರ್ವೇ ಜಾತಕರ್ಮೋತ್ಸವೇ ತದಾ।
ಅಪೃಚ್ಛಂಸ್ತೇ ಸುರಾಸ್ತಾರಾಂ ಕೇನ ಜಾತಃ ಕುಮಾರಕಃ ॥ ೫ ॥

ತತಃ ಸಾ ಲಜ್ಜಿತಾ ತೇಷಾಂ ನ ಕಿಂಚಿದವದತ್ತದಾ।
ಪುನಃ ಪುನಸ್ತದಾ ಪೃಷ್ಟಾ ಲಜ್ಜಯಂತೀ ವರಾಂಗನಾ ॥ ೬ ॥

ಸೋಮಸ್ಯೇತಿ ಚಿರಾದಾಹ ತತೋಗೃಹ್ಣಾದ್ವಿಧುಸ್ಸುತಂ।
ಬುಧ ಇತ್ಯಕರೋನ್ನಾಮ್ನಾ ಪ್ರಾದಾದ್ರಾಜ್ಯಂ ಚ ಭೂತಲೇ ॥ ೭ ॥

ಅಭಿಷೇಕಂ ತತಃ ಕೃತ್ವಾ ಪ್ರಧಾನಮಕರೋದ್ವಿಭುಃ।
ಗ್ರಹಸಾಮ್ಯಂ ಪ್ರದಾಯಾಥ ಬ್ರಹ್ಮಾ ಬ್ರಹ್ಮರ್ಷಿಸಂಯುತಃ ॥ ೮ ॥

ಪಶ್ಯತಾಂ ಸರ್ವದೇವಾನಾಂ ತತ್ರೈವಾಂತರಧೀಯತ।
ಇಲೋದರೇ ಚ ಧರ್ಮಿಷ್ಠಂ ಬುಧಃ ಪುತ್ರಮಜೀಜನತ್ ॥ ೯ ॥

---

೫. ಬೃಹಸ್ಪತಿಯ ಮನೆಯಲ್ಲಿ ಜಾತಕರ್ಮೋತ್ಸವವು ನಡೆಯುತ್ತಿರುವಾಗ, ನೆರೆದಿದ್ದ ದೇವತೆಗಳೆಲ್ಲರೂ "ಈ ಮಗುವು ಯಾರ ವೀರ್ಯದಿಂದ ಜನಿಸಿತು?" ಎಂದು ತಾರೆಯನ್ನು ಕೇಳಿದರು.

೬-೭. ಅವಳು ನಾಚಿಕೆಯಿಂದ ಏನೂ ಹೇಳಲಿಲ್ಲ. ಅವರು ಮತ್ತೆ ಮತ್ತೆ ಕೇಳಿದರು. ಆಗ ಆ ಸುಂದರಿಯು "ಚಂದ್ರನ ವೀರ್ಯದಿಂದ" ಎಂದು ಬಹಳ ಹೊತ್ತಿನ ಮೇಲೆ ನಾಚಿಕೆಯಿಂದ ಉತ್ತರವಿತ್ತಳು. ತರುವಾಯ ಚಂದ್ರನು ಮಗುವನ್ನು ತನ್ನ ಮನೆಗೊಯ್ದು ಬುಧನೆಂದು ಹೆಸರಿಟ್ಟನು. ಅವನಿಗೆ ಭೂಮಿಯ ರಾಜ್ಯಭಾರವನ್ನೂ ಸಹ ಕೊಟ್ಟನು.

೮. ಚಂದ್ರನು ಅವನಿಗೆ ಪಟ್ಟಾಭಿಷೇಕವನ್ನು ಮಾಡಿ ಅವನನ್ನು ಪ್ರಮುಖನೆನಿಸಿದನು. ಬ್ರಹ್ಮನು ಅವನಿಗೆ ಉಳಿದ ಗ್ರಹಗಳೊಡನೆ ಸಮಾನತೆಯನ್ನು ಕೊಟ್ಟು, ಎಲ್ಲ ದೇವತೆಗಳೂ ನೋಡುತ್ತಿರುವಂತೆಯೇ ಬ್ರಹ್ಮರ್ಷಿಗಳೊಡನೆ ಅದೃಶ್ಯನಾದನು.

೯-೧೦. ಇಲಾದೇವಿಯ ಗರ್ಭದಲ್ಲಿ ಧರ್ಮಜ್ಞನಾದ ಬುಧನಿಗೆ ಮಗನೊಬ್ಬನು ಜನಿಸಿದನು. ಅವನು ಪುರೂರವನೆಂಬ ಹೆಸರಿನಿಂದ ಪ್ರಖ್ಯಾತನಾಗಿ ನೂರು

**ಅಶ್ವಮೇಧಶತಂ ಸಾಗ್ರಮಕರೋದ್ಯಃ ಸ್ವತೇಜಸಾ ।**
**ಪುರೂರವಾ ಇತಿ ಖ್ಯಾತಃ ಸರ್ವಲೋಕನಮಸ್ಕೃತಃ ॥೧೦॥**

**ಹಿಮವಚ್ಛಿಖರೇ ರಮ್ಯೇ ಸಮಾರಾಧ್ಯ ಜನಾರ್ದನಂ ।**
**ಲೋಕೈಶ್ವರ್ಯಮಗಾದ್ರಾಜಾ ಸಪ್ತದ್ವೀಪಪತಿಸ್ತದಾ ॥೧೧॥**

**ಕೇಶಿಪ್ರಭೃತಯೋ ದೈತ್ಯಾಃ ಕೋಟಿಶೋ ಯೇನ ದಾರಿತಾಃ ।**
**ಉರ್ವಶೀ ಯಸ್ಯ ಪತ್ನೀತ್ವಮಗಮದ್ರೂಪಮೋಹಿತಾ ॥೧೨॥**

**ಸಪ್ತದ್ವೀಪಾ ವಸುಮತೀ ಸಶೈಲವನಕಾನನಾ ।**
**ಧರ್ಮೇಣ ಪಾಲಿತಾ ಯೇನ ಸರ್ವಲೋಕಹಿತೈಷಿಣಾ ॥೧೩॥**

**ಚಾಮರಗ್ರಾಹಿಣೀ ಕೀರ್ತಿಃ ಸದಾ ಚೈವಾಂಗವಾಹಿಕಾ ।**
**ವಿಷ್ಣೋಃ ಪ್ರಸಾದಾದ್ದೇವೇಂದ್ರೋ ದದಾವರ್ಧಾಸನಂ ತದಾ ॥೧೪॥**

---

ಅಶ್ವಮೇಧಯಾಗಗಳನ್ನು ಮಾಡಿದನು. ತನ್ನ ತೇಜಸ್ಸಿನಿಂದ ಎಲ್ಲ ಲೋಕಗಳಲ್ಲೂ ಗೌರವವನ್ನು ಪಡೆದನು.

೧೧. ರಮ್ಯವಾದ ಹಿಮವತ್ಪರ್ವತದಲ್ಲಿ ಶ್ರೀಮನ್ನಾರಾಯಣನನ್ನು ಅರ್ಚಿಸಿ ಜಂಬೂ, ಪ್ಲಕ್ಷ, ಕುಶ, ಕ್ರೌಂಚ, ಶಾಕ, ಶಾಲ್ಮಲಿ ಮತ್ತು ಪುಷ್ಕರಗಳೆಂಬ ಸಪ್ತ ದ್ವೀಪಗಳ ಆಧಿಪತ್ಯವನ್ನು ಪಡೆದನು. ಎಲ್ಲ ಲೋಕಗಳ ಐಶ್ವರ್ಯವೂ ಅವನದಾಯಿತು.

೧೨. ರಾಜನಾದ ಪುರೂರವನು ಕೇಶಿ ಮೊದಲಾದ ದೈತ್ಯರನ್ನು ಕೋಟಿ ಲೆಕ್ಕದಲ್ಲಿ ಸೀಳಿಹಾಕಿದನು. ಅವನ ರೂಪದಿಂದ ಮೋಹಗೊಂಡು ಊರ್ವಶಿಯು ಅವನಿಗೆ ಪತ್ನಿಯಾದಳು.

೧೩. ಏಳು ದ್ವೀಪಗಳಿಂದಲೂ, ಬೆಟ್ಟ, ತೋಟ ಮತ್ತು ಕಾಡುಗಳಿಂದಲೂ ತುಂಬಿದ ಭೂಮಂಡಲವನ್ನು ಅವನು ಧರ್ಮದಿಂದ ಪಾಲಿಸಿದನು. ಅವನು ಎಲ್ಲ ಜನರಿಗೂ ಹಿತವನ್ನೇ ಕೋರುತ್ತಿದ್ದನು.

೧೪. ಕೀರ್ತಿಯು ಆ ಪುರೂರವನಿಗೆ ಚಾಮರಬೀಸುತ್ತಿದ್ದಳು; ಮತ್ತು ಯಾವಾಗಲೂ ಅವನ ಮೈಯನ್ನು ಒತ್ತುತ್ತಿದ್ದಳು. ವಿಷ್ಣುವಿನ ಅನುಗ್ರಹದಿಂದ ದೇವೇಂದ್ರನು ಆ ರಾಜನಿಗೆ ತನ್ನೊಡನೆ ಸಿಂಹಾಸನದಲ್ಲಿ ಕುಳಿತುಕೊಳ್ಳಲು ಎಡೆ ಗೊಟ್ಟು ಮರ್ಯಾದೆಮಾಡುತ್ತಿದ್ದನು.

ಧರ್ಮಾರ್ಥಕಾಮಾನ್ ಧರ್ಮೇಣ ಸಮಮೇವಾಭ್ಯಪಾಲಯತ್ ।
ಧರ್ಮಾರ್ಥಕಾಮಾಃ ಸಂದ್ರಷ್ಟುಮಾಜಗ್ಮುಃ ಕೌತುಕಾತ್ಪುರಾ ॥೧೫॥

ಜಿಜ್ಞಾಸವಸ್ತಚ್ಚರಿತಂ ಕಥಂ ಪಶ್ಯತಿ ನಃ ಸಮಂ ।
ಭಕ್ತ್ಯಾ ಚಕ್ರೇ ತತಸ್ತೇಷಾಮರ್ಘ್ಯಪಾದ್ಯಾದಿಕಂ ನೃಪಃ ॥೧೬॥

ಆಸನತ್ರಯಮಾನೀಯ ದಿವ್ಯಂ ಕನಕಭೂಷಿತಂ ।
ನಿವೇಶ್ಯಾಥಾಕರೋತ್ಪೂಜಾಮೀಷದ್ಧರ್ಮೇಽಧಿಕಾಂ ಪುನಃ ॥೧೭॥

ಜಗ್ಮತುಸ್ತೇನ ಕಾಮಾರ್ಥಾವತಿಕೋಪಂ ನೃಪಂ ಪ್ರತಿ ।
ಅರ್ಥಃ ಶಾಪಮದಾತ್ತಸ್ಮೈ ಲೋಭಾತ್ತ್ವಂ ನಾಶಮೇಷ್ಯಸಿ ॥೧೮॥

ಕಾಮೋಽಪ್ಯಾಹ ತವೋನ್ಮಾದೋ ಭವಿತಾ ಗಂಧಮಾದನೇ ।
ಕುಮಾರವನಮಾಶ್ರಿತ್ಯ ವಿಯೋಗಾದುರ್ವಶೀಭವಾತ್ ॥೧೯॥

---

೧೫. ಅವನು ಧರ್ಮ, ಅರ್ಥ ಮತ್ತು ಕಾಮಗಳೆಂಬ ಪುರುಷಾರ್ಥಗಳನ್ನು ಧರ್ಮಕ್ಕೆ ವಿರೋಧವಿಲ್ಲದಂತೆ ಸಮವಾಗಿ ಪಾಲಿಸಿದನು. ಪ್ರತ್ಯಕ್ಷವಾಗಿ ಆ ಪುರುಷಾರ್ಥ ದೇವತೆಗಳೇ ಕುತೂಹಲದಿಂದ ಅವನ ಬಳಿಗೆ ಇದನ್ನು ನೋಡುವುದಕ್ಕಾಗಿ ಬಂದರು.

೧೬. "ಇವನು ನಮ್ಮೆಲ್ಲರನ್ನು ಸಮನಾಗಿಯೇ ಕಾಣುವನಲ್ಲಾ! ಅದು ಹೇಗೆ" ಎಂಬ ವಿಚಾರವನ್ನು ಅರಿಯಬೇಕೆಂಬುದೇ ಅವರು ಬಂದ ಉದ್ದೇಶ. ರಾಜನು ಆ ಮೂವರು ದೇವತೆಗಳಿಗೂ ಅರ್ಘ್ಯಪಾದ್ಯಾದಿಗಳನ್ನು ಭಕ್ತಿಯಿಂದ ಸಮರ್ಪಿಸಿದನು.

೧೭. ಸುವರ್ಣಾಲಂಕೃತವಾದ ಮೂರು ಆಸನಗಳನ್ನು ತರಿಸಿ, ಮೂವರನ್ನೂ ಅವುಗಳಲ್ಲಿ ಕುಳ್ಳಿರಿಸಿ ಪೂಜಿಸಿದನು; ಆದರೆ ಧರ್ಮದ ವಿಷಯದಲ್ಲಿ ಮಾತ್ರ ಸತ್ಕಾರವು ಸ್ವಲ್ಪ ಹೆಚ್ಚಾಗಿತ್ತು.

೧೮. ಅದರಿಂದ ಅರ್ಥಕಾಮಗಳಿಗೆ ರಾಜನ ಮೇಲೆ ಕೋಪ ಬಂದಿತು. "ದುರಾಸೆಯಿಂದ ನೀನು ಹಾಳಾಗುವೆ"ಯೆಂದು ಅರ್ಥವು ಶಾಪವಿತ್ತಿತು.

೧೯. "ಗಂಧಮಾದನ ಪರ್ವತದ ಕುಮಾರವನದಲ್ಲಿ ಸಂಚರಿಸುತ್ತಿರುವಾಗ ಊರ್ವಶಿಯ ಅಗಲಿಕೆಯಿಂದ ದುಃಖಪಟ್ಟು ಕೊರಗುತ್ತ ನೀನು ಹುಚ್ಚನಾಗುವೆ"ಯೆಂದು ಕಾಮವೂ ಕೂಡ ಹೇಳಿತು.

ಧರ್ಮೋऽಪ್ಯಾಹ ಚಿರಾಯುಸ್ತ್ವಂ ಧಾರ್ಮಿಕಶ್ಚ ಭವಿಷ್ಯಸಿ ।
ಸಂತತಿಸ್ತವ ರಾಜೇಂದ್ರ ಯಾವಚ್ಚಂದ್ರಾರ್ಕತಾರಕಂ ॥೨೦॥

ಶತಶೋ ವೃದ್ಧಿಮಾಯಾತು ನ ನಾಶಂ ಭುವಿ ಯಾಸ್ಯತಿ ।
ಇತ್ಯುಕ್ತ್ವಾಂತರ್ದಧುಃ ಸರ್ವೇ ರಾಜಾ ರಾಜ್ಯಂ ತದನ್ವಭೂತ್ ॥೨೧॥

ಅಹನ್ಯಹನಿ ದೇವೇಂದ್ರಂ ದ್ರಷ್ಟುಂ ಯಾತಿ ಸ ರಾಜರಾಟ್ ।
ಕದಾಚಿದಾರುಹ್ಯ ರಥಂ ದಕ್ಷಿಣಾಂಬರಚಾರಿಣಂ ॥೨೨॥

ಸಾರ್ಧಮರ್ಕೇಣ ಸೋऽಪಶ್ಯನ್ನೀಯಮಾನಾಮಥಾಂಬರೇ ।
ಕೇಶಿನಾ ದಾನವೇಂದ್ರೇಣ ಚಿತ್ರಲೇಖಾಮಥೋರ್ವಶೀಂ ॥೨೩॥

ತಂ ವಿನಿರ್ಜಿತ್ಯ ಸಮರೇ ವಿವಿಧಾಯುಧಪಾಣಿನಾ ।
ಬುಧಪುತ್ರೇಣ ವಾಯುವ್ಯಮಸ್ತ್ರಂ ಮುಕ್ತ್ವಾ ಯಶೋऽರ್ಥಿನಾ ॥೨೪॥

---

೨೦-೨೧. "ಓ ರಾಜಾಧಿರಾಜಾ, ನೀನು ಚಿರಾಯುವೂ ಧಾರ್ಮಿಕನೂ ಆಗುವೆ. ನಿನ್ನ ವಂಶವು ಚಂದ್ರಸೂರ್ಯರು ಇರುವ ವರೆಗೂ ನೂರಾರು ಶಾಖೆಗಳಾಗಿ ಬೆಳೆಯಲಿ. ಲೋಕದಲ್ಲಿ ಅದಕ್ಕೆಂದಿಗೂ ನಾಶವೊದಗದು." ಎಂದು ಧರ್ಮವೂ ಸಹ ಅನುಗ್ರಹಿಸಿತು. ತರುವಾಯ ಆ ಅಧಿದೇವತೆಗಳು ಮೂವರೂ ಅದೃಶ್ಯ ರಾದರು. ರಾಜನು ಎಂದಿನಂತೆ ರಾಜ್ಯಭಾರದಲ್ಲಿ ನಿರತನಾದನು.

೨೨-೨೩. ಆ ರಾಜೇಶ್ವರನು ಪ್ರತಿ ದಿನವೂ ದೇವೇಂದ್ರನನ್ನು ಕಾಣುವುದ ಕ್ಕಾಗಿ ಸ್ವರ್ಗಕ್ಕೆ ಹೋಗುತ್ತಿದ್ದನು. ಒಂದು ದಿನ ಅವನು ಸೂರ್ಯನೊಡನೆ ರಥದಲ್ಲಿ ಕುಳಿತು ದಕ್ಷಿಣದಿಕ್ಕಿನಲ್ಲಿ ಆಕಾಶ ಮಾರ್ಗವಾಗಿ ಸಂಚರಿಸುತ್ತಿರಲು, ಕೇಶಿಯೆಂಬ ದೈತ್ಯರಾಜನು ಊರ್ವಶಿಯನ್ನೂ, ಚಿತ್ರಲೇಖೆಯನ್ನೂ ಅಪಹರಿಸಿಕೊಂಡು ಹೋಗುತ್ತಿರುವುದು ಅವನಿಗೆ ಗೊತ್ತಾಯಿತು.

೨೪. ಅಸ್ತ್ರವಿದ್ಯಾನಿಪುಣನಾದ ಪುರೂರವನು ವಾಯವ್ಯಾಸ್ತ್ರವನ್ನು ಪ್ರಯೋ ಗಿಸಿ, ಯುದ್ಧದಲ್ಲಿ ಆ ದೈತ್ಯನನ್ನು ಜಯಿಸಿ ಕೀರ್ತಿಯನ್ನು ಸಂಪಾದಿಸಿದನು.

ತಥಾ ಶಕ್ರೋಽಪಿ ಸಮರೇ ಯೇನ ಚೈವಂ ವಿನಿರ್ಜಿತಃ ।
ಮಿತ್ರತ್ವಮಗಮದ್ದೇವೈರ್ದದಾವಿಂದ್ರಾಯ ಚೋರ್ವಶೀಂ ॥೨೫॥

ತತಃ ಪ್ರಭೃತಿ ಮಿತ್ರತ್ವಮಗಮತ್ಪಾಕಶಾಸನಃ ।
ಸರ್ವಲೋಕಾತಿಶಾಯಿತ್ವಂ ಬಲಮೂರ್ಜೋ ಯಶಃ ಶ್ರಿಯಂ ॥೨೬॥

ಪ್ರಾದಾದ್ವಜ್ರೀತಿ ಸಂತುಷ್ಟೋ ಗೇಯತಾಂ ಭರತೇನ ಚ ।
ಸಾ ಪುರೂರವಸಃ ಪ್ರೀತ್ಯಾ ಗಾಯಂತೀ ಚರಿತಂ ಮಹತ್ ॥೨೭॥

ಲಕ್ಷ್ಮೀಸ್ವಯಂವರಂ ನಾಮ ಭರತೇನ ಪ್ರವರ್ತಿತಂ ।
ಮೇನಕಾಮುರ್ವಶೀಂ ರಂಭಾಂ ನೃತ್ಯತೇತಿ ತದಾಽದಿಶತ್ ॥೨೮॥

ನನರ್ತ ಸಲಯಂ ತತ್ರ ಲಕ್ಷ್ಮೀರೂಪೇಣ ಚೋರ್ವಶೀ ।
ಸಾ ಪುರೂರವಸಂ ದೃಷ್ಟ್ವಾ ನೃತ್ಯಂತೀ ಕಾಮಪೀಡಿತಾ ॥೨೯॥

---

೨೫. ಇಂದ್ರನೂ ಕೂಡ ಕೇಶಿಯೆಂಬ ದಾನವನೊಡನೆ ಯುದ್ಧಮಾಡಿ ಸೋತುಹೋಗಿದ್ದನು. ಅಂತಹವನನ್ನು ಪುರೂರವನು ಗೆದ್ದು, ಊರ್ವಶಿಯನ್ನು ಬಿಡಿಸಿ, ಇಂದ್ರನಿಗೆ ಕೊಟ್ಟು ದೇವತೆಗಳ ಸ್ನೇಹವನ್ನು ಸಂಪಾದಿಸಿದನು.

೨೬–೨೭. ಅದು ಮೊದಲು ಇಂದ್ರನು ಪುರೂರವನಿಗೆ ಮಿತ್ರನಾಗಿ, ಅವನಿಗೆ ಎಲ್ಲರಿಗಿಂತ ಹೆಚ್ಚಾದ ಶ್ರೇಷ್ಠತೆಯನ್ನೂ, ಬಲವನ್ನೂ, ಸುಖೋಪಭೋಗವನ್ನೂ, ಕೀರ್ತಿಯನ್ನೂ ಮತ್ತು ಸಕಲ ಸಂಪತ್ತನ್ನೂ ಕರುಣಿಸಿದನು. ಹೀಗೆ ಸಂತುಷ್ಟನಾಗಿ ಅವನ ಕೀರ್ತಿಯನ್ನು ಭರತಮುನಿಯಿಂದ ಹಾಡಿಸಿದನು. ಊರ್ವಶಿಯೂ ಸಹ ಅನುರಾಗದಿಂದ ಪುರೂರವನ ವೃತ್ತಾಂತವನ್ನು ಗಾನಮಾಡಿದಳು.

೨೮. ಭರತಮುನಿಯು ಲಕ್ಷ್ಮೀಸ್ವಯಂವರವೆಂಬ ರೂಪಕವನ್ನು ರಚಿಸಿ ಮೇನಕೆ, ಊರ್ವಶಿ, ರಂಭೆ ಮುಂತಾದವರಿಗೆ ಅದನ್ನು ಅಭಿನಯಿಸುವಂತೆ ಅಪ್ಪಣೆ ಮಾಡಿದನು.

೨೯. ಊರ್ವಶಿಯು ಲಕ್ಷ್ಮೀರೂಪವನ್ನು ಧರಿಸಿ ಲಯಕ್ಕನುಸಾರವಾಗಿ ನರ್ತನಮಾಡಿದಳು. ಅವಳು ಹಾಗೆಯೇ ನರ್ತಿಸುತ್ತ, ಪುರೂರವನನ್ನು ನೋಡಿ ಕಾಮವಶಳಾಗಿ, ಭರತಮುನಿಯು ಹೇಳಿಕೊಟ್ಟಿದ್ದ ಅಭಿನಯವೆಲ್ಲವನ್ನೂ ಮರೆತು ಬಿಟ್ಟಳು.

**ವಿಸ್ಮೃತ್ಯಾಭಿನಯಂ ಸರ್ವಂ ಯತ್ಪುರಾ ಭರತೋದಿತಂ।**
**ಶಶಾಪ ಭರತಃ ಕ್ರೋಧಾದ್ವಿಯೋಗಾದಸ್ಯ ಭೂತಲೇ ॥೩೦॥**

**ಪಂಚಪಂಚಾಶದಬ್ದಾನಿ ಲತಾ ಸೂಕ್ಷ್ಮಾ ಭವಿಷ್ಯಸಿ।**
**ಪುರೂರವಾಃ ಪಿಶಾಚತ್ವಂ ತತ್ರೈವಾನುಭವಿಷ್ಯತಿ ॥೩೧॥**

**ತತಸ್ತಮುರ್ವಶೀ ಗತ್ವಾ ಭರ್ತಾರಮಕರೋಚ್ಚಿರಂ।**
**ಶಾಪಾಂತೇ ಭರತಸ್ಯಾಥ ಉರ್ವಶೀ ಬುಧಸೂನುತಃ ॥೩೨॥**

**ಅಜೀಜನತ್ಸುತಾನಷ್ಟೌ ನಾಮತಸ್ತಾನ್ನಿಬೋಧತ।**
**ಆಯುರ್ದೃಢಾಯುರಶ್ವಾಯುರ್ಧನಾಯುರ್ಧೃತಿಮಾನ್ವಸುಃ ॥೩೩॥**

**ಶುಚಿವಿದ್ಯಃ ಶತಾಯುಶ್ಚ ಸರ್ವೇ ದಿವ್ಯಬಲೌಜಸಃ।**
**ಆಯುಷೋ ನಹುಷಃ ಪುತ್ರೋ ವೃದ್ಧಶರ್ಮಾ ತಥೈವ ಚ ॥೩೪॥**

**ರಜಿರ್ದಂಭೋ ವಿಪಾಪ್ಮಾ ಚ ವೀರಾಃ ಪಂಚ ಮಹಾರಥಾಃ।**
**ರಜೇಃ ಪುತ್ರಶತಂ ಜಜ್ಞೇ ರಾಜೇಯಮಿತಿ ವಿಶ್ರುತಂ ॥೩೫॥**

---

೩೦-೩೧. ಆಗ ಭರತನಿಗೆ ಸಿಟ್ಟು ಬಂದಿತು. "ನೀನು ಪುರೂರವನನ್ನು ಅಗಲಿ,ಐವತ್ತೈದು ವರ್ಷಗಳ ಕಾಲ ಭೂಲೋಕದಲ್ಲಿ ಸೂಕ್ಷ್ಮವಾದ ಬಳ್ಳಿಯ ರೂಪವನ್ನು ತಾಳಿ ವಾಸಮಾಡು. ಆ ರಾಜನೂ ಸಹ ಪಿಶಾಚಜನ್ಮವನ್ನೆತ್ತಿ ಅಲ್ಲಿಯೇ ಅಲೆದಾಡುತ್ತಿರುವನು" ಎಂದು ಶಪಿಸಿದನು.

೩೨-೩೩. ಬಳಿಕ ಊರ್ವಶಿಯು ಪುರೂರವನಲ್ಲಿಗೆ ಹೋಗಿ, ಅವನನ್ನು ವರಿಸಿ ಬಹುಕಾಲ ಸುಖವಾಗಿದ್ದಳು. ಭರತಮುನಿಯ ಶಾಪವು ಕಳೆದ ಮೇಲೆ ಅವಳಿಗೆ ಎಂಟು ಜನ ಮಕ್ಕಳು ಹುಟ್ಟಿದರು. ಆಯು, ದೃಢಾಯು, ಅಶ್ವಾಯು, ಧನಾಯು, ಧೃತಿಮಂತ, ವಸು, ಶುಚಿವಿದ್ಯ, ಮತ್ತು ಶತಾಯು ಇವರೇ ಆ ಎಂಟು ಮಂದಿ ಮಕ್ಕಳು. ಇವರೆಲ್ಲರೂ ಅಸಾಧಾರಣ ಬಲಪರಾಕ್ರಮಗಳಿಂದ ಕೂಡಿದವರು.

೩೪-೩೫. ಆಯುವಿಗೆ ನಹುಷ, ವೃದ್ಧಶರ್ಮ, ರಜಿ, ದಂಭ ಮತ್ತು ವಿಪಾಪ್ಮರೆಂಬ ಐವರು ಮಕ್ಕಳು ಜನಿಸಿದರು. ಇವರು ವೀರರು; ಮಹಾರಥರು.* ರಜಿಗೆ ನೂರು ಮಂದಿ ಪುತ್ರರಾದರು. ಅವರಿಗೆ ರಾಜೇಯರೆಂದು ಪ್ರಸಿದ್ಧಿಯುಂಟು.

---

ತನಗೂ, ಸಾರಥಿಗೂ, ಕುದುರೆಗಳಿಗೂ, ಅಪಾಯವಾಗದಂತೆ ಕೌಶಲದಿಂದ ಯುದ್ಧ ಮಾಡುವ ವೀರನಿಗೆ ಮಹಾರಥನೆಂದು ಹೆಸರು.

ಆತ್ಮಾನಂ ಸಾರಥಿಂ ಚಾಶ್ವಾನ್ ರಕ್ಷನ್ ಯುಧ್ಯೇತ ಯೋ ರಣೇ।
ಸ ಮಹಾರಥಸಂಜ್ಞಃ ಸ್ಯಾದಿತಿ ನೀತಿವಿದೋ ವಿದುಃ ॥

ಎಂದು ಲಕ್ಷಣವನ್ನು ಹೇಳಿದೆ.

**ರಜಿರಾರಾಧಯಾಮಾಸ ನಾರಾಯಣಮಕಲ್ಮಷಂ ।**
**ತಪಸಾ ತೋಷಿತೋ ವಿಷ್ಣುರ್ವರಾನ್ಪ್ರಾದಾನ್ಮಹೀಪತೇಃ ॥೩೬॥**

**ದೇವಾಸುರಮನುಷ್ಯಾಣಾಮಭೂತ್ಸ ವಿಜಯೀ ತದಾ ।**
**ಅಥ ದೇವಾಸುರಂ ಯುದ್ಧಮಭೂದ್ವರ್ಷಶತತ್ರಯಂ ॥೩೭॥**

**ಪ್ರಹ್ಲಾದಶಕ್ರಯೋರ್ಭೀಮಂ ನ ಕಶ್ಚಿದ್ವಿಜಯೀ ತಯೋಃ ।**
**ತತೋ ದೇವಾಸುರೈಃ ಪೃಷ್ಟಃ ಪ್ರಾಹ ದೇವಶ್ಚತುರ್ಮುಖಃ ॥೩೮॥**

**ಅನಯೋರ್ವಿಜಯೀ ಕಃ ಸ್ಯಾದ್ರಜಿರ್ಯತ್ರೇತಿ ಸೋಽಬ್ರವೀತ್ ।**
**ಜಯಾಯ ಪ್ರಾರ್ಥಿತೋ ರಾಜಾ ಸಹಾಯಸ್ತ್ವಂ ಭವಸ್ವ ನಃ ॥೩೯॥**

**ದೈತ್ಯೈಃ ಪ್ರಾಹ ಯದಿ ಸ್ವಾಮೀ ವೋ ಭವಾಮಿ ತತಸ್ತ್ವಲಂ ।**
**ನಾಸುರೈಃ ಪ್ರತಿಪನ್ನಂ ತತ್ಪ್ರತಿಪನ್ನಂ ಸುರೈಸ್ತಥಾ ॥೪೦॥**

---

೩೬. ರಜಿಯು ದೋಷದೂರನಾದ ನಾರಾಯಣನನ್ನು ತಪಸ್ಸಿನಿಂದ ಪೂಜಿಸಿದನು. ಸರ್ವವ್ಯಾಪಕನಾದ ಭಗವಂತನು ಮೆಚ್ಚಿ ಆ ರಾಜನಿಗೆ ವರಗಳನ್ನು ಕರುಣಿಸಿದನು.

೩೭. ಆಗ ಅವನು ದೇವತೆಗಳು, ಅಸುರರು ಮತ್ತು ಮನುಷ್ಯರೆಲ್ಲರನ್ನೂ ಮೀರಿಸಿದ ಜಯಶಾಲಿಯೆನಿಸಿದನು. ತರುವಾಯ ದೇವತೆಗಳಿಗೂ ಅಸುರರಿಗೂ ಮುನ್ನೂರು ವರ್ಷಗಳ ಕಾಲ ಯುದ್ಧವು ನಡೆಯಿತು.

೩೮. ಪ್ರಹ್ಲಾದನಿಗೂ ಇಂದ್ರನಿಗೂ ನಡೆದ ಭಯಂಕರ ಸಂಗ್ರಾಮದಲ್ಲಿ ಯಾರೊಬ್ಬರಿಗೂ ಗೆಲವಾಗಲಿಲ್ಲ. ಆಗ ದೇವತೆಗಳೂ ಅಸುರರೂ ಹೋಗಿ "ಇವರಿಬ್ಬರಲ್ಲಿ ಗೆಲ್ಲುವವರು ಯಾರು?" ಎಂದು ಬ್ರಹ್ಮದೇವನನ್ನು ಕೇಳಿದರು. "ರಜಿಯು ಯಾರ ಕಡೆಯಲ್ಲಿ ಇರುವನೋ ಅವನು ಗೆಲ್ಲುವನು" ಎಂದು ಅವನು ಉತ್ತರವಿತ್ತನು.

೩೯-೪೦. ದೈತ್ಯರು ಆ ಅರಸನ ಬಳಿಗೆ ಹೋಗಿ "ನೀನು ಸಹಾಯನಾಗಿ ನಮ್ಮನ್ನು ಗೆಲಿಸಬೇಕು" ಎಂದು ಬೇಡಿದರು. "ನನ್ನನ್ನು ನಿಮ್ಮ ರಾಜನನ್ನಾಗಿ ಮಾಡುವುದಾದರೆ ಧಾರಾಳವಾಗಿ ಆಗಬಹುದು" ಎಂದು ಅವನು ಹೇಳಿದನು. ಅದಕ್ಕೆ ಅವರು ಒಪ್ಪಲಿಲ್ಲ. ದೇವತೆಗಳಾದರೋ ಹಾಗೆಯೇ ಆಗಲೆಂದು ಒಪ್ಪಿಕೊಂಡರು.

**ಸ್ವಾಮೀ ಭವ ತ್ವಮಸ್ಮಾಕಂ ಸಂಗ್ರಾಮೇ ನಾಶಯ ದ್ವಿಷಃ ।**
**ತತೋ ವಿನಾಶಿತಾಃ ಸರ್ವೇ ಯೇಽವಧ್ಯಾ ವಜ್ರಪಾಣಿನಾ ॥೪೧॥**

**ಪುತ್ರತ್ವಮಗಮತ್ತುಷ್ಟಸ್ತಸ್ಯೇಂದ್ರಃ ಕರ್ಮಣಾ ವಿಭುಃ ।**
**ದತ್ವೇಂದ್ರಾಯ ತದಾ ರಾಜ್ಯಂ ಜಗಾಮ ತಪಸೇ ರಜಿಃ ॥೪೨॥**

**ರಜಿಪುತ್ರೈಸ್ತದಾ ಚ್ಛಿನ್ನಂ ಬಲಾದಿಂದ್ರಸ್ಯ ವೈಭವಂ ।**
**ಯಜ್ಞಭಾಗಂ ಚ ರಾಜ್ಯಂ ಚ ತಪೋಬಲಗುಣಾನ್ವಿತೈಃ ॥೪೩॥**

**ರಾಜ್ಯಾದ್ಭ್ರಷ್ಟಸ್ತದಾ ಶಕ್ರೋ ರಜಿಪುತ್ರೈರ್ನಿಪೀಡಿತಃ ।**
**ಪ್ರಾಹ ವಾಚಸ್ಪತಿಂ ದೀನಃ ಪೀಡಿತೋಽಸ್ಮಿ ರಜೇಃ ಸುತೈಃ ॥೪೪॥**

**ನ ಯಜ್ಞಭಾಗೋ ರಾಜ್ಯಂ ಮೇ ನಿರ್ಜಿತಂ ಚ ಬೃಹಸ್ಪತೇ ।**
**ರಾಜ್ಯಲಾಭಾಯ ಮೇ ಯತ್ನಂ ವಿಧತ್ಸ್ವ ಧಿಷಣಾಧಿಪ ॥೪೫॥**

---

೪೧. "ನಮಗೆ ನೀನೇ ಅರಸನಾಗುವೆಯಂತೆ; ಯುದ್ಧದಲ್ಲಿ ನಮ್ಮ ಹಗೆಗಳನ್ನು ಅಡಗಿಸು" ಎಂದು ಸುರರು ಕೇಳಿಕೊಳ್ಳಲು ರಜಿಯು ದೈತ್ಯರನ್ನೆಲ್ಲ ಸಂಹರಿಸಿದನು. ಅವರು ಇಂದ್ರನಿಗೂ ಸಹ ಅವಧ್ಯರೆನಿಸಿಕೊಂಡಿದ್ದರು.

೪೨. ರಜಿಯ ಆ ಸಾಹಸಕಾರ್ಯದಿಂದ ಸಂತುಷ್ಟನಾಗಿ ದೇವೇಂದ್ರನು ಅವನಿಗೆ ಮಗನಂತೆ ನಡೆದುಕೊಂಡನು. ಬಳಿಕ ಅವನಿಗೆ ರಾಜ್ಯವನ್ನು ಕೊಟ್ಟು ರಜಿಯು ತಪಸ್ಸಿಗಾಗಿ ಕಾಡಿಗೆ ಹೊರಟುಹೋದನು.

೪೩. ತಪಸ್ಸಿನ ಬಲದಿಂದಲೂ, ಸಾಹಸಾದಿ ಗುಣಗಳಿಂದಲೂ ಕೂಡಿದ ರಜಿಪುತ್ರರು ಇಂದ್ರನ ಸಕಲೈಶ್ವರ್ಯವನ್ನೂ, ಯಜ್ಞದಲ್ಲಿ ಅವನಿಗೆ ಸಲ್ಲುತ್ತಿದ್ದ ಭಾಗವನ್ನೂ, ಅವನ ರಾಜ್ಯವನ್ನೂ ಕಿತ್ತುಕೊಂಡರು.

೪೪-೪೫. ಇಂದ್ರನು ರಾಜ್ಯವನ್ನು ಕಳೆದುಕೊಂಡು, ರಜಿಯ ಮಕ್ಕಳ ಕೋಟಲೆಗೆ ಗುರಿಯಾಗಿ, ದೈನ್ಯದಿಂದ ಬೃಹಸ್ಪತಿಯನ್ನು ಹೀಗೆ ಬೇಡಿಕೊಂಡನು. "ಪ್ರಾಜ್ಞನಾದ ಓ ಆಚಾರ್ಯ, ರಜಿಪುತ್ರರು ನನ್ನನ್ನು ಕಾಡಿಸುತ್ತಿರುವರು; ನನಗೆ ಯಜ್ಞಭಾಗವಿಲ್ಲ; ರಾಜ್ಯವನ್ನು ಅವರು ಗೆದ್ದುಕೊಂಡರು. ಅದು ನನ್ನ ಕೈಸೇರುವಂತೆ ಏನಾದರೂ ಪ್ರಯತ್ನವನ್ನು ಮಾಡು."

ತತೋ ಬೃಹಸ್ಪತಿಶ್ಚಕ್ರಮುಕರೋದ್ಬಲದರ್ಪಿತಂ ।
ಗ್ರಹಶಾಂತಿವಿಧಾನೇನ ಪೌಷ್ಟಿಕೇನ ಚ ಕರ್ಮಣಾ ॥೪೬॥

ಗತ್ವಾಥ ಮೋಹಯಾಮಾಸ ರಜಿಪುತ್ರಾನ್ ಬೃಹಸ್ಪತಿಃ ।
ಜಿನಧರ್ಮಂ ಸಮಾಸ್ಥಾಯ ವೇದಬಾಹ್ಯಂ ಸ ವೇದವಿತ್ ॥೪೭॥

ವೇದತ್ರಯೀಪರಿಭ್ರಷ್ಟಾಂಶ್ಚಕಾರ ಧಿಷಣಾಧಿಪಃ ।
ವೇದಬಾಹ್ಯಾನ್ ಪರಿಜ್ಞಾಯ ಹೇತುವಾದಸಮನ್ವಿತಾನ್ ॥೪೮॥

ಜಘಾನ ಶಕ್ರೋ ವಜ್ರೇಣ ಸರ್ವಾನ್ ಧರ್ಮಬಹಿಷ್ಕೃತಾನ್ ।
ನಹುಷಸ್ಯ ಪ್ರವಕ್ಷ್ಯಾಮಿ ಪುತ್ರಾನ್ ಸಪ್ತೈವ ಧಾರ್ಮಿಕಾನ್ ॥೪೯॥

ಯತಿರ್ಯಯಾತಿಸ್ಸಂಯಾತಿರುದ್ಭವಃ ಪಾಚಿರೇವ ಚ ।
ಶರ್ಯಾತಿರ್ಮೇಘಜಾತಿಶ್ಚ ಸಪ್ತೈತೇ ವಂಶವರ್ಧನಾಃ ॥೫೦॥

---

೪೬. ಅನಂತರ ಬೃಹಸ್ಪತಿಯು ಗ್ರಹಗಳಿಗೆ ಶಾಂತಿಯನ್ನು ಮಾಡಿ, ಶ್ರೇಯಸ್ಕರವಾದ ಇತರ ಕರ್ಮಗಳನ್ನೂ ಆಚರಿಸಿ ಇಂದ್ರನಿಗೆ ಬಲವನ್ನೂ, ದರ್ಪವನ್ನೂ ಹೆಚ್ಚಿಸಿದನು.

೪೭. ವೇದಜ್ಞನಾದ ಆ ಸುರಗುರುವು ಜಿನಧರ್ಮಾವಲಂಬಿಯಾಗಿ, ರಜಿಯ ಪುತ್ರರ ಬಳಿಗೆ ಹೋಗಿ ಅವರಿಗೆ ವೇದತ್ರಯದಲ್ಲಿಯೂ ನಂಬಿಕೆ ಹೋಗುವಂತೆ ಮಾಡಿಬಿಟ್ಟನು.

೪೮. ವೇದಗಳಿಂದ ದೊರೆಯಬಹುದಾದ ಶ್ರೇಯಸ್ಸಿಗೆ ದೂರರಾಗಿ, ಶ್ರದ್ಧೆಯಿಲ್ಲದೆ ಯುಕ್ತಿಯೊಂದನ್ನೇ ನಂಬಿಕೊಂಡು, ಧರ್ಮಾಚರಣೆಗೆ ಅನರ್ಹರೆನಿಸಿದ್ದ ಅವರೆಲ್ಲರನ್ನೂ ಇಂದ್ರನು ವಜ್ರಾಯುಧದಿಂದ ಸಂಹರಿಸಿದನು.

೪೯-೫೦. ನಹುಷನ ಮಕ್ಕಳ ವಿಷಯವನ್ನು ಹೇಳುವೆನು. ಅವರು ಏಳು ಜನ. ಎಲ್ಲರೂ ಧಾರ್ಮಿಕರು. ಯತಿ, ಯಯಾತಿ, ಸಂಯಾತಿ, ಉದ್ಭವ, ಪಾಚಿ, ಶರ್ಯಾತಿ ಮತ್ತು ಮೇಘಜಾತಿಯೆಂದು ಅವರ ಹೆಸರು. ನಹುಷನ ವಂಶವನ್ನು ಅವರು ಮುಂದಕ್ಕೆ ತಂದರು.

**ಯತಿಃ ಕುಮಾರಭಾವೇಽಪಿ ಯೋಗೀ ವೈಖಾನಸೋಽಭವತ್ ।**
**ಯಯಾತಿಶ್ಚಾಕರೋದ್ರಾಜ್ಯಂ ಧರ್ಮೈಕಶರಣಸ್ಸದಾ ॥೫೧॥**

**ಶರ್ಮಿಷ್ಠಾ ತಸ್ಯ ಭಾರ್ಯಾಭೂದ್ದುಹಿತಾ ವೃಷಪರ್ವಣಃ ।**
**ಭಾರ್ಗವಸ್ಯಾತ್ಮಜಾ ತದ್ವದ್ದೇವಯಾನೀ ಚ ಸುವ್ರತಾ ॥೫೨॥**

**ಯಯಾತೇಃ ಪಂಚ ದಾಯಾದಾಸ್ತಾನ್ ಪ್ರವಕ್ಷ್ಯಾಮಿ ನಾಮತಃ ।**
**ದೇವಯಾನೀ ಯದುಂ ಪುತ್ರಂ ತುರ್ವಸುಂ ಚಾಪ್ಯಜೀಜನತ್ ॥೫೩॥**

**ತಥಾ ದ್ರುಹ್ಯುಮನುಂ ಪೂರುಂ ಶರ್ಮಿಷ್ಠಾಽಜನಯತ್ಸುತಾನ್ ।**
**ಯದುಃ ಪೂರುಶ್ಚಾಭವತಾಂ ತೇಷಾಂ ವಂಶವಿವರ್ಧನೌ ॥೫೪॥**

**ಯಯಾತಿರ್ನಾಹುಷಶ್ಚಾಸೀದ್ರಾಜಾ ಸತ್ಯಪರಾಕ್ರಮಃ ।**
**ಪಾಲಯಾಮಾಸ ಸ ಮಹೀಮೀಜೇ ಚ ವಿಧಿವನ್ಮಖೈಃ ॥೫೫॥**

---

೫೧. ಯತಿಯು ಬಾಲ್ಯದಲ್ಲಿಯೇ ಯೋಗನಿಷ್ಠನಾಗಿ ತಪೋವನಕ್ಕೆ ತೆರಳಿದನು. ಯಯಾತಿಯು ಧರ್ಮಮಾರ್ಗವನ್ನೇ ಹಿಡಿದು ರಾಜ್ಯವನ್ನು ಆಳುತ್ತಿದ್ದನು.

೫೨. ವೃಷಪರ್ವನ ಮಗಳಾದ ಶರ್ಮಿಷ್ಠೆಯೂ, ಶುಕ್ರಾಚಾರ್ಯನ ಪುತ್ರಿಯಾದ ವ್ರತನಿಷ್ಠೆಯೆನಿಸಿದ ದೇವಯಾನಿಯೂ ಅವನ ಪತ್ನಿಯರು.

೫೩-೫೪. ಯಯಾತಿಗೆ ಐದು ಜನ ಗಂಡುಮಕ್ಕಳು. ದೇವಯಾನಿಯು ಯದು ಮತ್ತು ತುರ್ವಸು ಎಂಬಿಬ್ಬರನ್ನು ಪಡೆದಳು. ಶರ್ಮಿಷ್ಠೆಯಾದರೋ ದ್ರುಹ್ಯು, ಅನು, ಪೂರು ಎಂಬ ಮೂವರನ್ನು ಹೆತ್ತಳು. ಇವರಲ್ಲಿ ಯದುವೂ ಪೂರುವೂ ತಮ್ಮ ತಮ್ಮ ಮನೆತನಗಳ ಮೂಲಪುರುಷರೆಂದು ಪ್ರಸಿದ್ಧರಾದರು.

೫೫. ನಹುಷಪುತ್ರನಾದ ಯಯಾತಿ ಮಹಾರಾಜನು ಸತ್ಯದಿಂದಲೂ, ಪರಾಕ್ರಮದಿಂದಲೂ ಭೂಮಿಯನ್ನು ಪಾಲಿಸಿದನು. ಶಾಸ್ತ್ರೋಕ್ತವಾಗಿ ಯಜ್ಞಗಳನ್ನು ನಡೆಸಿದನು. ಭಕ್ತಿಯಿಂದಲೂ ಶ್ರದ್ಧೆಯಿಂದಲೂ ಪಿತೃಗಳನ್ನೂ ದೇವತೆಗಳನ್ನೂ ಆರಾಧಿಸಿದನು.

ಅತಿಭಕ್ತ್ಯಾ ಪಿತೄನರ್ಚ್ಯ ದೇವಾಂಶ್ಚ ಪ್ರಯತಸ್ಸದಾ ।
ಅಥಾಜಯತ್ಪ್ರಜಾಸ್ಸರ್ವಾ ಯಯಾತಿರಪರಾಜಿತಃ ॥೫೬॥

ಸ ಶಾಶ್ವತೀಸ್ಸಮಾ ರಾಜಾ ಪ್ರಜಾ ಧರ್ಮೇಣ ಪಾಲಯತ್ ।
ಜರಾಮಾರ್ಛನ್ಮಹಾಘೋರಾಂ ನಾಹುಷೋ ರೂಪನಾಶಿನೀಂ ॥೫೭॥

ಜರಾಭಿಭೂತಃ ಪುತ್ರಾನ್ಸ ರಾಜಾ ವಚನಮಬ್ರವೀತ್ ।
ಯದುಂ ಪೂರುಂ ತುರ್ವಸುಂ ಚ ದ್ರುಹ್ಯುಂ ಚಾನುಂ ಚ ಪಾರ್ಥಿವಃ ॥

ಯೌವನೇನ ಚರ್ಲಾ ಕಾಮಾ ಯುವಾ ಯುವತಿಭಿಃ ಸಹ ।
ವಿಹರ್ತುಮಹಮಿಚ್ಛಾಮಿ ಸಾಹಾಯ್ಯಂ ಕುರುತಾತ್ಮಜಾಃ ॥೫೯॥

ತಂ ಪುತ್ರೋ ದೇವಯಾನೇಯಃ ಪೂರ್ವಜೋ ಯದುರಬ್ರವೀತ್ ।
ಸಾಹಾಯ್ಯಂ ಭವತಃ ಕಾರ್ಯಮಸ್ಮಾಭಿರ್ಯೌವನೇನ ಕಿಂ ॥೬೦॥

---

೫೬-೫೭. ಶತ್ರುಗಳಿಗಾರಿಗೂ ಸೋಲದ ಆ ಯಯಾತಿಯು ತನ್ನ ಸದ್ಗುಣಗಳಿಂದ ಪ್ರಜೆಗಳೆಲ್ಲರ ಮನಸ್ಸನ್ನೂ ವಶಪಡಿಸಿಕೊಂಡು, ಬಹುಕಾಲ ಧರ್ಮದಿಂದ ರಾಜ್ಯಭಾರಮಾಡಿದನು. ಅವನಿಗೆ ಬಹು ಭಯಂಕರವಾದ ಮುಪ್ಪು ಬಂದಿತು. ಅವನ ಹಿಂದಿನ ಸೌಂದರ್ಯವೆಲ್ಲ ಮಾಯವಾಯಿತು.

೫೮. ಮುಪ್ಪು ಕಾಡಿಸುತ್ತಿರಲು ಆ ರಾಜನು ಯದು, ಪೂರು, ತುರ್ವಸು, ದ್ರುಹ್ಯು, ಅನು ಎಂಬ ತನ್ನ ಐವರು ಮಕ್ಕಳಿಗೆ ಹೇಳಿದನು.

೫೯. "ಎಲೈ ಮಕ್ಕಳಿರಾ, ನಿಮ್ಮ ಯೌವನವನ್ನು ಪಡೆದು, ಮರಳಿ ನಾನು ಯುವಕನಾಗಿ, ಯುವತಿಯರೊಡಗೂಡಿ ಬಗೆ ಬಗೆಯ ವಿಷಯ ಸುಖಗಳನ್ನು ಅನುಭವಿಸಬೇಕೆಂದಿರುವೆನು. ನೀವು ನನಗೆ ಸಹಾಯಮಾಡಿ."

೬೦. ದೇವಯಾನಿಯ ಮಕ್ಕಳಲ್ಲಿ ಹಿರಿಯವನಾದ ಯದು ಇಂತೆಂದನು. "ನಿಜ; ನಾವು ನಿನಗೆ ಸಹಾಯವನ್ನೇನೋ ಮಾಡಬೇಕು. ಆದರೆ ನಿನಗೆ ಯೌವನದಿಂದ ಏನಾಗಬೇಕಾಗಿದೆ?"

**ಯಯಾತಿರಬ್ರವೀತ್ಪುತ್ರಾನ್ ಜರಾ ಮೇ ಪ್ರತಿಗೃಹ್ಯತಾಂ ।**
**ಯೌವನೇನಾಥ ಭವತಾಂ ಚರೇಯಂ ವಿಷಯಾನಹಂ ॥೬೧॥**

**ಯಜತೋ ದೀರ್ಘಸತ್ರೈರ್ಮೇ ಶಾಪಾಚ್ಚೋಶನಸೋ ಮುನೇಃ ।**
**ಕಾಮಾರ್ಥಃ ಪರಿಹೀನೋ ಮೇಽತೃಪ್ತೋಽಹಂ ತೇನ ಪುತ್ರಕಾಃ ॥೬೨॥**

**ಸ್ವಕೀಯೇನ ಶರೀರೇಣ ಜರಾಮೇನಾಂ ಪ್ರಶಾಸ್ತು ವಃ ।**
**ಅಹಂ ತನ್ವಾಭಿನವಯಾ ಯುವಾ ಕಾಮಾನವಾಪ್ನುಯಾಂ ॥೬೩॥**

**ನ ತೇಽಸ್ಯ ಪ್ರತ್ಯಗೃಹ್ಣಂತ ಯದುಪ್ರಭೃತಯೋ ಜರಾಂ ।**
**ಚತುರಸ್ತಾನ್ಸ ರಾಜರ್ಷಿರಶಪಚ್ಚೇತಿ ನಃ ಶ್ರುತಂ ॥೬೪॥**

**ತಮಬ್ರವೀತ್ತತಃ ಪೂರುಃ ಕನೀಯಾನ್ಸತ್ಯವಿಕ್ರಮಃ ।**
**ಜರಾಂ ಮೇ ದೇಹಿ ನವಯಾ ತನ್ವಾ ಮೇ ಯೌವನಾತ್ಸುಖೀ ॥೬೫॥**

---

೬೧-೬೩. ಯಯಾತಿಯು ಮಕ್ಕಳಿಗಿಂತೆಂದನು. "ನನ್ನ ಮುಪ್ಪನ್ನು ತೆಗೆದುಕೊಳ್ಳಿ. ನಿಮ್ಮ ಯೌವನದಿಂದ ನಾನು ವಿಷಯ ಸುಖವನ್ನು ಅನುಭವಿಸುವೆನು. ದೀರ್ಘಸತ್ರವೆಂಬ ಯಾಗಗಳನ್ನು ಬಹುಕಾಲ ಮಾಡಿದುದರಿಂದಲೂ, ಶುಕ್ರಾಚಾರ್ಯನು ಕೊಟ್ಟ ಶಾಪದಿಂದಲೂ ನನಗೆ ಸುಖಾನುಭವವು ತಪ್ಪಿಹೋಯಿತು. ಆದುದರಿಂದ ನನಗೆ ವಿಷಯೋಪಭೋಗಗಳಲ್ಲಿ ತೃಪ್ತಿ ಹುಟ್ಟಲಿಲ್ಲ. ಎಲೈ ಮಕ್ಕಳಿರಾ, ನನ್ನ ಮುಪ್ಪನ್ನು ನಿಮ್ಮ ದೇಹಕ್ಕೆ ತೆಗೆದುಕೊಳ್ಳಿ. ನಾನು ಹೊಸ ದೇಹವನ್ನು ಪಡೆದು, ಯುವಕನಾಗಿ ಮನಸ್ಸಿಗೆ ಇಷ್ಟವಾದ ಸುಖಗಳನ್ನು ಅನುಭವಿಸುವೆನು."

೬೪. ಯದು ಮೊದಲಾದ ನಾಲ್ವರೂ ಅವನ ಮುಪ್ಪನ್ನು ತೆಗೆದುಕೊಳ್ಳಲಿಲ್ಲ. ಆ ರಾಜರ್ಷಿಯು ಕೋಪದಿಂದ ಅವರಿಗೆ ಶಾಪವನ್ನು ಕೊಟ್ಟನು.

೬೫. ಯಯಾತಿಯ ಕಿರಿಯಮಗನಾದ ಪೂರುವು ಸತ್ಯಸಹಿತವಾದ ಪರಾಕ್ರಮವುಳ್ಳವನು. ಅವನು ತನ್ನ ತಂದೆಗೆ ಹೇಳಿದನು. "ಅಪ್ಪಾ, ನನಗೆ ಮುಪ್ಪನ್ನು ಕೊಡು. ನನ್ನ ಯೌವನದಿಂದ ಹೊಸದೇಹವನ್ನು ಪಡೆದು ಸುಖಿಯಾಗಿರು. ನಾನು ನಿನ್ನ ಮುಪ್ಪನ್ನು ತೆಗೆದುಕೊಂಡು ನೀನು ಅಪ್ಪಣೆಮಾಡಿದಂತೆ ರಾಜ್ಯಭಾರವನ್ನು ನಡೆಸುವೆನು."

ಅಹಂ ಜರಾಂ ತವಾದಾಯ ರಾಜ್ಯೇ ಸ್ಥಾಸ್ಯಾಮಿ ಚಾಜ್ಞಯಾ ।
ಏವಮುಕ್ತಃ ಸ ರಾಜರ್ಷಿಸ್ತಪೋವೀರ್ಯಸಮಾಶ್ರಯಾತ್ ॥೬೬॥

ಸಂಸ್ಥಾಪಯಾಮಾಸ ಜರಾಂ ತದಾ ಪುತ್ರೇ ಮಹಾತ್ಮನಿ ।
ಪೌರವೇಣಾಥ ವಯಸಾ ರಾಜಾ ಯೌವನಮಾಸ್ಥಿತಃ ॥೬೭॥

ಯಯಾತೇಶ್ಚಾಥ ವಯಸಾ ರಾಜ್ಯಂ ಪೂರುರಕಾರಯತ್ ।
ತತೋ ವರ್ಷಸಹಸ್ರಾಂತೇ ಯಯಾತಿರಪರಾಜಿತಃ ॥೬೮॥

ಅತೃಪ್ತ ಇವ ಕಾಮಾನಾಂ ಪೂರುಂ ಪುತ್ರಮುವಾಚ ಹ ।
ತ್ವಯಾ ದಾಯಾದವಾನಸ್ಮಿ ತ್ವಂ ಮೇ ವಂಶಕರಃ ಸುತಃ ॥೬೯॥

ಪೌರವೋ ವಂಶ ಇತ್ಯೇಷ ಖ್ಯಾತಿಂ ಲೋಕೇ ಗಮಿಷ್ಯತಿ ।
ತತಸ್ಸ ನೃಪಶಾರ್ದೂಲಃ ಪೂರುಂ ರಾಜ್ಯೇಽಭಿಷಿಚ್ಯ ಚ ॥೭೦॥

---

೬೬-೬೭. ಪೂರುವು ಹೀಗೆಂದ ಮೇಲೆ ಯಯಾತಿ ಮಹಾರಾಜನು ತಪಸ್ಸಿನ ಶಕ್ತಿಯಿಂದ ತನ್ನ ಮುಪ್ಪನ್ನು ಮಹಾತ್ಮನಾದ ಆತನಲ್ಲಿಟ್ಟು ಅವನ ಯೌವನದಿಂದ ತಾನು ಯುವಕನಾದನು. ಹಾಗೆಯೇ, ಪೂರುವೂ ಸಹ ತಂದೆಯ ಮುಪ್ಪನ್ನು ತೆಗೆದುಕೊಂಡು, ತಾನು ವೃದ್ಧನಾಗಿ ರಾಜ್ಯದ ಆಳ್ವಿಕೆಯನ್ನು ನಡೆಸಿದನು.

೬೮-೬೯. ಪರಾಕ್ರಮಶಾಲಿಯಾದ ಯಯಾತಿ ಮಹಾರಾಜನು ಸಾವಿರ ವರ್ಷಗಳು ಕಳೆದ ಮೇಲೆ ಸುಖಗಳಲ್ಲಿ ತೃಪ್ತಿಯೇ ಇಲ್ಲದವನಂತೆ ಮಗನಾದ ಪೂರುವಿಗೆ ಹೇಳಿದನು. " ನಾನು ಪುತ್ರವಂತನೆನಿಸಿಕೊಂಡುದು ನಿನ್ನೊಬ್ಬನಿಂದಲೇ. ನೀನೇ ನನ್ನ ವಂಶವನ್ನು ಮುಂದಕ್ಕೆ ತರತಕ್ಕವನು. ಇನ್ನು ಮುಂದೆ ಇದಕ್ಕೆ ಪುರು ವಂಶವೆಂಬ ಪ್ರಸಿದ್ಧಿ ಬರುವುದು."

೭೦. ಬಳಿಕ ಆ ರಾಜಶ್ರೇಷ್ಠನು ಪೂರುವಿಗೆ ರಾಜ್ಯಾಭಿಷೇಕವನ್ನು ಮಾಡಿ ಬಹು ಕಾಲಾನಂತರ ದೈವಾಧೀನನಾದನು.

**ಕಾಲೇನ ಮಹತಾ ಪಶ್ಚಾತ್ಕಾಲಧರ್ಮಮುಪೇಯಿವಾನ್ ।**
**ಪೂರುವಂಶಂ ಪ್ರವಕ್ಷ್ಯಾಮಿ ಶೃಣುಧ್ವಮೃಷಿಸತ್ತಮಾಃ ॥**
**ಯತ್ರ ತೇ ಭಾರತಾ ಜಾತಾ ಭರತಾನ್ವಯವರ್ಧನಾಃ ॥೭೧॥**

**ಇತಿ ಶ್ರೀ ಮಾತ್ಸ್ಯೇ ಮಹಾಪುರಾಣೇ ಸೋಮವಂಶೇ ಯಯಾತಿ ಚರೀತೇ ಚತುರ್ವಿಂಶೋಽಧ್ಯಾಯಃ**

---

೭೧. ಓ ಋಷಿವರ್ಯರೇ, ಪೂರುವಿನ ಕುಲವನ್ನು ಇನ್ನು ಹೇಳುವೆನು ಕೇಳಿ. ಭರತವಂಶವನ್ನು ಬೆಳೆಸಿದ ಕೌರವರೂ ಪಾಂಡವರೂ ಇದೇ ಸಂತತಿಯಲ್ಲಿ ಜನಿಸಿದರು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಯಯಾತಿ ಮಹಾರಾಜನ ವೃತ್ತಾಂತವನ್ನು ಉಪ ಕ್ರಮಿಸಿದೆ.

ತಾರಾದೇವಿಯಲ್ಲಿ ಬುಧನು ಜನಿಸಿದನು. ಇವನ ಮಗನೇ ಪುರೂರವ. ಇವನು ಬಹು ಧರ್ಮದಿಂದಲೂ ದಕ್ಷತೆಯಿಂದಲೂ ರಾಜ್ಯಭಾರ ಮಾಡುತ್ತಿದ್ದನು. ಒಂದು ಸಾರಿ ಇಂದ್ರನನ್ನು ಕಾಣುವುದಕ್ಕಾಗಿ ದೇವಲೋಕಕ್ಕೆ ಹೋಗಿದ್ದು ವಿಮಾನ ದಲ್ಲಿ ಸಂಚರಿಸುತ್ತಿರುವಾಗ, ಊರ್ವಶಿಯನ್ನೂ ಚಿತ್ರಲೇಖೆಯನ್ನೂ ಕೇಶಿಯೆಂಬ ರಾಕ್ಷಸನು ಅಪಹರಿಸುತ್ತಿದ್ದುದನ್ನೂ ಇವನು ಕಂಡನು. ಒಳಿಕ ಯುದ್ಧದಲ್ಲಿ ಆ ದೈತ್ಯನನ್ನು ಜಯಿಸಿ, ಊರ್ವಶಿಯನ್ನು ಅವನಿಂದ ಪಾರುಮಾಡಿ ದೇವೇಂದ್ರನಿಗೆ ಒಪ್ಪಿಸಿದನು. ಅವಳಿಗೆ ಪುರೂರವನ ಮೇಲೆ ಅತಿಶಯವಾದ ಪ್ರೇಮವು ಅಂಕುರಿಸಿತು.

ಊರ್ವಶಿಯು ಯಾವಾಗಲೂ ಅನ್ಯಮನಸ್ಕಳಾಗಿದ್ದಳು. ಅದರ ಫಲವಾಗಿ, ಭರತಮುನಿಯು ಹೇಳಿಕೊಟ್ಟಿದ್ದ ಅಭಿನಯವನ್ನು ಮರೆತುಬಿಟ್ಟು ಅವನ ಶಾಪದಿಂದ ಭೂಲೋಕದಲ್ಲಿ ಲತೆಯ ಜನ್ಮವನ್ನು ತಾಳಿದಳು. ಶಾಪಾಂತದಲ್ಲಿ ಪುರೂರವನ ಸಮಾಗಮವನ್ನು ಪಡೆದಳು. ಅವಳಿಗೆ ಆಯು ಮೊದಲಾದ ಎಂಟು ಜನ ಮಕ್ಕಳು

ಹುಟ್ಟಿದರು. ಆಯುವಿನ ಮಗನಿಗೆ ನಹುಷನೆಂದು ಹೆಸರು. ಅವನ ಪುತ್ರನೇ ಪ್ರಸಿದ್ಧನಾದ ಯಯಾತಿ ಮಹಾರಾಜನು. ಮುಪ್ಪು ಬಂದ ಮೇಲೂ ಇವನಿಗೆ ವಿಷಯ ಸುಖದಲ್ಲಿ ಚಾಪಲ್ಯವು ಹೋಗಲಿಲ್ಲ. ಅದಕ್ಕಾಗಿ ತನ್ನ ಮಕ್ಕಳ ಯೌವನವನ್ನು ತಾನು ತೆಗೆದುಕೊಳ್ಳಬೇಕೆಂದು ಬಯಸಿದನು. ಯದು ಮೊದಲಾದ ನಾಲ್ವರು ಒಪ್ಪಲಿಲ್ಲ. ಕೊನೆಯವನಾದ ಪೂರುವು ಸಮ್ಮತಿಸಿದನು. ಯಯಾತಿ ಮಹಾರಾಜನು ಮಗನ ಯೌವನದಿಂದ ಮತ್ತೆ ಯುವಕನಾದನು. ಸಾವಿರಾರು ವರ್ಷ ಸುಖವನ್ನನುಭವಿಸಿದರೂ ಅವನಿಗೆ ತೃಪ್ತಿಯೇ ಹುಟ್ಟಲಿಲ್ಲ. ಕೊನೆಗೆ ಪೂರುವನ್ನು ಮನ್ನಿಸಿ ಅವನಿಗೆ ರಾಜ್ಯವನ್ನು ಕೊಟ್ಟನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಚಂದ್ರವಂಶ ವರ್ಣನದೊಳಗೆ ಯಯಾತಿ ಚರಿತದಲ್ಲಿ ಇಪ್ಪತ್ತನಾಲ್ಕನೆಯ ಅಧ್ಯಾಯವು ಸಮಾಪ್ತವಾದುದು



## ಅಥ ಶ್ರೀಮತ್ಸ್ಯಮಹಾಪುರಾಣೇ ಪಂಚವಿಂಶೋಽಧ್ಯಾಯಃ

॥ ಋಷಯ ಊಚುಃ ॥

ಕಿಮರ್ಥಂ ಪೌರವೋ ವಂಶಃ ಶ್ರೇಷ್ಠತ್ವಂ ಪ್ರಾಪ ಭೂತಲೇ ।
ಜ್ಯೇಷ್ಠಸ್ಯಾಪಿ ಯದೋರ್ವಂಶಃ ಕಿಮರ್ಥಂ ಹೀಯತೇ ಶ್ರಿಯಾ ॥ ೧ ॥
ಅನ್ಯದ್ಯಯಾತಿಚರಿತಂ ಸೂತ ವಿಸ್ತರತೋ ವದ ।
ಯಸ್ಮಾತ್ತತ್ಪುಣ್ಯಮಾಯುಷ್ಯಮಭಿನಂದ್ಯಂ ಸುರೈರಪಿ ॥ ೨ ॥

॥ ಸೂತ ಉವಾಚ ॥

ಏತದೇವ ಪುರಾ ಪೃಷ್ಟಃ ಶತಾನೀಕೇನ ಶೌನಕಃ ।
ಪುಣ್ಯಂ ಪವಿತ್ರಮಾಯುಷ್ಯಂ ಯಯಾತಿಚರಿತಂ ಮಹತ್ ॥ ೩ ॥

॥ ಶತಾನೀಕ ಉವಾಚ ॥

ಯಯಾತಿಃ ಪೂರ್ವಜೋಽಸ್ಮಾಕಂ ದಶಮೋ ಯಃ ಪ್ರಜಾಪತೇಃ ।
ಕಥಂ ಸ ಶುಕ್ರತನಯಾಂ ಲೇಭೇ ಪರಮದುರ್ಲಭಾಂ ॥ ೪ ॥

---

೧-೨. ಋಷಿಗಳು ಹೇಳಿದರು :—ಪುರುವಂಶವು ಲೋಕದಲ್ಲಿ ಏತಕ್ಕಾಗಿ ಶ್ರೇಷ್ಠತೆಯನ್ನು ಪಡೆಯಿತು? ಯದುವು ಹಿರಿಯವನಾದರೂ ಅವನ ಸಂತತಿಗೆ ರಾಜ್ಯಸಂಪದವು ಏಕೆ ದೊರೆಯಲಿಲ್ಲ? ಓ ಸೂತಾ, ಯಯಾತಿಯ ವೃತ್ತಾಂತವು ಇನ್ನೂ ಇದ್ದರೆ ವಿಸ್ತಾರವಾಗಿ ತಿಳಿಸು. ಏಕೆಂದರೆ ಅದು ಪುಣ್ಯಕರವು; ಆಯುರ್ವರ್ಧಕವು; ದೇವತೆಗಳೂ ಕೂಡ ಶ್ಲಾಘಿಸತಕ್ಕುದು.

೩. ಸೂತಪೌರಾಣಿಕನು ಹೇಳಿದನು :—ಹಿಂದೆ ಶತಾನೀಕನು ಪುಣ್ಯಪ್ರದವೂ, ಆಯುಷ್ಕಾರಕವೂ ಆದ ಈ ಯಯಾತಿ ಚರಿತವನ್ನು ಕುರಿತು ಶೌನಕನನ್ನು ಕೇಳಿದನು.

೪-೫. ಶತಾನೀಕನು ಹೇಳಿದನು :—ಬ್ರಹ್ಮನಿಂದ ಹತ್ತನೆಯ ತಲೆಯವನೂ, ನಮ್ಮ ಪೂರ್ವಜನೂ ಆದ ಯಯಾತಿ ಮಹಾರಾಜನಿಗೆ ಪರಮ ದುರ್ಲಭಳಾದ ಶುಕ್ರನ ಮಗಳು ದೇವಯಾನಿಯು ಹೇಗೆ ದೊರೆತಳು? ಇದನ್ನು ವಿವರವಾಗಿ ಕೇಳ

ಏತದಿಚ್ಛಾಮ್ಯಹಂ ಶ್ರೋತುಂ ವಿಸ್ತರೇಣ ತಪೋಧನ ।
ಆನುಪೂರ್ವ್ಯಾಚ್ಚ ಮೇ ಶಂಸ ಪೂರೋರ್ವಂಶಧರಾನ್ನೃಪಾನ್ ॥ ೫ ॥

॥ ಶೌನಕ ಉವಾಚ ॥

ಯಯಾತಿರಾಸೀದ್ರಾಜರ್ಷಿರ್ದೇವರಾಜಸಮದ್ಯುತಿಃ ।
ತಂ ಶುಕ್ರವೃಷಪರ್ವಾಣೌ ವವ್ರಾತೇ ವೈ ಯಥಾ ಪುರಾ ॥ ೬ ॥

ತತ್ತೇಽಹಂ ಸಂಪ್ರವಕ್ಷ್ಯಾಮಿ ಪೃಚ್ಛತೋ ರಾಜಸತ್ತಮ ।
ದೇವಯಾನ್ಯಾಶ್ಚ ಸಂಯೋಗಂ ಯಯಾತೇರ್ನಾಹುಷಸ್ಯ ಚ ॥ ೭ ॥

ಸುರಾಣಾಮಸುರಾಣಾಂ ಚ ಸಮಜಾಯತ ವೈ ಮಿಥಃ ।
ಐಶ್ವರ್ಯಂ ಪ್ರತಿ ಸಂಘರ್ಷಸ್ತ್ರೈಲೋಕ್ಯೇ ಸಚರಾಚರೇ ॥ ೮ ॥

ಜಿಗೀಷಯಾ ತತೋ ದೇವಾ ವವ್ರುರಾಂಗಿರಸಂ ಮುನಿಂ ।
ಪೌರೋಹಿತ್ಯೇ ಚ ಯಜ್ಞಾರ್ಥೇ ಕಾವ್ಯಂ ತೂಶನಸಂ ಪರೇ ॥ ೯ ॥

---

ಬೇಕೆಂದು ನನಗೆ ಆಸೆ ಇದೆ. ಹಾಗೆಯೇ ಪೂರುವಿನ ವಂಶದ ರಾಜರನ್ನೂ ಕ್ರಮವಾಗಿ ಬಣ್ಣಿಸು.

೬-೭. ಶೌನಕನು ಹೇಳಿದನು :—ಯಯಾತಿಯು ದೇವೇಂದ್ರನಿಗೆ ಸರಿಸಮಾನವಾದ ಕಾಂತಿಯುಳ್ಳವನಾಗಿದ್ದನು. ಶುಕ್ರಾಚಾರ್ಯನೂ, ವೃಷಪರ್ವನೂ ಅವನನ್ನು ತಮ್ಮ ಅಳಿಯನನ್ನಾಗಿ ಮಾಡಿಕೊಂಡ ರೀತಿಯನ್ನು ಹೇಳುತ್ತೇನೆ ಕೇಳು. ಹಾಗೆಯೇ ದೇವಯಾನಿಯು ಯಯಾತಿಗೆ ಹೇಗೆ ದೊರಿತಳೆಂಬುದನ್ನೂ ವಿವರಿಸುವೆನು.

೮. ಚರಾಚರಾತ್ಮಕವಾದ ಈ ಮೂರು ಲೋಕಗಳ ಐಶ್ವರ್ಯವನ್ನು ಪಡೆಯುವುದಕ್ಕಾಗಿ ದೇವತೆಗಳಿಗೂ ರಾಕ್ಷಸರಿಗೂ ಕಲಹ ಹುಟ್ಟಿತು.

೯. ಬಳಿಕ ದೇವತೆಗಳು ಜಯಾಭಿಲಾಷೆಯಿಂದ ಯಜ್ಞಮಾಡತೊಡಗಿ, ಅದರ ಪೌರೋಹಿತ್ಯಕ್ಕಾಗಿ ಬೃಹಸ್ಪತಿಯನ್ನು ಬೇಡಿದರು. ಶತ್ರುಗಳಾದ ದೈತ್ಯರಾದರೋ ಶುಕ್ರಾಚಾರ್ಯನನ್ನು ಪ್ರಾರ್ಥಿಸಿದರು. ಆ ಬ್ರಾಹ್ಮಣರಿಬ್ಬರಿಗೂ ಒಬ್ಬರ ಮೇಲೊಬ್ಬರಿಗೆ ಪೈಪೋಟಿ ಬಹಳ ಹೆಚ್ಚಾಗಿತ್ತು.

ಬ್ರಾಹ್ಮಣೌ ತಾವುಭೌ ನಿತ್ಯಮನ್ಯೋನ್ಯಂ ಸ್ಪರ್ಧಿನೌ ಭೃಶಂ ।
ತತ್ರ ದೇವಾ ನಿಜಘ್ನುರ್ಯಾನ್ದಾನವಾನ್ ಯುಧಿ ಸಂಗತಾನ್ ॥೧೦॥

ತಾನ್ ಪುನರ್ಜೀವಯಾಮಾಸ ಕಾವ್ಯೋ ವಿದ್ಯಾಬಲಾಶ್ರಯಾತ್ ।
ತತಸ್ತೇ ಪುನರುತ್ಥಾಯ ಯೋಧಯಾಂಚಕ್ರಿರೇ ಸುರಾನ್ ॥೧೧॥

ಅಸುರಾಸ್ತು ನಿಜಘ್ನುರ್ಯಾನ್ ಸುರಾನ್ ಸಮರಮೂರ್ಧನಿ ।
ನ ತಾನ್ ಸಂಜೀವಯಾಮಾಸ ಬೃಹಸ್ಪತಿರುದಾರಧೀಃ ॥೧೨॥

ನ ಹಿ ವೇದ ಸ ತಾಂ ವಿದ್ಯಾಂ ಯಾಂ ಕಾವ್ಯೋ ವೇದ ವೀರ್ಯವಾನ್ ।
ಸಂಜೀವನೀಂ ತತೋ ದೇವಾ ವಿಷಾದಮಗಮನ್ ಪರಂ ॥೧೩॥

ಅಥ ದೇವಾ ಭಯೋದ್ವಿಗ್ನಾಃ ಕಾವ್ಯಾದುಶನಸಸ್ತದಾ ।
ಊಚುಃ ಕಚಮುಪಾಗಮ್ಯ ಜ್ಯೇಷ್ಠಂ ಪುತ್ರಂ ಬೃಹಸ್ಪತೇಃ ॥೧೪॥

ಭಜಮಾನಾನ್ ಭಜಸ್ವಾಸ್ಮಾನ್ ಕುರು ಸಾಹಾಯ್ಯಮುತ್ತಮಂ ।
ಯಾಽಸೌ ವಿದ್ಯಾ ನಿವಸತಿ ಬ್ರಾಹ್ಮಣೇಽಮಿತತೇಜಸಿ ॥೧೫॥

---

೧೦-೧೧. ಆ ಯುದ್ಧದಲ್ಲಿ ದೇವತೆಗಳು ಕೊಂದು ಹಾಕಿದ ದಾನವರನ್ನು ಶುಕ್ರಾಚಾರ್ಯನು ತನ್ನ ಮೃತಸಂಜೀವನಿಯೆಂಬ ವಿದ್ಯೆಯ ಬಲದಿಂದ ಮರಳಿ ಬದುಕಿಸಿದನು. ಅವರೆಲ್ಲರೂ ಎದ್ದು ದೇವತೆಗಳೊಡನೆ ಹೋರಾಡಿದರು.

೧೨. ಆದರೆ ಅಸುರರು ಸಂಹರಿಸಿದ ದೇವತೆಗಳನ್ನು ಮಾತ್ರ ಮಹಾಬುದ್ಧಿಶಾಲಿಯಾದರೂ ಬೃಹಸ್ಪತ್ಯಾಚಾರ್ಯನು ಬದುಕಿಸಲಾರದೆ ಹೋದನು.

೧೩. ಏಕೆಂದರೆ ಶುಕ್ರಾಚಾರ್ಯನು ತಿಳಿದಿದ್ದ ಆ ಸಂಜೀವನೀವಿದ್ಯೆಯು ಅವನಿಗೆ ಗೊತ್ತಿರಲಿಲ್ಲ. ಆದುದರಿಂದ ದೇವತೆಗಳಿಗೆ ಬಹಳ ವಿಷಾದ ಹುಟ್ಟಿತು.

೧೪. ತರುವಾಯ ಅವರು ಶುಕ್ರಾಚಾರ್ಯನ ಹೆದರಿಕೆಯಿಂದ ಬೃಹಸ್ಪತಿಯ ಹಿರಿಯ ಮಗನಾದ ಕಚನ ಬಳಿಗೆ ಹೋಗಿ ಇಂತೆಂದರು :—

೧೫. "ನಿನ್ನನ್ನು ಆಶ್ರಯಿಸಿದ್ದೇವೆ. ನಮ್ಮ ಮಾತನ್ನು ಗೌರವಿಸು. ನಮಗೆ ಈ ದೊಡ್ಡ ಉಪಕಾರವನ್ನು ಮಾಡಿಕೊಡು. ಮಹಾತೇಜಸ್ವಿಯಾದ ಶುಕ್ರಾಚಾರ್ಯನಲ್ಲಿರುವ ಆ ವಿದ್ಯೆಯನ್ನು ಬೇಗನೆ ಅರಿತುಕೊಂಡು ಬಾ. ನಮ್ಮ ಸುಖಭೋಗಗಳಲ್ಲಿ ನಿನಗೆ ಪಾಲನ್ನು ಕೊಡುವೆವು.

**ಶುಕ್ರೇ ತಾವೂಹರ ಕ್ಷಿಪ್ರಂ ಭಾಗಭಾಗ್ನೋ ಭವಿಷ್ಯಸಿ ।**
**ವೃಷಪರ್ವಣಃ ಸಮೀಪೇऽಸೌ ಶಕ್ಯೋ ದ್ರಷ್ಟುಂ ತ್ವಯಾ ದ್ವಿಜಃ ॥೧೬॥**

**ರಕ್ಷತೇ ದಾನವಾಂಸ್ತತ್ರ ನ ಸ ರಕ್ಷತ್ಯದಾನವಾರ್ ।**
**ತಮಾರಾಧಯಿತುಂ ಶಕ್ತೋ ನಾನ್ಯಃ ಕಶ್ಚಿದೃತೇ ತ್ವಯಾ ॥೧೭॥**

**ದೇವಯಾನೀ ಚ ದಯಿತಾ ಸುತಾ ತಸ್ಯ ಮಹಾತ್ಮನಃ ।**
**ತಾಮಾರಾಧಯಿತುಂ ಶಕ್ತೋ ನಾನ್ಯಃ ಕಶ್ಚನ ವಿದ್ಯತೇ ॥೧೮॥**

**ಶೀಲದಾಕ್ಷಿಣ್ಯಮಾಧುರ್ಯೈರಾಚಾರೇಣ ದಮೇನ ಚ ।**
**ದೇವಯಾನ್ಯಾಂ ತು ತುಷ್ಟಾಯಾಂ ವಿದ್ಯಾಂ ತಾಂ ಪ್ರಾಪ್ಸ್ಯಸಿ ಧ್ರುವಂ ॥**

**ತದಾ ಹಿ ಪ್ರೇಷಿತೋ ದೇವೈಃ ಸಮೀಪೇ ವೃಷಪರ್ವಣಃ ।**
**ತಥೇತ್ಯುಕ್ತ್ವಾ ತು ಸ ಪ್ರಾಯಾದ್ಬೃಹಸ್ಪತಿಸುತಃ ಕಚಃ ॥೨೦॥**

**ಸ ಗತ್ವಾ ತ್ವರಿತೋ ರಾಜರ್ ದೇವೈಃ ಸಂಪೂಜಿತಃ ಕಚಃ ।**
**ಅಸುರೇಂದ್ರಪುರೇ ಶುಕ್ರಂ ಪ್ರಣಮ್ಯೇದಮುವಾಚ ಹ ॥೨೧॥**

---

೧೬-೧೭. ಆ ಬ್ರಾಹ್ಮಣನನ್ನು ನೀನು ವೃಷಪರ್ವನ ಬಳಿಯಲ್ಲಿ ಕಾಣಬಹುದು. ಅವನು ದಾನವರನ್ನು ಮಾತ್ರ ಸಲಹುವನು. ಅಲ್ಲದವರನ್ನು ರಕ್ಷಿಸನು. ಅವನ ಮನವನ್ನೊಲಿಸಲು ನೀನಲ್ಲದೆ ಮತ್ತಾರೂ ಶಕ್ತರಲ್ಲ.

೧೮-೧೯. ದೇವಯಾನಿಯು ಆ ಮಹಾತ್ಮನ ಪ್ರೀತಿಯ ಮಗಳು; ಸತ್ಸ್ವಭಾವ, ಇತರರ ಮನಸ್ಸನ್ನನುಸರಿಸಿ ನಡೆವುದು, ಮಧುರತೆ, ಒಳ್ಳೆಯ ನಡತೆ ಮತ್ತು ಇಂದ್ರಿಯ ನಿಗ್ರಹ ಈ ಗುಣಗಳಿಂದ ಅವಳನ್ನು ಮೆಚ್ಚಿಸಬೇಕು. ಈ ವಿಷಯದಲ್ಲಿ ನಿನ್ನನ್ನು ಮೀರಿಸಬಲ್ಲವರಿಲ್ಲ. ಅವಳು ತುಷ್ಟಳಾದರೆ ಆ ವಿದ್ಯೆಯು ನಿನ್ನ ಕೈಸೇರಿದಂತೆಯೇ ಸರಿ."

೨೦. ಹೀಗೆ ಹೇಳಿ ದೇವತೆಗಳು ಕಳುಹಿಸಿಕೊಡಲು, ಬೃಹಸ್ಪತಿ ಪುತ್ರನಾದ ಕಚನು ಒಪ್ಪಿಕೊಂಡು ವೃಷಪರ್ವನ ಸಮೀಪಕ್ಕೆ ಹೊರಟನು.

೨೧. ಅವನು ದೇವತೆಗಳ ಮನ್ನಣೆಯನ್ನು ಪಡೆದು, ಬೇಗನೆ ಹೋಗಿ, ರಾಕ್ಷಸರಾಜನ ಪಟ್ಟಣದಲ್ಲಿ ಶುಕ್ರಾಚಾರ್ಯನನ್ನು ಕಂಡು ನಮುಸ್ಕರಿಸಿ ಬಿನ್ನವಿಸಿದನು.

**ಋಷೇರಂಗಿರಸಃ ಪೌತ್ರಂ ಪುತ್ರಂ ಸಾಕ್ಷಾದ್ಬೃಹಸ್ಪತೇಃ ।**
**ನಾಮ್ನಾ ಕಚೇತಿ ವಿಖ್ಯಾತಂ ಶಿಷ್ಯಂ ಗೃಹ್ಣಾತು ಮಾಂ ಭವಾನ್ ॥೨೨॥**

**ಬ್ರಹ್ಮಚರ್ಯಂ ಚರಿಷ್ಯಾಮಿ ತ್ವಯ್ಯಹಂ ಪರಮಂ ಗುರೋ ।**
**ಅನುಮನ್ಯಸ್ವ ಮಾಂ ಬ್ರಹ್ಮನ್ ಸಹಸ್ರಪರಿವತ್ಸರಾನ್ ॥೨೩॥**

**॥ ಶುಕ್ರ ಉವಾಚ ॥**

**ಕಚ ಸುಸ್ವಾಗತಂ ತೇಽಸ್ತು ಪ್ರತಿಗೃಹ್ಣಾಮಿ ತೇ ವಚಃ ।**
**ಅರ್ಚಯಿಷ್ಯೇಽಹಮರ್ಚ್ಯಂ ತ್ವಾಮರ್ಚಿತೋಽಸ್ತು ಬೃಹಸ್ಪತಿಃ ॥೨೪॥**

**॥ ಶೌನಕ ಉವಾಚ ॥**

**ಕಚಸ್ತು ತಂ ತಥೇತ್ಯುಕ್ತ್ವಾ ಪ್ರತಿಜಗ್ರಾಹ ತದ್ವ್ರತಂ ।**
**ಆದಿಷ್ಟಂ ಕವಿಪುತ್ರೇಣ ಶುಕ್ರೇಣೋಶನಸಾ ಸ್ವಯಂ ॥೨೫॥**

**ವ್ರತಂ ಚ ವ್ರತಕಾಲಂ ಚ ಯಥೋಕ್ತಂ ಪ್ರತ್ಯಗೃಹ್ಣತ ।**
**ಆರಾಧಯನ್ನುಪಾಧ್ಯಾಯಂ ದೇವಯಾನೀಂ ಚ ಭಾರತ ॥೨೬॥**

---

೨೨. "ನಾನು ಅಂಗಿರಸ ಮುನಿಯ ಮೊಮ್ಮಗನು. ದೇವಗುರುವಾದ ಬೃಹಸ್ಪತಿಯ ಔರಸಪುತ್ರನು. ಕಚನೆಂದು ನನ್ನ ಹೆಸರು. ನನ್ನನ್ನು ನಿನ್ನ ಶಿಷ್ಯನನ್ನಾಗಿ ಪರಿಗ್ರಹಿಸು.

೨೩. ಎಲೈ ಗುರುವೇ, ನಿನ್ನ ಬಳಿಯಲ್ಲಿ ನಾನು ಒಂದು ಸಾವಿರ ವರ್ಷಗಳ ಕಾಲ ವೇದಾಧ್ಯಯನವ್ರತವನ್ನು ನೆರವೇರಿಸಬೇಕೆಂದಿದ್ದೇನೆ. ಓ ಬ್ರಹ್ಮಜ್ಞನೇ, ನನಗೆ ಅಪ್ಪಣೆಕೊಡು."

೨೪. ಶುಕ್ರಾಚಾರ್ಯನು ಹೇಳಿದನು.—"ಕಚಾ, ನಿನಗೆ ಸುಖಾಗಮನವು; ನಿನ್ನ ಮಾತನ್ನು ನಡೆಸಿ ಕೊಡುವೆನು. ಗೌರವಾರ್ಹನಾದ ನಿನ್ನನ್ನು ಸತ್ಕರಿಸುವೆನು; ಅದರಿಂದ ನಿನ್ನ ತಂದೆಯಾದ ಬೃಹಸ್ಪತಿಗೆ ಮನ್ನಣೆ ದೊರೆತಂತಾಗಲಿ."

೨೫. ಶೌನಕಮುನಿಯು ಹೇಳಿದನು.—ಕಚನು ಅದಕ್ಕೆ ಒಪ್ಪಿದನು. ಕವಿಮುನಿಯ ಪುತ್ರನಾದ ಶುಕ್ರಾಚಾರ್ಯನು ಹೇಳಿದ ನಿಯಮವನ್ನು ಕೈಗೊಂಡನು.

೨೬. ವ್ರತವನ್ನೂ, ಅದಕ್ಕೆ ತಕ್ಕ ಕಾಲವನ್ನೂ ಶಾಸ್ತ್ರದಲ್ಲಿ ಹೇಳಿರುವಂತೆ ಅನುಸರಿಸುತ್ತಿದ್ದನು. ತನ್ನ ಗುರುವನ್ನೂ, ಅವನ ಪುತ್ರಿಯಾದ ದೇವಯಾನಿಯನ್ನೂ ತನ್ನ ನಡತೆಯಿಂದ ತೃಪ್ತಿಪಡಿಸುತ್ತಿದ್ದನು.

ನಿತ್ಯಮಾರಾಧಯಿಷ್ಯಂಸ್ತಾಂ ಯುವಾ ಯೌವನಗೋಚರಾಂ ।
ಗಾಯನ್ನೃತ್ಯನ್ವಾದಯಂಶ್ಚ ದೇವಯಾನೀಮತೋಷಯತ್ ॥೨೭॥

ಸಂಶೀಲಯನ್ ದೇವಯಾನೀಂ ಕನ್ಯಾಂ ಸಂಪ್ರಾಪ್ತಯೌವನಾಂ ।
ಪುಷ್ಪೈಃ ಫಲೈಃ ಪ್ರೇಷಣೈಶ್ಚ ತೋಷಯಾಮಾಸ ಭಾರ್ಗವೀಂ ॥೨೮॥

ದೇವಯಾನ್ಯಪಿ ತಂ ವಿಪ್ರಂ ನಿಯಮವ್ರತಚಾರಿಣಂ ।
ಅನುಗಾಯಮಾನಾ ಲಲನಾ ರಹಃ ಪರ್ಯಚರತ್ತದಾ ॥೨೯॥

ಪಂಚ ವರ್ಷಶತಾನ್ಯೇವಂ ಕಚಸ್ಯ ಚರತೋ ಭೃಶಂ ।
ತತ್ತೀವ್ರಂ ವ್ರತಂ ಬುದ್ಧ್ವಾ ದಾನವಾಸ್ತಂ ತತಃ ಕಚಂ ॥೩೦॥

ಗಾ ರಕ್ಷಂತಂ ವನೇ ದೃಷ್ಟ್ವಾ ರಹಸ್ಯೇನಮಮರ್ಷಿತಾಃ ।
ಜಘ್ನುರ್ಬೃಹಸ್ಪತೇರ್ದ್ವೇಷಾನ್ನಿಜರಕ್ಷಾರ್ಥಮೇವ ಚ ॥೩೧॥

---

೨೭-೨೮. ಕಚನು ಯುವಕ; ದೇವಯಾನಿಯೂ ಯೌವನೋನ್ಮುಖಿ. ಅವನು ಗಾಯನ, ನರ್ತನ, ಮತ್ತು ವಾದನಗಳಿಂದ ಅವಳನ್ನು ಸಂತೋಷಪಡಿಸುತ್ತಿದ್ದನು. ಉಪಚರಿಸುವುದು, ಹೂಹಣ್ಣುಗಳನ್ನು ತಂದುಕೊಡುವುದು, ಅವಳು ಹೇಳಿದ ಕೆಲಸವನ್ನು ಮಾಡುವುದು ಮುಂತಾದುವುಗಳಿಂದ ಆಚಾರ್ಯಪುತ್ರಿಯ ಮನಸ್ಸಿಗೆ ಆನಂದವನ್ನು ಕೊಡುತ್ತಿದ್ದನು.

೨೯. ವ್ರತನಿಯಮಗಳನ್ನು ತಪ್ಪದೆ ಪಾಲಿಸುತ್ತಿದ್ದ ಆ ಕಚನೊಡನೆ ದೇವಯಾನಿಯೂ ಹಾಡುವಳು. ರಹಸ್ಯವಾಗಿ ಅವನಿಗೆ ಉಪಚಾರವನ್ನೂ ಮಾಡುವಳು.

೩೦-೩೧. ಹೀಗೆಯೇ ಕಚನು ಅವಿಚ್ಛಿನ್ನವಾಗಿ ಐದು ನೂರು ವರ್ಷಗಳ ಕಾಲ ವ್ರತವನ್ನು ಆಚರಿಸಿದನು. ದಾನವರಿಗೆಲ್ಲ ಇದು ಗೊತ್ತಾಯಿತು. ಒಂದು ದಿನ ಅವನು ಕಾಡಿನಲ್ಲಿ ಹಸುಗಳನ್ನು ಮೇಯಿಸುತ್ತಿರಲು, ಆ ರಾಕ್ಷಸರು ಕಂಡು ಕೋಪಗೊಂಡು, ಬೃಹಸ್ಪತಿಯ ಮೇಲಣ ದ್ವೇಷದಿಂದಲೂ, ತಮ್ಮ ರಕ್ಷಣೆಯ ಅಭಿಲಾಷೆಯಿಂದಲೂ ಅವನನ್ನು ಕೊಂದು ಹಾಕಿದರು.

ಹತ್ವಾ ಸಾಲಾವೃಕೇಭ್ಯಶ್ಚ ಪ್ರಾಯಚ್ಛಂಸ್ತಿಲಶಃ ಕೃತಂ ।
ತತೋ ಗಾವೋ ನಿವೃತ್ತಾಸ್ತಾ ಅಗೋಪಾಃ ಸ್ವನಿವೇಶನಂ ॥೩೨॥

ತಾ ದೃಷ್ಟ್ವಾ ರಹಿತಾ ಗಾಸ್ತು ಕಚೇನಾಭ್ಯಾಗತಾ ವನಾತ್ ।
ಉವಾಚ ವಚನಂ ಕಾಲೇ ದೇವಯಾನ್ಯಥ ಭಾರ್ಗವಂ ॥೩೩॥

ಹುತಂ ಚೈವಾಗ್ನಿಹೋತ್ರಂ ತೇ ಸೂರ್ಯಶ್ಚಾಸ್ತಂ ಗತಃ ಪ್ರಭೋ ।
ಅಗೋಪಾಶ್ಚಾಗತಾ ಗಾವಃ ಕಚಸ್ತಾತ ನ ದೃಶ್ಯತೇ ॥೩೪॥

ವ್ಯಕ್ತಂ ಹತೋ ಧೃತೋ ವಾಽಪಿ ಕಚಸ್ತಾತ ಭವಿಷ್ಯತಿ ।
ತಂ ವಿನಾ ನೈವ ಜೀವಾಮಿ ವಚಸ್ಸತ್ಯಂ ಬ್ರವೀಮ್ಯಹಂ ॥೩೫॥

॥ ಶುಕ್ರ ಉವಾಚ ॥

ಅಥೇಹ್ಯೇಹೀತಿ ಶಬ್ದೇನ ಮೃತಂ ಸಂಜೀವಯಾಮ್ಯಹಂ ।
ತತಃ ಸಂಜೀವನೀಂ ವಿದ್ಯಾಂ ಪ್ರಯುಕ್ತ್ವಾ ಕಚಮಾಹ್ವಯತ್ ॥೩೬॥

---

೩೨. ಎಳ್ಳಿನಂತೆ ಚೂರುಚೂರಾಗಿ ಆ ಕಚನ ದೇಹವನ್ನು ಕತ್ತರಿಸಿ ತೋಳಗಳಿಗೆ ಹಾಕಿದರು. ಬಳಿಕ ಗೋಪಾಲಕನಿಲ್ಲದೆ ಹಸುಗಳು ಮಾತ್ರ ತಮ್ಮತಮ್ಮ ಗೊತ್ತುಗಳಿಗೆ ಹಿಂದಿರುಗಿದವು.

೩೩. ಆ ಹೊತ್ತಿನಲ್ಲಿ ಕಚನಿಲ್ಲದೆ ಹಸುಗಳು ಮಾತ್ರ ಬಂದುದನ್ನು ನೋಡಿ ದೇವಯಾನಿಯು ಶುಕ್ರಾಚಾರ್ಯನಿಗಿಂತೆಂದಳು.

೩೪. "ಅಪ್ಪಾ, ನೀನು ಅಗ್ನಿಹೋತ್ರವನ್ನು ಮಾಡಿಯಾಯಿತು; ಸೂರ್ಯನೂ ಮುಳುಗಿದನು. ಪಾಲಕನಿಲ್ಲದೆ ಹಸುಗಳು ಮಾತ್ರ ಬಂದಿವೆ; ಕಚನೆಲ್ಲೋ ಕಾಣುವುದಿಲ್ಲ.

೩೫. ಅವನನ್ನು ಯಾರೋ ಕೊಂದಿರಬೇಕು; ಇಲ್ಲವೇ ಹೊತ್ತುಕೊಂಡು ಹೋಗಿರಬೇಕು. ಇದು ನಿಜ. ಎಲೈ ತಂದೇ, ಅವನನ್ನು ಬಿಟ್ಟು ನಾನು ಖಂಡಿತವಾಗಿ ಬದುಕಲಾರೆನು. ಈ ಮಾತು ಸತ್ಯ."

೩೬. ಶುಕ್ರಾಚಾರ್ಯನು ಹೇಳಿದನು.—"ಹಾಗಾದರೆ ಬಾ, ಬಾ, ಎಂದು ಕರೆದು ಸತ್ತವನನ್ನು ನಾನು ಬದುಕಿಸುತ್ತೇನೆ" ಎಂದು ಹೇಳಿ, ಸಂಜೀವನೀ ವಿದ್ಯೆಯನ್ನು ಪ್ರಯೋಗಿಸಿ ಕಚನನ್ನು ಕೂಗಿದನು.

ಆಹೂತಃ ಪ್ರಾದ್ರವದ್ದೂರಾತ್ಕಚಃ ಶುಕ್ರಂ ನನಾಮ ಸಃ ।
ಹತೋಽಹಮಿತಿ ಚಾಚಖ್ಯೌ ರಾಕ್ಷಸೈರ್ಧಿಷಣಾತ್ಮಜಃ ॥೩೭॥

ಸ ಪುನರ್ದೇವಯಾನ್ಯುಕ್ತಃ ಪುಷ್ಪಾಹಾರೇ ಯದೃಚ್ಛಯಾ ।
ವನಂ ಯಯೌ ಕಚೋ ವಿಪ್ರಃ ಪಠನ್ ಬ್ರಹ್ಮ ಚ ಶಾಶ್ವತಂ ॥೩೮॥

ವನೇ ಪುಷ್ಪಾಣಿ ಚಿನ್ವಂತಂ ದದೃಶುರ್ದಾನವಾಶ್ಚ ತಂ ।
ತತೋ ದ್ವಿತೀಯೇ ತಂ ಹತ್ವಾ ಧಗ್ಧ್ವಂ ಕೃತ್ವಾ ಚ ಚೂರ್ಣವತ್ ।
ಪ್ರಾಯಚ್ಛದ್ಬ್ರಾಹ್ಮಣಾಯೈವ ಸುರಾಯಾಮಸುರಾಸ್ತದಾ ॥೩೯॥

ದೇವಯಾನ್ಯಥ ಭೂಯೋಽಪಿ ಪಿತರಂ ವಾಕ್ಯಮಬ್ರವೀತ್ ।
ಪುಷ್ಪಾಹಾರಪ್ರೇಷಣಕೃತ್ಕಚಸ್ತಾತ ನ ದೃಶ್ಯತೇ । ॥೪೦॥

ವ್ಯಕ್ತಂ ಹತೋ ಮೃತೋ ವಾಽಪಿ ಕಚಸ್ತಾತ ಭವಿಷ್ಯತಿ ।
ತಂ ವಿನಾ ನೈವ ಜೀವಾಮಿ ವಚಸ್ಸತ್ಯಂ ಬ್ರವೀಮಿ ತೇ ॥೪೧॥

---

೩೭. ಕರೆದ ಕೂಡಲೆ ಕಚನು ದೂರದಿಂದೋಡಿ ಬಂದು ಶುಕ್ರಾಚಾರ್ಯನಿಗೆ ನಮಸ್ಕಾರಮಾಡಿದನು. ತನ್ನನ್ನು ರಾಕ್ಷಸರು ಕೊಂದರೆಂಬ ಸಮಾಚಾರವನ್ನೂ ತಿಳಿಸಿದನು.

೩೮. ಮತ್ತೊಂದು ಸಾರಿ ಹೂವನ್ನು ತರುವಂತೆ ದೇವಯಾನಿಯು ಹೇಳಿದಳು. ಕಚನು ತನ್ನ ಸಮ್ಮತಿಯನ್ನು ಸೂಚಿಸಿ, ವೇದವನ್ನು ಜಪಿಸುತ್ತಾ ಕಾಡಿಗೆ ಹೋದನು.

೩೯. ವನದಲ್ಲಿ ಹೂವುಗಳನ್ನು ಕೀಳುತ್ತಿರುವುದನ್ನು ಕಂಡು, ದಾನವರು ಅವನನ್ನು ಎರಡನೆಯ ಸಲವೂ ಕೊಂದುಹಾಕಿ ಸುಟ್ಟುಬಿಟ್ಟರು. ಅಷ್ಟೇ ಅಲ್ಲ; ಅವನ ಬೂಳಿ ಮುಂತಾದುವನ್ನೂ ಪುಡಿಮಾಡಿ, ಮದ್ಯಕ್ಕೆ ಸೇರಿಸಿ ಆ ಶುಕ್ರಾಚಾರ್ಯನಿಗೇ ಕೊಟ್ಟರು. ಅವನು ತಿಳಿಯದೆ ಕುಡಿದುಬಿಟ್ಟನು.

೪೦-೪೧. ದೇವಯಾನಿಯು ಮರಳಿ ತಂದೆಗಿಂತೆಂದಳು. "ಅಪ್ಪಾ, ಹೂವನ್ನು ತರುವುದಕ್ಕಾಗಿ ಕಚನನ್ನು ಕಳುಹಿಸಿದ್ದೆನು; ಅವನೆಲ್ಲೋ ಕಾಣಲಿಲ್ಲ. ಯಾರೋ ಅವನನ್ನು ಕೊಂದಿರಬೇಕು; ಇಲ್ಲವೇ ಅವನು ಮೃತನಾಗಿರಬೇಕು. ಏನಾದರೂ ಅವನನ್ನುಳಿದು ನಾನು ಬದುಕಲಾರೆ. ಇದು ಸತ್ಯವಾದ ಮಾತು."

॥ ಶುಕ್ರ ಉವಾಚ ॥

ಬೃಹಸ್ಪತೇಸ್ಸುತಃ ಪುತ್ರಿ ಕಚಃ ಪ್ರೇತಗತಿಂ ಗತಃ ।
ವಿದ್ಯಯಾ ಜೀವಿತೋಽಪ್ಯೇವಂ ಹನ್ಯತೇ ಕರವಾಣಿ ಕಿಂ ॥೪೨॥

ಮೈನಂ ಶುಚೋ ಮಾ ರುದ ದೇವಯಾನಿ ।
ನ ತ್ವಾದೃಶೀ ಮರ್ತ್ಯಮನು ಪ್ರಶೋಚೇತ್ ॥
ಯಸ್ಯಾಸ್ತವ ಬ್ರಹ್ಮ ಚ ಬ್ರಾಹ್ಮಣಾಶ್ಚ ।
ಸೇಂದ್ರಾ ದೇವಾ ವಸವೋಽಶ್ವಿನೌ ಚ ॥೪೩॥

ಸುರದ್ವಿಷಶ್ಚೈವ ಜಗಚ್ಚ ಸರ್ವ
ಮುಪಸ್ಥಿತಂ ಮತ್ತಪಃಪ್ರಭಾವಾತ್ ।
ಅಶಕ್ಯೋಽಯಂ ಜೀವಯಿತುಂ ದ್ವಿಜಾತಿಃ
ಸಂಜೀವಿತೋ ಯೋ ವಧ್ಯತೇ ಚೈವ ಭೂಯಃ ॥೪೪॥

॥ ದೇವಯಾನ್ಯುವಾಚ ॥

ಯಸ್ಯಾಂಗಿರಾ ವೃದ್ಧತಮಃ ಪಿತಾಮಹೋ
ಬೃಹಸ್ಪತೇಶ್ಚಾಪಿ ಪಿತಾ ತಪೋನಿಧಿಃ ।

---

೪೨. ಶುಕ್ರಾಚಾರ್ಯನು ಹೇಳಿದನು :—"ಎಲೌ ಮಗಳೇ, ಬೃಹಸ್ಪತಿಯ ಮಗನಾದ ಕಚನು ಮೃತನಾದನು. ಸಂಜೀವನೀವಿದ್ಯೆಯಿಂದ ಬದುಕಿಸಿದ್ದರೂ ಮತ್ತೆ ಅವನು ಹತನಾದರೆ ನಾನೇನು ಮಾಡಲಿ ?

೪೩-೪೪. ಓ ದೇವಯಾನಿ, ಇವನಿಗಾಗಿ ದುಃಖಿಸಬೇಡ; ಅಳಬೇಡ. ನಿನ್ನಂತಹವಳು ಮರ್ತ್ಯನಿಗಾಗಿ ವ್ಯಸನಪಡಬಾರದು. ಬ್ರಹ್ಮ, ಬ್ರಾಹ್ಮಣರು, ಇಂದ್ರಾದಿ ದೇವತೆಗಳು, ವಸುಗಳು, ಅಶ್ವಿನೀದೇವತೆಗಳು, ರಾಕ್ಷಸರು, ಅಷ್ಟೇ ಏಕೆ ? ಎಲ್ಲಜಗತ್ತು ಇವೆಲ್ಲವೂ ನನ್ನ ತಪಸ್ಸಿನ ಮಹಿಮೆಯಿಂದ ನಿನ್ನ ಸೇವೆಗೆ ಕಾದಿವೆ. ಸಂಜೀವನೀ ವಿದ್ಯೆಯಿಂದ ಬದುಕಿದ್ದ ಈ ಬ್ರಾಹ್ಮಣನು ಕೊಲೆಗೆ ತುತ್ತಾದ ಬಳಿಕ ಇವನನ್ನು ಮತ್ತೆ ಬದುಕಿಸಲು ಸಾಧ್ಯವಿಲ್ಲ."

೪೫. ದೇವಯಾನಿಯು ಹೇಳಿದಳು :—"ಯಾರ ತಾತನು ಎಲ್ಲರಿಗಿಂತಲೂ ಹಿರಿಯವನಾದ ಅಂಗಿರಸನೋ, ತಂದೆಯು ತಪೋನಿಧಿಯಾದ ಬೃಹಸ್ಪತಿಯೋ,

ಋಷೇಃ ಸುಪುತ್ರಂ ತಮಥಾಪಿ ಪೌತ್ರಂ
ಕಥಂ ನ ಶೋಚೇ ಯಮಹಂ ನ ರುದ್ಯಾಂ ॥೪೫॥

ಸ ಬ್ರಹ್ಮಚಾರೀ ಚ ತಪೋಧನಶ್ಚ
ಸದೋತ್ಥಿತಃ ಕರ್ಮಸು ಚೈವ ದಕ್ಷಃ ।
ಕಚಸ್ಯ ಮಾರ್ಗಂ ಪ್ರತಿಪತ್ಸ್ಯೇ ನ ಭೋಕ್ಷ್ಯೇ
ಪ್ರಿಯೋ ಹಿ ಮೇ ತಾತ ಕಚೋಽಭಿರೂಪಃ ॥೪೬॥

॥ ಶೌನಕ ಉವಾಚ ॥

ಸ ತ್ವೇವಮುಕ್ತೋ ದೇವಯಾನ್ಯಾ ಮಹರ್ಷಿಃ
ಸಂರಂಭೇಣ ವ್ಯಾಜಹಾರಾಥ ಕಾವ್ಯಃ ।
ಅಸಂಶಯಂ ಮಾಮಸುರಾ ದ್ವಿಷಂತಿ
ಯೇ ಮೇ ಶಿಷ್ಯಾನಾಗತಾನ್ ಸೂದಯಂತಿ ॥೪೭॥

ಅಬ್ರಾಹ್ಮಣಂ ಕರ್ತುಮಿಚ್ಛಂತಿ ರೌದ್ರಾ ।
ಏಭಿರ್ವ್ಯರ್ಥಂ ಪ್ರಸ್ತುತೋ ದಾನವೈರ್ಹಿ ॥
ತತ್ಕರ್ಮಣಾಪ್ಯಸ್ಯ ಭವೇದಿಹಾಂತಃ ।
ಕಂ ಬ್ರಹ್ಮಹತ್ಯಾ ನ ದಹೇದಪೀಂದ್ರಂ ॥೪೮॥

---

ಅಂತಹ ಸತ್ಪುತ್ರನೂ, ಸತ್ಪಾತ್ರನೂ ಆದ ಕಚನನ್ನು ಕುರಿತು ಹೇಗೆ ತಾನೇ ದುಃಖಿಸದಿರಲಿ! ಅಳದಿರಲಿ?

೪೬. ಅಪ್ಪಾ, ಅವನು ಬ್ರಹ್ಮಚಾರಿ; ತಪಸ್ವಿ; ಯಾವಾಗಲೂ ಜಾಗರೂಕನು. ಇಂತಹ ಸುಗುಣಿಯಾದ ಕಚನ ಹಾದಿಯನ್ನೇ ನಾನೂ ಹಿಡಿಯುತ್ತೇನೆ. ಊಟಮಾಡುವುದಿಲ್ಲ; ಸುಂದರನಾದ ಅವನು ನನಗೆ ಪ್ರಿಯನು."

೪೭. ಶೌನಕನು ಹೇಳಿದನು.—ದೇವಯಾನಿಯು ಹೀಗೆ ನುಡಿಯಲು ಮಹರ್ಷಿಯಾದ ಶುಕ್ರಾಚಾರ್ಯನು ವ್ಯಾಕುಲತೆಯಿಂದ ಹೀಗೆಂದನು. "ನನ್ನನ್ನು ದಾನವರು ದ್ವೇಷಿಸುತ್ತಾರೆ. ಸಂದೇಹವಿಲ್ಲ. ಏಕೆಂದರೆ ನನ್ನಲ್ಲಿಗೆ ಬಂದ ಶಿಷ್ಯರನ್ನು ಅವರು ಕೊಲ್ಲುತ್ತಿರುವರು.

೪೮. ಭಯಂಕರರಾದ ಈ ಅಸುರರು ಲೋಕದಲ್ಲಿ ಬ್ರಾಹ್ಮಣರೇ ಇಲ್ಲದಂತೆ ಮಾಡಬೇಕೆಂದಿರುತ್ತಾರೆ. ಇವರೊಡನೆ ವ್ಯವಹಾರವು ವ್ಯರ್ಥ. ಆ ದುಷ್ಕೃತ್ಯದಿಂದಲೇ ಈ ರಾಕ್ಷಸಗಣದ ನಾಶವಾದೀತು. ಬ್ರಹ್ಮಹತ್ಯೆಯು ಇಂದ್ರನನ್ನು ತಾನೆ ಸುಡದೆ ಬಿಟ್ಟೀತೇ.''

ಸ ತೇನಾಪೃಷ್ಟೋ ವಿದ್ಯಯಾ ಚೋಪಹೂತೋ
ಶನೈರ್ವಾಚಂ ಜಠರೇ ವ್ಯಾಜಹಾರ।
ತಮಬ್ರವೀತ್ಕೇನ ಚೇಹೋಪನೀತೋ
ಮಮೋದರೇ ತಿಷ್ಠಸಿ ಬ್ರೂಹಿ ವತ್ಸ ॥೪೯॥

॥ ಕಚ ಉವಾಚ ॥

ಭವತ್ಪ್ರಸಾದಾನ್ನ ಜಹಾತಿ ಮಾಂ ಸ್ಮೃತಿಃ
ಸರ್ವಂ ಸ್ಮರೇಯಂ ಯಚ್ಚ ಯಥಾ ಚ ವೃತ್ತಂ।
ನ ತ್ವೇವಂ ಸ್ಯಾತ್ತಪಸಃ ಕ್ಷಯೋ ಮೇ
ತತಃ ಕ್ಲೇಶಂ ಘೋರತರಂ ಸ್ಮರಾಮಿ ॥೫೦॥

ಅಸುರೈಃ ಸುರಾಯಾಂ ಭವತೋಽಸ್ಮಿ ದತ್ತೋ
ಹತ್ವಾ ಧಗ್ಧ್ವಾ ಚೂರ್ಣಯಿತ್ವಾ ಚ ಕಾವ್ಯ।
ಬ್ರಾಹ್ಮೀಂ ಮಾಯಾಂ ತ್ವಾಸುರೀ ತ್ವತ್ರ ಮಾಯಾ
ತ್ವಯಿ ಸ್ಥಿತೇ ಕಥಮೇವಾಭಿಬಾಧತೇ ॥೫೧॥

---

೪೯. ಶುಕ್ರಾಚಾರ್ಯನು ಸಂಜೀವನೀ ವಿದ್ಯೆಯನ್ನು ಪ್ರಯೋಗಿಸಿ ಕರೆಯಲು, ಕಚನು ಅವನ ಹೊಟ್ಟೆಯಲ್ಲೇ ಮೆಲ್ಲನೆ ಮಾತನಾಡಿದನು. "ಮಗೂ, ನಿನ್ನನ್ನಿಲ್ಲಿಗೆ ಕರೆತಂದವರಾರು? ನನ್ನ ಹೊಟ್ಟೆಯಲ್ಲಿ ಹೇಗೆ ನೆಲಸಿದೆ? ಹೇಳು" ಎಂದು ಆಚಾರ್ಯನು ಕೇಳಿದನು.

೫೦. ಕಚನು ಹೇಳಿದನು.—"ನಿನ್ನ ಅನುಗ್ರಹದಿಂದ ನನಗೆ ಹಿಂದಿನ ನೆನಪು ಹೋಗಿಲ್ಲ. ಯಾವುದು ಹೇಗೆ ನಡೆಯಿತು ಎಂಬುದೆಲ್ಲವೂ ಜ್ಞಾಪಕದಲ್ಲಿದೆ. ನನ್ನ ತಪಸ್ಸು ನಷ್ಟವಾಗಿಲ್ಲ. ಆದುದರಿಂದ ನಾನು ಅನುಭವಿಸಿದ ಭಯಂಕರವಾದ ಕಷ್ಟವನ್ನು ನೆನೆಸಿಕೊಳ್ಳಬಲ್ಲೆನು.

೫೧. ರಾಕ್ಷಸರು ನನ್ನನ್ನು ಕೊಂದು, ಸುಟ್ಟು, ಪುಡಿಮಾಡಿ, ಮದ್ಯದಲ್ಲಿ ಸೇರಿಸಿ ನಿನಗೆ ಕೊಟ್ಟರು. ತೇಜಸ್ವಿಯಾದ ನೀನಿರುವಾಗ ರಾಕ್ಷಸಮಾಯೆಯು ಬ್ರಹ್ಮಮಾಯೆಯನ್ನು ಹೇಗೆ ಮೆಟ್ಟಬಲ್ಲುದು?"

॥ ಶುಕ್ರ ಉವಾಚ ॥

ಕಿಂ ತೇ ಪ್ರಿಯಂ ಕರವಾಣ್ಯದ್ಯ ವತ್ಸೇ
ವಧೇನ ಮೇ ಜೀವಿತಂ ಸ್ಯಾತ್ಕಚಸ್ಯ ।
ನಾನ್ಯತ್ರ ಕುಕ್ಷೇರ್ಮಮ ಭೇದನಾಚ್ಚ
ದೃಶ್ಯೇತ್ಕಚೋ ಮದ್ಗತೋ ದೇವಯಾನಿ ॥೫೭॥

॥ ದೇವಯಾನ್ಯುವಾಚ ॥

ದ್ವೌ ಮಾಂ ಶೋಕಾವಗ್ನಿಕಲ್ಪೌ ದಹೇತಾಂ
ಕಚಸ್ಯ ನಾಶಸ್ತವ ಚೈವೋಪಘಾತಃ ।
ಕಚಸ್ಯ ನಾಶೇ ಮಮ ನಾಸ್ತಿ ಶರ್ಮ
ತವೋಪಘಾತೇ ಜೀವಿತುಂ ನಾಸ್ಮಿ ಶಕ್ತಾ ॥೫೮॥

॥ ಶುಕ್ರ ಉವಾಚ ॥

ಸಂಸಿದ್ಧರೂಪೋಽಸಿ ಬೃಹಸ್ಪತೇಃ ಸುತ
ಯತ್ತ್ವಾಂ ಭಕ್ತಂ ಭಜತೇ ದೇವಯಾನೀ ।
ವಿದ್ಯಾಮಿಮಾಂ ಪ್ರಾಪ್ನುಹಿ ಜೀವನೀಂ ತ್ವಂ
ನ ಚೇದಿಂದ್ರಃ ಕಚರೂಪೀ ತ್ವಮದ್ಯ ॥೫೯॥

---

೫೭. ಶುಕ್ರಾಚಾರ್ಯನು ಹೇಳಿದನು.—"ಎಲೌ ಮಗಳೇ, ಈಗ ನಾನೇನು ಮಾಡಲಿ? ನಿನ್ನ ಇಷ್ಟವೇನು? ಹೇಳು. ನನ್ನ ಪ್ರಾಣವು ಹೋಗಿ ಕಚನಿಗೆ ಜೀವವು ಬರುವುದು. ಏಕೆಂದರೆ ನನ್ನ ಹೊಟ್ಟೆಯು ಸೀಳಿದ ಹೊರತು ಒಳಗೆ ಅಡಗಿರುವ ಕಚನು ಹೊರಗೆ ಬರುವ ದಾರಿಯನ್ನು ಕಾಣನು."

೫೮. ದೇವಯಾನಿಯು ಹೇಳಿದಳು:—"ಕಚನ ನಾಶ, ನಿನ್ನ ಸಾವು ಈ ಎರಡು ದುಃಖಗಳೂ ನನ್ನನ್ನು ಬೆಂಕಿಯಂತೆ ಸುಡುತ್ತವೆ. ಕಚನು ಸತ್ತರೆ ನನಗೆ ಸುಖವಿಲ್ಲ; ನಿನ್ನ ಮರಣವಾದರಂತೂ ನಾನು ಬದುಕುವುದೇ ಅಸಾಧ್ಯ."

೫೯. ಶುಕ್ರಾಚಾರ್ಯನು ಹೇಳಿದನು:—"ದೇವಯಾನಿಯು ಭಕ್ತನಾದ ನಿನ್ನಲ್ಲಿ ಆದರವನ್ನು ತೋರುತ್ತಿರುವಳು. ಆದುದರಿಂದ, ಬೃಹಸ್ಪತಿ ಪುತ್ರನಾದ ಎಲೈ ಕಚನೇ, ನೀನು ನಿನ್ನ ರೂಪವನ್ನು ಮರಳಿ ಹೊಂದಿರುವೆ. ಕಚನ ರೂಪದಿಂದ ಈಗ ನನ್ನ ಬಳಿಗೆ ಬಂದಿರುವ ಇಂದ್ರನಲ್ಲದಿದ್ದರೆ ಈ ಸಂಜೀವನೀ ವಿದ್ಯೆಯನ್ನು ತೆಗೆದುಕೋ.

ನ ನಿವರ್ತೇತ್ಪುನರ್ಜೀವನ್ ಕಶ್ಚಿದನ್ಯೋ ಮಮೋದರಾತ್ ।
ಬ್ರಾಹ್ಮಣಂ ವರ್ಜಯಿತ್ವೈಕಂ ತಸ್ಮಾದ್ವಿದ್ಯಾಮವಾಪ್ನುಹಿ ॥೫೫॥
ಪುತ್ರೋ ಭೂತ್ವಾ ನಿಷ್ಕ್ರಮಸ್ವೋದರಾನ್ಮೇ
ಭಿತ್ವಾ ಕುಕ್ಷಿಂ ಜೀವಯ ಮಾಂ ಚ ತಾತ ।
ಅವೇಕ್ಷೇಥಾ ಧರ್ಮವತೀಮವೇಕ್ಷಾಂ
ಗುರೋಸ್ಸಕಾಶಾತ್ಪ್ರಾಪ್ಯ ವಿದ್ಯಾಂ ಸವಿದ್ಯಃ ॥ ೫೬ ॥

॥ ಶೌನಕ ಉವಾಚ ॥

ಗುರೋಃ ಸಕಾಶಾತ್ಸಮವಾಪ್ಯ ವಿದ್ಯಾಂ
ಭಿತ್ವಾ ಕುಕ್ಷಿಂ ನಿರ್ವಿಚಕ್ರಾಮ ವಿಪ್ರಃ ।
ಪ್ರಾಲೇಯಾದ್ರೇಃ ಶುಕ್ಲಮುದ್ಭಿದ್ಯ ಶೃಂಗಂ
ರಾತ್ರ್ಯಾಗಮೇ ಪೌರ್ಣಮಾಸ್ಯಾಮಿವೇಂದುಃ ॥೫೭॥
ದೃಷ್ಟ್ವಾ ಚ ತಂ ಪತಿತಂ ವೇದರಾಶಿ
ಮುತ್ಥಾಪಯಾಮಾಸ ತತಃ ಕಚೋಽಪಿ ।
ವಿದ್ಯಾಂ ಸಿದ್ಧಾಂ ತಾಮವಾಪ್ಯಾಭಿವಾದ್ಯ
ತತಃ ಕಚಸ್ತಂ ಗುರುಮಿತ್ಯುವಾಚ ॥೫೮॥

---

೫೫. ಬ್ರಾಹ್ಮಣನೊಬ್ಬನಲ್ಲದೆ ಮತ್ತಾವನೂ ನನ್ನ ಹೊಟ್ಟೆಯಿಂದ ಜೀವ ದೊಡನೆ ಮರಳಿ ಬರಲಾರನು. ಆದುದರಿಂದ ವಿದ್ಯೆಯನ್ನು ಗ್ರಹಣಮಾಡು.

೫೬. ನನ್ನ ಹೊಟ್ಟೆಯನ್ನು ಸೀಳಿಕೊಂಡು, ನನಗೆ ಮಗನೆನಿಸಿ ಹೊರಕ್ಕೆ ಬಾ. ಅಪ್ಪಾ, ಮಗೂ, ಬಳಿಕ ನನ್ನನ್ನೂ ಬದುಕಿಸು. ಗುರುವಿನಿಂದ ವಿದ್ಯೆಯನ್ನು ಪಡೆದು ವಿದ್ಯಾವಂತನಾದ ಬಳಿಕ ಧರ್ಮಸಹಿತವಾದ ದೃಷ್ಟಿಯಿಂದ ಜೀವನವನ್ನು ನಡೆಸ ಬೇಕು.''

೫೭. ಶೌನಕಮುನಿ ಹೇಳಿದನು:—ಹಿಮಾಚಲದ ಬಿಳಿಯ ಶಿಖರವನ್ನು ಭೇದಿಸಿಕೊಂಡು ಹುಣ್ಣಿಮೆಯ ರಾತ್ರಿಯಲ್ಲಿ ಚಂದ್ರನು ಏಳುವಂತೆ, ಕಚನು ಗುರುವಿನಿಂದ ವಿದ್ಯೆ ಕಲಿತು, ಅವನ ಒಡಲನ್ನು ಸೀಳಿ ಹೊರಕ್ಕೆ ಬಂದನು.

೫೮. ಬಳಿಕ ಬೃಹಸ್ಪತಿ ಪುತ್ರನು ನೆಲದಲ್ಲಿ ಸತ್ತು ಬಿದ್ದಿರುವ ಸಕಲ ವೇದಜ್ಞ ನಾದ ಆ ಶುಕ್ರಾಚಾರ್ಯನನ್ನು ಬದುಕಿಸಿದನು. ಹೀಗೆ ವಿದ್ಯೆಯು ಸಿದ್ಧವಾಗಲು ಆಚಾರ್ಯನನ್ನು ನಮಸ್ಕರಿಸಿ ಇಂತೆಂದನು.

ನಿಧಿಂ ನಿಧೀನಾಂ ವರದಂ ವರಾಣಾಂ
ಯೇ ನಾದ್ರಿಯಂತೇ ಗುರುಮರ್ಚನೀಯಂ ।
ಪ್ರಾಲೇಯಾದ್ರಿಪ್ರೋಜ್ಜ್ವಲದ್ಭಾಲಸಂಸ್ಥಂ
ಪಾಪಾರ್ತಾ ಲೋಕಾಂಸ್ತೇ ವ್ರಜಂತ್ಯಪ್ರತಿಷ್ಠಾಃ ॥೫೯॥

॥ ಶೌನಕ ಉವಾಚ ॥

ಸುರಾಪಾನಾದ್ವಂಚನಾತ್ಪ್ರಾಪಯಿತ್ವಾ
ಸಂಜ್ಞಾನಾಶಂ ಚೇತಸಶ್ಚಾಪಿ ಘೋರಂ ।
ದೃಷ್ಟ್ವಾ ಕಚಂ ಚಾಪಿ ತಥಾಭಿರೂಪಂ
ಪೀತಂ ತಥಾ ಸುರಯಾ ಮೋಹಿತೇನ ॥೬೦॥

ಸಮುತ್ಥಾಯ ಮಹಾನುಭಾವ
ಸ್ತದೋಶನಾ ವಿಪ್ರಹಿತಂ ಚಿಕೀರ್ಷುಃ ।
ಕಾವ್ಯಃ ಸ್ವಯಂ ವಾಕ್ಯಮಿದಂ ಜಗಾದ
ಸುರಾಪಾನಂ ಪ್ರತ್ಯಸೌ ಜಾತಶಂಕಃ ॥೬೧॥

---

೫೯. ಆಚಾರ್ಯನು ಸಕಲ ಸಂಪತ್ತುಗಳಿಗೂ ನಿಕ್ಷೇಪದಂತಿರುವನು ; ವರಗಳನ್ನು ಕರುಣಿಸುವನು. ಪೂಜಾರ್ಹನು. ಹಿಮಾಚಲದಂತೆ ಕಾಂತಿಯುಕ್ತವಾದ ಮುಖಮಂಡಲದಿಂದ ವಿರಾಜಿಸುವ ಅವನನ್ನು ಹುಡುಕಿ, ಯಾರು ಆಶ್ರಯಿಸುವುದಿಲ್ಲವೋ ಅಂತಹವರು ಕೀರ್ತಿರಹಿತರಾಗಿ ದುರ್ಗತಿಗೆ ಇಳಿಯುವರು.

೬೦-೬೧. ಶೌನಕಮಹರ್ಷಿ ಹೇಳಿದನು :—ಮೋಸದಿಂದ ಮದ್ಯಪಾನ ಮಾಡಿಸಿ ಮನಸ್ಸಿನಿಂದ ಅರಿವನ್ನು ಕಳೆದುದನ್ನೂ, ಅಂತಹ ಸುಂದರನಾದ ಕಚನನ್ನು ಮದ್ಯಪಾನದ ಮೋಹದಿಂದ ತಾನು ತಿಳಿಯದೆ ಕುಡಿದು ಬಿಟ್ಟುದನ್ನೂ ಅರಿತು ಮಹಾನುಭಾವನಾದ ಶುಕ್ರಾಚಾರ್ಯನಿಗೆ ಬಹಳ ಕೋಪವು ಬಂದಿತು. ಅವನಿಗೆ ಮದ್ಯಪಾನವೆಂದರೆ ಹೆದರಿಕೆ ಹತ್ತಿತು. ಬ್ರಾಹ್ಮಣರ ಹಿತವನ್ನು ಕೋರಿ ಅವನು ಸುರಾಪಾನವನ್ನು ಕುರಿತು ಹೀಗೆ ಹೇಳಿದನು.

|| ಶುಕ್ರ ಉವಾಚ ||

ಯೋ ಬ್ರಾಹ್ಮಣೋಽದ್ಯಪ್ರಭೃತೀಹ ಕಶ್ಚಿ
ನ್ಮೋಹಾತ್ಸುರಾಂ ಪಾಸ್ಯತಿ ಮಂದಬುದ್ಧಿಃ ।
ಅಪೇತಧರ್ಮಾ ಬ್ರಹ್ಮಹಾ ಚೈವ ಸ ಸ್ಯಾ
ದಸ್ಮಿಂಲ್ಲೋಕೇ ಗರ್ಹಿತಃ ಸ್ಯಾತ್ಪರೇ ಚ ||೬೨||

ಮಯಾ ಚೇಮಾಂ ವಿಪ್ರಧರ್ಮೋಕ್ತಸೀಮಾಂ
ಮರ್ಯಾದಾಂ ವೈ ಸ್ಥಾಪಿತಾಂ ಸರ್ವಲೋಕೇ ।
ಸಂತೋ ವಿಪ್ರಾಃ ಶುಶ್ರುವಾಂಸೋ ಗುರೂಣಾಂ
ದೇವಾ ದೈತ್ಯಾಶ್ಚೋಪಶೃಣ್ವಂತು ಸರ್ವೇ ||೬೩||

|| ಶೌನಕ ಉವಾಚ ||

ಇತೀದಮುಕ್ತ್ವಾ ಸ ಮಹಾಪ್ರಭಾವ
ಸ್ತಪೋನಿಧೀನಾಂ ನಿಧಿರಪ್ರಮೇಯಃ ।
ತಾನ್ ದಾನವಾಂಶ್ಚೈವ ನಿಗೂಢಬುದ್ಧೀ
ನಿದಂ ಸಮಾಹೂಯ ವಚೋಽಭ್ಯುವಾಚ ||೬೪||

---

೬೨. ಶುಕ್ರಾಚಾರ್ಯನು ಹೇಳಿದನು :—"ಇಂದು ಮೊದಲಾಗಿ ಯಾವ ಬ್ರಾಹ್ಮಣನು ಮೋಹದಿಂದ ತಿಳುವಳಿಕೆಯಿಲ್ಲದೆ ಮದ್ಯವನ್ನು ಕುಡಿಯುತ್ತಾನೋ ಅವನು ಧರ್ಮರಹಿತನಾಗಿ ಬ್ರಹ್ಮಹತ್ಯಾ ಪಾಪಕ್ಕೆ ಗುರಿಯಾಗುವನು ಈ ಲೋಕದಲ್ಲೂ ಪರಲೋಕದಲ್ಲೂ ಅವನು ದೂಷ್ಯನಾಗುವನು.

೬೩. ಹೀಗೆ ನಾನು ಬ್ರಾಹ್ಮಣಧರ್ಮಕ್ಕೆ ಶಾಸ್ತ್ರೋಕ್ತವಾದ ಎಲ್ಲೆಯನ್ನೂ, ಕಟ್ಟುಪಾಡನ್ನೂ ಗೊತ್ತುಮಾಡಿದ್ದೇನೆ. ಸತ್ಪುರುಷರಾದ ಬ್ರಾಹ್ಮಣರೂ, ಗುರುಶುಶ್ರೂಷೆಯಲ್ಲಿರುವ ಶಿಷ್ಯರೂ, ದೇವತೆಗಳೂ, ದೈತ್ಯರೂ ಎಲ್ಲರೂ ಇದನ್ನು ಕೇಳಲಿ."

೬೪. ಶೌನಕಮುನಿ ಹೇಳಿದನು :—ತಪೋವಿಧಾನಗಳೆಲ್ಲಕ್ಕೂ ಆಶ್ರಯನೆನಿಸಿ, ಊಹೆಗೂ ಸಿಲುಕದ ಮಹಿಮೆಯಿಂದ ತುಂಬಿದ ಆ ಶುಕ್ರಮಹಾಮುನಿಯು ಮೇಲಿನಂತೆ ಹೇಳಿ, ಮಂದಬುದ್ಧಿಗಳಾದ ಆ ದಾನವರನ್ನು ಕರೆದು ಇಂತೆಂದನು.

॥ ಶುಕ್ರ ಉವಾಚ ॥

**ಆಚಕ್ಷೇ ವೋ ದಾನವಾ ಬಾಲಿಶಾಃ ಸ್ಥ**
**ಶಿಷ್ಯಃ ಕಚೋ ವತ್ಸ್ಯತಿ ಮತ್ಸಮೀಪೇ ।**
**ಸಂಜೀವನೀಂ ಪ್ರಾಪ್ಯ ವಿದ್ಯಾಂ ಮಯಾಯಂ**
**ತುಲ್ಯಪ್ರಭಾವೋ ಬ್ರಾಹ್ಮಣೋ ಬ್ರಹ್ಮಭೂತಃ ॥೬೫॥**

॥ ಶೌನಕ ಉವಾಚ ॥

**ಗುರೋರುಷ್ಯ ಸಕಾಶೇ ಚ ದಶ ವರ್ಷಶತಾನಿ ಸಃ ।**
**ಅನುಜ್ಞಾತಃ ಕಚೋ ಗಂತುಮಿಯೇಷ ತ್ರಿದಶಾಲಯಂ ॥೬೬॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸೋಮವಂಶೇ ಯಯಾತಿ ಚರಿತೇ ಪಂಚವಿಂಶೋಽಧ್ಯಾಯಃ**

---

೬೫. ಶುಕ್ರಾಚಾರ್ಯನು ಹೇಳಿದನು :—" ಎಲೈ ದೈತ್ಯರೇ, ಹೇಳುವೆನು ಕೇಳಿ. ನೀವು ಹುಡುಗ ಬುದ್ಧಿಯವರು. ಶಿಷ್ಯನಾದ ಕಚನು ನನ್ನ ಬಳಿಯಲ್ಲೇ ಇರುವನು. ಸಂಜೀವನೀ ವಿದ್ಯೆಯನ್ನು ಕಲಿತು ಅವನು ಮಹಿಮೆಯಲ್ಲಿ ನನಗೆ ಸಮನಾಗಿರುವನು ಮತ್ತು ಬ್ರಹ್ಮಜ್ಞಾನದಲ್ಲಿ ಸಿದ್ಧಿಯನ್ನು ಪಡೆದಿರುವನು."

೬೬. ಶೌನಕಮಹರ್ಷಿ ಹೇಳಿದನು:—ಆ ಕಚನು ಆಚಾರ್ಯನ ಬಳಿಯಲ್ಲಿ ಸಾವಿರ ವರ್ಷಗಳ ಕಾಲ ಸೇವೆ ಮಾಡುತ್ತಲಿದ್ದು, ಬಳಿಕ ಅವನ ಅಪ್ಪಣೆಯನ್ನು ಪಡೆದು, ಸ್ವರ್ಗಲೋಕಕ್ಕೆ ಹೋಗಬೇಕೆಂದು ಬಯಸಿದನು.

## ಅಧ್ಯಾಯದ ಸಾರಾಂಶ

ಕಚನು ಶುಕ್ರಾಚಾರ್ಯನಿಂದ ಸಂಜೀವನೀವಿದ್ಯೆಯನ್ನು ಕಲಿತುಕೊಂಡು ಬಂದ ಕಥೆಯು ಈ ಅಧ್ಯಾಯದಲ್ಲಿ ಪ್ರತಿಪಾದಿತವಾಗಿದೆ.

ದೇವತೆಗಳಿಗೂ ರಾಕ್ಷಸರಿಗೂ ಯುದ್ಧ ನಡೆಯಿತು. ಅದರಲ್ಲಿ ಮೃತರಾದ ರಾಕ್ಷಸರನ್ನೆಲ್ಲಾ ಶುಕ್ರಾಚಾರ್ಯನು ಸಂಜೀವನೀವಿದ್ಯೆಯಿಂದ ಬದುಕಿಸುತ್ತಿದ್ದನು. ಇದರಿಂದ ಅಸುರರ ಕೈ ಮೇಲಾಯಿತು. ದೇವತೆಗಳು ಆ ವಿದ್ಯೆಯನ್ನು ಕಲಿತು ಕೊಂಡು ಬರುವುದಕ್ಕಾಗಿ ಬೃಹಸ್ಪತಿಯ ಮಗನಾದ ಕಚನನ್ನು ಕಳುಹಿಸಿದರು.

ಅವನು ಹೋಗಿ ಶುಕ್ರಾಚಾರ್ಯನ ಶಿಷ್ಯನಾದನು. ಒಂದು ದಿನ ಕಾಡಿನಲ್ಲಿ ಹಸುವನ್ನು ಮೇಯಿಸುತ್ತಿರುವಾಗ ರಾಕ್ಷಸರು ಅವನನ್ನು ಕೊಂದುಹಾಕಿದರು. ದೇವಯಾನಿಯ ಪ್ರಾರ್ಥನೆಯಂತೆ ಅವಳ ತಂದೆಯಾದ ಶುಕ್ರಾಚಾರ್ಯನು ಅವನನ್ನು ಬದುಕಿಸಿದನು. ಮತ್ತೊಂದು ದಿನ ಕಚನು ಹೂ ಕೊಯ್ಯುವುದಕ್ಕಾಗಿ ಕಾಡಿಗೆ ಹೋಗಿರಲು, ದೈತ್ಯರು ಅವನನ್ನು ಮತ್ತೆ ಕೊಂದು, ಸುಟ್ಟು, ಪುಡಿಮಾಡಿ, ಮದ್ಯದೊಡನೆ ಬೆರಸಿ ಶುಕ್ರಾಚಾರ್ಯನಿಗೇ ಕುಡಿಯಲು ಕೊಟ್ಟುಬಿಟ್ಟರು. ಕಚನು ಎಲ್ಲೆಲ್ಲೂ ಕಾಣದಿರಲು ಮರಳಿ ದೇವಯಾನಿಯು ತನ್ನ ತಂದೆಯನ್ನು ಬೇಡಿಕೊಂಡಳು. ಗುರುವಿಗೆ ಕಚನು ತನ್ನ ಹೊಟ್ಟೆಯಲ್ಲಿರುವುದು ಗೊತ್ತಾಯಿತು. ಅಲ್ಲಿಯೇ ಅವನಿಗೆ ಸಂಜೀವನೀ ವಿದ್ಯೆಯನ್ನು ಉಪದೇಶಿಸಲು, ಅವನು ಆ ಶುಕ್ರಾಚಾರ್ಯನ ಹೊಟ್ಟೆಯನ್ನು ಸೀಳಿಕೊಂಡು ಹೊರಗೆ ಬಂದು ಸತ್ತುಬಿದ್ದಿದ್ದ ತನ್ನ ಗುರುವನ್ನು ಬದುಕಿಸಿದನು. ಕೆಲಕಾಲಾನಂತರ ಕಚನು ತನ್ನ ಆಚಾರ್ಯನ ಅಪ್ಪಣೆಪಡೆದು ಸ್ವರ್ಗಲೋಕಕ್ಕೆ ಹೋದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಚಂದ್ರವಂಶವರ್ಣನದೊಳಗೆ ಯಯಾತಿ
ಚರಿತದಲ್ಲಿ ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು



## ಅಥ ಶ್ರೀಮತ್ಸ್ಯಮಹಾಪುರಾಣೇ ಷಡ್ತ್ರಿಂಶೋಽಧ್ಯಾಯಃ

॥ ಶೌನಕ ಉವಾಚ ॥

ಸಮಾಪಿತವ್ರತಂ ತಂ ತು ವಿಸೃಷ್ಟಂ ಗುರುಣಾ ತದಾ ।
ಪ್ರಸ್ಥಿತಂ ತ್ರಿದಶಾವಾಸಂ ದೇವಯಾನೀದಮಬ್ರವೀತ್ ॥ ೧ ॥

॥ ದೇವಯಾನ್ಯುವಾಚ ॥

ಋಷೇರಂಗಿರಸಃ ಪೌತ್ರ ವೃತ್ತೇನಾಭಿಜನೇನ ಚ ।
ಭ್ರಾಜಸೇ ವಿದ್ಯಯಾ ಚೈವ ತಪಸಾ ಚ ದಮೇನ ಚ ॥ ೨ ॥

ಋಷಿರ್ಯಥಾಂಗಿರಾ ಮಾನ್ಯಃ ಪಿತುರ್ಮಮ ಮಹಾಯಶಾಃ ।
ತಥಾ ಮಾನ್ಯಶ್ಚ ಪೂಜ್ಯಶ್ಚ ಮಮ ಭೂಯೋ ಬೃಹಸ್ಪತಿಃ ॥ ೩ ॥

ಏವಂ ಜ್ಞಾತ್ವಾ ವಿಜಾನೀಹಿ ಯದ್ಬ್ರವೀಮಿ ತಪೋಧನ ।
ವ್ರತಸ್ಥೇ ನಿಯಮೋಪೇತೇ ಯಥಾ ವರ್ತಾಮ್ಯಹಂ ತ್ವಯಿ ॥ ೪ ॥

---

೧. ಶೌನಕಮುನಿ ಹೇಳಿದನು.—ಗುರುಕುಲವ್ರತವನ್ನು ಸಾಂಗವಾಗಿ ಮುಗಿಸಿ, ಗುರುವಿನ ಅಪ್ಪಣೆಪಡೆದು ಸ್ವರ್ಗಲೋಕಕ್ಕೆ ಹೊರಟ ಆ ಕಚನನ್ನು ನೋಡಿ ದೇವಯಾನಿಯು ಇಂತು ನುಡಿದಳು.

೨. ದೇವಯಾನಿಯು ಹೇಳಿದಳು.—" ಅಂಗಿರಸ ಮಹಾಮುನಿಯ ಪೌತ್ರನಾದ ಎಲೈ ಕಚನೇ, ನಡತೆ, ಸತ್ಕುಲ, ವಿದ್ಯೆ, ತಪಸ್ಸು, ಇಂದ್ರಿಯನಿಗ್ರಹ ಈ ಗುಣಗಳಿಂದ ನಿನ್ನ ಕಾಂತಿಯು ಅತಿಶಯವಾಗಿದೆ.

೩. ಮಹಾಕೀರ್ತಿವಂತನಾದ ಅಂಗಿರಸಮುನಿಯು ನನ್ನ ತಂದೆಗೆ ಪೂಜ್ಯನಾಗಿರುವಂತೆಯೇ, ನಿನ್ನ ತಂದೆಯಾದ ಬೃಹಸ್ಪತಿಯು ನನಗೆ ಅಧಿಕ ಮಾನ್ಯನೂ, ಪೂಜ್ಯನೂ ಆಗಿರುವನು.

೪. ಎಲೈ ತಪಸ್ವಿಯೇ, ವ್ರತನಿಯಮಗಳನ್ನು ಆಚರಿಸುವ ನಿನ್ನ ವಿಷಯದಲ್ಲಿ ನನ್ನ ಭಾವನೆ ಹೇಗಿದೆಯೆಂಬುದನ್ನು ಹೇಳುವೆನು. ಅದನ್ನು ಮನಸ್ಸಿಗೆ ತಂದುಕೋ.

ಸ ಸಮಾಪಿತವಿದ್ಯೋ ಮಾಂ ಭಕ್ತಾಂ ನ ತ್ಯಕ್ತುಮರ್ಹಸಿ ।
ಗೃಹಾಣ ಪಾಣಿಂ ವಿಧಿವನ್ಮಮ ಮಂತ್ರಪುರಸ್ಕೃತಂ ॥ ೫ ॥

॥ ಕಚ ಉವಾಚ ॥

ಪೂಜ್ಯೋ ಮಾನ್ಯಶ್ಚ ಭಗವಾನ್ಯಥಾ ಮಮ ಪಿತಾ ತವ ।
ತಥಾ ತ್ವಮನವದ್ಯಾಂಗಿ ಪೂಜನೀಯತಮಾ ಮತಾ ॥ ೬ ॥

ಆತ್ಮಪ್ರಾಣೈಃ ಪ್ರಿಯತಮಾ ಭಾರ್ಗವಸ್ಯ ಮಹಾತ್ಮನಃ ।
ತ್ವಂ ಭದ್ರೇ ಧರ್ಮತಃ ಪೂಜ್ಯಾ ಗುರುಪುತ್ರೀ ಸದಾ ಮಮ ॥ ೭ ॥

ಯಥಾ ಮಮ ಗುರುರ್ನಿತ್ಯಂ ಮಾನ್ಯಃ ಶುಕ್ರಃ ಪಿತಾ ತವ ।
ದೇವಯಾನಿ ತಥೈವ ತ್ವಂ ನೈವಂ ಮಾಂ ವಕ್ತುಮರ್ಹಸಿ ॥ ೮ ॥

---

೫. ವಿದ್ಯಾಭ್ಯಾಸವನ್ನು ನೀನು ಮುಗಿಸಿದೆ. ನಿನ್ನ ಭಕ್ತಳಾದ ನನ್ನನ್ನು ತೊರೆಯಬೇಡ. ವೇದೋಕ್ತವಾದ ಕ್ರಮದಿಂದ ಮಂತ್ರಪೂರ್ವಕವಾಗಿ ನನ್ನನ್ನು ಪಾಣಿಗ್ರಹಣ ಮಾಡಿಕೋ.''

೬. ಕಚನು ಹೇಳಿದನು.—'' ಷಡ್ಗುಣಪರಿಪೂರ್ಣನಾದ ನನ್ನ ತಂದೆಯು ನಿನಗೆ ಪೂಜ್ಯನೂ, ಗೌರವಾರ್ಹನೂ ಆಗಿರುವನೆಂದು ನೀನು ಹೇಳಿದೆ. ಎಲೌ ಸುಂದರಾಂಗೀ, ನೀನು ನನಗೆ ಎಲ್ಲರಿಗಿಂತಲೂ ಹೆಚ್ಚು ಮನ್ನಣೆಗೆ ಪಾತ್ರಳಾಗಿರುವೆ.

೭. ಮಹಾತ್ಮನಾದ ಶುಕ್ರಾಚಾರ್ಯನಿಗೆ ನೀನು ಪ್ರಾಣಗಳಿಗಿಂತಲೂ ವಿಶೇಷ ಪ್ರಿಯಳೆನಿಸಿರುವೆ. ಓ ಕಲ್ಯಾಣೀ, ಗುರುಪುತ್ರಿಯಾದ ನೀನು ಧರ್ಮದ ದೃಷ್ಟಿಯಿಂದ ಯಾವಾಗಲೂ ಸತ್ಕಾರಾರ್ಹಳು.

೮. ನನ್ನ ಗುರುವೂ, ನಿನ್ನ ತಂದೆಯೂ ಆದ ಶುಕ್ರಾಚಾರ್ಯನು ನನಗೆ ಎಂದೆಂದಿಗೂ ಪೂಜ್ಯನು. ಅವನ ಮಗಳಾದ ನೀನೂ ಸಹ ಹಾಗೆಯೇ ಇರುವೆ. ಓ ದೇವಯಾನೀ, ನನ್ನೊಡನೆ ನೀನು ಹೀಗೆ ಹೇಳಬಾರದು.''

|| ದೇವಯಾನ್ಯುವಾಚ ||

ಗುರುಪುತ್ರಸ್ಯ ಪುತ್ರೋ ಮೇ ನ ತು ತ್ವಮಸಿ ಮೇ ಪಿತುಃ ।
ತಸ್ಮಾನ್ಮಾನ್ಯಶ್ಚ ಪೂಜ್ಯಶ್ಚ ಮಮಾಪಿ ತ್ವಂ ದ್ವಿಜೋತ್ತಮ || ೯ ||

ಅಸುರೈರ್ಹನ್ಯಮಾನೇ ತು ಕಚೇ ತ್ವಯಿ ಪುನಃ ಪುನಃ ।
ತದಾಪ್ರಭೃತಿ ಯಾ ಪ್ರೀತಿಸ್ತಾಂ ತ್ವಮೇವ ಸ್ಮರಸ್ವ ಮೇ ||೧೦||

ಸೌಹಾರ್ದೇ ಚಾನುರಾಗೇ ಚ ವೇತ್ಥ ಮೇ ಭಕ್ತಿಮುತ್ತಮಾಂ ।
ನ ಮಾಮರ್ಹಸಿ ಧರ್ಮಜ್ಞ ತ್ಯಕ್ತುಂ ಭಕ್ತಾಮನಾಗಸಂ ||೧೧||

|| ಕಚ ಉವಾಚ ||

ಅನಿಯೋಜ್ಯೇ ನಿಯೋಗೇ ಮಾಂ ನಿಯುನಕ್ಷಿ ಶುಭವ್ರತೇ ।
ಪ್ರಸೀದ ಸುಭ್ರು ಮಹ್ಯಂ ತ್ವಂ ಗುರೋರ್ಗುರುತರಾ ಶುಭೇ ||೧೨||

---

೯. ದೇವಯಾನಿಯು ಹೇಳಿದಳು.—"ನೀನು ನನ್ನ ತಂದೆಯ ಗುರುವೆನಿಸಿದ ಅಂಗಿರಸಮುನಿಗೆ ಪುತ್ರನಾದ ಬೃಹಸ್ಪತಿಯ ಮಗನಲ್ಲವೇ? ಆದುದರಿಂದ, ಎಲೈ ಬ್ರಾಹ್ಮಣೋತ್ತಮನೇ, ನೀನೂ ಸಹ ನನಗೆ ಪೂಜಾರ್ಹನೂ ಮಾನ್ಯನೂ ಆಗಿರುವೆ.

೧೦. ರಾಕ್ಷಸರು ನಿನ್ನನ್ನು ಮರಳಿ ಮರಳಿ ಕೊಲ್ಲಲು, ಎಲೈ ಕಚನೇ, ಅಂದಿನಿಂದ ನಿನ್ನ ಮೇಲೆ ನನ್ನ ಪ್ರೀತಿಯೆಂತಿರುವುದೋ ಅದನ್ನು ನೀನೇ ಜ್ಞಾಪಿಸಿಕೋ.

೧೧. ನಿನ್ನಲ್ಲಿ ನಾನು ತೋರಿಸುತ್ತಿದ್ದ ಸ್ನೇಹ, ಪ್ರೀತಿ ಇವುಗಳ ಹಿಂದೆ ಎಂತಹ ಭಕ್ತಿಯು ಅಡಗಿದ್ದಿತು ಎಂಬುದನ್ನು ನೀನರಿತಿರುವೆ. ಓ ಧರ್ಮಜ್ಞಾ, ನಾನು ನಿನ್ನ ಭಕ್ತೆ; ನಿರಪರಾಧಿನಿ; ನನ್ನನ್ನು ಕೈ ಬಿಡಬೇಡ."

೧೨. ಕಚನು ಹೇಳಿದನು.—"ಹಲವು ಮಂಗಳ ವ್ರತಗಳನ್ನು ನೆರವೇರಿಸಿರುವ ನೀನು ನಿಷಿದ್ಧಕಾರ್ಯವನ್ನು ಮಾಡಲು ನನಗೆ ಅಪ್ಪಣೆ ಕೊಡುತ್ತಿರುವೆ. ಎಲೌ ಸುಂದರೀ, ನನಗೆ ಪ್ರಸನ್ನಳಾಗು. ನೀನು ನನ್ನ ಗುರುವಿಗಿಂತಲೂ ದೊಡ್ಡವಳು.

**ಯತ್ರೋಷಿತಂ ವಿಶಾಲಾಕ್ಷಿ ತ್ವಯಾ ಚಂದ್ರನಿಭಾನನೇ ।**
**ತತ್ರಾಹಮುಷಿತೋ ಭದ್ರೇ ಕುಕ್ಷೌ ಕಾವ್ಯಸ್ಯ ಭಾಮಿನಿ ॥೧೩॥**

**ಭಗಿನೀ ಧರ್ಮತೋ ಮೇ ತ್ವಂ ನೈವಂ ವೋಚಃ ಶುಭಾನನೇ ।**
**ಸುಖೇನಾಧ್ಯುಷಿತೋ ಭದ್ರೇ ನ ಮನ್ಯುರ್ವಿದ್ಯತೇ ಮಮ ॥೧೪॥**

**ಆಪೃಚ್ಛೇ ತ್ವಾಂ ಗಮಿಷ್ಯಾಮಿ ಶಿವಮಸ್ತ್ವಥ ಮೇ ಪಥಿ ।**
**ಅವಿರೋಧೇನ ಧರ್ಮಸ್ಯ ಸ್ಮರ್ತವ್ಯೋಽಸ್ಮಿ ಕಥಾಂತರೇ ॥೧೫॥**

**ಅಪ್ರಮತ್ತೋದ್ಯತಾ ನಿತ್ಯಮಾರಾಧಯ ಗುರುಂ ಮಮ ॥೧೬॥**

**॥ ದೇವಯಾನ್ಯುವಾಚ ॥**

**ದೈತ್ಯೈರ್ಹತಸ್ತ್ವಂ ಯದ್ಭರ್ತೃಬುಧ್ಯಾ ತ್ವಂ ರಕ್ಷಿತೋ ಮಯಾ ।**
**ಯದಿ ಮಾಂ ಧರ್ಮಕಾಮಾರ್ಥಾಂ ಪ್ರತ್ಯಾಖ್ಯಾಸ್ಯಸಿ ಧರ್ಮತಃ ॥**
**ತತಃ ಕಚ ನ ತೇ ವಿದ್ಯಾ ಸಿದ್ಧಿಮೇಷಾ ಗಮಿಷ್ಯಸಿ ॥೧೭॥**

---

೧೩-೧೪. ನಿಡುಗಣ್ಣಿನ, ಚಂದ್ರಮುಖದ ಎಲೌ ಸುಂದರೀ, ನೀನಿದ್ದ ಶುಕ್ರಾಚಾರ್ಯನ ಗರ್ಭದಲ್ಲಿಯೇ ನಾನೂ ಸಹ ಕೆಲವುಕಾಲವಿದ್ದೆನು. ಆದುದರಿಂದ ನೀನು ನನಗೆ ಧರ್ಮದಂತೆ ಒಡಹುಟ್ಟಿದವಳು. ನನ್ನೊಡನೆ ಹೀಗೆ ಹೇಳಬೇಡ. ನಿಮ್ಮ ಮನೆಯಲ್ಲಿ ನಾನು ಸುಖವಾಗಿದ್ದೆನು ; ನನಗೇನೂ ದುಃಖವಿಲ್ಲ.

೧೫. ನಾನು ಹೊರಡುವೆನು ; ನಿನ್ನನ್ನು ಬೀಳ್ಕೊಳ್ಳುವೆನು. ದಾರಿಯಲ್ಲಿ ನನಗೆ ಮಂಗಳವಾಗಲಿ. ಧರ್ಮಕ್ಕೆ ವಿರೋಧವಿಲ್ಲದಂತೆ ಯಾವ ಸಂದರ್ಭದಲ್ಲಾದರೂ ನನ್ನನ್ನು ಜ್ಞಾಪಿಸಿಕೊಳ್ಳುತ್ತಿರು.

೧೬. ಮೈಮರೆಯದೆ ಜಾಗರೂಕಳಾಗಿ ನನ್ನ ಗುರುವನ್ನು ನಿತ್ಯವೂ ಶುಶ್ರೂಷೆಮಾಡು."

೧೭. ದೇವಯಾನಿ ಹೇಳಿದಳು :—"ದೈತ್ಯರು ಕೊಲೆಮಾಡಿದಾಗ ಪತಿಯೆಂಬ ಭಾವನೆಯಿಂದ ನಿನ್ನನ್ನು ಕಾಪಾಡಿದೆನು. ಧರ್ಮದಿಂದಲೇ ನಾನು ವಿಷಯಸುಖವನ್ನು ನಿನ್ನಿಂದ ಬಯಸಿದೆನು. ಇಂತಹವಳನ್ನು ಧರ್ಮದ ಹೆಸರಿನಲ್ಲಿ ನೀನು ತಿರಸ್ಕರಿಸುವೆಯಾದರೆ, ಎಲೈ ಕಚನೇ, ನಿನಗೆ ಈ ವಿದ್ಯೆಯು ಸಿದ್ಧಿಸದೇ ಹೋಗಲಿ."

॥ ಕಚ ಉವಾಚ ॥

ಗುರುಪುತ್ರೀತಿ ಕೃತ್ವಾಹಂ ಪ್ರತ್ಯಾಖ್ಯಾಸ್ಯೇ ನ ದೋಷತಃ ।
ಗುರುಣಾ ಚಾಭ್ಯನುಜ್ಞಾತಃ ಕಾಮಮೇವಂ ಶಪಸ್ವ ಮಾಂ ॥೧೮॥

ಆರ್ಷಂ ಧರ್ಮಂ ಬ್ರುವಾಣೋಽಹಂ ದೇವಯಾನಿ ಯಥಾ ತ್ವಯಾ ।
ಶಪ್ತೋ ನಾರ್ಹೋಽಸ್ಮಿ ಕಲ್ಯಾಣಿ ಕಾಮತೋಽದ್ಯ ಚ ಧರ್ಮತಃ ॥೧೯॥

ತಸ್ಮಾದ್ಭವತ್ಯಾ ಯಃ ಕಾಮೋ ನ ತಥಾ ಸಂಭವಿಷ್ಯತಿ ।
ಋಷಿಪುತ್ರೋ ನ ತೇ ಕಶ್ಚಿಜ್ಜಾತು ಪಾಣಿಂ ಗ್ರಹೀಷ್ಯತಿ ॥೨೦॥

ಫಲಿಷ್ಯತಿ ನ ಮೇ ವಿದ್ಯಾ ತ್ವದ್ವಚಶ್ಚೇತಿ ತತ್ತಥಾ ।
ಅಧ್ಯಾಪಯಿಷ್ಯಾಮಿ ಚ ಯಂ ತಸ್ಯ ವಿದ್ಯಾ ಫಲಿಷ್ಯತಿ ॥೨೧॥

॥ ಶೌನಕ ಉವಾಚ ॥

ಏವಮುಕ್ತ್ವಾ ನೃಪಶ್ರೇಷ್ಠ ದೇವಯಾನೀಂ ಕಚ ಸ್ತಥಾ ।
ತ್ರಿದಶೇಶಾಲಯಂ ಶೀಘ್ರಂ ಜಗಾಮ ದ್ವಿಜಸತ್ತಮಃ ॥೨೨॥

---

೧೮. ಕಚನು ಹೇಳಿದನು :—“ ಗುರುಪುತ್ರಿಯೆಂಬ ಕಾರಣದಿಂದಲೇ ನಾನು ನಿನ್ನನ್ನು ತಿರಸ್ಕರಿಸುತ್ತಿರುವೆನು ; ಮತ್ತಾವ ದೋಷದಿಂದಲೂ ಅಲ್ಲ. ನನಗೆ ಗುರುವು ಅಪ್ಪಣೆಕೊಟ್ಟಿದ್ದಾನೆ. ನೀನು ಬೇಕಾದಂತೆ ನನ್ನನ್ನು ಶಪಿಸು.

೧೯. ಎಲೌ ದೇವಯಾನಿ, ಋಷಿಗಳು ಹೇಳಿರುವ ಧರ್ಮವನ್ನು ನಾನು ನಿನಗೆ ಹೇಳಿದೆನು. ಆದುದರಿಂದ ಧರ್ಮದಿಂದಲಾಗಲಿ, ಕಾಮದಿಂದಲಾಗಲಿ ನಿನ್ನ ಶಾಪಕ್ಕೆ ನಾನು ಅರ್ಹನಲ್ಲ.

೨೦. ಆದುದರಿಂದ ನಿನ್ನ ಇಷ್ಟದಂತೆ ನಿನ್ನ ಕೋರಿಕೆಯು ನಡೆಯುವುದಿಲ್ಲ. ಋಷಿಪುತ್ರನಾವನೂ ನಿನ್ನನ್ನು ಎಂದಿಗೂ ಪಾಣಿಗ್ರಹಣಮಾಡಿಕೊಳ್ಳನು.

೨೧. ನೀನು ಹೇಳಿದಂತೆಯೇ ಆಗಲಿ. ನನಗೆ ಈ ವಿದ್ಯೆಯು ಫಲಿಸುವುದಿಲ್ಲ. ಆದರೆ ನಾನು ಹೇಳಿಕೊಟ್ಟವನಿಗೆ ಇದು ಸಿದ್ಧಿಸುವುದು.”

೨೨. ಶೌನಕಮುನಿ ಹೇಳಿದನು :—ದ್ವಿಜಶ್ರೇಷ್ಠನಾದ ಕಚನು ದೇವಯಾನಿಗೆ ಹೀಗೆ ಹೇಳಿ ಬೇಗನೆ ಸ್ವರ್ಗಲೋಕಕ್ಕೆ ಹೋದನು.

**ತಮಾಗತಮಭಿಪ್ರೇಕ್ಷ್ಯ ದೇವಾಃ ಸೇಂದ್ರಪುರೋಗಮಾಃ ।**
**ಬೃಹಸ್ಪತಿಂ ಸಭಾಜ್ಯೇದಂ ಕಚಮಾಹುರ್ಮುದಾನ್ವಿತಾಃ ॥೨೩॥**

**॥ ದೇವಾ ಊಚುಃ ॥**

**ತ್ವಂ ಕಚಾಸ್ಮದ್ಧಿತಂ ಕರ್ಮ ಕೃತವಾನ್ಮಹದದ್ಭುತಂ ।**
**ನ ತೇ ಯಶಃ ಪ್ರಣಶಿತಾ ಭಾಗಭಾಕ್ಚ ಭವಿಷ್ಯಸಿ ॥೨೪॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸೋಮವಂಶೇ ಯಯಾತಿಚರಿತೇ ಷಡ್ವಿಂಶೋಽಧ್ಯಾಯಃ**

---

೨೩. ಇಂದ್ರಾದಿ ದೇವತೆಗಳು ಅವನು ಬಂದುದನ್ನು ನೋಡಿ, ಬೃಹಸ್ಪತಿಯನ್ನು ಗೌರವಿಸಿ ಸಂತೋಷದಿಂದ ಕಚನಿಗೆ ಹೇಳಿದರು.

೨೪. ದೇವತೆಗಳು ಹೇಳಿದರು:—ಎಲೈ ಕಚಾ, ನಮ್ಮ ಹಿತಕ್ಕಾಗಿ ನೀನು ಅದ್ಭುತವಾದ ಮಹತ್ಕಾರ್ಯವನ್ನು ಮಾಡಿದೆ. ನಿನ್ನ ಕೀರ್ತಿ ಅಳಿಯದಿರಲಿ. ನಿನಗೆ ಯಜ್ಞಗಳಲ್ಲಿ ಭಾಗವು ಸಲ್ಲಲಿ.

## ಅಧ್ಯಾಯದ ಸಾರಾಂಶ

ಕಚನಿಗೂ ದೇವಯಾನಿಗೂ ನಡೆದ ಸಂಭಾಷಣವನ್ನು ಈ ಅಧ್ಯಾಯವು ತಿಳಿಸುವುದು.

ಗುರುವಿನ ಅಪ್ಪಣೆ ಪಡೆದು ಕಚನು ಹೊರಡಲು, ದೇವಯಾನಿಯು ತನ್ನನ್ನು ಪಾಣಿಗ್ರಹಣಮಾಡಿಕೊಳ್ಳಬೇಕೆಂದು ಅವನನ್ನು ಬೇಡುವಳು. ಗುರುಪುತ್ರಿಯಾದುದರಿಂದ ತನಗೆ ಅವಳು ಪೂಜ್ಯಳೆಂದು ಹೇಳಿ ಅವನು ಒಪ್ಪದಿರುವನು. ಹಲವು ಬಗೆಗಳಿಂದ ಕೇಳಿಕೊಂಡರೂ ದೇವಯಾನಿಯ ಇಷ್ಟವು ನೆರವೇರಲಿಲ್ಲ. ಬಳಿಕ ಕೋಪಗೊಂಡು, ಅವನಿಗೆ ಸಂಜೀವನೀವಿದ್ಯೆಯು ಫಲಿಸದಿರಲೆಂದು ಅವಳು ಶಾಪ ಕೊಟ್ಟಳು. ಋಷಿಪುತ್ರನಾವನೂ ಅವಳನ್ನು ಮದುವೆಯಾಗದಿರಲೆಂದು ಕಚನೂ ಪ್ರತಿಶಾಪವಿತ್ತನು. ತಾನು ಕಲಿಸಿಕೊಟ್ಟವನಿಗೆ ಆ ವಿದ್ಯೆ ಫಲಿಸುವುದೆಂದು ಹೇಳಿ ಅವನು ತನ್ನ ಸ್ಥಳಕ್ಕೆ ಹೊರಟು ಹೋದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಚಂದ್ರವಂಶ ವರ್ಣನದೊಳಗೆ ಯಯಾತಿ ಚರಿತದಲ್ಲಿ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು

## ಅಥ ಶ್ರೀಮತ್ಸ್ಯಮಹಾಪುರಾಣೇ ಸಪ್ತವಿಂಶೋಽಧ್ಯಾಯಃ

॥ ಶೌನಕ ಉವಾಚ ॥

ಕೃತವಿದ್ಯೇ ಕಚೇ ಪ್ರಾಪ್ತೇ ಹೃಷ್ಟರೂಪಾ ದಿವೌಕಸಃ ।
ಕಚಾದವೇತ್ಯ ತಾಂ ವಿದ್ಯಾಂ ಕೃತಾರ್ಥಾ ಭರತರ್ಷಭ ॥ ೧ ॥

ಸರ್ವ ಏವ ಸಮಾಗಮ್ಯ ಶತಕ್ರತುಮಥಾಬ್ರುವನ್ ।
ಕಾಲಸ್ತ್ವದ್ವಿಕ್ರಮಸ್ಯಾದ್ಯ ಜಹಿ ಶತ್ರೂನ್ ಪುರಂದರ ॥ ೨ ॥

ಏವಮುಕ್ತಸ್ತು ಸಹ ತೈಸ್ತ್ರಿದಶೈರ್ಮಘವಾಂಸ್ತದಾ ।
ತಥೇತ್ಯುಕ್ತ್ವೋಪಚಕ್ರಾಮ ಸೋಽಪಶ್ಯದ್ವಿಪಿನೇ ಸ್ತ್ರಿಯಃ ॥ ೩ ॥

ಕ್ರೀಡಂತೀನಾಂ ತು ಕನ್ಯಾನಾಂ ವನೇ ಚೈತ್ರರಥೋಪಮೇ ।
ವಾಯುರ್ಭೂತಃ ಸ ವಸ್ತ್ರಾಣಿ ಸರ್ವಾಣ್ಯೇವ ವ್ಯಮಿಶ್ರಯತ್ ॥ ೪ ॥

---

೧. ಶೌನಕಮಹರ್ಷಿ ಹೇಳಿದನು:—ಭರತ ವಂಶದಲ್ಲಿ ಶ್ರೇಷ್ಠನಾದ ಎಲೈ ರಾಜನೇ, ವಿದ್ಯಾಭ್ಯಾಸವನ್ನು ಮುಗಿಸಿಕೊಂಡು ಕಚನು ಬರಲು ದೇವತೆಗಳು ಸಂತುಷ್ಟರಾಗಿ ಅವನಿಂದ ಆ ಸಂಜೀವನೀ ವಿದ್ಯೆಯನ್ನು ಕಲಿತು ಕೃತಾರ್ಥರಾದರು.

೨. ಅವರೆಲ್ಲರೂ ಒಟ್ಟಿಗೆ ಇಂದ್ರನ ಬಳಿಗೆ ಬಂದು "ಎಲೈ ಪುರಂದರನೆ, ನಿನ್ನ ಪರಾಕ್ರಮವನ್ನು ತೋರಿಸಲು ಇದು ತಕ್ಕ ಸಮಯ. ಶತ್ರುಗಳನ್ನು ಧ್ವಂಸ ಮಾಡು'' ಎಂದರು.

೩. ದೇವತೆಗಳು ಇಂತೆನಲು, ಇಂದ್ರನು ಅದಕ್ಕೆ ಒಪ್ಪಿ ಅವರೊಡನೆ ಕೂಡಿ ದೈತ್ಯರ ಮೇಲೆ ಯುದ್ಧಕ್ಕಾಗಿ ಹೊರಟನು. ಕಾಡಿನಲ್ಲಿ ಅನೇಕ ಸ್ತ್ರೀಯರನ್ನು ಕಂಡನು.

೪. ಕುಬೇರನ ಉದ್ಯಾನದಂತಿದ್ದ ವನದಲ್ಲಿ ಆ ಕನ್ಯೆಯರು ನೀರಾಟ ವಾಡುತ್ತಿರಲು, ಅವನು ವಾಯುರೂಪವನ್ನು ತಾಳಿ ಅವರ ಸೀರೆಗಳನ್ನೆಲ್ಲಾ ಬೆರಸಿಬಿಟ್ಟನು.

**ತತೋ ಜಲಾತ್ಸಮುತ್ತೀರ್ಯ ತಾಃ ಕನ್ಯಾಸ್ಸಹಿತಾಸ್ತದಾ ।**
**ವಸ್ತ್ರಾಣಿ ಜಗೃಹುಸ್ತಾನಿ ಯಥಾಸಂಸ್ಥಾನ್ಯನೇಕಶಃ ॥ ೫ ॥**

**ತತ್ರ ವಾಸೋ ದೇವಯಾನ್ಯಾಃ ಶರ್ಮಿಷ್ಠಾ ಜಗೃಹೇ ತದಾ ।**
**ವ್ಯತಿಕ್ರಮಮಜಾನಂತೀ ದುಹಿತಾ ವೃಷಪರ್ವಣಃ ॥ ೬ ॥**

**ತತಸ್ತಯೋರ್ಮಿಥಸ್ತತ್ರ ವಿರೋಧಃ ಸಮಜಾಯತ ।**
**ದೇವಯಾನ್ಯಾಶ್ಚ ರಾಜೇಂದ್ರ ಶರ್ಮಿಷ್ಠಾಯಾಶ್ಚ ತತ್ಕೃತೇ ॥ ೭ ॥**

**॥ ದೇವಯಾನ್ಯುವಾಚ ॥**

**ಕಸ್ಮಾದ್ಗೃಹ್ಣಾಸಿ ಮೇ ವಸ್ತ್ರಂ ಶಿಷ್ಯಾ ಭೂತ್ವಾ ಮಮಾಸುರಿ ।**
**ಸಮುದಾಚಾರಹೀನಾಯಾ ನ ತೇ ಶ್ರೇಯೋ ಭವಿಷ್ಯತಿ ॥ ೮ ॥**

**॥ ಶರ್ಮಿಷ್ಠೋವಾಚ ॥**

**ಆಸೀನಂ ಚ ಶಯಾನಂ ಚ ಪಿತಾ ತೇ ಪಿತರಂ ಮಮ ।**
**ಸ್ತೌತಿ ಪೃಚ್ಛತಿ ಚಾಭೀಕ್ಷ್ಣಂ ನೀಚಸ್ಥಃ ಸುವಿನೀತವತ್ ॥ ೯ ॥**

---

೫. ಬಳಿಕ ಆ ಯುವತಿಯರು ಒಟ್ಟಿಗೆ ನೀರಿನಿಂದೆದ್ದು ಬಂದು ತಮ್ಮ ತಮ್ಮ ವಸ್ತ್ರಗಳನ್ನು ಗುರುತಿನ ಮೇಲೆ ತೆಗೆದುಕೊಂಡರು.

೬. ಆ ಗಡಿಬಿಡಿಯಲ್ಲಿ ವೃಷಪರ್ವನ ಮಗಳಾದ ಶರ್ಮಿಷ್ಠೆಯು ದೇವಯಾನಿಯ ಸೀರೆಯನ್ನು ತೆಗೆದುಕೊಂಡಳು. ಅದು ತಿಳಿಯದೇ ನಡೆದ ತಪ್ಪು.

೭. ಎಲೈ ರಾಜನೇ, ಬಳಿಕ ದೇವಯಾನಿ ಮತ್ತು ಶರ್ಮಿಷ್ಠೆಯರಿಬ್ಬರಿಗೂ ಪರಸ್ಪರ ಕಲಹವು ಹುಟ್ಟಿತು.

೮. ದೇವಯಾನಿ ಹೇಳಿದಳು:—"ಎಲೇ ರಾಕ್ಷಸಿ, ನೀನು ನನ್ನ ಶಿಷ್ಯಳು. ನನ್ನ ಸೀರೆಯನ್ನೇಕೆ ತೆಗೆದುಕೊಳ್ಳುತ್ತೀಯೆ? ಒಳ್ಳೆಯ ನಡತೆಯೇ ನಿನಗೆ ತಿಳಿಯದು. ನಿನಗೆ ಒಳ್ಳೆಯದಾಗುವುದಿಲ್ಲ."

೯. ಶರ್ಮಿಷ್ಠೆಯು ಹೇಳಿದಳು:—"ನನ್ನ ತಂದೆ ನಿಂತಿರಲಿ, ಮಲಗಿರಲಿ, ನಿನ್ನ ತಂದೆಯು ಬಂದು, ವಿನಯದಿಂದ ಕೆಳಗೆ ನಿಂತು, ಅವನನ್ನು ಪದೇ ಪದೇ ಹೊಗಳುತ್ತಾನೆ, ಕೇಳುತ್ತಾನೆ.

**ಯಾಚತಸ್ತ್ವಂ ಚ ದುಹಿತಾ ಸ್ತುವತಃ ಪ್ರತಿಗೃಹ್ಣತಃ ।**
**ಸುತಾಹಂ ಸ್ತೂಯಮಾನಸ್ಯ ದದತೋ ನ ತು ಗೃಹ್ಣತಃ ॥೧೦॥**

**ಅನಾಯುಧಾ ಸಾಯುಧಾಯಾಃ ಕಿಂ ತ್ವಂ ಕುಪ್ಯಸಿ ಭಿಕ್ಷುಕಿ ।**
**ಲಪ್ಸ್ಯಸೇ ಪ್ರತಿಯೋದ್ಧಾರಂ ನ ಚ ತ್ವಾಂ ಗಣಯಾಮ್ಯಹಂ ॥೧೧॥**

**॥ ಶೌನಕ ಉವಾಚ ॥**

**ಸಾ ವಿಸ್ಮಯಂ ದೇವಯಾನೀಂ ಗತಾಂ ಸಕ್ತಾಂ ಚ ವಾಸಸಿ ।**
**ಶರ್ಮಿಷ್ಠಾ ಪ್ರಾಕ್ಷಿಪತ್ಕೂಪೇ ತತಃ ಸ್ವಪುರಮಾವಿಶತ್ ॥೧೨॥**

**ಹತೇಯಮಿತಿ ವಿಜ್ಞಾಯ ಶರ್ಮಿಷ್ಠಾ ಪಾಪನಿಶ್ಚಯಾ ।**
**ಅನವೇಕ್ಷ್ಯ ಯಯೌ ತಸ್ಮಾತ್ಕ್ರೋಧವೇಗಪರಾಯಣಾ ॥೧೩॥**

**ಅಥ ತಂ ದೇಶಮಭ್ಯಾಗಾದ್ಯಯಾತಿರ್ನಹುಷಾತ್ಮಜಃ ।**
**ಶ್ರಾಂತಯುಗ್ಯಃ ಶ್ರಾಂತರೂಪೋ ಮೃಗಲಿಪ್ಸುಃ ಪಿಪಾಸಿತಃ ॥೧೪॥**

---

೧೦. ನಿನ್ನ ತಂದೆಯು ಬೇಡುವವನು; ಹೊಗಳುವವನು ಮತ್ತು ದಾನ ತೆಗೆದುಕೊಳ್ಳುವವನು. ನನ್ನ ತಂದೆಯಾದರೋ ಹೊಗಳಿಸಿಕೊಳ್ಳುವವನು; ದಾನ ಮಾಡುವವನು; ಎಂದಿಗೂ ತೆಗೆದುಕೊಳ್ಳತಕ್ಕವನಲ್ಲ.

೧೧. ಎಲೆ ತಿರುಕಿ, ಹಿರಿತನದ ಸಾಧನವೇನೂ ಇಲ್ಲದ ನೀನು ಅವರಿಂದ ತುಂಬಿರುವ ನನ್ನ ಮೇಲೆ ಕೋಪಿಸಿಕೊಳ್ಳುವೆಯಾ? ನಿನಗೆ ತಕ್ಕ ಇದಿರಾಳಿಯನ್ನು ಕಾಣುವೆ. ನಾನು ನಿನ್ನನ್ನು ಲೆಕ್ಕಿಸುವುದಿಲ್ಲ."

೧೨. ಶೌನಕಮುನಿ ಹೇಳಿದನು:—ದೇವಯಾನಿಯು ಬೆರಗಾದಳು. ಒದ್ದೆ ಬಟ್ಟೆಯು ಅವಳ ಮೈಗೆ ಅಂಟಿಕೊಂಡಿತ್ತು. ಅವಳನ್ನು ಶರ್ಮಿಷ್ಠೆಯು ಬಾವಿಯಲ್ಲಿ ನೂಕಿ ತನ್ನ ಪಟ್ಟಣಕ್ಕೆ ಹೋದಳು.

೧೩. ಬಲು ಸಿಟ್ಟಿನ ವೇಗದಿಂದ ಇಂತಹ ಪಾಪಕಾರ್ಯವನ್ನೆಸಗಿ, ದೇವಯಾನಿಯು ಸತ್ತಳೆಂದು ತಿಳಿದು, ಶರ್ಮಿಷ್ಠೆಯು ಆ ಕಡೆ ಕೂಡ ತಿರುಗಿ ನೋಡದೆ ಹೊರಟುಹೋದಳು.

೧೪. ಬಳಿಕ ಜಿಂಕೆಯನ್ನು ಬೆನ್ನಟ್ಟಿಕೊಂಡು ನಹುಷಪುತ್ರನಾದ ಯಯಾತಿ ಮಹಾರಾಜನು ಆ ಸ್ಥಳಕ್ಕೆ ಬಂದನು. ಅವನ ತೇರಿನ ಕುದುರೆಗಳು ಬಳಲಿದ್ದುವು. ಅವನ ರೂಪವು ಕಳೆಗುಂದಿತ್ತು. ಅವನು ಬಾಯಾರಿಕೆಯಿಂದ ತಪಿಸುತ್ತಿದನು.

**ನಾಹುಷಿಃ ಪ್ರೇಕ್ಷಮಾಣೋ ಹಿ ಸ ನಿಪಾನೇ ಗತೋದಕೇ ।**
**ದದರ್ಶ ಕನ್ಯಾಂ ತಾಂ ತತ್ರ ದೀಪ್ತಾಮಗ್ನಿಶಿಖಾಮಿವ ॥೧೫॥**

**ತಾಮಪೃಚ್ಛತ್ಸ ದೃಷ್ಟ್ವೈವ ಕನ್ಯಾಮಮರವರ್ಣಿನೀಂ ।**
**ಸಾಂತ್ವಯಿತ್ವಾ ನೃಪಶ್ರೇಷ್ಠಃ ಸಾಮ್ನಾ ಪರಮವಲ್ಗುನಾ ॥೧೬॥**

**ಕಾ ತ್ವಂ ಚಾರುಮುಖೀ ಶ್ಯಾಮಾ ಸುಮೃಷ್ಟಮಣಿಕುಂಡಲಾ ।**
**ದೀರ್ಘಂ ಧ್ಯಾಯಸಿ ಚಾತ್ಯರ್ಥಂ ಕಸ್ಮಾಚ್ಛ್ವಸಿಷಿ ಚಾತುರಾ ॥೧೭॥**

**ಕಥಂ ಚ ಪತಿತಾ ಹ್ಯಸ್ಮಿನ್ ಕೂಪೇ ವೀರುತ್ತೃಣಾವೃತೇ ।**
**ದುಹಿತಾ ಚೈವ ಕಸ್ಯ ತ್ವಂ ವದ ಸರ್ವಂ ಸುಮಧ್ಯಮೇ ॥೧೮॥**

**॥ ದೇವಯಾನ್ಯುವಾಚ ॥**

**ಯೋಽಸೌ ದೇವೈರ್ಹತಾನ್ ದೈತ್ಯಾನುತ್ಥಾಪಯತಿ ವಿದ್ಯಯಾ ।**
**ತಸ್ಯ ಶುಕ್ರಸ್ಯ ಕನ್ಯಾಹಂ ತ್ವಂ ಮಾಂ ನೂನಂ ನ ಬುಧ್ಯಸೇ ॥೧೯॥**

---

೧೫. ನೀರಿಲ್ಲದ ಆ ಹಾಳುಬಾವಿಯಲ್ಲಿ ಯಯಾತಿಯು ಬಗ್ಗಿ ನೋಡಿದನು. ಬೆಂಕಿಯ ಕುಡಿಯಂತೆ ಕಾಂತಿಯುಕ್ತಳಾದ ಆ ದೇವಯಾನಿಯನ್ನು ಅಲ್ಲಿ ಅವನು ಕಂಡನು.

೧೬. ರಾಜಶ್ರೇಷ್ಠನು ದೇವಕನ್ನಿಕೆಯಂತಿರುವ ಆ ಚಲುವೆಯನ್ನು ನೋಡಿದ ಕೂಡಲೇ ಬಹಳ ಇಂಪಾದ ಮಾತುಗಳಿಂದ ಸಂತೈಸಿ ಅವಳನ್ನು ಕೇಳಿದನು.

೧೭-೧೮. "ಸುಂದರಮುಖವೂ, ಮಧ್ಯಯೌವನವೂ, ಸಾಣೆಹಿಡಿದ ಮಣಿಕುಂಡಲವೂ ಶೋಭಿಸುವ ನೀನಾರು? ಬಹಳವಾಗಿ ಯೋಚಿಸುತ್ತಿರುವೆ. ಏತಕ್ಕಾಗಿ ಇಷ್ಟೊಂದು ವ್ಯಾಕುಲತೆಯಿಂದ ನಿಟ್ಟುಸಿರುಬಿಡುತ್ತಿದ್ದೀಯೆ? ಹುಲ್ಲೂ, ಬಳ್ಳಿಗಳೂ ಮುಚ್ಚಿಕೊಂಡಿರುವ ಈ ಬಾವಿಯಲ್ಲಿ ಹೇಗೆ ಬಿದ್ದೆ? ನೀನು ಯಾರ ಮಗಳು? ಎಲೌ ಸುಂದರೀ, ಎಲ್ಲವನ್ನೂ ಹೇಳು."

೧೯. ದೇವಯಾನಿ ಹೇಳಿದಳು.—"ದೇವತೆಗಳು ಸಂಹರಿಸಿದ ದೈತ್ಯರನ್ನು ತನ್ನ ವಿದ್ಯಾಬಲದಿಂದ ಯಾವನು ಬದುಕಿಸುತ್ತಿರುವನೋ ಆ ಶುಕ್ರಾಚಾರ್ಯನ ಮಗಳು ನಾನು. ನೀನು ನನ್ನನ್ನು ಕಂಡಿಲ್ಲ; ನಿಜ.

**ಏಷ ಮೇ ದಕ್ಷಿಣೋ ರಾಜನ್ ಪಾಣಿಸ್ತಾಮ್ರನಖಾಂಗುಲಿಃ ।**
**ಸಮುದ್ಧರ ಗೃಹೀತ್ವಾ ಮಾಂ ಕುಲೀನ ಸ್ತ್ವಂ ಹಿ ಮೇ ಮತಃ ॥೨೦॥**

**ಜಾನಾಮಿ ತ್ವಾಂ ಚ ಸಂಶಾಂತಂ ವೀರ್ಯವಂತಂ ಯಶಸ್ವಿನಂ ।**
**ತಸ್ಮಾನ್ಮಾಂ ಪತಿತಂ ಕೂಪಾದಸ್ಮಾದುದ್ಧರ್ತುಮರ್ಹಸಿ ॥೨೧॥**

**॥ ಶೌನಕ ಉವಾಚ ॥**

**ತಾಮಥ ಬ್ರಾಹ್ಮಣೀಂ ಸ್ತ್ರೀಂ ಚ ವಿಜ್ಞಾಯ ನಹುಷಾತ್ಮಜಃ ।**
**ಗೃಹೀತ್ವಾ ದಕ್ಷಿಣೇ ಪಾಣಾವುಜ್ಜಹಾರ ತತೋಽವಟಾತ್ ॥೨೨॥**

**ಉದ್ಧೃತ್ಯ ಚೈನಾಂ ತರಸಾ ತಸ್ಮಾತ್ಕೂಪಾನ್ನರಾಧಿಪಃ ।**
**ಆಮಂತ್ರಯಿತ್ವಾ ಸುಶ್ರೋಣೀಂ ಯಯಾತಿಃ ಸ್ವಪುರಂ ಯಯೌ ॥೨೩॥**

**ಗತೇ ತು ನಾಹುಷೇ ತಸ್ಮಿನ್ ದೇವಯಾನ್ಯಪಿ ನಿಂದಿತಾ ।**
**ಉವಾಚ ಶೋಕಸಂತಪ್ತಾ ಘೂರ್ಣಿಕಾಮಾಗತಾಂ ಪುನಃ ॥೨೪॥**

---

೨೦. ಓ ರಾಜಾ, ಕೆಂಪಾದ ಉಗುರುಗಳ ಕಾಂತಿಯಿಂದ ಬೆರಳುಗಳು ಶೋಭಿಸುವ ನನ್ನ ಬಲಗೈಯನ್ನು ಹಿಡಿದುಕೋ. ನನ್ನನ್ನು ಉದ್ಧರಿಸು. ನೀನು ಸದ್ವಂಶದಲ್ಲಿ ಹುಟ್ಟಿದವನೆಂದು ನನಗೆ ತೋರುತ್ತದೆ.

೨೧. ನೀನು ಜಿತೇಂದ್ರಿಯನೂ, ಪರಾಕ್ರಮಶಾಲಿಯೂ, ಕೀರ್ತಿವಂತನೂ ಆಗಿರುವೆ; ಆದುದರಿಂದ ಬಾವಿಯಲ್ಲಿ ಬಿದ್ದಿರುವ ನನ್ನನ್ನು ಮೇಲಕ್ಕೆತ್ತು.''

೨೨. ಶೌನಕಮಹರ್ಷಿ ಹೇಳಿದನು.—ಯಯಾತಿ ರಾಜನು ಅವಳನ್ನು ಬ್ರಾಹ್ಮಣ ಸ್ತ್ರೀಯೆಂದು ತಿಳಿದು, ಬಲಗೈಯನ್ನು ಹಿಡಿದು, ಆ ಹಾಳು ಬಾವಿಯಿಂದ ಮೇಲಕ್ಕೆತ್ತಿದನು.

೨೩. ಹೀಗೆ ಆ ಸುಂದರಿಯನ್ನು ಬೇಗನೆ ಬಾವಿಯಿಂದೆತ್ತಿ, ಭೂಪತಿಯು ಅವಳನ್ನು ಬೀಳ್ಕೊಂಡು ತನ್ನ ನಗರಕ್ಕೆ ಹೋದನು.

೨೪. ಅತ್ತ ಯಯಾತಿರಾಜನು ಹೋಗಲು, ಶರ್ಮಿಷ್ಠೆಯ ನಿಂದೆಗೆ ಗುರಿಯಾದ ದೇವಯಾನಿಯು ದುಃಖದಿಂದ ಸಂತಪ್ತಳಾದಳು. ಮತ್ತು ತನ್ನಲ್ಲಿಗೆ ಬಂದ ಘೂರ್ಣಿಕೆಯೆಂಬ ಗೆಳತಿಗೆ ಹೀಗೆ ಹೇಳಿದಳು.

॥ ದೇವಯಾನ್ಯುವಾಚ ॥

ತ್ವರಿತಂ ಘೂರ್ಣಿಕೇ ಗಚ್ಛ ಸರ್ವಮಾಚಕ್ಷ್ವ ಮೇ ಪಿತುಃ ।
ನೇದಾನೀಂ ತುಂ ಪ್ರವೇಕ್ಷ್ಯಾಮಿ ನಗರಂ ವೃಷಪರ್ವಣಃ ॥೨೫॥

॥ ಶೌನಕ ಉವಾಚ ॥

ಸಾ ತು ವೈ ತ್ವರಿತಂ ಗತ್ವಾ ಘೂರ್ಣಿಕಾsಸುರಮಂದಿರಂ ।
ದೃಷ್ಟ್ವಾ ಕಾವ್ಯಮುವಾಚೇದಂ ಕಂಪಮಾನಾ ವಿಚೇತನಾ ॥೨೬॥
ಆಚಖ್ಯೌ ಚ ಮಹಾಭಾಗಾ ದೇವಯಾನೀ ವನೇ ಹತಾ ।
ಶರ್ಮಿಷ್ಠಯಾ ಮಹಾಪ್ರಾಜ್ಞ ದುಹಿತ್ರಾ ವೃಷಪರ್ವಣಃ ॥೨೭॥
ಶ್ರುತ್ವಾ ದುಹಿತರಂ ಕಾವ್ಯಸ್ತದಾ ಶರ್ಮಿಷ್ಠಯಾ ಹತಾಂ ।
ತ್ವರಯಾ ನಿರ್ಯಯೌ ದುಃಖಾನ್ಮಾರ್ಗಮಾಣಃ ಸುತಾಂ ವನೇ ॥೨೮॥
ದೃಷ್ಟ್ವಾ ದುಹಿತರಂ ಕಾವ್ಯೋ ದೇವಯಾನೀಂ ತಪೋವನೇ ।
ಬಾಹುಭ್ಯಾಂ ಸಂಪರಿಷ್ವಜ್ಯ ದುಃಖಿತೋ ವಾಕ್ಯಮಬ್ರವೀತ್ ॥೨೯॥

---

೨೫. ದೇವಯಾನಿ ಹೇಳಿದಳು.—"ಎಲೌ ಘೂರ್ಣಿಕೆ, ಬೇಗನೆ ಹೋಗಿ ನಮ್ಮ ತಂದೆಗೆ ಎಲ್ಲವನ್ನೂ ಹೇಳು. ನಾನಂತೂ ವೃಷಪರ್ವನ ಪಟ್ಟಣವನ್ನು ಪ್ರವೇಶಿಸುವುದಿಲ್ಲ."

೨೬. ಶೌನಕಋಷಿ ಹೇಳಿದನು:—ಘೂರ್ಣಿಕೆಯು ರಾಕ್ಷಸರ ರಾಜನಾದ ವೃಷಪರ್ವನ ಮನೆಗೆ ಬೇಗ ಹೋಗಿ, ಶುಕ್ರಾಚಾರ್ಯನನ್ನು ಕಂಡು, ಮೈಮೇಲೆ ಪ್ರಜ್ಞೆಯಿಲ್ಲದೆ ನಡುಗುತ್ತ ಹೇಳಿದಳು.

೨೭. "ಎಲೈ ಸಕಲ ಶಾಸ್ತ್ರಜ್ಞನೆ, ವೃಷಪರ್ವನ ಮಗಳಾದ ಶರ್ಮಿಷ್ಠೆಯಿಂದ ಕೀರ್ತಿವಂತಳಾದ ದೇವಯಾನಿಯು ಕಾಡಿನಲ್ಲಿ ಹತಳಾದಳು."

೨೮. ಶರ್ಮಿಷ್ಠೆಯು ತನ್ನ ಮಗಳನ್ನು ಕೊಂದಳೆಂದು ಕೇಳಿ, ಶುಕ್ರಾಚಾರ್ಯನು ಕೂಡಲೆ ಹೊರಟು ಅವಳನ್ನು ಕಾಡಿನಲ್ಲಿ ದುಃಖದಿಂದ ಹುಡುಕಿದನು.

೨೯. ತಪೋವನದಲ್ಲಿ ತನ್ನ ಮಗಳಾದ ದೇವಯಾನಿಯನ್ನು ಕಂಡು, ತೋಳುಗಳಿಂದ ಬಿಗಿದಪ್ಪಿ, ದುಃಖಿತನಾಗಿ ಅವನಿಂತೆಂದನು.

ಆತ್ಮದೋಷೈರ್ನಿಯಚ್ಛಂತಿ ಸರ್ವೇ ದುಃಖಸುಖೇ ಜನಾಃ ।
ಮನ್ಯೇ ದುಶ್ಚರಿತಂ ತಸ್ಮಿಂಸ್ತಸ್ಯೇಯಂ ನಿಷ್ಕೃತಿಃ ಕೃತಾ ॥೩೦॥

॥ ದೇವಯಾನ್ಯುವಾಚ ॥

ನಿಷ್ಕೃತಿರ್ವಾಸ್ತು ವಾ ಮಾಸ್ತು ಶೃಣುಷ್ವಾವಹಿತೋ ಮಮ ।
ಶರ್ಮಿಷ್ಠಯಾ ಯದುಕ್ತಾಸ್ಮಿ ದುಹಿತ್ರಾ ವೃಷಪರ್ವಣಃ ॥೩೧॥

ಸತ್ಯಂ ಕಿಲೈತತ್ಸಾ ಪ್ರಾಹ ದೈತ್ಯಾನಾಮಸ್ಮಿ ಗಾಯನಾ ।
ಏವಂ ಹಿ ಮೇ ಕಥಯತಿ ಶರ್ಮಿಷ್ಠಾ ವಾರ್ಷಪರ್ವಣೀ ॥೩೨॥

ವಚನಂ ತೀಕ್ಷ್ಣಪರುಷಂ ಕ್ರೋಧರಕ್ತೇಕ್ಷಣಾ ಭೃಶಂ ।
ಸ್ತುವತೋ ದುಹಿತಾಸಿ ತ್ವಂ ಯಾಚತಃ ಪ್ರತಿಗೃಹ್ಣತಃ ॥೩೩॥

ಸುತಾಹಂ ಸ್ತೂಯಮಾನಸ್ಯ ದದತೋಽಪ್ರತಿಗೃಹ್ಣತಃ ।
ಇತಿ ಮಾಮಾಹ ಶರ್ಮಿಷ್ಠಾ ದುಹಿತಾ ವೃಷಪರ್ವಣಃ ॥
ಕ್ರೋಧಸಂರಕ್ತನಯನಾ ದರ್ಪಪೂರ್ಣಾನನಾ ತತಃ ॥೩೪॥

---

೩೦. ಜನರೆಲ್ಲರೂ ತಮ್ಮ ತಮ್ಮ ಕರ್ಮದೋಷದಿಂದ ದುಃಖದಲ್ಲೋ ಸುಖದಲ್ಲೋ ಕಟ್ಟುಬೀಳುತ್ತಾರೆ. ನಿನ್ನದೇನೋ ಆ ಸಂಬಂಧದಲ್ಲಿ ಪಾಪವಿದ್ದಿರಬೇಕು. ಅದರ ಪ್ರಾಯಶ್ಚಿತ್ತವು ಈ ರೀತಿಯಾಯಿತು.

೩೧. ದೇವಯಾನಿ ಹೇಳಿದಳು:—"ಪ್ರಾಯಶ್ಚಿತ್ತವಾಗಲಿ; ಆಗದಿರಲಿ. ವೃಷಪರ್ವನ ಮಗಳಾದ ಶರ್ಮಿಷ್ಠೆಯು ನನಗೇನು ಹೇಳಿದಳೋ ಅದನ್ನು ಗಮನಿಸಿ ಕೇಳು.

೩೨-೩೪. ಆ ರಾಕ್ಷಸರಾಜನ ಮಗಳು, ಕೋಪದಿಂದ ಕಣ್ಣು ಕೆಂಪೇರಿರಲು, ತೀಕ್ಷ್ಣವಾಗಿಯೂ ಕ್ರೂರವಾಗಿಯೂ ಹೀಗೆಂದಳು. ಇದು ನಿಜ. "ದೈತ್ಯರು ನನ್ನ ಕೀರ್ತಿಯನ್ನು ಗಾನಮಾಡುವರು. ನಿನ್ನ ತಂದೆ ಹೊಗಳುಭಟ್ಟ; ಯಾಚಕ; ದಾನ ತೆಗೆದುಕೊಳ್ಳುವವ. ನನ್ನ ತಂದೆಯಾದರೋ ಹೊಗಳಿಸಿಕೊಳ್ಳತಕ್ಕವನು. ದಾನ ಮಾಡುವವನು. ಎಂದಿಗೂ ತೆಗೆದುಕೊಳ್ಳುವವನಲ್ಲ." ಅಪ್ಪಾ, ಮುಖದಲ್ಲಿ ದರ್ಪವು ತುಂಬಿ ತುಳುಕಾಡುತ್ತಿರಲು, ಕೆಂಗಣ್ಣಿನಿಂದ ಸಿಟ್ಟನ್ನು ಕೆದರಿಸುತ್ತ ಅವಳು ನನ್ನನ್ನು ಹೀಗೆ ಜರೆದಳು.

**ಯದ್ಯಹಂ ಸ್ತುವತಸ್ತಾತ ದುಹಿತಾ ಪ್ರತಿಗೃಹ್ಣತಃ ।**
**ಪ್ರಸಾದಯಿಷ್ಯೇ ಶರ್ಮಿಷ್ಠಾಮಿತ್ಯುಕ್ತಾ ಹಿ ಸಖೀ ಮಯಾ ॥೩೫॥**

**॥ ಶುಕ್ರ ಉವಾಚ ॥**

**ಸ್ತುವತೋ ದುಹಿತಾ ನ ತ್ವಂ ಭದ್ರೇ ನ ಪ್ರತಿಗೃಹ್ಣತಃ ।**
**ಅತಸ್ತ್ವಂ ಸ್ತೂಯಮಾನಸ್ಯ ದುಹಿತಾ ದೇವಯಾನ್ಯಸಿ ॥೩೬॥**

**ವೃಷಪರ್ವೈವ ತದ್ವೇದ ಶಕ್ರೋ ರಾಜಾ ಚ ನಾಹುಷಃ ।**
**ಅಚಿಂತ್ಯಂ ಬ್ರಹ್ಮ ನಿರ್ದ್ವಂದ್ವಮೈಶ್ವರಂ ಹಿ ಬಲಂ ಮಮ ॥೩೭॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸೋಮವಂಶೇ ಯಯಾತಿ ಚರಿತೇ ಸಪ್ತವಿಂಶೋಽಧ್ಯಾಯಃ**

---

೩೫. ಹೊಗಳಿ ದಾನ ತೆಗೆದುಕೊಳ್ಳುವವನ ಮಗಳು ನಾನಾದರೆ ಶರ್ಮಿಷ್ಠೆಯನ್ನು ಸಮಾಧಾನಮಾಡುವೆನು ಎಂದು ನಾನು ನನ್ನ ಗೆಳತಿಗೆ ಹೇಳಿರುವೆನಪ್ಪಾ.''

೩೬-೩೭. ಶುಕ್ರಾಚಾರ್ಯನು ಹೇಳಿದನು:—"ಎಲೌ ಮಂಗಳಾಂಗೀ, ಯಾಚಕನ ಅಥವಾ ದಾನಜೀವಿಯ ಮಗಳು ನೀನಲ್ಲ; ಎಲ್ಲರೂ ಹೊಗಳತಕ್ಕ ಭಾರ್ಗವನ ಮಗಳು; ದೇವಯಾನಿ. ವೃಷಪರ್ವ, ಇಂದ್ರ ಮತ್ತು ಯಯಾತಿ ಮಹಾರಾಜ ಇವರೆಲ್ಲರಿಗೂ ಈ ಸಂಗತಿ ಗೊತ್ತು. ಊಹೆಗೆ ಸಿಲುಕದೆ, ದ್ವಂದ್ವಾತೀತವೆನಿಸಿದ ಬ್ರಹ್ಮತೇಜಸ್ಸೇ ನನ್ನ ದಿವ್ಯಬಲವು!

## ಅಧ್ಯಾಯದ ಸಾರಾಂಶ

ಇಂದ್ರನು ದೈತ್ಯರೊಡನೆ ಯುದ್ಧಕ್ಕಾಗಿ ಹೋಗುತ್ತಿದ್ದನು. ದಾರಿಯಲ್ಲಿ ಹಲವರು ಯುವತಿಯರು ಜಲಕೇಳಿಯಾಡುತ್ತಿದ್ದರು. ಅವರು ಅವನನ್ನು ಕಂಡು, ಸಡಗರದಿಂದೆದ್ದು ಬಂದು ತಮ್ಮ ತಮ್ಮ ಸೀರೆಗಳನ್ನು ತೆಗೆದುಕೊಂಡರು. ಆ ಗಡಿಬಿಡಿಯಲ್ಲಿ ವೃಷಪರ್ವನ ಮಗಳಾದ ಶರ್ಮಿಷ್ಠೆಯು ತಿಳಿಯದೆ ದೇವಯಾನಿಯ

ಬಟ್ಟೆಯನ್ನು ಎತ್ತಿಕೊಂಡಳು. ಅಷ್ಟಕ್ಕೇ ದೇವಯಾನಿಯು ಅವಳನ್ನು ಆಕ್ಷೇಪಿಸಿದಳು. ಮಾತಿಗೆ ಮಾತು ಬೆಳೆದು, ಇಬ್ಬರಿಗೂ ಜಗಳವಾಗಿ, ಶರ್ಮಿಷ್ಠೆಯು ಅವಳನ್ನು ಬಾವಿಯಲ್ಲಿ ತಳ್ಳಿ ಹೊರಟುಹೋದಳು. ಈ ವೇಳೆಗೆ ಯಯಾತಿ ಮಹಾರಾಜನು ಬೇಟೆಗಾಗಿ ಬಂದಿದ್ದು ಆ ಬಾವಿಯಲ್ಲಿ ದೇವಯಾನಿಯನ್ನು ನೋಡಿದನು. ಅವಳ ಬೇಡಿಕೆಯಂತೆ ಅವಳನ್ನು ಮೇಲಕ್ಕೆತ್ತಿಬಿಟ್ಟು ತನ್ನ ನಗರಕ್ಕೆ ತೆರಳಿದನು. ಶುಕ್ರಾಚಾರ್ಯನು ಘೂರ್ಣಿಕೆಯೆಂಬವಳಿಂದ ಈ ವೃತ್ತಾಂತವನ್ನು ತಿಳಿದು ಮಗಳನ್ನು ಹುಡುಕುತ್ತ ಅಲ್ಲಿಗೆ ಬಂದನು. ಶರ್ಮಿಷ್ಠೆಯು ಮಾಡಿದ ಅವಮಾನವನ್ನು ತಂದೆಗೆ ದೇವಯಾನಿ ತಿಳಿಸಿದಳು. ಅವನು ಅವಳನ್ನು ಸಮಾಧಾನಮಾಡಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಚಂದ್ರವಂಶ ವರ್ಣನದೊಳಗೆ ಯಯಾತಿ
ಚರಿತದಲ್ಲಿ ಇಪ್ಪತ್ತೇಳನೆಯ ಅಧ್ಯಾಯವು ಸಮಾಪ್ತವಾದುದು



## ಅಥ ಶ್ರೀಮತ್ಸ್ಯಮಹಾಪುರಾಣೇ ಅಷ್ಟಾವಿಂಶೋಽಧ್ಯಾಯಃ

॥ ಶುಕ್ರ ಉವಾಚ ॥

ಯಃ ಪರೇಷಾಂ ನರೋ ನಿತ್ಯಮತಿವಾದಾಂಸ್ತಿತಿಕ್ಷತಿ ।
ದೇವಯಾನಿ ವಿಜಾನೀಹಿ ತೇನ ಸರ್ವಮಿದಂ ಜಿತಂ ॥ ೧ ॥

ಯಸ್ಸಮುತ್ಪತಿತಂ ಕ್ರೋಧಂ ನಿಗೃಹ್ಣಾತಿ ಹಯಂ ಯಥಾ ।
ಸ ಯಂತೇತ್ಯುಚ್ಯತೇ ಸದ್ಭಿರ್ನ ಯೋ ರಶ್ಮಿಷು ಲಂಬತೇ ॥ ೨ ॥

ಯಸ್ಸಮುತ್ಪತಿತಂ ಕ್ರೋಧಮಕ್ರೋಧೇನ ನಿಯಚ್ಛತಿ ।
ದೇವಯಾನಿ ವಿಜಾನೀಹಿ ತೇನ ಸರ್ವಮಿದಂ ಜಿತಂ ॥ ೩ ॥

ಯಃ ಸಮುತ್ಪತಿತಂ ಕ್ರೋಧಂ ಕ್ಷಮಯೈವ ನಿರಸ್ಯತಿ ।
ಯಥೋರಗಸ್ತ್ವಚಂ ಜೀರ್ಣಾಂ ಸ ವೈ ಪುರುಷ ಉಚ್ಯತೇ ॥ ೪ ॥

---

೧. ಶುಕ್ರಾಚಾರ್ಯನು ಹೇಳಿದನು :—" ಓ ದೇವಯಾನೀ, ಯಾವನು ಪರರ ನಿಂದಾವಾಕ್ಯಗಳನ್ನು ಸೈರಿಸಿಕೊಳ್ಳುವನೋ ಅವನೇ ಈ ಲೋಕವೆಲ್ಲವನ್ನೂ ಗೆಲ್ಲಬಲ್ಲನೆಂದು ತಿಳಿ.

೨. ಚಾವಟಿಯನ್ನೇ ನಂಬಿಕೊಂಡಿರದೆ ತನ್ನ ಚತುರತೆಯಿಂದ ತುಂಟ ಕುದುರೆಯನ್ನು ವಶಪಡಿಸಿಕೊಳ್ಳಬಲ್ಲವನೇ ಸಾರಥಿಯೆನಿಸುವನು. ಹಾಗೆಯೇ ಹುಟ್ಟಿದ ಕೋಪವನ್ನು ಅಡಗಿಸಬಲ್ಲವನೇ ಜಿತೇಂದ್ರಿಯನು.

೩. ಎಲೌ ಮಗಳೆ, ಮನಸ್ಸಿನಲ್ಲಿ ಹುಟ್ಟಿದ ಕೋಪವನ್ನು ಯಾವನು ಶಾಂತಿಯಿಂದ ಸಂತೈಸಬಲ್ಲನೋ, ಅವನು ಲೋಕದಲ್ಲೆಲ್ಲರನ್ನೂ ಗೆದ್ದನೆಂದೇ ತಿಳಿಯಬೇಕು.

೪. ಹಾವು ಹಳೆಯ ಪೊರೆಯನ್ನು ಬಿಡುವಂತೆ ತನ್ನ ಕ್ಷಮಾಗುಣದ ಬಲದಿಂದಲೇ ಕೋಪವನ್ನು ಯಾವನು ದೂರಮಾಡಬಲ್ಲನೋ, ಅವನೇ ಪುರುಷನೆನಿಸಿಕೊಳ್ಳುವನು.

ಯಸ್ತು ಭಾವಯತೇ ಧರ್ಮಂ ಯೋಽತಿಮಾತ್ರಂ ತಿತಿಕ್ಷತಿ ।
ಯಶ್ಚ ತಪ್ತೋ ನ ತಪತಿ ಭೃಶಂ ಸೋಽರ್ಥಸ್ಯ ಭಾಜನಂ ॥ ೫ ॥

ಯೋ ಯಜೇದಶ್ವಮೇಧೇನ ಮಾಸಿ ಮಾಸಿ ಶತಂ ಸಮಾಃ ।
ಯಸ್ತು ಕುಪ್ಯೇನ್ನ ಸರ್ವಸ್ಯ ತಯೋರಕ್ರೋಧನೋ ವರಃ ॥ ೬ ॥

ಯೋ ಕುಮಾರಾಃ ಕುಮಾರ್ಯಶ್ಚ ವೈರಂ ಕುರ್ಯುರಚೇತಸಃ ।
ನೈತತ್ಪ್ರಾಜ್ಞಸ್ತು ಕುರ್ವೀತ ವಿದುಸ್ತೇ ನ ಬಲಾಬಲಂ ॥ ೭ ॥

॥ ದೇವಯಾನ್ಯುವಾಚ ॥

ವೇದಾಹಂ ತಾತ ಬಾಲಾಪಿ ಕಾರ್ಯಾಣಾಂ ತು ಗತಾಗತಂ ।
ಕ್ರೋಧೇ ಚೈವಾತಿವಾದೇ ವಾ ಕಾರ್ಯಸ್ಯಾಪಿ ಬಲಾಬಲೇ ॥ ೮ ॥

---

೫. ಧರ್ಮವನ್ನು ಚಿಂತಿಸಬೇಕು; ಶಕ್ತಿಮೀರಿ ಸೈರಿಸಬೇಕು; ಪರರು ಸಂಕಟಪಡಿಸಿದರೂ ಸಂತಾಪಗೊಳ್ಳಬಾರದು; ಇಂತಹವನು ಪ್ರಯೋಜನವನ್ನು ಪಡೆಯುವನು.

೬. ನೂರು ವರ್ಷಗಳ ಕಾಲ ಪ್ರತಿಮಾಸದಲ್ಲಿ ಅಶ್ವಮೇಧಯಾಗವನ್ನು ಮಾಡುವವನೊಬ್ಬ; ಯಾರ ಮೇಲೂ ಎಂದಿಗೂ ಸಿಟ್ಟಾಗದವನೊಬ್ಬ; ಈ ಇಬ್ಬರಲ್ಲಿ ಕ್ಷಮಾಶೀಲನೇ ಮೇಲಾದವನು.

೭. ಹುಡುಗರೂ ಹುಡುಗಿಯರೂ ವಿವೇಕವಿಲ್ಲದೆ ದ್ವೇಷವನ್ನು ಮಾಡ ಬಹುದು. ಆದರೆ ವಿವೇಕಿಯು ಹೀಗೆ ಮಾಡಬಾರದು. ಏಕೆಂದರೆ ಅವರಿಗೆ ಕ್ರೋಧದ ಮತ್ತು ಶಾಂತಿಯ ಬಲಾಬಲವು ತಿಳಿಯದು.''

೮. ದೇವಯಾನಿ ಹೇಳಿದಳು:—'' ಅಪ್ಪಾ, ನಾನೇನೋ ಇನ್ನೂ ಹುಡುಗಿ. ಆದರೂ ಕರ್ಮವಶದಂತೆ ಸುಖದುಃಖರೂಪವಾದ ಕೆಲಸಗಳು ಆಗುವುವು, ಹೋಗು ವುವು ಎಂಬುದು ಗೊತ್ತು. ಕೋಪ ಬಂದಾಗ, ಹೆರವರು ದೂರಿದಾಗ ಏನು ಮಾಡಬೇಕು ? ಅದರ ಬಲಾಬಲಗಳೇನು ? ಎಂಬುದನ್ನೂ ಬಲ್ಲೆನು.

**ಶಿಷ್ಯಸ್ಯಾಶಿಷ್ಯವೃತ್ತಂ ಹಿ ನ ಕ್ಷಂತವ್ಯಂ ಬುಭೂಷುಣಾ ।**
**ಅಸತ್ಸಂಕೀರ್ಣವೃತ್ತೇಷು ವಾಸೋ ಮಮ ನ ರೋಚತೇ ॥ ೯ ॥**

**ಪುಂಸೋ ಯೇ ನಾಭಿನಂದಂತಿ ವೃತ್ತೇನಾಭಿಜನೇನ ಚ ।**
**ನ ತೇಷು ನಿವಸೇತ್ಪ್ರಾಜ್ಞಃ ಶ್ರೇಯೋರ್ಥೀ ಪಾಪಬುದ್ಧಿಷು ॥೧೦॥**

**ಯೇ ನೈನಮಭಿಜಾನಂತಿ ವೃತ್ತೇನಾಭಿಜನೇನ ಚ ।**
**ತೇಷು ಸಾಧುಷು ವಸ್ತವ್ಯಂ ಸ ವಾಸಃ ಶ್ರೇಷ್ಠ ಉಚ್ಯತೇ ॥೧೧॥**

**ತನ್ಮೇ ಮಥ್ನಾತಿ ಹೃದಯಮಗ್ನಿಕಲ್ಪಮಿವಾರಣಿಂ ।**
**ವಾಗ್ದುರುಕ್ತಂ ಮಹಾಘೋರಂ ದುಹಿತುರ್ವೃಷಪರ್ವಣಃ ॥೧೨॥**

---

೯. ಶಿಷ್ಯನು ತನಗೆ ತಕ್ಕುದಲ್ಲದ ನಡತೆಯಲ್ಲಿದ್ದರೆ, ಗೌರವದಲ್ಲಿ ಮನಸ್ಸುಳ್ಳ ಶಕ್ತನಾದ ಗುರುವು ಅದನ್ನೆಂದಿಗೂ ಕ್ಷಮಿಸಬಾರದು. ಹೀನವರ್ತನದ ಜನರ ಬಳಿಯಲ್ಲಿ ವಾಸಮಾಡುವುದು ನನಗೆ ಇಷ್ಟವಿಲ್ಲ.

೧೦. ಸದ್ವಂಶಜನೂ, ಸದಾಚಾರ ಸಂಪನ್ನನೂ ಆದ ಸತ್ಪುರುಷನನ್ನು ಮೆಚ್ಚಲಾರದ ಪಾಪ ಬುದ್ಧಿಯವರ ನೆರೆಯಲ್ಲಿ ವಿವೇಕಶಾಲಿಯು ವಾಸಮಾಡ ಕೂಡದು. ಅವನಿಗೆ ಅದರಿಂದ ಶ್ರೇಯಸ್ಸುಂಟಾಗುವುದಿಲ್ಲ.

೧೧. ಮನುಷ್ಯನು ಸತ್ಪುರುಷರ ಬಳಿಯಲ್ಲಿ ವಾಸಮಾಡಬೇಕು. ಅಂತಹ ವಾಸವೇ ಶ್ರೇಷ್ಠ. ಅವರಿಗೆ ನಮ್ಮ ನಡತೆ, ವಂಶ, ಪರಿಚಯ ಇವು ತಿಳಿಯದಿದ್ದರೂ ಬಾಧಕವಿಲ್ಲ.

೧೨. ವೃಷಪರ್ವನ ಮಗಳಾದ ಶರ್ಮಿಷ್ಠೆಯ ಮಹಾ ಘೋರವಾದ ಆ ಬಿರುನುಡಿಯು, ಬೆಂಕಿಯು ಅರಣಿಯನ್ನು ಕಡೆಯುವಂತೆ ನನ್ನ ಹೃದಯವನ್ನು ಇನ್ನೂ ಕ್ಷೋಭೆಗೊಳಿಸುತ್ತಿದೆ.

**ನ ಹ್ಯತೋ ದುಷ್ಕರಂ ಮನ್ಯೇ ತಾತ ಲೋಕೇಷ್ವಪಿ ತ್ರಿಷು ।**
**ಯಃ ಸಪತ್ನಶ್ರಿಯಂ ದೀಪ್ತಾಂ ಹೀನಶ್ರೀಃ ಪರ್ಯುಪಾಸತೇ ॥೧೩॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಯಯಾತಿ ಚರಿತೇಽಷ್ಟಾವಿಂಶೋಽಧ್ಯಾಯಃ**

---

೧೩. ಅಪ್ಪಾ, ಬಡವನು ಸಿರಿಯಿಂದ ಮೆರೆಯುವ ತನ್ನ ಶತ್ರುವನ್ನು ಆಶ್ರಯಿಸಿ ಓಲೈಸಿಕೊಂಡಿರುವುದಕ್ಕಿಂತಲೂ ಹೀನವಾದ ಕೆಲಸವು ಮೂರು ಲೋಕದಲ್ಲಿ ಮತ್ತಾವುದೂ ಇಲ್ಲವೆಂದು ನನ್ನ ಅಭಿಪ್ರಾಯ."

## ಅಧ್ಯಾಯದ ಸಾರಾಂಶ

ಶುಕ್ರಾಚಾರ್ಯನು ತನ್ನ ಮಗಳಾದ ದೇವಯಾನಿಗೆ ಕ್ಷಮಾಗುಣದ ಮಹತ್ವವನ್ನು ಉಪದೇಶಿಸಿದನು. ಅದರೆ ಶರ್ಮಿಷ್ಠೆಯ ಕ್ರೂರವಾಕ್ಯಗಳಿಂದ ನೊಂದಿದ್ದ ಅವಳು ಅದನ್ನೊಪ್ಪಲಿಲ್ಲ. "ಶಿಷ್ಯನ ಅವಿನಯವನ್ನು ಸೈರಿಸುವುದು ಗುರುವಿಗೆ ತಕ್ಕುದಲ್ಲ. ಐಶ್ವರ್ಯವಂತನಾದ ಶತ್ರುವನ್ನು ಓಲೈಸುವುದು ಹೀನ ಜೀವನ" ಎಂದು ಅವಳು ಹೇಳಿದಳು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಯಯಾತಿ ಚರಿತದೊಳಗೆ
ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

## ಅಥ ಶ್ರೀಮತ್ಸ್ಯಮಹಾಪುರಾಣೇ ಏಕೋನತ್ರಿಂಶೋಽಧ್ಯಾಯಃ

|| ಶೌನಕ ಉವಾಚ ||

ತತಃ ಕಾವ್ಯೋ ಭೃಗುಶ್ರೇಷ್ಠಃ ಸಮನ್ಯುರುಪಗಮ್ಯ ಹ ।
ವೃಷಪರ್ವಾಣಮಾಸೀನಮಿತ್ಯುವಾಚಾವಿಚಾರಯನ್ || ೧ ||

ನಾಧರ್ಮಶ್ಚರಿತೋ ರಾಜನ್ ಸದ್ಯಃ ಫಲತಿ ಗೌರಿವ ।
ಶನೈರಾವರ್ತ್ಯಮಾನಸ್ತು ಮೂಲಾನ್ಯಪಿ ನಿಕೃಂತತಿ || ೨ ||

ಯದಿ ನಾತ್ಮನಿ ಪುತ್ರೇಷು ನ ಚೇತ್ಪಶ್ಯತಿ ನಪ್ತೃಷು ।
ಪಾಪಮಾಚರಿತಂ ಕರ್ಮ ತ್ರಿವರ್ಗಮತಿವರ್ತತೇ || ೩ ||

ಫಲತ್ಯೇವಂ ಧ್ರುವಂ ಪಾಪಂ ಗುರುಭುಕ್ತಮಿವೋದರೇ ।
ಯದಾ ಘಾತಯಸೇ ವಿಪ್ರಂ ಕಚಮಾಂಗಿರಸಂ ತದಾ || ೪ ||

---

೧. ಶೌನಕಮುನಿ ಹೇಳಿದನು.—ಬಳಿಕ ಶುಕ್ರಾಚಾರ್ಯನಿಗೆ ಕೋಪ ಬಂದಿತು. ಅವನು ಆಸನದಲ್ಲಿ ಕುಳಿತಿದ್ದ ವೃಷಪರ್ವನ ಬಳಿಗೆ ಹೋಗಿ ವಿಚಾರರಹಿತನಾಗಿ ಇಂತೆಂದನು.

೨. "ಹುಲ್ಲು ತಿಂದ ಹಸುವು ಆ ಗಳಿಗೆಯಲ್ಲಿಯೇ ಹಾಲನ್ನು ಕೊಡುವುದಿಲ್ಲ. ಹಾಗೆಯೇ, ಮಾಡಿದ ಅಧರ್ಮವು ಕೂಡಲೇ ಫಲವನ್ನು ತೋರಿಸದು. ಅದು ನಿಧಾನವಾಗಿ ವ್ಯಾಪಿಸುತ್ತ ಮೂಲಪುರುಷರನ್ನು ಸಹ ಇರಿಯುತ್ತದೆ.

೩. ಯಜಮಾನನಾದವನು ತನ್ನಲ್ಲಿ, ತನ್ನ ಮಕ್ಕಳಲ್ಲಿ ಅಥವಾ ಮೊಮ್ಮಕ್ಕಳಲ್ಲಿ ನಡೆದ ಪಾಪಕರ್ಮವನ್ನು ಗಮನಿಸದಿದ್ದರೆ, ಅದು ಅವನು ಧರ್ಮಾರ್ಥಕಾಮಗಳನ್ನು ಮೆಟ್ಟಿ ತುಳಿಯುವುದು. ಅಳತೆಯರಿಯದೆ ತಿಂದ ಆಹಾರವು ಹೊಟ್ಟೆಯಲ್ಲಿ ತೊಂದರೆಕೊಡುವಂತೆ, ಮಾಡಿದ ಪಾಪವು ಕೊನೆಗೆ ದುಃಖವನ್ನು ಕೊಡುವುದು ಖಂಡಿತ.

೪-೬. ಕಚನು ಬ್ರಾಹ್ಮಣ; ಅಂಗಿರಸ ಮಹಾಮುನಿಯ ಪೌತ್ರ; ಸತ್ಸ್ವಭಾವದವನು; ಧರ್ಮಜ್ಞ; ಗುರುಸೇವೆಮಾಡಿಕೊಂಡು ನನ್ನ ಮನೆಯಲ್ಲಿದ್ದವನು;

ಅಪಾಪಶೀಲಂ ಧರ್ಮಜ್ಞಂ ಶುಶ್ರೂಷುಂ ಮದ್ಗೃಹೇ ರತಂ ।
ವಧಾದನರ್ಹತಸ್ತಸ್ಯ ವಧಾಚ್ಚ ದುಹಿತುರ್ಮಮ ॥ ೫ ॥

ವೃಷಪರ್ವನ್ನಿಬೋಧ ತ್ವಂ ತ್ಯಕ್ಷ್ಯಾಮಿ ತ್ವಾಂ ಸಬಾಂಧವಂ ।
ಸ್ಥಾತುಂ ತ್ವದ್ವಿಷಯೇ ರಾಜನ್ನ ಶಕ್ನೋಮಿ ತ್ವಯಾ ಸಹ ॥ ೬ ॥

ಅದ್ಯೈವಮಭಿಜಾನಾಮಿ ದೈತ್ಯಂ ಮಿಥ್ಯಾಪ್ರಲಾಪಿನಂ ।
ಯತಸ್ತ್ವಮಾತ್ಮನೋದೀರ್ಣಾಂ ದುಹಿತಾಂ ಕಿಮುಪೇಕ್ಷಸೇ ॥ ೭ ॥

॥ ವೃಷಪರ್ವೋವಾಚ ॥

ನಾವದ್ಯಂ ನ ಮೃಷಾವಾದಂ ತ್ವಯಿ ಜಾನಾಮಿ ಭಾರ್ಗವ ।
ತ್ವಯಿ ಸತ್ಯಂ ಚ ಧರ್ಮಶ್ಚ ತತ್ಪ್ರಸೀದತು ಮಾಂ ಭವಾನ್ ॥ ೮ ॥

ಅದ್ಯಾಸ್ಮಾನಪಹಾಯ ತ್ವಮಿತೋ ಯಾಸ್ಯಸಿ ಭಾರ್ಗವ ।
ಸಮುದ್ರಂ ಸಂಪ್ರವೇಕ್ಷ್ಯಾಮಿ ನಾನ್ಯದಸ್ತಿ ಪರಾಯಣಂ ॥ ೯ ॥

---

ವಧಾರ್ಹವಾದ ತಪ್ಪೇನೂ ಮಾಡಿದವನಲ್ಲ; ಅಂತಹವನನ್ನು ನೀನು ಕೊಲ್ಲಿಸಿದೆ. ಅಷ್ಟೇ ಅಲ್ಲ; ಈಗ ನನ್ನ ಮಗಳ ಕೊಲೆಯ ಯತ್ನವೂ ನಡೆದು ಹೋಯಿತು. ಎಲೈ ವೃಷಪರ್ವನೇ, ಕೇಳು. ಬಂಧುಸಹಿತನಾದ ನಿನ್ನನ್ನು ನಾನು ತೊರೆಯುವೆನು. ನಿನ್ನೊಡನೆ ನಿನ್ನ ರಾಜ್ಯದಲ್ಲಿರಲು ನನಗೆ ಸಾಧ್ಯವಿಲ್ಲ.

೭. ಈಗ ನನಗೆ ಗೊತ್ತಾಗುತ್ತದೆ ನೀನು ಸುಳ್ಳಾಡುವ ದೈತ್ಯನೆಂದು. ಏಕೆಂದರೆ ನೀನು ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗಳನ್ನು, ಅವಳು ಕಷ್ಟಕ್ಕೊಳಗಾಗಿದ್ದರೂ ಹೀಗೆ ಉಪೇಕ್ಷೆಮಾಡುತ್ತಿರುವೆ.''

೮. ವೃಷಪರ್ವನು ಹೇಳಿದನು.—"ಭೃಗುವಂಶೋತ್ಪನ್ನನಾದ ಶುಕ್ರಾಚಾರ್ಯನೇ, ನಿನ್ನ ವಿಷಯದಲ್ಲಿ ತಪ್ಪುಮಾಡಿದುದನ್ನಾಗಲಿ, ಸುಳ್ಳಾಡಿದುದನ್ನಾಗಲಿ ನಾನರಿಯೆ. ನಿನ್ನೊಡನೆ ಸತ್ಯವನ್ನೇ ಆಡುತ್ತಿರುವೆನು; ಧರ್ಮದಿಂದಲೇ ನಡೆಯುತ್ತಿರುವೆನು. ಆದುದರಿಂದ ನನಗೆ ಪ್ರಸನ್ನನಾಗು.

೯. ಆಚಾರ್ಯಾ, ನಮ್ಮನ್ನು ನೀನೀಗ ಬಿಟ್ಟು, ಇಲ್ಲಿಂದ ಹೋಗುವೆಯಾದರೆ ನಾನು ಸಮುದ್ರವನ್ನು ಪ್ರವೇಶಿಸುವೆನು. ನನಗೆ ಬೇರೆ ಯಾವುದೂ ದಿಕ್ಕಿಲ್ಲ."

|| ಶುಕ್ರ ಉವಾಚ ||

**ಸಮುದ್ರಂ ಪ್ರವಿಶಧ್ವಂ ವಾ ದಿಶೋ ವಾ ವ್ರಜತಾಸುರಾಃ |**
**ದುಹಿತುರ್ನಾಪ್ರಿಯಂ ಸೋಢುಂ ಶಕ್ತೋಽಹಂ ದಯಿತಾ ಹಿ ಮೇ ||೧೦||**

**ಪ್ರಸಾದ್ಯತಾಂ ದೇವಯಾನೀ ಜೀವಿತಂ ಯತ್ರ ಮೇ ಸ್ಥಿತಂ |**
**ಯೋಗಕ್ಷೇಮಕರಸ್ತೇಽಹಮಿಂದ್ರಸ್ಯೇವ ಬೃಹಸ್ಪತಿಃ ||೧೧||**

|| ವೃಷಪರ್ವೋವಾಚ ||

**ಯತ್ಕಿಂಚಿದಸುರೇಂದ್ರಾಣಾಂ ವಿದ್ಯತೇ ವಸು ಭಾರ್ಗವ |**
**ಭುವಿ ಹಸ್ತಿರಥಾಶ್ವಂ ವಾ ತಸ್ಯ ತ್ವಂ ಮಮ ಚೇಶ್ವರಃ ||೧೨||**

|| ಶುಕ್ರ ಉವಾಚ ||

**ಯತ್ಕಿಂಚಿದಸ್ತಿ ದ್ರವಿಣಂ ದೈತ್ಯೇಂದ್ರಾಣಾಂ ಮಹಾಸುರ |**
**ತಸ್ಯೇಶ್ವರೋಽಸ್ಮಿ ಯದ್ಯೇತದ್ದೇವಯಾನೀ ಪ್ರಸಾದ್ಯತಾಂ ||೧೩||**

---

೧೦. ಶುಕ್ರಾಚಾರ್ಯನು ಹೇಳಿದನು.—"ಎಲೈ ರಾಕ್ಷಸರೇ, ಸಮುದ್ರದಲ್ಲಾದರೂ ಬೀಳಿ; ದಿಕ್ಕು ದಿಕ್ಕುಗಳಿಗಾದರೂ ಹೋಗಿ. ನನ್ನ ಮಗಳಿಗೆ ಆದ ಅನಿಷ್ಟವನ್ನು ಜೇರಿ ನಾನು ತಾಳಲಾರೆ; ಅವಳು ನನ್ನ ಪ್ರೀತಿಪಾತ್ರೆ.

೧೧. ದೇವಯಾನಿಯನ್ನು ಸಂತೈಸು; ನನ್ನ ಪ್ರಾಣವು ನೆಲೆಸಿರುವುದು ಅವಳಲ್ಲಿಯೇ. ಬೃಹಸ್ಪತಿಯು ಇಂದ್ರನ ಹಿತಚಿಂತಕನಾಗಿರುವಂತೆ ನಾನು ನಿನ್ನ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿರುವೆನು."

೧೨. ವೃಷಪರ್ವನು ಹೇಳಿದನು.—"ಅಸುರೇಶ್ವರರಿಗೆ ಈ ಭೂಮಂಡಲದಲ್ಲಿ ಇರಬಹುದಾದ ಸಂಪತ್ತು, ಆನೆ, ಕುದುರೆ, ರಥ, ಮುಂತಾದ ವೈಭವಗಳೆಲ್ಲಕ್ಕೂ ಅಧಿಪತಿಯು ನೀನು. ಎಲೈ ಶುಕ್ರಾಚಾರ್ಯನೇ, ಅಷ್ಟೇ ಅಲ್ಲ; ನನಗೂ ನೀನೇ ಪ್ರಭು."

೧೩. ಶುಕ್ರಾಚಾರ್ಯನು ಹೇಳಿದನು.—"ಓ ಅಸುರೇಂದ್ರಾ, ದೇವಯಾನಿಯನ್ನು ಸಮಾಧಾನಪಡಿಸಿದರೆ, ನೀನು ಹೇಳಿದಂತೆ ದೈತ್ಯರಾಜರ ಸಂಪತ್ತೇನಿರುವುದೋ ಅದಕ್ಕೆ ನಾನು ಒಡೆಯನಾದಂತೆಯೇ ಸರಿ."

|| ಶೌನಕ ಉವಾಚ ||

ತತಸ್ತು ತ್ವರಿತಃ ಶುಕ್ರಸ್ತೇನ ರಾಜ್ಞಾ ಸಮಂ ಯಯೌ ।
ಉವಾಚ ಚೈನಾಂ ಸುಭಗೇ ಪ್ರತಿಪನ್ನಂ ವಚಸ್ತವ ||೧೪||

|| ದೇವಯಾನ್ಯುವಾಚ ||

ಯದಿ ತ್ವಮೀಶ್ವರಸ್ತಾತ ರಾಜ್ಞೋ ವಿತ್ತಸ್ಯ ಭಾರ್ಗವ ।
ನಾಭಿಜಾನಾಮಿ ತತ್ತೇಽಹಂ ರಾಜಾ ವದತು ಮಾಂ ಸ್ವಯಂ ||೧೫||

|| ವೃಷಪರ್ವೋವಾಚ ||

ಯಂ ಕಾಮಮಭಿಜಾನಾಸಿ ದೇವಯಾನಿ ಶುಚಿಸ್ಮಿತೇ ।
ತತ್ತೇಽಹಂ ಸಂಪ್ರದಾಸ್ಯಾಮಿ ಯದ್ಯಪಿ ಸ್ಯಾತ್ಸುದುರ್ಲಭಂ ||೧೬||

|| ದೇವಯಾನ್ಯುವಾಚ ||

ದಾಸೀಂ ಕನ್ಯಾಸಹಸ್ರೇಣ-ಶರ್ಮಿಷ್ಠಾಮಭಿಕಾಮಯೇ ।
ಅನುಯಾಸ್ಯತಿ ಮಾಂ ತತ್ರ ಯತ್ರ ದಾಸ್ಯತಿ ಮೇ ಪಿತಾ ||೧೭||

---

೧೪. ಶೌನಕಮುನಿ ಹೇಳಿದನು.—ಬಳಿಕ ಶುಕ್ರಾಚಾರ್ಯನು ಆ ರಾಜನೊಡನೆ ಬೇಗ ಹೋಗಿ "ಎಲೌ ಕಲ್ಯಾಣಿ, ನಿನ್ನ ಮಾತು ರಾಜನಿಗೆ ಒಪ್ಪಿತವಾಗಿದೆ" ಎಂದು ಮಗಳಿಗೆ ಹೇಳಿದನು.

೧೫. ದೇವಯಾನಿ ಹೇಳಿದಳು.—"ಅಪ್ಪಾ, ರಾಜನ ಐಶ್ವರ್ಯಕ್ಕೆ ನೀನೇ ಒಡೆಯನೆಂದರೆ ನಿನ್ನ ಮಾತಿನ ಮೇಲೆ ಅದನ್ನು ನಾನು ಒಪ್ಪಲಾರೆನು. ದೊರೆಯೇ ಅದನ್ನು ನನಗೆ ಹೇಳಲಿ."

೧೬. ವೃಷಪರ್ವನು ಹೇಳಿದನು.—"ಸುಮುಖೀ, ಎಲೌ ದೇವಯಾನೀ, ನಿನಗೆ ಇಷ್ಟವಾದುದೆಂದು ಯಾವುದನ್ನು ತಿಳಿದಿರುವೆಯೋ ಅದನ್ನು ನಿನಗೆ ಕೊಡುವೆನು. ಅದು ಎಷ್ಟೇ ದುರ್ಲಭವಾದರೂ ಬಾಧಕವಿಲ್ಲ."

೧೭. ದೇವಯಾನಿ ಹೇಳಿದಳು.—"ಸಾವಿರಜನ ಕನ್ಯೆಯರೊಡನೆ ಶರ್ಮಿಷ್ಠೆಯು ನನಗೆ ದಾಸಿಯಾಗಬೇಕು. ನಮ್ಮ ತಂದೆಯು ನನ್ನನ್ನು ಪಾಣಿಗ್ರಹಣಮಾಡಿ ಕೊಟ್ಟು ಕಳುಹಿಸಿದಾಗ ಅವಳು ನನ್ನೊಡನೆ ಬರಬೇಕು. ಇದೇ ನನ್ನ ಕೋರಿಕೆ."

|| ವೃಷಪರ್ವೋವಾಚ ||

**ಉತ್ತಿಷ್ಠ ಧಾತ್ರಿ ಗಚ್ಛ ತ್ವಂ ಶರ್ಮಿಷ್ಠಾಂ ಶೀಘ್ರಮಾನಯ ।**
**ಯಂ ಚ ಕಾಮಯತೇ ಕಾಮಂ ದೇವಯಾನೀ ಕರೋತು ತಂ ॥೧೮॥**

|| ಶೌನಕ ಉವಾಚ ||

**ತತೋ ಧಾತ್ರೀ ತತ್ರ ಗತ್ವಾ ಶರ್ಮಿಷ್ಠಾಮಿದಮಬ್ರವೀತ್ ।**
**ಉತ್ತಿಷ್ಠ ಭದ್ರೇ ಶರ್ಮಿಷ್ಠೇ ಜ್ಞಾತೀನಾಂ ಸುಖಮಾವಹ ॥೧೯॥**
**ತ್ಯಜತಿ ಬ್ರಾಹ್ಮಣಃ ಶಿಷ್ಯಾನ್ ದೇವಯಾನ್ಯಾ ಪ್ರಚೋದಿತಃ ।**
**ಯಂ ಸಾ ಕಾಮಯತೇ ಕಾಮಂ ಸ ಕಾರ್ಯೋಽತ್ರ ತ್ವಯಾಽನಘೇ ॥**

|| ಶರ್ಮಿಷ್ಠೋವಾಚ ||

**ಯಂ ಚ ಕಾಮಯತೇ ಕಾಮಂ ಕರವಾಣ್ಯಹಮದ್ಯ ತಂ ।**
**ಮಾಗಾನ್ಮನ್ಯುವಶಂ ಶುಕ್ರೋ ದೇವಯಾನೀ ಚ ಮತ್ಕೃತೇ ॥೨೧॥**

|| ಶೌನಕ ಉವಾಚ ||

**ತತಃ ಕನ್ಯಾಸಹಸ್ರೇಣ ವೃತಾ ಶಿಬಿಕಯಾ ತದಾ ।**
**ಪಿತುರ್ನಿದೇಶಾತ್ತ್ವರಿತಾ ನಿಶ್ಚಕ್ರಾಮ ಪುರೋತ್ತಮಾತ್ ॥೨೨॥**

---

೧೮. ವೃಷಪರ್ವನು ಹೇಳಿದನು.—“ದಾದೀ, ಏಳು; ಬೇಗನೆ ಶರ್ಮಿಷ್ಠೆಯನ್ನು ಕರೆತಾ. ದೇವಯಾನಿಗೆ ಏನೇನು ಕೋರಿಕೆಯುಂಟೋ ಅದನ್ನು ಅವಳು ನಡೆಸಲಿ.”

೧೯-೨೦. ಶೌನಕಮುನಿ ಹೇಳಿದನು.—ಬಳಿಕ ಧಾತ್ರಿಯು ಶರ್ಮಿಷ್ಠೆಯ ಬಳಿಗೆ ಹೋಗಿ ಹೇಳಿದಳು. “ಏಳು, ಬಂಧುಗಳಿಗೆ ಸುಖವನ್ನು ಕೊಡು. ದೇವಯಾನಿಯ ಪ್ರೇರಣೆಯಿಂದ ಆ ಬ್ರಾಹ್ಮಣನು ತನ್ನ ಶಿಷ್ಯರಾದ ದೈತ್ಯರನ್ನು ತೊರೆಯುತ್ತಾನೆ. ಎಲೌ ನಿರ್ದುಷ್ಟಳೇ, ಅವಳ ಮನಸ್ಸಿಗೆ ತೋರಿದ ಇಷ್ಟವನ್ನು ನೀನೀಗ ನಡೆಸಬೇಕು. ಮಂಗಳಾಂಗೀ, ನೀನು ದೇವಯಾನಿಗೆ ದಾಸಿಯಾದೆ.”

೨೧. ಶರ್ಮಿಷ್ಠೆ ಹೇಳಿದಳು.—“ಯಾವ ಕೋರಿಕೆಯನ್ನಾದರೂ ನಾನೀಗ ನೆರವೇರಿಸಿ ಕೊಡುವೆನು. ನನಗೋಸ್ಕರವಾಗಿ ಶುಕ್ರಾಚಾರ್ಯನೂ ದೇವಯಾನಿಯೂ ದೈತ್ಯರ ಮೇಲೆ ಕೋಪಮಾಡದಿರಲಿ.”

೨೨. ಶೌನಕಮಹರ್ಷಿ ಹೇಳಿದನು.—ಬಳಿಕ ತಂದೆಯ ಅಪ್ಪಣೆಯಂತೆ ಶರ್ಮಿಷ್ಠೆಯು ಸಾವಿರ ಜನ ಕನ್ಯೆಯರೊಡನೆ ಪಲ್ಲಕ್ಕಿಯಲ್ಲಿ ಕುಳಿತು ಬೇಗನೆ ಪಟ್ಟಣದಿಂದ ಹೊರಟಳು.

॥ ಶರ್ಮಿಷ್ಠೋವಾಚ ॥

ಅಹಂ ಕನ್ಯಾಸಹಸ್ರೇಣ ದಾಸೀ ತೇ ಪರಿಚಾರಿಕಾ ।
ಧ್ರುವಂ ತ್ವಾಂ ತತ್ರ ಯಾಸ್ಯಾಮಿ ಯತ್ರ ದಾಸ್ಯತಿ ತೇ ಪಿತಾ ॥೨೩॥

॥ ದೇವಯಾನ್ಯುವಾಚ ॥

ಸ್ತುವತೋ ದುಹಿತಾ ಚಾಹಂ ಯಾಚತಃ ಪ್ರತಿಗೃಹ್ಣತಃ ।
ಸ್ತೂಯಮಾನಸ್ಯ ದುಹಿತಾ ಕಥಂ ದಾಸೀ ಭವಿಷ್ಯಸಿ ॥೨೪॥

॥ ಶರ್ಮಿಷ್ಠೋವಾಚ ॥

ಯೇನ ಕೇನಚಿದಾರ್ತಾನಾಂ ಜ್ಞಾತೀನಾಂ ಸುಖಮಾವಹೇತ್ ।
ಅನುಯಾಸ್ಯಾಮ್ಯಹಂ ತತ್ರ ಯತ್ರ ದಾಸ್ಯತಿ ತೇ ಪಿತಾ ॥೨೫॥

॥ ಶೌನಕ ಉವಾಚ ॥

ಪ್ರತಿಶ್ರುತೇ ದಾಸಭಾವೇ ದುಹಿತ್ರಾ ವೃಷಪರ್ವಣಃ ।
ದೇವಯಾನೀ ನೃಪಶ್ರೇಷ್ಠ ಪಿತರಂ ವಾಕ್ಯಮಬ್ರವೀತ್ ॥೨೬॥

---

೨೩. ಶರ್ಮಿಷ್ಠೆ ಹೇಳಿದಳು.—"ನಾನೂ ನನ್ನೊಡನೆ ಬಂದಿರುವ ಸಾವಿರ ಜನ ಕನ್ಯೆಯರೂ ನಿನ್ನ ದಾಸಿಯರಾಗಿದ್ದೇವೆ. ನಿನ್ನ ತಂದೆಯು ನಿನ್ನನ್ನು ವಿವಾಹ ಮಾಡಿಕೊಟ್ಟ ಕಡೆಗೆ ನಾನು ನಿನ್ನೊಡನೆ ಬರುವೆನು."

೨೪. ದೇವಯಾನಿ ಹೇಳಿದಳು.—"ನಾನು ಹೊಗಳುಭಟ್ಟನೂ, ತಿರುಕನೂ, ದಾನ ಜೀವಿಯೂ ಆದವನ ಮಗಳು. ನೀನಾದರೋ ಹೊಗಳಿಸಿಕೊಳ್ಳುವವನ ಮಗಳು. ಇಂತಿರಲು ನನಗೆ ನೀನು ದಾಸಿಯೆಂತಾಗುವೆ ?"

೨೫. ಶರ್ಮಿಷ್ಠೆ ಹೇಳಿದಳು.—"ಯಾವ ದಾರಿಯಿಂದಲಾದರೂ ಕಷ್ಟಕ್ಕೆ ಸಿಕ್ಕಿರುವ ಬಂಧುಗಳಿಗೆ ಸುಖವನ್ನುಂಟುಮಾಡಬೇಕು. ನಮ್ಮ ತಂದೆಯ ಇಷ್ಟವನ್ನು ನಡೆಸುವುದು ನನ್ನ ಕರ್ತವ್ಯ. ಆದುದರಿಂದ ನಿನ್ನ ತಂದೆಯು ನಿನ್ನನ್ನು ಮದುವೆ ಮಾಡಿ ಕಳುಹಿಸುವ ಕಡೆಗೆ ನಿನ್ನೊಡನೆ ನಾನು ಬರುವೆನು."

೨೬. ಶೌನಕಮುನಿ ಹೇಳಿದನು.—ಓ ರಾಜಾ, ಶರ್ಮಿಷ್ಠೆಯು ಪರಿಚಾರಿಕೆಯಾಗಿರಲು ಒಪ್ಪಿಕೊಂಡಮೇಲೆ ದೇವಯಾನಿಯು ತನ್ನ ತಂದೆಗಿಂತೆಂದಳು.

॥ ದೇವಯಾನ್ಯುವಾಚ ॥

ಪ್ರವಿಶಾಮಿ ಪುರಂ ತಾತ ತುಷ್ಟಾಸ್ಮಿ ದ್ವಿಜಸತ್ತಮ ।
ಅಮೋಘಂ ತವ ವಿಜ್ಞಾನಮಸ್ತಿ ವಿದ್ಯಾಬಲಂ ಚ ತೇ ॥೨೭॥

॥ ಶೌನಕ ಉವಾಚ ॥

ಏವಮುಕ್ತೋ ದ್ವಿಜಶ್ರೇಷ್ಠೋ ದುಹಿತ್ರಾ ಸುಮಹಾಯಶಾಃ ।
ಪ್ರವಿವೇಶ ಪುರಂ ಹೃಷ್ಟಃ ಪೂಜಿತಃ ಸರ್ವದಾನವೈಃ ॥೨೮॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸೋಮವಂಶೇ ಯಯಾತಿಚರಿತೇ ಏಕೋನತ್ರಿಂಶೋಽಧ್ಯಾಯಃ

---

೨೭. ದೇವಯಾನಿ ಹೇಳಿದಳು.—"ಅಪ್ಪಾ, ನೀನು ಬ್ರಾಹ್ಮಣೋತ್ತಮನು. ನನಗೆ ಸಂತೋಷವಾಯಿತು. ಇನ್ನು ಪಟ್ಟಣವನ್ನು ಪ್ರವೇಶಿಸುವೆನು. ನಿನ್ನ ವಿಜ್ಞಾನವೂ ವಿದ್ಯಾಬಲವೂ ತಪ್ಪದೆ ಗುರಿಮುಟ್ಟತಕ್ಕವು."

೨೮. ಶೌನಕಮಹರ್ಷಿ ಹೇಳಿದನು.—ಮಗಳು ಇಂತೆನಲು, ಮಹಾತಪಸ್ವಿಯಾದ ಶುಕ್ರಾಚಾರ್ಯನು ಸಂತೋಷಗೊಂಡು ಪಟ್ಟಣವನ್ನು ಸೇರಿದನು. ದಾನವರೆಲ್ಲರೂ ಅವನನ್ನು ಪೂಜಿಸಿದರು.

## ಅಧ್ಯಾಯದ ಸಾರಾಂಶ

ಶುಕ್ರಾಚಾರ್ಯನು ದಾನವರಾಜನಾದ ವೃಷಪರ್ವನಲ್ಲಿಗೆ ಹೋಗಿ, ತಾನು ಅವನ ರಾಜ್ಯವನ್ನು ಬಿಟ್ಟು ಹೋಗುವೆನೆಂದೂ, ಅದಕ್ಕೆ ಕಾರಣವು ಕಚನಿಗೂ ದೇವಯಾನಿಗೂ ಅವನ ಕಡೆಯುವರು ಮಾಡಿದ ಅಪಚಾರವೆಂದೂ ತಿಳಿಸಿದನು. ವೃಷಪರ್ವನು ಆಚಾರ್ಯನನ್ನು ಸಂತೈಸಿ, ಅವನ ಕೋರಿಕೆಯನ್ನು ನೆರವೇರಿಸುವುದಾಗಿ ಮಾತುಕೊಟ್ಟನು. ಅದರಂತೆ ಅವನ ಮಗಳಾದ ಶರ್ಮಿಷ್ಠೆಯು ಸಾವಿರ ಜನ ಕನ್ಯೆಯರೊಡನೆ ದೇವಯಾನಿಗೆ ದಾಸಿಯಾಗಬೇಕೆಂದು ಗೊತ್ತಾಯಿತು. ಬಂಧುಗಳ ಹಿತದಲ್ಲೇ ಮನಸ್ಸಿಟ್ಟ ರಾಜಪುತ್ರಿಯು ಅದಕ್ಕೆ ಒಪ್ಪಿಕೊಂಡು, ದೇವಯಾನಿಯ ಬಳಿಗೆ ಹೋಗಿ ಅವಳನ್ನು ಸಮಾಧಾನ ಪಡಿಸಿದಳು. ಶುಕ್ರಾಚಾರ್ಯನೂ ಅವನ ಮಗಳೂ ತುಷ್ಟರಾಗಿ ನಗರವನ್ನು ಸೇರಿದರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಸೋಮವಂಶವರ್ಣನದೊಳಗೆ ಯಯಾತಿ ಚರಿತದಲ್ಲಿ ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು

## ಅಥ ಶ್ರೀಮತ್ಸ್ಯಮಹಾಪುರಾಣೇ ತ್ರಿಂಶೋಽಧ್ಯಾಯಃ

॥ ಶೌನಕ ಉವಾಚ ॥

ಅಥ ದೀರ್ಘೇಣ ಕಾಲೇನ ದೇವಯಾನೀ ನೃಪೋತ್ತಮ ।
ವನಂ ತದೇವ ನಿರ್ಯಾತಾ ಕ್ರೀಡಾರ್ಥಂ ವರವರ್ಣಿನೀ ॥ ೧ ॥

ತೇನ ದಾಸೀಸಹಸ್ರೇಣ ಸಾರ್ಧಂ ಶರ್ಮಿಷ್ಠಯಾ ತದಾ ।
ತಮೇವ ದೇಶಂ ಸಂಪ್ರಾಪ್ತಾ ಯಥಾಕಾಮಂ ಚಚಾರ ಸಾ ॥ ೨ ॥

ತಾಭಿಃ ಸಖೀಭಿಃ ಸಹಿತಾ ಸರ್ವಾಭಿರ್ಮುದಿತಾ ಭೃಶಂ ।
ಕ್ರೀಡಂತ್ಯೋಽಭಿರತಾಃ ಸರ್ವಾಃ ಪಿಬಂತ್ಯೋ ಮಧು ಮಾಧವಂ ॥ ೩ ॥

ಖಾದಂತ್ಯೋ ವಿವಿಧಾನ್ ಭಕ್ಷ್ಯಾನ್ ಫಲಾನಿ ವಿವಿಧಾನಿ ಚ ।
ಪುನಶ್ಚ ನಾಹುಷೋ ರಾಜಾ ಮೃಗಲಿಪ್ಸುರ್ಯದೃಚ್ಛಯಾ ॥ ೪ ॥

ತಮೇವ ದೇಶಂ ಸಂಪ್ರಾಪ್ತೋ ಜಲಲಿಪ್ಸುಃ ಪ್ರತರ್ಷಿತಃ ।
ದದರ್ಶ ದೇವಯಾನೀಂ ಚ ಶರ್ಮಿಷ್ಠಾಂ ತಾಂ ಚ ಯೋಷಿತಃ ॥ ೫ ॥

---

೧. ಶೌನಕನು ಹೇಳಿದನು.—ಓ ರಾಜಾ, ಕೇಳು; ಬಳಿಕ ಬಹುಕಾಲವಾದ ಮೇಲೆ ಸೌಂದರ್ಯದಿಂದ ಶೋಭಿಸುವ ದೇವಯಾನಿಯು ಆಟವಾಡುವುದಕ್ಕಾಗಿ ಅದೇ ವನಕ್ಕೆ ಹೊರಟಳು.

೨. ಶರ್ಮಿಷ್ಠೆಯೊಡನೆಯೂ ಆ ಸಾವಿರಜನ ದಾಸಿಯರೊಡನೆಯೂ ಆ ಸ್ಥಳಕ್ಕೆ ಹೋಗಿ ಅವಳು ಮನಬಂದಂತೆ ಓಡಾಡಿದಳು.

೩. ಆ ಗೆಳತಿಯರೆಲ್ಲರೊಡನೆಯೂ ಬೆರೆತು ಬಹಳ ಸಂತೋಷದಿಂದಿದ್ದಳು. ಅವರು ಆಸಕ್ತಿಯಿಂದಾಡಿದರು. ವಸಂತ ಋತುವಿನ ಹೊಸ ಜೇನನ್ನು ಕುಡಿದರು. ಬಗೆಬಗೆಯ ಹಣ್ಣುಗಳನ್ನೂ, ತಿಂಡಿಗಳನ್ನೂ ತಿಂದರು.

೪-೫. ಯಯಾತಿ ಮಹಾರಾಜನೂ ಸಹ ಜಿಂಕೆಯನ್ನು ಬೆನ್ನಟ್ಟಿಕೊಂಡು ಬಾಯಾರಿಕೆಯಿಂದ ನೀರನ್ನು ಹುಡುಕುತ್ತ, ಅಕಸ್ಮಾತ್ತಾಗಿ ಅದೇ ಸ್ಥಳಕ್ಕೆ ಬಂದನು. ದೇವಯಾನಿ, ಶರ್ಮಿಷ್ಠೆ ಮತ್ತು ಆ ಯುವತಿಯರೆಲ್ಲರನ್ನೂ ಅವನು ನೋಡಿದನು.

**ಪಿಬಂತ್ಯೋ ಲಲನಾಸ್ತಾಶ್ಚ ದಿವ್ಯಾಭರಣಭೂಷಿತಾಃ ।**
**ಉಪವಿಷ್ಟಾಂ ಚ ದದೃಶೇ ದೇವಯಾನೀಂ ಶುಚಿಸ್ಮಿತಾಂ ॥ ೬ ॥**

**ರೂಪೇಣಾಪ್ರತಿಮಾಂ ತಾಸಾಂ ಸ್ತ್ರೀಣಾಂ ಮಧ್ಯೇ ವರಾಂಗನಾಂ ।**
**ಶರ್ಮಿಷ್ಠಯಾ ಸೇವ್ಯಮಾನಾಂ ಪಾದಸಂವಾಹನಾದಿಭಿಃ ॥ ೭ ॥**

**॥ ಯಯಾತಿರುವಾಚ ॥**

**ದ್ವಾಭ್ಯಾಂ ಕನ್ಯಾಸಹಸ್ರಾಭ್ಯಾಂ ದ್ವೇ ಕನ್ಯೇ ಪರಿವಾರಿತೇ ।**
**ಗೋತ್ರೇ ಚ ನಾಮನೀ ಚೈವ ದ್ವಯೋಃ ಪೃಚ್ಛಾಮ್ಯತೋ ಹ್ಯಹಂ ॥ ೮ ॥**

**॥ ದೇವಯಾನ್ಯುವಾಚ ॥**

**ಆಖ್ಯಾಸ್ಯಾಮ್ಯಹಮಾದತ್ಸ್ವ ವಚನಂ ಮೇ ನರಾಧಿಪ ।**
**ಶುಕ್ರೋ ನಾಮಾಸುರಗುರುಃ ಸುತಾಂ ಜಾನೀಹಿ ತಸ್ಯ ಮಾಂ ॥ ೯ ॥**

**ಇಯಂ ಚ ಮೇ ಸಖೀ ದಾಸೀ ಯತ್ರಾಹಂ ತತ್ರ ಗಾಮಿನೀ ।**
**ದುಹಿತಾ ದಾನವೇಂದ್ರಸ್ಯ ಶರ್ಮಿಷ್ಠಾ ವೃಷಪರ್ವಣಃ ॥೧೦॥**

---

೬-೭. ಅವರು ಮಧುಪಾನದಲ್ಲಿ ತೊಡಗಿದ್ದರು. ಬಗೆಬಗೆಯ ಒಡವೆಗಳಿಂದ ಸಿಂಗರಿಸಿಕೊಂಡಿದ್ದರು. ನಡುವೆ ದೇವಯಾನಿಯು ಮುಗುಳುನಗೆ ನಗುತ್ತ ಕುಳಿತಿದ್ದಳು. ಅವಳ ರೂಪಕ್ಕೆ ಎಣೆಯೇ ಇರಲಿಲ್ಲ. ಶರ್ಮಿಷ್ಠೆಯು ಅವಳ ಕಾಲನ್ನೊತ್ತುತ್ತ ಹಲವು ಬಗೆಯಿಂದ ಸೇವೆಮಾಡುತ್ತಿದ್ದಳು.

೮. ಯಯಾತಿಯು ಹೇಳಿದನು.—"ಇಲ್ಲಿ ಚೆಲುವೆಯರಾದ ಇಬ್ಬರು ಕನ್ಯೆಯರು ಕುಳಿತಿರುವರು. ಅವರನ್ನು ಎರಡು ಸಾವಿರ ಜನ ಯುವತಿಯರು ಓಲೈಸುತ್ತಿರುವರು. ಈ ಇಬ್ಬರ ಕುಲವನ್ನೂ, ಹೆಸರನ್ನೂ ತಿಳಿಯಲಿಚ್ಛಿಸುತ್ತೇನೆ."

೯. ದೇವಯಾನಿ ಹೇಳಿದಳು.—"ಓ ರಾಜಾ, ಹೇಳುವೆನು ಕೇಳು. ದೈತ್ಯರ ಗುರುವಾದ ಶುಕ್ರಾಚಾರ್ಯನುಂಟಲ್ಲವೇ ? ನನ್ನನ್ನು ಅವನ ಮಗಳೆಂದು ತಿಳಿ.

೧೦. ಇವಳು ನನ್ನ ಗೆಳತಿ, ಪರಿಚಾರಿಕೆ; ನಾನೆಲ್ಲಿ ಹೋದರೆ ಅಲ್ಲಿ ಬರತಕ್ಕವಳು ; ದಾನವೇಂದ್ರನಾದ ವೃಷಪರ್ವನ ಮಗಳು ; ಇವಳ ಹೆಸರು ಶರ್ಮಿಷ್ಠೆ.

॥ ಯಯಾತಿರುವಾಚ ॥

ಕಥಂ ತು ತೇ ಸಖೀ ದಾಸೀ ಕನ್ಯೇಯಂ ವರವರ್ಣಿನೀ ।
ಅಸುರೇಂದ್ರಸುತಾ ಸುಭ್ರು ಪರಂ ಕೌತೂಹಲಂ ಹಿ ಮೇ ॥೧೧॥

॥ ದೇವಯಾನ್ಯುವಾಚ ॥

ಸರ್ವಮೇವ ನರವ್ಯಾಘ್ರ ವಿಧಾನಮನುವರ್ತತೇ ।
ವಿಧಿನಾ ವಿಹಿತಂ ಜ್ಞಾತ್ವಾ ಮಾ ವಿಚಿತ್ರಂ ಮನಃ ಕೃಥಾಃ ॥೧೨॥

ರಾಜವದ್ರೂಪವೇಶೌ ತೇ ಬ್ರಾಹ್ಮೀಂ ವಾಚಂ ಬಿಭರ್ಷಿ ಚ ।
ಕಿಂನಾಮಾ ತ್ವಂ ಕುತಶ್ಚಾಸಿ ಕಸ್ಯ ಪುತ್ರಶ್ಚ ಶಂಸ ಮೇ ॥೧೩॥

॥ ಯಯಾತಿರುವಾಚ ॥

ಬ್ರಹ್ಮಚರ್ಯೇಣ ವೇದೋಽಮೇ ಕೃತ್ಸ್ನಃ ಶ್ರುತಿಪಥಂ ಗತಃ ।
ರಾಜಾಹಂ ರಾಜಪುತ್ರಶ್ಚ ಯಯಾತಿರಿತಿ ವಿಶ್ರುತಃ ॥೧೪॥

---

೧೧. ಯಯಾತಿ ಹೇಳಿದನು.—"ಎಲೌ ಸುಂದರೀ, ದೈತ್ಯರಾಜನ ಮಗಳಾದ ಈ ಚೆಲುವೆಯು ನಿನ್ನ ಗೆಳತಿಯೂ ದಾಸಿಯೂ ಆದುದು ಹೇಗೆ? ಇದನ್ನರಿಯಲು ನನಗೆ ಬಹಳ ಕುತೂಹಲವಿದೆ."

೧೨. ದೇವಯಾನಿ ಹೇಳಿದಳು.—" ಓ ರಾಜಶ್ರೇಷ್ಠನೇ, ಎಲ್ಲವೂ ವಿಧಿವಿಲಾಸವನ್ನು ಅನುಸರಿಸುವುದು. ಇದು ದೈವಕೃತವೆಂದು ತಿಳಿ. ಮನಸ್ಸಿನಲ್ಲಿ ಆಶ್ಚರ್ಯಪಡಬೇಡ.

೧೩. ನಿನ್ನ ಆಕೃತಿಯೂ ವೇಷವೂ ರಾಜನಂತಿವೆ. ಬಹ್ಮತೇಜಸ್ವಿಯಂತೆ ನೀನು ಮಾತನಾಡುವೆ. ನಿನ್ನ ಹೆಸರೇನು? ಎಲ್ಲಿಂದ ಬಂದೆ? ನೀನು ಯಾರ ಪುತ್ರನು? ಇದೆಲ್ಲವನ್ನೂ ತಿಳಿಸು."

೧೪. ಯಯಾತಿಯು ಹೇಳಿದನು.—"ಬ್ರಹ್ಮಚರ್ಯವನ್ನು ಆಚರಿಸಿ ವೇದವೆಲ್ಲವನ್ನೂ ಗುರುವಿನಿಂದ ಉಪದೇಶಮಾಡಿಸಿಕೊಂಡಿರುವೆನು. ನಾನು ರಾಜ. ಯಯಾತಿಯೆಂದು ಪ್ರಸಿದ್ಧನಾದ ರಾಜಪುತ್ರ."

॥ ದೇವಯಾನ್ಯುವಾಚ ॥

**ಕೇನ ಚಾರ್ಥೇನ ನೃಪತೇ ಹ್ಯೇನಂ ದೇಶಂ ಸಮಾಗತಃ ।**
**ಜಿಘೃಕ್ಷುರ್ವಾರಿ ಯತ್ಕಿಂಚಿದಥವಾ ಮೃಗಲಿಪ್ಸಯಾ** ॥೧೫॥

॥ ಯಯಾತಿರುವಾಚ ॥

**ಮೃಗಲಿಪ್ಸುರಹಂ ಭದ್ರೇ ಪಾನೀಯಾರ್ಥಮಿಹಾಗತಃ ।**
**ಬಹುಧಾಪ್ಯನುಯುಕ್ತೋಽಸ್ಮಿ ತ್ವಮನುಜ್ಞಾತುಮರ್ಹಸಿ** ॥೧೬॥

॥ ದೇವಯಾನ್ಯುವಾಚ ॥

**ದ್ವಾಭ್ಯಾಂ ಕನ್ಯಾಸಹಸ್ರಾಭ್ಯಾಂ ದಾಸ್ಯಾ ಶರ್ಮಿಷ್ಠಯಾ ಸಹ ।**
**ತ್ವದಧೀನಾಸ್ಮಿ ಭದ್ರಂ ತೇ ಸಖೇ ಭರ್ತಾ ಚ ಮೇ ಭವ** ॥೧೭॥

॥ ಯಯಾತಿರುವಾಚ ॥

**ವಿದ್ಧ್ಯೌಶನಸಿ ಭದ್ರಂ ತೇ ನ ತ್ವದರ್ಹೋಽಸ್ಮಿ ಭಾಮಿನಿ ।**
**ಅವಿವಾಹ್ಯಾಃ ಸ್ಮ ರಾಜಾನೋ ದೇವಯಾನಿ ಪಿತುಸ್ತವ** ॥೧೮॥

---

೧೫. ದೇವಯಾನಿ ಹೇಳಿದಳು.—“ರಾಜಾ, ಈ ಸ್ಥಳಕ್ಕೆ ನೀನು ಬಂದು ದೇತಕ್ಕಾಗಿ? ನೀರೇನಾದರೂ ಸಿಕ್ಕೀತೆಂದೋ? ಇಲ್ಲವೇ ಬೇಟೆಯ ಮೃಗವನ್ನು ಹುಡುಕಿಕೊಂಡೋ?”

೧೬. ಯಯಾತಿ ಹೇಳಿದನು.—“ಎಲೌ ಕಲ್ಯಾಣೀ, ಮೃಗವನ್ನು ಹುಡುಕುತ್ತ ನೀರು ಕುಡಿಯುವುದಕ್ಕಾಗಿ ಇಲ್ಲಿಗೆ ಬಂದೆನು. ನನ್ನನ್ನು ನೀನು ಹಲವು ಬಗೆಯಿಂದ ಪ್ರಶ್ನಿಸಿದೆ. ಈಗ ನನ್ನಿಂದೇನಾಗಬೇಕು? ಅಪ್ಪಣೆಕೊಡು.”

೧೭. ದೇವಯಾನಿ ಹೇಳಿದಳು.—“ಈ ಎರಡುಸಾವಿರ ಕನ್ಯೆಯರು, ದಾಸಿಯಾದ ಶರ್ಮಿಷ್ಠೆ ಇವರೊಡನೆ ನಾನು ನಿನ್ನ ಅಧೀನಳಾಗಿರುವೆನು; ನಿನಗೆ ಮಂಗಳವಾಗಲಿ; ನೀನು ನನಗೆ ಈಗ ಮಿತ್ರನಾಗಿರುವೆ; ಇನ್ನು ಪತಿಯೂ ಆಗು.”

೧೮. ಯಯಾತಿ ಹೇಳಿದನು.—“ಓ ಮಂಗಳಾಂಗೀ, ನೀನು ಬ್ರಾಹ್ಮಣನಾದ ಶುಕ್ರಾಚಾರ್ಯನ ಮಗಳು. ಆದುದರಿಂದ ನಿನಗೆ ನಾನು ತಕ್ಕವನಲ್ಲ. ದೇವಯಾನೀ, ರಾಜರಾದ ನಾವು ನಿಮ್ಮ ತಂದೆಯೊಡನೆ ವಿವಾಹಸಂಬಂಧವನ್ನು ಬೆಳೆಸಬಾರದು.”

|| ದೇವಯಾನ್ಯುವಾಚ ||

ಸಂಸೃಷ್ಟಂ ಬ್ರಹ್ಮಣಾ ಕ್ಷತ್ರಂ ಕ್ಷತ್ರಂ ಬ್ರಹ್ಮಣಿ ಸಂಶ್ರಿತಂ ।
ಋಷಿಶ್ಚ ಋಷಿಪುತ್ರಶ್ಚ ನಾಹುಷಾದ್ಯ ಭಜಸ್ವ ಮಾಂ ||೧೯||

|| ಯಯಾತಿರುವಾಚ ||

ಏಕದೇಹೋದ್ಭವಾ ವರ್ಣಾಶ್ಚತ್ವಾರೋऽಪಿ ವರಾನನೇ ।
ಪೃಥಗ್ಧರ್ಮಾಃ ಪೃಥಕ್ಶೌಚಾಸ್ತೇಷಾಂ ವೈ ಬ್ರಾಹ್ಮಣೋ ವರಃ ||೨೦||

|| ದೇವಯಾನ್ಯುವಾಚ ||

ಪಾಣಿಗ್ರಹೋ ನಾಹುಷಾಯಂ ನ ಪುಂಭಿಃ ಸೇವಿತಃ ಪುರಾ ।
ತ್ವಮೇನಮಗ್ರಹೀದಗ್ರೇ ವೃಣೋಮಿ ತ್ವಾಮಹಂ ತತಃ ||೨೧||

ಕಥಂ ತು ಮೇ ಮನಸ್ವಿನ್ಯಾಃ ಪಾಣಿಮನ್ಯಃ ಪುಮಾನ್ ಸ್ಪೃಶೇತ್ ।
ಗೃಹೀತಮೃಷಿಪುತ್ರೇಣ ಸ್ವಯಂ ವಾಪ್ಯೃಷಿಣಾ ತ್ವಯಾ ||೨೨||

---

೧೯. ದೇವಯಾನಿ ಹೇಳಿದಳು.—"ಕ್ಷತ್ರಿಯ ವರ್ಣದಲ್ಲಿ ಬ್ರಹ್ಮವರ್ಣದ ಧರ್ಮಗಳು ಬೆರೆತಿವೆ. ಹಾಗೆಯೇ ಬ್ರಹ್ಮವರ್ಣದಲ್ಲೂ ಕ್ಷತ್ರಿಯವರ್ಣದ ಧರ್ಮಗಳೂ ಸೇರಿವೆ. ಯಯಾತಿ ಮಹಾರಾಜಾ, ನೀನು ಋಷಿಯೂ, ಋಷಿಯ ಮಗನೂ ಆಗಿರುವೆ. ಆದುದರಿಂದ ನನ್ನನ್ನು ಸ್ವೀಕರಿಸು."

೨೦. ಯಯಾತಿ ಹೇಳಿದನು.—"ಎಲೌ ಕಾಂತಮುಖೀ, ನಾಲ್ಕು ವರ್ಣಗಳೂ ಒಬ್ಬನೇ ಸೃಷ್ಟಿಕರ್ತನ ದೇಹದಿಂದ ಹುಟ್ಟಿದುವು ನಿಜ. ಆದರೂ ಅವುಗಳಲ್ಲಿ ಒಂದೊಂದರ ಧರ್ಮಗಳೂ ಆಚಾರಗಳೂ ಬೇರೆ ಬೇರೆಯಾಗಿವೆ. ಬ್ರಾಹ್ಮಣನು ಅವುಗಳಲ್ಲೆಲ್ಲಾ ಶ್ರೇಷ್ಠನು."

೨೧-೨೨. ದೇವಯಾನಿ ಹೇಳಿದಳು.—"ನಹುಷಪುತ್ರಾ, ಗಂಡಸರಾರೂ ನನ್ನ ಕೈಯನ್ನು ಹಿಂದೆ ಮುಟ್ಟಿರಲಿಲ್ಲ. ಮೊಟ್ಟಮೊದಲು ಅದನ್ನು ಹಿಡಿದವನು ನೀನೇ. ಆದುದರಿಂದ ನಿನ್ನನ್ನೇ ನಾನು ಪತಿಯೆಂದು ವರಿಸುವೆನು. ಋಷಿಪುತ್ರನೂ, ಸ್ವಯಂ ಋಷಿಯೂ ಆದ ನೀನು ಹಿಡಿದ, ಅಭಿಮಾನಶಾಲಿನಿಯಾದ ನನ್ನ ಕೈಯನ್ನು ಮತ್ತಾವ ಪುರುಷನು ಮುಟ್ಟಿಯಾನು?"

॥ ಯಯಾತಿರುವಾಚ ॥

ಕ್ರುದ್ಧಾದಾಶೀವಿಷಾತ್ಸರ್ಪಾಜ್ಜ್ವಲನಾತ್ಸರ್ವತೋಮುಖಾತ್ ।
ದುರಾಧರ್ಷತರೋ ವಿಪ್ರಃ ಪುರುಷೇಣ ವಿಜಾನತಾ ॥೨೬॥

॥ ದೇವಯಾನ್ಯುವಾಚ ॥

ಕಥಮಾಶೀವಿಷಾತ್ಸರ್ಪಾಜ್ಜ್ವಲನಾತ್ಸರ್ವತೋಮುಖಾತ್ ।
ದುರಾಧರ್ಷತರೋ ವಿಪ್ರ ಇತ್ಯಾತ್ಥ ಪುರುಷರ್ಷಭ ॥೨೪॥

॥ ಯಯಾತಿರುವಾಚ ॥

ದಶೇದಾಶೀವಿಷಸ್ತ್ವೇಕಂ ಶಸ್ತ್ರೇಣೈಕಶ್ಚ ವಧ್ಯತೇ ।
ಹಂತಿ ವಿಪ್ರಃ ಸರಾಷ್ಟ್ರಾಣಿ ಪುರಾಣ್ಯಪಿ ಹಿ ಕೋಪಿತಃ ॥೨೫॥

ದುರಾಧರ್ಷತರೋ ವಿಪ್ರಸ್ತಸ್ಮಾದ್ಭೀರು ಮತೋ ಮಮ ।
ಅತೋಽದತ್ತಾಂ ಚ ಪಿತ್ರಾ ತ್ವಾಂ ಭದ್ರೇ ನ ವಿವಹಾಮ್ಯಹಂ ॥೨೬॥

---

೨೩. ಯಯಾತಿ ಹೇಳಿದನು.—"ಕೋಪದಿಂದ ವಿಷದ ಹಲ್ಲುಗಳನ್ನು ತೆಗೆದು ಕೊಂಡು, ಬಾಯಿಯಿಂದ ವಿಷದ ಜ್ವಾಲೆಯನ್ನು ಕಾರುತ್ತಾ ಬರುತ್ತಿರುವ ಸರ್ಪ ವನ್ನಾದರೂ ಎದುರಿಸಬಹುದು. ಆದರೆ ವಿವೇಕಿಯಾದ ಮನುಷ್ಯನು ಬ್ರಾಹ್ಮಣ ನನ್ನು ಮಾತ್ರ ಎದುರುಹಾಕಿಕೊಳ್ಳಬಾರದು."

೨೪. ದೇವಯಾನಿ ಹೇಳಿದಳು.—"ಎಲೈ ಪುರುಷಶ್ರೇಷ್ಠನೇ, ಎಲ್ಲಕಡೆಗೂ ವಿಷಜ್ವಾಲೆಯನ್ನು ಬೀರುವ ವಿಷಸರ್ಪಕ್ಕಿಂತಲೂ ಬ್ರಾಹ್ಮಣನು ದುರಾಕ್ರಮನೆಂದು ಹೇಳಿದೆಯಲ್ಲಾ ! ಅದು ಹೇಗೆ ?"

೨೫. ಯಯಾತಿ ಹೇಳಿದನು.—"ಸರ್ಪವು ಒಬ್ಬನನ್ನು ಕಚ್ಚೀತು. ಆಯುಧ ದಿಂದ ಒಬ್ಬನನ್ನು ಕೊಲ್ಲಬಹುದು. ಆದರೆ ಬ್ರಾಹ್ಮಣನು ಸಿಟ್ಟಾದರೆ ರಾಷ್ಟ್ರಸಹಿತ ವಾಗಿ ಪಟ್ಟಣಗಳನ್ನು ಧ್ವಂಸಮಾಡುವನು.

೨೬. ಎಲೌ ಅಬಲೇ, ಆದುದರಿಂದಲೇ ಬ್ರಾಹ್ಮಣನನ್ನು ಎದುರಿಸುವುದು ಕಷ್ಟವೆಂದು ನಾನು ತಿಳಿದಿರುವುದು. ಮಂಗಳಾಂಗೀ, ನಿನ್ನ ತಂದೆಯು ಕೊಡದಿದ್ದರೆ ನಿನ್ನನ್ನು ನಾನು ಮದುವೆಯಾಗುವುದಿಲ್ಲ."

॥ ದೇವಯಾನ್ಯುವಾಚ ॥

ದತ್ತಾಂ ವಹಸ್ವ ಪಿತ್ರಾ ಮಾಂ ತ್ವಂ ಹಿ ರಾಜನ್ವೃತೋ ಮಯಾ ।
ಅಯಾಚತೋ ಭಯಂ ನಾಸ್ತಿ ದತ್ತಾಂ ಚ ಪ್ರತಿಗೃಹ್ಣತಃ ॥೨೭॥

॥ ಶೌನಕ ಉವಾಚ ॥

ತ್ವರಿತಂ ದೇವಯಾನ್ಯಾಥ ಪ್ರೇಷಿತಾ ಪಿತುರಾತ್ಮನಃ ।
ಸರ್ವಂ ನಿವೇದಯಾಮಾಸ ಧಾತ್ರೀ ತಸ್ಮೈ ಯಥಾತಥಂ ॥೨೮॥

ಶ್ರುತ್ವೈವ ಚ ಸ ರಾಜಾನಂ ದರ್ಶಯಾಮಾಸ ಭಾರ್ಗವಃ ।
ದೃಷ್ಟ್ವೈವಮಾಗತಂ ವಿಪ್ರಂ ಯಯಾತಿಃ ಪೃಥಿವೀಪತಿಃ ॥೨೯॥
ವವಂದೇ ಬ್ರಾಹ್ಮಣಂ ಕಾವ್ಯಂ ಪ್ರಾಂಜಲಿಃ ಪ್ರಣತಃ ಸ್ಥಿತಃ ।
ತಂ ಚಾಪ್ಯಭ್ಯವದತ್ಕಾವ್ಯಃ ಸಾಮ್ನಾ ಪರಮವಲ್ಗುನಾ ॥೩೦॥

॥ ದೇವಯಾನ್ಯುವಾಚ ॥

ರಾಜಾಽಯಂ ನಾಹುಷಸ್ತಾತ ದುರ್ಗಮೇ ಪಾಣಿಮಗ್ರಹೀತ್ ।
ನಮಸ್ತೇ ದೇಹಿ ಮಾಮಸ್ಮೈ ಲೋಕೇ ನಾನ್ಯಂ ಪತಿಂ ವೃಣೇ ॥೩೧॥

---

೨೭. ದೇವಯಾನಿ ಹೇಳಿದಳು.—"ರಾಜಾ, ನಾನೇನೋ ನಿನ್ನನ್ನು ವರಿಸು ವೆನು. ನನ್ನ ತಂದೆಯು ದಾನಮಾಡಿದಾಗ ನನ್ನನ್ನು ಸ್ವೀಕರಿಸು. ನೀನಾಗಿ ಅಪೇಕ್ಷಿಸಲಿಲ್ಲ. ಅವನು ಕೊಟ್ಟಾಗ ನನ್ನನ್ನು ಪ್ರತಿಗ್ರಹಿಸಿದರೆ ನಿನಗೆ ಭಯವೇನೂ ಆಗದು."

೨೮. ಶೌನಕಮುನಿ ಹೇಳಿದನು.—ಬಳಿಕ ದೇವಯಾನಿಯು ತನ್ನ ತಂದೆಯ ಬಳಿಗೆ ದಾದಿಯನ್ನು ತ್ವರೆಯಿಂದ ಕಳುಹಿಸಿದಳು. ಅವಳು ನಡೆದ ಸಂಗತಿಯೆಲ್ಲವನ್ನೂ ವಿವರವಾಗಿ ಅವನಿಗೆ ತಿಳಿಸಿದಳು.

೨೯-೩೦. ಇದನ್ನು ಕೇಳಿದ ಕೂಡಲೇ ಶುಕ್ರಾಚಾರ್ಯನು ರಾಜನನ್ನು ಕಂಡನು. ಯಯಾತಿಯೂ ಸಹ ಅವನು ಬಂದುದನ್ನು ನೋಡಿ, ನಮಸ್ಕರಿಸಿ, ಕೈ ಮುಗಿದುಕೊಂಡು ನಮ್ರನಾಗಿ ನಿಂತನು. ಆಚಾರ್ಯನು ಮನೋಹರವಾದ ಮೃದುವಚನಗಳಿಂದ ಅವನೊಡನೆ ಮಾತನಾಡಿದನು.

೩೧. ದೇವಯಾನಿ ಹೇಳಿದಳು.—"ಅಪ್ಪಾ, ನಹುಷಪುತ್ರನಾದ ಈ ರಾಜನು ನಾನು ಹಳ್ಳದಲ್ಲಿ ಬಿದ್ದಿದ್ದಾಗ ನನ್ನ ಕೈಯನ್ನು ಹಿಡಿದು ಎತ್ತಿದನು. ನನ್ನನ್ನು ಇವನಿಗೆ ಕೊಡು. ನಿನಗೆ ನಮಸ್ಕಾರ. ಲೋಕದಲ್ಲಿ ನಾನು ಮತ್ತಾರನ್ನೂ ಪತಿಯೆಂದು ಭಾವಿಸೆನು."

॥ ಶುಕ್ರ ಉವಾಚ ॥

ವೃತೋಽನಯಾ ಪತಿರ್ವೀರ ಸುತಯಾ ತ್ವಂ ಮಮೇಷ್ಟಯಾ ।
ಗೃಹಾಣೇಮಾಂ ಮಯಾ ದತ್ತಾಂ ಮಹಿಷೀಂ ನಹುಷಾತ್ಮಜ ॥೩೨॥

॥ ಯಯಾತಿರುವಾಚ ॥

ಅಧರ್ಮೋ ಮಾಂ ಸ್ಪೃಶೇದೇವಂ ಪಾಪಮಸ್ಯಾಶ್ಚ ಭಾರ್ಗವ ।
ವರ್ಣಸಂಕರತೋ ಬ್ರಹ್ಮನ್ನಿತಿ ತ್ವಾಂ ಪ್ರವೃಣೋಮ್ಯಹಂ ॥೩೩॥

॥ ಶುಕ್ರ ಉವಾಚ ॥

ಅಧರ್ಮಾತ್ತ್ವಾಂ ವಿಮುಂಚಾಮಿ ವರಂ ವರಯ ಚೇಪ್ಸಿತಂ ।
ಅಸ್ಮಿನ್ವಿವಾಹೇ ತ್ವಂ ಶ್ಲಾಘ್ಯೋ ರಹಃ ಪಾಪಂ ನುದಾಮಿ ತೇ ॥೩೪॥

ವಹಸ್ವ ಭಾರ್ಯಾಂ ಧರ್ಮೇಣ ದೇವಯಾನೀಂ ಶುಚಿಸ್ಮಿತಾಂ ।
ಅನಯಾ ಸಹ ಸಂಪ್ರೀತಿಮತುಲಾಂ ಸಮವಾಪ್ನುಹಿ ॥೩೫॥

---

೩೨. ಶುಕ್ರಾಚಾರ್ಯನು ಹೇಳಿದನು.—"ವೀರಾ, ನನ್ನ ಪ್ರಿಯಪುತ್ರಿಯು ನಿನ್ನನ್ನು ಪತಿಯೆಂದು ವರಿಸಿರುವಳು. ಇವಳನ್ನು ನಾನು ನಿನಗೆ ಕೊಡುವೆನು. ಎಲೈ ನಹುಷಪುತ್ರನೇ, ಇವಳನ್ನು ನಿನ್ನ ಪಟ್ಟದ ರಾಣಿಯನ್ನಾಗಿ ಸ್ವೀಕರಿಸು."

೩೩. ಯಯಾತಿ ಹೇಳಿದನು.—"ಭೃಗುವಂಶೋತ್ಪನ್ನನಾದ ಶುಕ್ರಾಚಾರ್ಯನೇ, ನೀನು ಹೇಳಿದಂತೆ ನಡೆದರೆ ವರ್ಣಸಂಕರವಾಗುವುದು. ಅದರಿಂದ ನನಗೆ ಅಧರ್ಮವೂ, ಇವಳಿಗೆ ಪಾಪವೂ ಬರುವುವು. ಆದಕಾರಣ ನಿನ್ನನ್ನು ಪ್ರಾರ್ಥಿಸುವೆನು."

೩೪. ಶುಕ್ರಾಚಾರ್ಯನು ಹೇಳಿದನು.—"ಅಧರ್ಮವು ನಿನಗೆ ಬಾರದಂತೆ ತಪ್ಪಿಸುವೆನು. ನಿನಗೆ ಬೇಕಾದ ವರವನ್ನು ಬೇಡಿಕೋ. ಈ ವಿವಾಹಕ್ಕೆ ನೀನು ಶ್ಲಾಘ್ಯನಾದ ವರನು. ನಿನ್ನ ಪಾಪವನ್ನು ನೀನು ಅರಿಯದಂತೆ ಪರಿಹರಿಸುವೆನು.

೩೫. ಮಂದಹಾಸಯುಕ್ತಳಾದ ಈ ದೇವಯಾನಿಯನ್ನು ಧರ್ಮದಿಂದ ಭಾರ್ಯೆಯೆಂದು ಪರಿಗ್ರಹಿಸು. ಇವಳಿಂದ ಅಪರಿಮಿತವಾದ ಆನಂದವನ್ನು ಪಡೆ.

**ಇಯಂ ಚಾಪಿ ಕುಮಾರೀ ತೇ ಶರ್ಮಿಷ್ಠಾ ವಾರ್ಷಪರ್ವಣೀ ।**
**ಸಂಪೂಜ್ಯಾ ಸಂತತಂ ರಾಜನ್ಮ್ಯೆನಾಂ ಶಯನೇ ಹ್ವಯ ॥೩೬॥**

**॥ ಶೌನಕ ಉವಾಚ ॥**

**ಏವಮುಕ್ತೋ ಯಯಾತಿಸ್ತು ಶುಕ್ರಂ ಕೃತ್ವಾ ಪ್ರದಕ್ಷಿಣಂ ।**
**ಜಗಾಮ ಸ್ವಪುರಂ ಹೃಷ್ಟಃ ಸೋಽನುಜ್ಞಾತೋ ಮಹಾತ್ಮನಾ ॥೩೭॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸೋಮವಂಶೇ ಯಯಾತಿಚರಿತೇ ತ್ರಿಂಶೋಽಧ್ಯಾಯಃ**

---

೩೬. ಓ ರಾಜಾ, ವೃಷಪರ್ವನ ಪುತ್ರಿಯಾದ ಈ ಶರ್ಮಿಷ್ಠೆಯನ್ನೂ ಸಹ ನೀನು ಯಾವಾಗಲೂ ಗೌರವದಿಂದ ನೋಡು. ಆದರೆ ಅವಳಿಗೆ ನಿನ್ನ ಹಾಸಿಗೆಯಲ್ಲಿ ಮಾತ್ರ ಭಾಗವನ್ನು ಕೊಡಬೇಡ."

೩೭. ಶೌನಕಮಹರ್ಷಿ ಹೇಳಿದನು.—ಶುಕ್ರಾಚಾರ್ಯನು ಹೀಗೆ ಹೇಳಲು ಯಯಾತಿಮಹಾರಾಜನು ಅವನಿಗೆ ಪ್ರದಕ್ಷಿಣೆಮಾಡಿ, ಆ ಮಹಾತ್ಮನ ಅಪ್ಪಣೆಯನ್ನು ಪಡೆದು, ಸಂತೋಷದಿಂದ ತನ್ನ ಪಟ್ಟಣಕ್ಕೆ ಹೋದನು.

**ಅಧ್ಯಾಯದ ಸಾರಾಂಶ**

ದೇವಯಾನಿಯು ಶರ್ಮಿಷ್ಠೆಯೊಡನೆ ಕನ್ಯಾಸಹಸ್ರಪರಿವೃತಳಾಗಿ ವಿಹಾರಕ್ಕೋಸ್ಕರ, ಹಿಂದೆ ಯಯಾತಿಮಹಾರಾಜನನ್ನು ನೋಡಿದ್ದ ಪ್ರದೇಶಕ್ಕೆ ಹೋದಳು. ಅಕಸ್ಮಾತ್ತಾಗಿ ಬೇಟೆಯನ್ನು ಹುಡುಕುತ್ತಾ ಆ ರಾಜನೂ ಅಲ್ಲಿಗೆ ಬಂದನು. ಇವರಿಬ್ಬರಿಗೂ ಸಂಭಾಷಣೆ ನಡೆಯಿತು. ತನ್ನನ್ನು ಪತ್ನಿಯನ್ನಾಗಿ ಸ್ವೀಕರಿಸಬೇಕೆಂದು ದೇವಯಾನಿಯು ರಾಜನನ್ನು ಬೇಡಿದಳು. ತಾನು ಕ್ಷತ್ರಿಯನಾದುದರಿಂದ ಬ್ರಾಹ್ಮಣಸ್ತ್ರೀಯನ್ನು ಪರಿಗ್ರಹಿಸಕೂಡದೆಂದೂ, ಅದರಿಂದ ಧರ್ಮ ಲೋಪವಾಗುವುದೆಂದೂ ಅವನು ಹೇಳಿದನು. ಕೊನೆಗೆ ಶುಕ್ರಾಚಾರ್ಯನು ಅಲ್ಲಿಗೆ ಬಂದು, ಧರ್ಮಲೋಪವಾಗದಂತೆ ರಾಜನನ್ನು ಅನುಗ್ರಹಿಸುವುದಾಗಿ ಹೇಳಿ ಅವನನ್ನು ಒಪ್ಪಿಸಿದನು. ದೇವಯಾನಿಗೂ ಯಯಾತಿಮಹಾರಾಜನಿಗೂ ವಿವಾಹವು ನಡೆಯಿತು. ಅವನು ಸಂತೋಷದಿಂದ ತನ್ನ ನಗರವನ್ನು ಸೇರಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಚಂದ್ರವಂಶದೊಳಗೆ ಯಯಾತಿರಾಜನ ವೃತ್ತಾಂತದಲ್ಲಿ ಮೂವತ್ತನೆಯ ಅಧ್ಯಾಯವು ಮುಗಿದುದು

## ಅಥ ಶ್ರೀಮತ್ಸ್ಯಮಹಾಪುರಾಣೇ ಏಕತ್ರಿಂಶೋಽಧ್ಯಾಯಃ

॥ ಶೌನಕ ಉವಾಚ ॥

ಯಯಾತಿಃ ಸ್ವಪುರಂ ಪ್ರಾಪ್ಯ ಮಹೇಂದ್ರಪುರಸನ್ನಿಭಂ ।
ಪ್ರವಿಶ್ಯಾಂತಃಪುರಂ ತತ್ರ ದೇವಯಾನೀಂ ನ್ಯವೇಶಯತ್ ॥ ೧ ॥

ದೇವಯಾನ್ಯಾಶ್ಚಾನುಮತೇ ಸುತಾಂ ತಾಂ ವೃಷಪರ್ವಣಃ ।
ಅಶೋಕವನಿಕಾಭ್ಯಾಶೇ ಗೃಹಂ ಕೃತ್ವಾ ನ್ಯವೇಶಯತ್ ॥ ೨ ॥

ವೃತಾಂ ದಾಸೀಸಹಸ್ರೇಣ ಶರ್ಮಿಷ್ಠಾಮಾಸುರಾಯಣೀಂ ।
ವಾಸೋಭಿರನ್ನಪಾನೈಶ್ಚ ಸಂವಿಭಜ್ಯ ಸುಸಂವೃತಾಂ ॥ ೩ ॥

ದೇವಯಾನ್ಯಾ ತು ಸಹಿತಃ ಸ ನೃಪೋ ನಹುಷಾತ್ಮಜಃ ।
ವಿಜಹಾರ ಬಹೂನಬ್ದಾನ್ ದೇವವನ್ಮುದಿತೋ ಭೃಶಂ ॥ ೪ ॥

ಋತುಕಾಲೇ ತು ಸಂಪ್ರಾಪ್ತೇ ದೇವಯಾನೀ ವರಾಂಗನಾ ।
ಲೇಭೇ ಗರ್ಭಂ ಪ್ರಥಮತಃ ಕುಮಾರಶ್ಚ ವ್ಯಜಾಯತ ॥ ೫ ॥

---

೧. ಶೌನಕಮುನಿ ಹೇಳಿದನು.—ದೇವೇಂದ್ರನ ಅಮರಾವತಿಯಂತಿರುವ ತನ್ನ ನಗರಕ್ಕೆ ಯಯಾತಿ ಮಹಾರಾಜನು ಹೋಗಿ ದೇವಯಾನಿಯನ್ನು ಅಂತಃಪುರದಲ್ಲಿ ಇರಿಸಿದನು.

೨ ದೇವಯಾನಿಯ ಇಷ್ಟದಂತೆ ಅಶೋಕವನದ ಸಮೀಪದಲ್ಲಿ ಒಂದು ಮನೆಯನ್ನು ನಿರ್ಮಿಸಿ ಅದರಲ್ಲಿ ಶರ್ಮಿಷ್ಠೆಯನ್ನು ಬಿಟ್ಟನು.

೩. ಆ ದೈತ್ಯೇಂದ್ರನ ಪುತ್ರಿಗೂ, ಅವಳ ಸಾವಿರ ಜನ ದಾಸಿಯರಿಗೂ ಆವಶ್ಯಕವಾದ ವಸ್ತ್ರಗಳು, ಅನ್ನಪಾನಗಳು ಇವುಗಳಿಗೆ ತಕ್ಕ ಅನುಕೂಲತೆಯನ್ನು ಕಲ್ಪಿಸಿದನು.

೪. ನಹುಷಪುತ್ರನಾದ ಯಯಾತಿ ಮಹಾರಾಜನು ದೇವಯಾನಿಯೊಡನೆ ಬಹುವರ್ಷಗಳ ಕಾಲ ಕ್ರೀಡಿಸಿದನು. ದೇವನಂತೆ ಅವನು ಅಪರಿಮಿತ ಸಂತೋಷದಿಂದಿದ್ದನು.

೫. ಋತುಕಾಲ ಬರಲು ನಾರೀಮಣಿಯಾದ ದೇವಯಾನಿಯು ಗರ್ಭವನ್ನು ಧರಿಸಿದಳು. ಅವಳಿಗೆ ಜ್ಯೇಷ್ಠಕುಮಾರನು ಜನಿಸಿದನು.

ಗತೇ ವರ್ಷಸಹಸ್ರೇ ತು ಶರ್ಮಿಷ್ಠಾ ವಾರ್ಷಪರ್ವಣೀ ।
ದದರ್ಶ ಯೌವನಂ ಪ್ರಾಪ್ತಾ ಋತುಂ ಸಾ ಕಮಲೇಕ್ಷಣಾ ॥ ೬ ॥

ಚಿಂತಯಾಮಾಸ ಧರ್ಮಜ್ಞಾ ಋತುಪ್ರಾಪ್ತೌ ಚ ಭಾಮಿನೀ ।
ಋತುಕಾಲಶ್ಚ ಸಂಪ್ರಾಪ್ತೋ ನ ಕಶ್ಚಿನ್ಮೇ ಪತಿರ್ವೃತಃ ॥ ೭ ॥

ಕಿಂ ಪ್ರಾಪ್ತಂ ಕಿಂ ಚ ಕರ್ತವ್ಯಂ ಕಥಂ ಕೃತ್ವಾ ಸುಖಂ ಭವೇತ್ ।
ದೇವಯಾನೀ ಪ್ರಸೂತಾಸೌ ವೃಥಾಹಂ ಪ್ರಾಪ್ತಯೌವನಾ ॥ ೮ ॥

ಯಥಾ ತಯಾ ವೃತೋ ಭರ್ತಾ ತಥೈವಾಹಂ ವೃಣೋಮಿ ತಂ ।
ರಾಜ್ಞಾ ಪುತ್ರಫಲಂ ದೇಯಮಿತಿ ಮೇ ನಿಶ್ಚಿತಾ ಮತಿಃ
ಅಪೀದಾನೀಂ ಸ ಧರ್ಮಾತ್ಮಾ ರಹೋ ಮೇ ದರ್ಶನಂ ವ್ರಜೇತ್ ॥ ೯ ॥

॥ ಶೌನಕ ಉವಾಚ ॥

ಅಥ ನಿಷ್ಕ್ರಮ್ಯ ರಾಜಾಸೌ ತಸ್ಮಿನ್ಕಾಲೇ ಯದೃಚ್ಛಯಾ ।
ಅಶೋಕವನಿಕಾಭ್ಯಾಶೇ ಶರ್ಮಿಷ್ಠಾಂ ಪ್ರಾಪ್ಯ ವಿಸ್ಮಿತಃ ॥೧೦॥

---

೬. ಸಾವಿರವರ್ಷಗಳು ಕಳೆದುವು. ವೃಷಪರ್ವನ ಪುತ್ರಿಯಾದ ಶರ್ಮಿಷ್ಠೆಗೆ ಯೌವನವು ಉದಿಸಿತು. ಆ ಕಮಲಾಕ್ಷಿಗೆ ಋತುಕಾಲವು ಒದಗಿತು.

೭. ಧರ್ಮವನ್ನರಿತ ಆ ನಾರೀಮಣಿಯಿಂತು ಯೋಚಿಸಿದಳು. "ಋತುಕಾಲವು ಬಂದಿತು. ನನಗಾರೂ ಪತಿ ದೊರೆಯಲಿಲ್ಲ.

೮. ಉಚಿತವಾವುದು? ಏನು ಮಾಡಬೇಕು? ಹೇಗೆ ಮಾಡಿದರೆ ಸುಖವು ದೊರೆತೀತು? ಈ ದೇವಯಾನಿಗೆ ಮಗುವು ಹುಟ್ಟಿತು. ನನಗೆ ಯೌವನವು ಬಂದುದು ವ್ಯರ್ಥವಾಯಿತು.

೯. ಅವಳು ಅವನನ್ನು ಪತಿಯಾಗಬೇಕೆಂದು ಬೇಡಿದಂತೆಯೇ ನಾನೂ ಬೇಡುವೆನು. ರಾಜನು ನನಗೆ ಪುತ್ರಫಲವನ್ನು ಕೊಡಬೇಕು. ಇದು ನನ್ನ ಧೃಡ ನಿಶ್ಚಯ. ಆ ಧರ್ಮಾತ್ಮನ ದರ್ಶನವು ನನಗೆ ಏಕಾಂತದಲ್ಲಾದೀತೇ?"

೧೦. ಶೌನಕಋಷಿ ಹೇಳಿದನು:—ಬಳಿಕ ಆ ಸಮಯಕ್ಕೆ ಸರಿಯಾಗಿ ಯಯಾತಿರಾಜನು ಅಕಸ್ಮಾತ್ತಾಗಿ ಅರಮನೆಯಿಂದ ಹೊರಟು, ಅಶೋಕವನದ ಸಮೀಪದಲ್ಲಿ ಶರ್ಮಿಷ್ಠೆಯನ್ನು ಸಂಧಿಸಿ ಆಶ್ಚರ್ಯಪಟ್ಟನು.

**ತಮೇಕಂ ರಹಸಿ ದೃಷ್ಟ್ವಾ ಶರ್ಮಿಷ್ಠಾ ಚಾರುಹಾಸಿನೀ ।**
**ಪ್ರತ್ಯುದ್ಗಮ್ಯಾಂಜಲಿಂ ಕೃತ್ವಾ ರಾಜಾನಂ ವಾಕ್ಯಮಬ್ರವೀತ್ ॥೧೧॥**

**॥ ಶರ್ಮಿಷ್ಠೋವಾಚ ॥**

**ಸೋಮಶ್ಚೇಂದ್ರಶ್ಚ ವಾಯುಶ್ಚ ಯಮಶ್ಚ ವರುಣಶ್ಚ ವಾ ।**
**ತವ ವಾ ನಾಹುಷ ಗೃಹೇ ಕಃ ಸ್ತ್ರಿಯಂ ದ್ರಷ್ಟುಮರ್ಹತಿ ॥೧೨॥**

**ರೂಪಾಭಿಜನಶೀಲೈರ್ಹಿ ತ್ವಂ ರಾಜನ್ವೇತ್ಥ ಮಾಂ ಸದಾ ।**
**ಸಾ ತ್ವಾಂ ಯಾಚೇ ಪ್ರಸಾದ್ಯೇಹ ರಂತುಮೇಹಿ ನರಾಧಿಪ ॥೧೩॥**

**॥ ಯಯಾತಿರುವಾಚ ॥**

**ವೇದ್ಮಿ ತ್ವಾಂ ಶೀಲಸಂಪನ್ನಾಂ ದೈತ್ಯಕನ್ಯಾಮನಿಂದಿತಾಂ ।**
**ರೂಪಂ ತು ತೇ ನ ಪಶ್ಯಾಮಿ ಸೂಚ್ಯಗ್ರಮಪಿ ನಿಂದಿತಂ ॥೧೪॥**

**ಮಾಮಬ್ರವೀತ್ತದಾ ಶುಕ್ರೋ ದೇವಯಾನೀಂ ಯದಾವಹಂ ।**
**ನೇಯಮಾಹ್ವಯಿತವ್ಯಾ ತೇ ಶಯನೇ ವಾರ್ಷಪರ್ವಣೀ ॥೧೫॥**

---

೧೧. ಜನರಹಿತ ಸ್ಥಳದಲ್ಲಿ ರಾಜನೊಬ್ಬನನ್ನೇ ಕಂಡು, ಶರ್ಮಿಷ್ಠೆಯು ಮುಗುಳುನಗೆಯಿಂದ ಎದ್ದು ಇದಿರುಗೊಂಡಳು. ಕೈಮುಗಿದುಕೊಂಡು ಅವನೊಡ ನಿಂತೆಂದಳು.

೧೨-೧೩. ಶರ್ಮಿಷ್ಠೆಯು ಹೇಳಿದಳು:—"ಎಲೈ ಯಯಾತಿ ಮಹಾರಾಜನೇ, ಚಂದ್ರ, ಇಂದ್ರ, ವಾಯು, ಯಮ, ವರುಣ ಮುಂತಾದವರಲ್ಲಿ ಯಾರು ತಾನೇ ನಿನ್ನ ಮನೆಯಲ್ಲಿರುವ ಸ್ತ್ರೀಯನ್ನು ಕಾಣಲಾಪರು ? ನನ್ನ ರೂಪ, ವಂಶ, ನಡತೆ ಇವು ಎಂತು ಪ್ರಶಸ್ತವಾಗಿವೆಯೆಂಬುವದನ್ನು ನೀನೇ ಬಲ್ಲೆ. ರಾಜಾ, ಇಗೋ ನಿನ್ನನ್ನು ಬೇಡುವೆನು. ದಯತೋರಿ ನನ್ನೊಡನೆ ವಿಹರಿಸಲು ಇಲ್ಲಿ ಬಾ."

೧೪. ಯಯಾತಿಯು ಹೇಳಿದನು:—"ನೀನು ಒಳ್ಳೆಯ ನಡತೆಯವಳು; ದೈತ್ಯರಾಜನ ಪುತ್ರಿ; ಕಳಂಕ ರಹಿತೆ; ನಿನ್ನ ರೂಪದಲ್ಲಿ ಸೂಜಿಯ ಮೊನೆಯಷ್ಟು ಕೂಡ ಕೊರತೆಯಿಲ್ಲ. ಇದೆಲ್ಲವೂ ನನಗೆ ಗೊತ್ತು.

೧೫. ದೇವಯಾನಿಯನ್ನು ನಾನು ವಿವಾಹಮಾಡಿಕೊಂಡಾಗ "ಶರ್ಮಿಷ್ಠೆಯನ್ನು ನೀನು ಸಹ ಶಯನಕ್ಕೆ ಕರೆಯಕೂಡದು" ಎಂದು ಶುಕ್ರಾಚಾರ್ಯನು ನನಗೆ ಹೇಳಿದನು.

|| ಶರ್ಮಿಷ್ಠೋವಾಚ ||

ನ ನರ್ಮಯುಕ್ತಂ ವಚನಂ ಹಿನಸ್ತಿ
ನ ಸ್ತ್ರೀಷು ರಾಜನ್ನ ವಿವಾಹಕಾಲೇ ।
ಪ್ರಾಣಾತ್ಯಯೇ ಸರ್ವಧನಾಪಹಾರೇ
ಪಂಚಾನೃತಾನ್ಯಾಹುರಪಾತಕಾನಿ ||೧೬||

ಪೃಷ್ಟಾಸ್ತು ಸಾಕ್ಷ್ಯೇ ಪ್ರವದಂತಿ ಚಾನ್ಯಥಾ
ಭವಂತಿ ಮಿಥ್ಯಾವಚನಾ ನರೇಂದ್ರ ತೇ ।
ಏಕಾರ್ಥತಾಯಾಂ ತು ಸಮಾಹಿತಾಯಾಂ
ಮಿಥ್ಯಾ ವದಂತಂ ಹ್ಯನೃತಂ ಹಿನಸ್ತಿ ||೧೭||

|| ಯಯಾತಿರುವಾಚ ||

ರಾಜಾ ಪ್ರಮಾಣಂ ಭೂತಾನಾಂ ಸ ವಿನಶ್ಯೇನ್ಮೃಷಾ ವದನ್ ।
ಅರ್ಥಕೃಚ್ಛ್ರಮಪಿ ಪ್ರಾಪ್ಯ ನ ಮಿಥ್ಯಾ ಕರ್ತುಮುತ್ಸಹೇ ||೧೮||

---

೧೬. ಶರ್ಮಿಷ್ಠೆ ಹೇಳಿದಳು :—"ಪರಿಹಾಸದಲ್ಲಿ, ಸ್ತ್ರೀಯರ ವಿಚಾರದಲ್ಲಿ, ವಿವಾಹ ಕಾಲದಲ್ಲಿ, ಪ್ರಾಣಾಪತ್ತಿನಲ್ಲಿ, ಐಶ್ವರ್ಯವೆಲ್ಲಾ ಸೂರೆಯಾಗುವ ಸಮಯದಲ್ಲಿ ಆಡಿದ ಸುಳ್ಳುಮಾತುಗಳು ಅಧರ್ಮವಲ್ಲ. ಓ ರಾಜಾ, ಈ ಐದು ತೆರನಾದ ಅಸತ್ಯಗಳೂ ಪಾಪವಿಲ್ಲದವು.

೧೭. ದೊರೆಯೇ, ಸಾಕ್ಷಿ ಹೇಳುವಂತೆ ಕೇಳಿದಾಗ ಕಂಡದ್ದನ್ನು ಬಿಟ್ಟು ಬೇರೆ ಹೇಳುವವರು ಸುಳ್ಳುಗಾರರು. ತನ್ನೊಬ್ಬನ ಪ್ರಯೋಜನದ ಸಾಧನೆಗಾಗಿ ಸುಳ್ಳಾಡುವವನನ್ನು ಅನೃತವು ಭಾಧಿಸುವುದು."

೧೮. ಯಯಾತಿಯು ಹೇಳಿದನು.—"ರಾಜನು ಪ್ರಾಣಿಗಳಿಗೆಲ್ಲಾ ಮಾದರಿಯಾಗಿರಬೇಕು. ಅವನು ಸುಳ್ಳಾಡಿದರೆ ಹಾಳಾಗುವನು. ಆದುದರಿಂದ ಎಷ್ಟೇ ಕಷ್ಟಬಂದರೂ ಅಸತ್ಯವನ್ನು ಆಚರಿಸಲಾರೆನು."

॥ ಶರ್ಮಿಷ್ಠೋವಾಚ ॥

**ಸಮಾವೇತೌ ಮತೌ ರಾಜನ್ಪತಿಃ ಸಖ್ಯಾಶ್ಚ ಯಃ ಪತಿಃ ।**
**ಸಮಂ ವಿವಾಹ ಇತ್ಯಾಹುಃ ಸಖ್ಯಾ ಮೇಽಸಿ ಪತಿರ್ಯತಃ ॥೧೯॥**

॥ ಯಯಾತಿರುವಾಚ ॥

**ದಾತವ್ಯಂ ಯಾಚಮಾನಸ್ಯ ಹೀತಿ ಮೇ ವ್ರತಮಾಹಿತಂ ।**
**ತ್ವಂ ಚ ಯಾಚಸಿ ಕಾಮಂ ಮಾಂ ಬ್ರೂಹಿ ಕಿಂ ಕರವಾಣಿ ತತ್ ॥೨೦॥**

॥ ಶರ್ಮಿಷ್ಠೋವಾಚ ॥

**ಅಧರ್ಮಾತ್ತ್ರಾಹಿ ಮಾಂ ರಾಜನ್ ಧರ್ಮಂ ಚ ಪ್ರತಿಪಾದಯ ।**
**ತ್ವತ್ತೋಽಪತ್ಯವತೀ ಲೋಕೇ ಚರೇಯಂ ಧರ್ಮಮುತ್ತಮಂ ॥೨೧॥**
**ತ್ರಯ ಏವಾಧನಾ ರಾಜನ್ ಭಾರ್ಯಾ ದಾಸಸ್ತಥಾ ಸುತಃ ।**
**ಯತ್ತೇ ಸಮಧಿಗಚ್ಛಂತಿ ಯಸ್ಯ ತೇ ತಸ್ಯ ತದ್ಧನಂ ॥೨೨॥**

---

೧೯. ಶರ್ಮಿಷ್ಠೆ ಹೇಳಿದಳು.—“ತನ್ನ ಪತಿಯೂ, ಗೆಳತಿಯ ಪತಿಯೂ ಸಮಾನರೆಂದು ಬಲ್ಲವರು ಹೇಳುವರು. ಅವರಿಬ್ಬರ ವಿವಾಹವೂ ಹಾಗೆಯೇ ಸಮ. ಮಹಾರಾಜಾ, ನೀನು ನನ್ನ ಗೆಳತಿಯ ಪತಿಯಾದುದರಿಂದ ನನಗೂ ಪತಿಯಂತೆಯೇ ಸರಿ.”

೨೦. ಯಯಾತಿ ಹೇಳಿದನು.—“ಬೇಡಿದವನಿಗೆ ಕೊಡಬೇಕೆಂಬುದೇ ನನ್ನ ದೃಢವ್ರತ. ನೀನೂ ಸಹ ಇಷ್ಟಾರ್ಥವನ್ನು ಕೇಳುತ್ತೀಯೆ. ಅದೇನು ಮಾಡಲಿ, ಹೇಳು.”

೨೧. ಶರ್ಮಿಷ್ಠೆಯು ಹೇಳಿದಳು.—“ಎಲೈ ಭೂಪತಿಯೇ, ನನಗೆ ಅಧರ್ಮ ಬಾರದಂತೆ ರಕ್ಷಿಸು ; ಧರ್ಮವನ್ನುಳಿಸು. ನಿನ್ನಿಂದ ನಾನು ಮಕ್ಕಳನ್ನು ಪಡೆದು ಉತ್ತಮ ಧರ್ಮವನ್ನು ಲೋಕದಲ್ಲಿ ನಡೆಸಬೇಕೆಂದಿರುವೆನು.

೨೨. ರಾಜಾ, ಲೋಕದಲ್ಲಿ ಈ ಮೂವರಿಗೆ ಮಾತ್ರ ಸ್ವಂತವಾದ ಧನವೇನೂ ಇಲ್ಲ. ಹೆಂಡತಿ, ಸೇವಕ ಮತ್ತು ಮಗ ಇವರಿಗೇನಾದರೂ ಧನವು ಸಿಕ್ಕಿದರೆ ಅದು ಅವರದಲ್ಲ. ಅವರು ಯಾರಿಗೆ ಸಂಬಂಧಪಟ್ಟಿರುವರೋ ಅವರದು.

ದೇವಯಾನ್ಯಾ ಭುಜಿಷ್ಯಾಸ್ಮಿ ವಶ್ಯಾ ಚ ತವ ಭಾರ್ಗವೀ ।
ಸಾ ಚಾಹಂ ಚ ತ್ವಯಾ ರಾಜನ್ ಭರಣೀಯಾಂ ಭಜಸ್ವ ಮಾಂ ॥೨೩॥

॥ ಶೌನಕ ಉವಾಚ ॥

ಏವಮುಕ್ತಸ್ತಯಾ ರಾಜಾ ತಥ್ಯಮಿತ್ಯಭಿಜಜ್ಞಿವಾನ್ ।
ಪೂಜಯಾಮಾಸ ಶರ್ಮಿಷ್ಠಾಂ ಧರ್ಮಂ ಚ ಪ್ರತಿಪಾದಯತ್ ॥೨೪॥

ಸ ಸಮಾಗಮ್ಯ ಶರ್ಮಿಷ್ಠಾಂ ಯಥಾಕಾಮಮವಾಪ್ಯ ಚ ।
ಅನ್ಯೋನ್ಯಂ ಚಾಭಿಸಂಪೂಜ್ಯ ಜಗ್ಮತುಸ್ತೌ ಯಥಾಗತಂ ॥೨೫॥

ತಸ್ಮಿನ್ ಸಮಾಗಮೇ ಸುಭ್ರೂಃ ಶರ್ಮಿಷ್ಠಾ ವಾರ್ಷಪರ್ವಣೀ ।
ಲೇಭೇ ಗರ್ಭಂ ಪ್ರಥಮತಸ್ತಸ್ಮಾನ್ನೃಪತಿಸತ್ತಮಾತ್ ॥೨೬॥

ಪ್ರಜಜ್ಞೇ ಚ ತತಃ ಕಾಲೇ ರಾಜ್ಞೀ ರಾಜೀವಲೋಚನಾ ।
ಕುಮಾರಂ ದೇವಗರ್ಭಾಭಮಾದಿತ್ಯಸಮತೇಜಸಂ ॥೨೭॥

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸೋಮವಂಶೇ ಯಯಾತಿ ಚರಿತೇ ಏಕತ್ರಿಂಶೋಽಧ್ಯಾಯಃ**

---

೨೩. ನಾನು ದೇವಯಾನಿಯ ಪರಿಚಾರಿಕೆ. ಅವಳು ನಿನ್ನ ಕೈಕೆಳಗಿನವಳು. ಆದುದರಿಂದ ನಾವಿಬ್ಬರೂ ನಿನ್ನ ಪೋಷ್ಯವರ್ಗಕ್ಕೆ ಸೇರಿದವರಾದೆವು. ಭೂಪಾ, ನಿನ್ನ ಭೃತ್ಯಳಾದ ನನ್ನನ್ನು ಸ್ವೀಕರಿಸು."

೨೪. ಶರ್ಮಿಷ್ಠೆಯು ಹೀಗೆ ಹೇಳಲು ಯಾಯಾತಿ ಮಹಾರಾಜನು ಅದು ಸತ್ಯವೆಂದು ತಿಳಿದನು. ಅವಳನ್ನು ಗೌರವಿಸಿ ಧರ್ಮವನ್ನು ಪಾಲಿಸಿದನು.

೨೫. ಅವನು ಶರ್ಮಿಷ್ಠೆಯನ್ನು ಸೇರಿ ಅವಳ ಇಷ್ಟಾನುಸಾರವಾಗಿ ನಡೆದನು. ಅವರಿಬ್ಬರೂ ಒಬ್ಬರನ್ನೊಬ್ಬರು ಸತ್ಕರಿಸಿ ತಮ್ಮ ತಮ್ಮ ಸ್ಥಳಗಳಿಗೆ ತೆರಳಿದರು.

೨೬. ಸುಂದರಿಯೂ, ವೃಷಪರ್ವನ ಪುತ್ರಿಯೂ ಆದ ಶರ್ಮಿಷ್ಠೆಯು ಆ ರಾಜಶ್ರೇಷ್ಠನ ಸಮಾಗಮದಿಂದ ಗರ್ಭವನ್ನು ಧರಿಸಿದಳು.

೨೭. ಬಳಿಕ ಪ್ರಸವಕಾಲವು ಬರಲು, ಕಮಲಗಳಂತೆ ವಿಶಾಲವಾದ ನೇತ್ರಗಳಿಂದ ಶೋಭಿಸುವ ಆ ಶರ್ಮಿಷ್ಠೆಯು ದೇವಶಿಶುವಿನಂತಿರುವ ಗಂಡು ಮಗುವನ್ನು ಪಡೆದಳು. ಅದು ಸೂರ್ಯನಂತೆ ತೇಜಸ್ವಿಯಾಗಿತ್ತು.

## ಅಧ್ಯಾಯದ ಸಾರಾಂಶ

ದೇವಯಾನಿಯು ಮಗುವನ್ನು ಪಡೆದಳು. ಶರ್ಮಿಷ್ಠೆಯು ಇದನ್ನರಿತು ತನಗೆ ಸಂತಾನಪ್ರಾಪ್ತಿಯಿಲ್ಲದುದಕ್ಕಾಗಿ ಕೊರಗುತ್ತಿದ್ದಳು. ಒಂದು ದಿನ ರಾಜನೂ ಅವಳೂ ಏಕಾಂತದಲ್ಲಿ ಸಂಧಿಸಿದರು. ತಾನು ದೇವಯಾನಿಯ ದಾಸಿಯಾದುದರಿಂದ ರಾಜನ ಭೃತ್ಯಳೂ ಆದಳೆಂದೂ, ತನ್ನನ್ನವನು ಪರಿಗ್ರಹಿಸಿ ಪುತ್ರಲಾಭವನ್ನು ಕೊಡಬೇಕೆಂದೂ ಯುಕ್ತಿಯೊಡನೆ ಹೇಳಿದಳು. ರಾಜನು ಅದಕ್ಕೆ ಒಡಂಬಟ್ಟನು. ಕೆಲವು ಕಾಲಾನಂತರ ಅವಳು ಗರ್ಭವತಿಯಾದಳು ; ಮತ್ತು ಕುಮಾರನನ್ನು ಹೆತ್ತಳು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಚಂದ್ರವಂಶದೊಳಗೆ ಯಯಾತಿ ಚರಿತದಲ್ಲಿ
ಮೂವತ್ತೊಂದನೆಯ ಅಧ್ಯಾಯವು ಮುಗಿದುದು



## ಅಥ ಶ್ರೀಮತ್ಸ್ಯಮಹಾಪುರಾಣೇ ದ್ವಾತ್ರಿಂಶೋಽಧ್ಯಾಯಃ

|| ಶೌನಕ ಉವಾಚ ||

ಶ್ರುತ್ವಾ ಕುಮಾರಂ ಜಾತಂ ಸಾ ದೇವಯಾನೀ ಶುಚಿಸ್ಮಿತಾ ।
ಚಿಂತಯಾವಿಷ್ಟದುಃಖಾರ್ತಾ ಶರ್ಮಿಷ್ಠಾಂ ಪ್ರತಿ ಭಾರತ || ೧ ||

ತತೋಽಭಿಗಮ್ಯ ಶರ್ಮಿಷ್ಠಾಂ ದೇವಯಾನ್ಯಬ್ರವೀದಿದಂ ।
ಕಿಮರ್ಥಂ ವೃಜಿನಂ ಸುಭ್ರು ಕೃತಂ ತೇ ಕಾಮಲುಬ್ಧಯಾ || ೨ ||

|| ಶರ್ಮಿಷ್ಠೋವಾಚ ||

ಋಷಿರಭ್ಯಾಗತಃ ಕಶ್ಚಿದ್ಧರ್ಮಾತ್ಮಾ ವೇದಪಾರಗಃ ।
ಸ ಮಯಾ ತು ವರಃ ಕಾಮಂ ಯಾಚಿತೋ ಧರ್ಮಸಂಹತಂ || ೩ ||

ನಾಹಮನ್ಯಾಯತಃ ಕಾಮಮಾಚರಾಮಿ ಶುಚಿಸ್ಮಿತೇ ।
ತಸ್ಮಾದೃಷೇರ್ಮಮಾಪತ್ಯಮಿತಿ ಸತ್ಯಂ ಬ್ರವೀಮಿ ತೇ || ೪ ||

---

೧-೨. ಶೌನಕ ಮಹರ್ಷಿ ಹೇಳಿದನು:—ಶರ್ಮಿಷ್ಠೆಗೆ ಮಗನು ಹುಟ್ಟಿದ ನೆಂಬ ಸಮಾಚಾರವನ್ನು ಕೇಳಿ ದೇವಯಾನಿಗೆ ಬಹಳ ಚಿಂತೆ ಹುಟ್ಟಿತು. ದುಃಖ ದಿಂದ ಅವಳು ಶರ್ಮಿಷ್ಠೆಯ ಬಳಿಗೆ ಹೋಗಿ "ಎಲೌ ಸುಂದರೀ, ಕಾಮಲೋಭ ದಿಂದ ಏತಕ್ಕಾಗಿ ಈ ಪಾಪವನ್ನಾಚರಿಸಿದೆ?" ಎಂದು ಕೇಳಿದಳು.

೩. ಶರ್ಮಿಷ್ಠೆಯು ಹೇಳಿದಳು :—"ಧರ್ಮಾತ್ಮನೂ, ವೇದಪಾರಂಗತನೂ ಆದ ಒಬ್ಬಾನೊಬ್ಬ ಋಷಿಯು ತಾನಾಗಿಯೇ ಬಂದಿದ್ದನು. ಮಹಾತ್ಮನಾದ ಅವನನ್ನು ನಾನು ಧರ್ಮಲೋಪವಿಲ್ಲದಂತಹ ಮನೋರಥವನ್ನು ಬೇಡಿದೆನು.

೪. ಎಲೌ ಮಂದಹಾಸಿನಿ, ನಾನು ನ್ಯಾಯಮಾರ್ಗವನ್ನು ಬಿಟ್ಟು ಇಂದ್ರಿಯೋಪಭೋಗವನ್ನು ಅನುಭವಿಸಿದವಳಲ್ಲ. ಆದುದರಿಂದ ನನ್ನ ಈ ಮಗನು ಋಷಿಪುತ್ರನು ; ನಿನ್ನೊಡನೆ ಸತ್ಯವನ್ನೇ ನುಡಿಯುವೆನು."

|| ದೇವಯಾನ್ಯುವಾಚ ||

ಯದ್ಯೇತದೇವಂ ಶರ್ಮಿಷ್ಠೇ ನ ಮನ್ಯುರ್ವಿದ್ಯತೇ ಮಮ |
ಅಪತ್ಯಂ ಯದಿ ತೇ ಲಬ್ಧಂ ಜ್ಯೇಷ್ಠಾಚ್ಛ್ರೇಷ್ಠಾಚ್ಚ ವೈ ದ್ವಿಜಾತ್ || ೫ ||

ಶೋಭನಂ ಭೀರು ಸತ್ಯಂ ಚೇತ್ಕಥಂ ಸ ಜ್ಞಾಯತೇ ದ್ವಿಜಃ |
ಗೋತ್ರನಾಮಾಭಿಜನತಃ ಶ್ರೋತುಮಿಚ್ಛಾಮಿ ತಂ ದ್ವಿಜಂ || ೬ ||

|| ಶರ್ಮಿಷೋವಾಚ ||

ಓಜಸಾ ತೇಜಸಾ ಚೈವ ದೀಪ್ಯಮಾನಂ ರವಿಂ ಯಥಾ |
ತಂ ದೃಷ್ಟ್ವಾ ಮಮ ಸಂಪ್ರಷ್ಟುಂ ಶಕ್ತಿರ್ನಾಸೀಚ್ಛುಚಿಸ್ಮಿತೇ || ೭ ||

|| ಶೌನಕ ಉವಾಚ ||

ಅನ್ಯೋನ್ಯಮೇವಮುಕ್ತ್ವಾ ಚ ಸಂಪ್ರಹಸ್ಯ ಚ ತೇ ಮಿಥಃ |
ಜಗಾಮ ಭಾರ್ಗವೀ ವೇಶ್ಮ ತಥ್ಯಮಿತ್ಯಭಿಜಾನತೀ || ೮ ||

---

೫. ದೇವಯಾನಿ ಹೇಳಿದಳು.—“ಓ ಶರ್ಮಿಷ್ಠೇ, ಮಿಕ್ಕವರಿಗಿಂತ ಹಿರಿಯವನೂ, ಶ್ರೇಷ್ಠನೂ ಆದ ಬ್ರಾಹ್ಮಣನಿಂದ ನೀನು ಮಗುವನ್ನು ಪಡೆದಿದ್ದರೆ ನನಗೆ ಕೋಪವೇನೂ ಇಲ್ಲ.

೬. ಎಲೌ ಕಾಮಿನೀ, ನಿನ್ನ ಈ ಸವಿನುಡಿಯು ಸತ್ಯವಾಗಿದ್ದರೆ, ಆ ಬ್ರಾಹ್ಮಣನನ್ನು ಕಾಣುವುದೆಂತು? ಅವನ ಗೋತ್ರವಾವುದು? ಯಾವ ವಂಶದಲ್ಲಿ ಹುಟ್ಟಿದವನು? ಅವನ ಹೆಸರೇನು? ಇದನ್ನು ತಿಳಿಯಬಯಸುವೆನು.”

೭. ಶರ್ಮಿಷ್ಠೆ ಹೇಳಿದಳು.—“ಅವನು ಮನಶ್ಶಕ್ತಿಯಿಂದಲೂ, ತೇಜಸ್ಸಿನಿಂದಲೂ ಸೂರ್ಯನಂತೆ ಬೆಳಗುತ್ತಿದ್ದನು. ದೇವಯಾನೀ, ಅವನನ್ನು ಕಂಡಾಗ ಇವೆಲ್ಲವನ್ನೂ ಕೇಳಲು ನನಗೆ ಶಕ್ತಿಯೇ ಬಾರದಂತಾಯಿತು.”

೮. ಶೌನಕಮುನಿ ಹೇಳಿದನು.—ಅವರಿಬ್ಬರೂ ಒಬ್ಬರೊಬ್ಬರಿಗೆ ಹೀಗೆ ಹೇಳಿ ವಿನೋದದಿಂದ ನಕ್ಕರು. ದೇವಯಾನಿಯು ಅದು ನಿಜವೆಂದೇ ಅರಿತು ತನ್ನ ಮನೆಗೆ ಹೋದಳು.

ಯುಯಾತಿರ್ದೇವಯಾನ್ಯಾಂ ತು ಪುತ್ರಾವಜನಯುನ್ನೃಪಃ ।
ಯುದುಂ ಚ ತುರ್ವಸುಂ ಚೈವ ಶಕ್ರವಿಷ್ಣೂ ಇವಾಪರೌ ॥ ೯ ॥

ತಸ್ಮಾದೇವ ತು ರಾಜರ್ಷೇಃ ಶರ್ಮಿಷ್ಠಾ ವಾರ್ಷಪರ್ವಣೀ ।
ದ್ರುಹ್ಯುಂ ಚಾನುಂ ಚ ಪೂರುಂ ಚ ತ್ರೀನ್ ಕುಮಾರಾನಜೀಜನತ್ ॥೧೦॥

ತತಃ ಕಾಲೇ ಚ ಕಸ್ಮಿಂಶ್ಚಿದ್ದೇವಯಾನೀ ಶುಚಿಸ್ಮಿತಾ ।
ಯುಯಾತಿಸಹಿತಾ ರಾಜಞ್ಜಗಾಮ ಹರಿತಂ ವನಂ ॥೧೧॥

ದದರ್ಶ ಚ ತದಾ ತತ್ರ ಕುಮಾರಾನ್ದೇವರೂಪಿಣಃ ।
ಕ್ರೀಡಮಾನಾನ್ಸುವಿಸ್ರಬ್ಧಾನ್ವಿಸ್ಮಿತಾ ಚೇದಮಬ್ರವಿತ್ ॥೧೨॥

॥ ದೇವಯಾನ್ಯುವಾಚ ॥

ಕಸ್ಯೈತೇ ದಾರಕಾ ರಾಜನ್ದೇವಪುತ್ರೋಪಮಾಃ ಶುಭಾಃ ।
ವರ್ಚಸಾ ರೂಪತಶ್ಚೈವ ದೃಶ್ಯಂತೇ ಸದೃಶಾಸ್ತವ ॥೧೩॥

---

೯. ಯುಯಾತಿ ಮಹಾರಾಜನಿಂದ ದೇವಯಾನಿಯು ಯದು ಮತ್ತು ತುರ್ವಸುಗಳೆಂಬ ಪುತ್ರರಿಬ್ಬರನ್ನು ಪಡೆದಳು. ಅವರು ರೂಪಾಂತರದಿಂದ ಬಂದ ಇಂದ್ರ ವಿಷ್ಣುಗಳೋ ಎನ್ನುವಂತಿದ್ದರು.

೧೦. ವೃಷಪರ್ವನ ಪುತ್ರಿಯಾದ ಶರ್ಮಿಷ್ಠೆಯೂ ಸಹ ಆ ರಾಜರ್ಷಿಯಿಂದಲೇ ದ್ರುಹ್ಯು, ಅನು ಮತ್ತು ಪೂರುಗಳೆಂಬ ಮೂವರು ಸುತರನ್ನು ಹೊಂದಿದಳು.

೧೧-೧೨. ಬಳಿಕ ಒಂದಾನೊಂದು ಕಾಲದಲ್ಲಿ ಪ್ರಸನ್ನಮುಖಿಯಾದ ದೇವಯಾನಿಯು ಯುಯಾತಿಮಹಾರಾಜನೊಡನೆ ಹಚ್ಚಗಿರುವ ವನದಲ್ಲಿ ತಿರುಗುತ್ತಿದ್ದಳು. ಅಲ್ಲಿ ಸ್ವೇಚ್ಛೆಯಾಗಿ ಆಡುತ್ತಿರುವ ದೇವಸೌಂದರ್ಯದ ಮಕ್ಕಳನ್ನು ಕಂಡು ಆಶ್ಚರ್ಯದಿಂದಿಂತೆಂದಳು.

೧೩. ದೇವಯಾನಿ ಹೇಳಿದಳು.—"ಓ ರಾಜಾ, ಮಂಗಳಮುಖದ ಈ ಹುಡುಗರು ಯಾರ ಮಕ್ಕಳು? ಇವರು ದೇವಕುಮಾರರಂತಿರುವರು. ತೇಜಸ್ಸಿನಲ್ಲೂ ಆಕೃತಿಯಲ್ಲೂ ನಿನ್ನನ್ನೇ ಹೋಲುವರು."

**ಏವಂ ಪೃಷ್ಟ್ವಾ ತು ರಾಜಾನಂ ಕುಮಾರಾನ್ಪರ್ಯಪೃಚ್ಛತ**
**ಕಿಂ ನಾಮಧೇಯಗೋತ್ರೇ ವಃ ಪುತ್ರಕಾ ಬ್ರಾಹ್ಮಣಃ ಪಿತಾ ॥೧೪॥**

**ವಿಬ್ರೂತ ಮೇ ಯಥಾತಥ್ಯಂ ಶ್ರೋತುಕಾಮಾಸ್ಮ್ಯತೋ ಹ್ಯಹಂ ।**
**ತೇಽದರ್ಶಯನ್ ಪ್ರದೇಶಿನ್ಯಾ ತಮೇವ ನೃಪಸತ್ತಮಂ ।**
**ಶರ್ಮಿಷ್ಠಾಂ ಮಾತರಂ ಚೈವ ತಸ್ಯಾ ಊಚುಃ ಕುಮಾರಕಾಃ ॥೧೫॥**

**॥ ಶೌನಕ ಉವಾಚ ॥**

**ಇತ್ಯುಕ್ತ್ವಾ ಸಹಿತಾಸ್ತೇನ ರಾಜಾನಮುಪಚಕ್ರಮುಃ ॥೧೬॥**

**ನಾಭ್ಯನಂದತ ತಾನ್ರಾಜಾ ದೇವಯಾನ್ಯಾಸ್ತದಾಂತಿಕೇ ।**
**ರುದಂತಸ್ತೇಽಥ ಶರ್ಮಿಷ್ಠಾಮಭ್ಯಯುರ್ಬಾಲಕಾಸ್ತದಾ ॥೧೭॥**

**ದೃಷ್ಟ್ವಾ ತೇಷಾಂ ತು ಬಾಲಾನಾಂ ಪ್ರಣಯಂ ಪಾರ್ಥಿವಂ ಪ್ರತಿ ।**
**ಬುದ್ಧ್ವಾ ಚ ತತ್ವತೋ ದೇವೀ ಶರ್ಮಿಷ್ಠಾಮಿದಮಬ್ರವೀತ್ ॥೧೮॥**

---

೧೪. ರಾಜನನ್ನು ಹೀಗೆ ಕೇಳಿ ಆ ಹುಡುಗರನ್ನು ಬಳಿಕ ಪ್ರಶ್ನಿಸಿದಳು. "ಎಲೈ ಮಕ್ಕಳೇ, ನಿಮ್ಮ ತಂದೆಯಾದ ಬ್ರಾಹ್ಮಣನ ಹೆಸರೂ ಗೋತ್ರವೂ ಯಾವುವು? ನನಗೆ ನಿಜವನ್ನು ಹೇಳಿರಿ. ಇದನ್ನು ಮೊದಲು ಕೇಳಬೇಕೆಂದು ನನಗೆ ಇಚ್ಛೆ ಇದೆ."

೧೫. ಆ ಮಕ್ಕಳು ತಮ್ಮ ತೋರಬೆರಳಿನಿಂದ ಆ ರಾಜನನ್ನೇ ತೋರಿಸಿದರು; ಮತ್ತು ಶರ್ಮಿಷ್ಠೆಯು ತಮ್ಮ ತಾಯಿಯೆಂದು ಅವಳಿಗೆ ಹೇಳಿದರು.

೧೬. ಹೀಗೆಂದು ಹೇಳಿ ಅವರು ಒಟ್ಟಾಗಿ ರಾಜನ ಬಳಿಗೆ ಹೋದರು.

೧೭-೧೮. ಶೌನಕಮುನಿ ಹೇಳಿದನು:—ದೇವಯಾನಿಯು ಪಕ್ಕದಲ್ಲಿದ್ದ ಕಾರಣ ದೊರೆಯು ಅವರನ್ನು ಆದರಿಸಲಿಲ್ಲ. ಬಳಿಕ ಆ ಮಕ್ಕಳು ಅಳುತ್ತಾ ತಾಯಿಯ ಹತ್ತಿರಕ್ಕೆ ಹೋದರು. ರಾಜನ ಮೇಲೆ ಅವರಿಗಿದ್ದ ಪ್ರೀತಿಯನ್ನು ಕಂಡು, ವಾಸ್ತವಾಂಶವನ್ನು ಅರಿತು ದೇವಯಾನಿಯು ಶರ್ಮಿಷ್ಠೆಗಿಂತೆಂದಳು.

|| ದೇವಯಾನ್ಯುವಾಚ ||

ಮದಧೀನಾ ಸತೀ ಕಸ್ಮಾದಕಾರ್ಷೀರ್ವಿಪ್ರಿಯಂ ಮಮ |
ತಮೋಽಪಾಸುರಧರ್ಮಂ ತ್ವಮಾಸ್ಥಿತಾ ನ ಬಿಭೇಷಿ ಕಿಂ ||೧೯||

|| ಶರ್ಮಿಷ್ಠೋವಾಚ ||

ಯದುಕ್ತಮೃಷಿರಿತ್ಯೇವ ತತ್ಸತ್ಯಂ ಚಾರುಹಾಸಿನಿ |
ನ್ಯಾಯತೋ ಧರ್ಮತಶ್ಚೈವ ಚರಂತೀ ನ ಬಿಭೇಮಿ ತೇ ||೨೦||

ಯದಾ ತ್ವಯಾ ವೃತೋ ರಾಜಾ ವೃತ ಏವ ತದಾ ಮಯಾ |
ಸಖೀಭರ್ತಾ ಹಿ ಧರ್ಮೇಣ ಭರ್ತಾ ಭವತಿ ಶೋಭನೇ ||೨೧||

ಪೂಜ್ಯಾಸಿ ಮಮ ಮಾನ್ಯಾ ಚ ಶ್ರೇಷ್ಠಾ ಜ್ಯೇಷ್ಠಾ ಚ ಬ್ರಾಹ್ಮಣೀ |
ತ್ವತ್ತೋ ಹಿ ಮೇ ಪೂಜ್ಯತರೋ ರಾಜರ್ಷಿಃ ಕಿಂ ನ ವೇತ್ಸಿ ತತ್ ||೨೨||

---

೧೯. ದೇವಯಾನಿ ಹೇಳಿದಳು :—"ನನ್ನ ಅಧೀನಳಾಗಿದ್ದು ನನಗೇಕೆ ಅಪಕಾರವನ್ನು ಮಾಡಿದೆ? ನಿನ್ನ ಜಾತಿಗೆ ಸಹಜವಾದ ರಾಕ್ಷಸಧರ್ಮವನ್ನೇ ಅವಲಂಬಿಸಿದೆ. ಈ ಕಾರ್ಯಕ್ಕಾಗಿ ನಿನಗೆ ಹೆದರಿಕೆಯಿಲ್ಲವೇ?"

೨೦. ಶರ್ಮಿಷ್ಠೆ ಹೇಳಿದಳು :—"ನಗೆಮೊಗದ ಓ ದೇವಯಾನೀ, ಋಷಿಗಳಿಂದ ಈ ಮಕ್ಕಳು ಹುಟ್ಟಿದರೆಂದು ನಾನು ಹೇಳಿದುದೇ ಸತ್ಯವು. ನಾನು ನ್ಯಾಯದಿಂದಲೂ ಧರ್ಮದಿಂದಲೂ ನಡೆಯುತ್ತೇನೆ. ನಿನಗಾಗಿ ನಾನೇನೂ ಹೆದರಬೇಕಾಗಿಲ್ಲ.

೨೧. ರಾಜನನ್ನು ನೀನು ವರಿಸಿದಾಗಲೇ ನಾನೂ ವರಿಸಿದಹಾಗಾಯಿತು. ಎಲೌ ಕಲ್ಯಾಣೀ, ನನ್ನ ಗೆಳತಿಯ ಪತಿಯೇ ನನಗೂ ಪತಿ. ಇದು ಧರ್ಮಾನುಸಾರವಾದುದು.

೨೨. ಬ್ರಾಹ್ಮಣ ಸ್ತ್ರೀಯಾದ ನೀನು ನನಗೆ ಪೂಜ್ಯಳು; ಗೌರವಾರ್ಹಳು; ಶ್ರೇಷ್ಠಳು; ಹಿರಿಯಳು. ಆದರೆ ರಾಜರ್ಷಿಯಾದ ಯಯಾತಿ ಮಹಾರಾಜನು ನಿನಗಿಂತಲೂ ಹೆಚ್ಚು ಸತ್ಕಾರಕ್ಕೆ ಪಾತ್ರನು. ಇದು ನಿನಗೆ ಗೊತ್ತಿಲ್ಲವೇ?"

|| ಶೌನಕ ಉವಾಚ ||

**ಶ್ರುತ್ವಾ ತಸ್ಯಾಸ್ತತೋ ವಾಕ್ಯಂ ದೇವಯಾನ್ಯಬ್ರವೀದಿದಂ |**
**ರಾಜನ್ನಾದ್ಯೇಹ ವತ್ಸ್ಯಾಮಿ ವಿಪ್ರಿಯಂ ಮೇ ತ್ವಯಾ ಕೃತಂ ||೨೩||**

**ಸಹಸೋತ್ಪತಿತಾಂ ಶ್ಯಾಮಾಂ ದೃಷ್ಟ್ವಾ ತಾಂ ಸಾಶ್ರುಲೋಚನಾಂ |**
**ತೂರ್ಣಂ ಸಕಾಶಂ ಕಾವ್ಯಸ್ಯ ಪ್ರಸ್ಥಿತಾಂ ವ್ಯಥಿತಸ್ತದಾ ||೨೪||**

**ಅನುವವ್ರಾಜ ಸಂಭ್ರಾಂತಃ ಪೃಷ್ಠತಃ ಸಾಂತ್ವಯನ್ನೃಪಃ |**
**ನ್ಯವರ್ತತ ನ ಸಾ ಚೈವ ಕ್ರೋಧಸಂರಕ್ತಲೋಚನಾ ||೨೫||**

**ಅಪಿ ಬ್ರುವಂತೀ ಕಿಂಚಿಚ್ಚ ರಾಜಾನಂ ಸಾಶ್ರುಲೋಚನಂ |**
**ಅಚಿರಾದೇವ ಸಂಪ್ರಾಪ್ತಾ ಕಾವ್ಯಸ್ಯೋಶನಸೋಽಂತಿಕಂ ||೨೬||**

**ಸಾ ತು ದೃಷ್ಟ್ವೈವ ಪಿತರಂ ಅಭಿವಾದ್ಯಾಗ್ರತಃ ಸ್ಥಿತಾ |**
**ಅನಂತರಂ ಯಯಾತಿಸ್ತು ಪೂಜಯಾಮಾಸ ಭಾರ್ಗವಂ ||೨೭||**

---

೨೩. ಶೌನಕಮುನಿ ಹೇಳಿದನು.—ಅವಳ ಮಾತನ್ನು ಕೇಳಿ ದೇವಯಾನಿ ಹೇಳಿದಳು. "ಎಲೈ ರಾಜನೇ, ಇಲ್ಲಿ ನಾನಿನ್ನು ವಾಸಿಸುವುದಿಲ್ಲ. ನೀನು ನನಗೆ ಅಪ್ರಿಯವನ್ನು ಮಾಡಿರುವೆ."

೨೪. ಆ ಯುವತಿಯು ಥಟ್ಟನೆ ಎದ್ದು, ಕಣ್ಣಿನಲ್ಲಿ ನೀರು ಬಿಡುತ್ತಾ ಶುಕ್ರಾಚಾರ್ಯನ ಬಳಿಗೆ ಬೇಗನೆ ಹೊರಟಳು. ಅದನ್ನು ಕಂಡು ರಾಜನು ವ್ಯಥೆಪಟ್ಟನು.

೨೫. ಅವಳನ್ನು ಸಮಾಧಾನ ಪಡಿಸುತ್ತಾ ಗಾಬರಿಯಿಂದ ಅವಳ ಹಿಂದೆ ಹೊರಟನು. ಅವಳಾದರೋ ಹಿಂದಿರುಗಲೇ ಇಲ್ಲ. ಅವಳ ಕಣ್ಣುಗಳು ಕೋಪದಿಂದ ಕೆಂಪಗಿದ್ದವು.

೨೬. ರಾಜನ ಕಣ್ಣಿನಲ್ಲಿ ನೀರು ಸುರಿಯುತ್ತಿತ್ತು. ದೇವಯಾನಿ ಏನೇನೋ ಹೇಳುತ್ತಾ ಬೇಗನೆ ಶುಕ್ರಾಚಾರ್ಯನ ಸಮೀಪಕ್ಕೆ ಬಂದಳು.

೨೭. ತಂದೆಯನ್ನು ಕಂಡಕೂಡಲೇ ಅವಳು ನಮಸ್ಕರಿಸಿ ಮುಂದೆ ನಿಂತಳು. ಬಳಿಕ ಯಯಾತಿ ಮಹಾರಾಜನೂ ಕೂಡ ಶುಕ್ರ ಮಹರ್ಷಿಯನ್ನು ಗೌರವಿಸಿದನು.

॥ ದೇವಯಾನ್ಯುವಾಚ ॥

ಅಧರ್ಮೇಣ ಜಿತೋ ಧರ್ಮಃ ಪ್ರವೃತ್ತಮಧರೋತ್ತರಂ ।
ಶರ್ಮಿಷ್ಠಯಾತಿವೃತ್ತಾಸ್ಮಿ ದುಹಿತಾ ವೃಷಪರ್ವಣಃ ॥೨೮॥

ತ್ರಯೋಽಸ್ಯಾಂ ಜನಿತಾಃ ಪುತ್ರಾ ರಾಜ್ಞಾಽನೇನ ಯಯಾತಿನಾ ।
ದುರ್ಭಗಾಯಾ ಮಮ ದ್ವೌ ತು ಪುತ್ರೌ ತಾತ ಬ್ರವೀಮಿ ತೇ ॥೨೯॥

ಧರ್ಮಜ್ಞ ಇತಿ ವಿಖ್ಯಾತ ಏಷ ರಾಜಾ ಭೃಗೂದ್ವಹ ।
ಅತಿಕ್ರಾಂತಶ್ಚ ಮರ್ಯಾದಾಂ ಕಾವ್ಯೈತತ್ಕಥಯಾಮಿ ತೇ ॥೩೦॥

॥ ಶುಕ್ರ ಉವಾಚ ॥

ಧರ್ಮಜ್ಞಸ್ತ್ವಂ ಮಹಾರಾಜ ಯೋಽಧರ್ಮಮಕೃಥಾಃ ಪ್ರಿಯಂ ।
ತಸ್ಮಾಜ್ಜರಾ ತ್ವಾಮಚಿರಾದ್ಧರ್ಷಯಿಷ್ಯತಿ ದುರ್ಜಯಾ ॥೩೧॥

॥ ಯಯಾತಿರುವಾಚ ॥

ಋತುಂ ಯೋ ಯಾಚಮಾನಾಯಾ ನ ದದಾತಿ ಪುಮಾನ್ವೃತಃ ।
ಭ್ರೂಣಹೇತ್ಯುಚ್ಯತೇ ಬ್ರಹ್ಮನ್ ಸ ಚೇಹ ಬ್ರಹ್ಮವಾದಿಭಿಃ ॥೩೨॥

---

೨೮-೨೯. ದೇವಯಾನಿಯು ಹೇಳಿದಳು.—"ಅಧರ್ಮವು ಧರ್ಮವನ್ನು ಗೆದ್ದಿತು. ಮೇಲುಕೀಳುಗಳು ತಲೆಕೆಳಗಾದವು. ವೃಷಪರ್ವನ ಮಗಳಾದ ಶರ್ಮಿಷ್ಠೆಯು ನಡತೆಗೆಟ್ಟಳು. ಈ ಯಯಾತಿರಾಜನಿಂದ ಅವಳಿಗೂ ಮೂರು ಜನ ಮಕ್ಕಳಾದರು. ಅಪ್ಪಾ, ದುರದೃಷ್ಟಳಾದ ನನಗಾದರೋ ಇಬ್ಬರೇ.

೩೦. ಭೃಗುವಂಶೋತ್ಪನ್ನನಾದ ಓ ಮಹರ್ಷೀ, ಧರ್ಮಜ್ಞನೆಂದು ಹೆಸರು ಪಡೆದ ಈ ರಾಜನು ನಡೆವಳಿಕೆಯನ್ನು ಮೀರಿದನು. ಈ ವಿಷಯವನ್ನು ನಿನಗೆ ತಿಳಿಸಿರುವೆನು.''

೩೧. ಶುಕ್ರಾಚಾರ್ಯನು ಹೇಳಿದನು.—"ಎಲೈ ಮಹಾರಾಜಾ, ನೀನು ಧರ್ಮವನ್ನು ಅರಿತವನು. ಇಂತಹವನೇ ಪ್ರಿಯವೆಂದು ಅಧರ್ಮವನ್ನು ಆಚರಿಸಿದೆ. ಆದುದರಿಂದ ನಿನಗೆ ಬೇಗನೆ ಮುಪ್ಪು ಬರಲಿ. ಅದು ತಪ್ಪಿಸುವುದಕ್ಕೆ ಸಾಧ್ಯವಿಲ್ಲದಂತಹುದು."

೩೨. ಯಯಾತಿ ರಾಜನು ಹೇಳಿದನು.—"ಓ ಬ್ರಹ್ಮಜ್ಞಾನಿಯೇ, ಋತುಕಾಲದಲ್ಲಿ ಸಮಾಗಮವನ್ನು ಅಪೇಕ್ಷಿಸುವ ಸ್ತ್ರೀಯ ಮನೋರಥವನ್ನು ಸಲ್ಲಿಸದಿರುವವನು ಭ್ರೂಣಹತ್ಯಾದೋಷಕ್ಕೆ ಪಾತ್ರನಾಗುವನೆಂದು ವೇದಶಾಸ್ತ್ರಜ್ಞರು ಹೇಳುತ್ತಾರೆ.

**ಋತುಕಾಮಾಂ ಸ್ತ್ರಿಯಂ ಯಸ್ತು ಗಮ್ಯಾಂ ರಹಸಿ ಯಾಚಿತಃ ।**
**ನೋಪೈತಿ ಯೋ ಹಿ ಧರ್ಮೇಣ ಬ್ರಹ್ಮಹೇತ್ಯುಚ್ಯತೇ ಬುಧೈಃ ॥೩೩॥**

**ಇತ್ಯೇತಾನಿ ಸಮೀಕ್ಷ್ಯಾಹಂ ಕಾರಣಾನಿ ಭೃಗೂದ್ವಹ ।**
**ಅಧರ್ಮಭಯಸಂವಿಗ್ನಃ ಶರ್ಮಿಷ್ಠಾಮುಪಜಗ್ಮಿವಾನ್ ॥೩೪॥**

**॥ ಶುಕ್ರ ಉವಾಚ ॥**

**ನ ತ್ವಹಂ ಪ್ರತ್ಯವೇಕ್ಷ್ಯಸ್ತೇ ಮದಧೀನೋಽಸಿ ಪಾರ್ಥಿವ ।**
**ಮಿಥ್ಯಾಚರಣಧರ್ಮೇಷು ಚೌರ್ಯಂ ಭವತಿ ನಾಹುಷ ॥೩೫॥**

**॥ ಶೌನಕ ಉವಾಚ ॥**

**ಕ್ರೋಧೇನೋಶನಸಾ ಶಪ್ತೋ ಯಯಾತಿರ್ನಾಹುಷಸ್ತದಾ ।**
**ಪೂರ್ವಂ ವಯಃ ಪರಿತ್ಯಜ್ಯ ಜರಾಂ ಸದ್ಯೋಽನ್ವಪದ್ಯತ ॥೩೬॥**

---

೩೩. ಸಮಾಗಮಕ್ಕೆ ಅರ್ಹಳಾದ ಸ್ತ್ರೀಯು ಋತುಕಾಲದಲ್ಲಿ ಸಂಭೋಗವನ್ನು ಯಾಚಿಸಿದಾಗ ಅವಳೊಡನೆ ಸೇರುವುದು ಧರ್ಮವು. ಅದಕ್ಕೆ ತಪ್ಪಿದವನು ಬ್ರಹ್ಮಹತ್ಯಾಪಾಪಕ್ಕೆ ಗುರಿಯಾಗುವನೆಂದು ವಿದ್ವಾಂಸರು ಹೇಳುತ್ತಾರೆ.

೩೪. ಈ ಕಾರಣಗಳನ್ನು ವಿಮರ್ಶೆಮಾಡಿ, ಭೃಗುವಂಶೋತ್ತಮನಾದ ಎಲೈ ಶುಕ್ರಾಚಾರ್ಯನೇ, ನಾನು ಅಧರ್ಮ ಬಂದೀತೆಂಬ ಹೆದರಿಕೆಯಿಂದ ಶರ್ಮಿಷ್ಠೆಯನ್ನು ಕೂಡಿದೆನು.”

೩೫. ಶುಕ್ರಾಚಾರ್ಯನು ಹೇಳಿದನು :—“ನಹುಷಪುತ್ರನಾದ ಓ ಯಯಾತಿ ರಾಜನೇ, ನೀನು ಮತ್ತೆ ನನ್ನನ್ನು ನೋಡಬೇಡ. ನೀನು ನನ್ನ ಅಧೀನದಲ್ಲಿರುವವನು. ಧರ್ಮದ ಹೆಸರಿನಲ್ಲಿ ಅಸತ್ಯವನ್ನು ಆಚರಿಸಿದರೆ ಕಳ್ಳತನವೆನಿಸುವುದು.”

೩೬. ಶೌನಕಮುನಿ ಹೇಳಿದನು :—ಶುಕ್ರಾಚಾರ್ಯನು ಕೋಪಗೊಂಡು ಶಾಪವನ್ನು ಕೊಟ್ಟುಬಿಟ್ಟನು. ಕೂಡಲೇ ಯಯಾತಿರಾಜನು ತನ್ನ ಪೂರ್ವ ವಯಸ್ಸನ್ನು ಬಿಟ್ಟು ಮುಪ್ಪನ್ನು ತಾಳಿದನು.

|| ಯಯಾತಿರುವಾಚ ||

ಅತೃಪ್ತೋ ಯೌವನಸ್ಯಾಹಂ ದೇವಯಾನ್ಯಾಂ ಭೃಗೂದ್ವಹ ।
ಪ್ರಸಾದಂ ಕುರು ಮೇ ಬ್ರಹ್ಮಞ್ಜರೇಯಂ ಮಾ ವಿಶೇತ ಮಾಂ ||೩೭||

|| ಶುಕ್ರ ಉವಾಚ ||

ನಾಹಂ ಮೃಷಾ ವದಾಮ್ಯೇತಜ್ಜರಾಂ ಪ್ರಾಪ್ತೋಽಸಿ ಭೂಮಿಪ ।
ಜರಾಂ ತ್ವೇತಾಂ ತ್ವಮನ್ಯಸ್ಮಿನ್ ಸಂಕ್ರಾಮಯ ಯದೀಚ್ಛಸಿ ||೩೮||

|| ಯಯಾತಿರುವಾಚ ||

ರಾಜ್ಯಭಾಕ್ಸ ಭವೇದ್ಬ್ರಹ್ಮನ್ ಪುಣ್ಯಭಾಕ್ಕೀರ್ತಿಭಾಕ್ತಥಾ ।
ಯೋ ದದ್ಯಾನ್ಮೇ ವಯಃ ಶುಕ್ರ ತದ್ಭವಾನನುಮನ್ಯತಾಂ ||೩೯||

|| ಶುಕ್ರ ಉವಾಚ ||

ಸಂಕ್ರಾಮಯಿಷ್ಯಸಿ ಜರಾಂ ಯಥೇಷ್ಟಂ ನಹುಷಾತ್ಮಜ ।
ಮಾಮನುಧ್ಯಾಯ ತತ್ತ್ವೇನ ನ ಚ ಪಾಪಮವಾಪ್ಸ್ಯಸಿ ||೪೦||

---

೩೭. ಯಯಾತಿ ಹೇಳಿದನು:—"ಭೃಗುವಂಶಶ್ರೇಷ್ಠನಾದ ಎಲೈ ಆಚಾರ್ಯನೇ, ದೇವಯಾನಿಯೊಡನೆ ನನ್ನ ಯೌವನದಲ್ಲಿ ನಾನು ಸುಖಪಟ್ಟುದು ಸಾಲದು. ಅದರಲ್ಲಿ ನನಗೆ ತೃಪ್ತಿಯಿಲ್ಲ. ಬ್ರಹ್ಮಜ್ಞಾ, ಈ ಮುಪ್ಪು ನನಗೆ ಬಾರದಂತೆ ಅನುಗ್ರಹಿಸು."

೩೮. ಶುಕ್ರಾಚಾರ್ಯನು ಹೇಳಿದನು:—" ಎಲೈ ರಾಜಾ, ನಾನು ಸುಳ್ಳಾಡುವುದಿಲ್ಲ; ನೀನು ಆಗಲೇ ಮುದುಕನಾದೆ. ಇಷ್ಟಬಂದರೆ ನೀನು ಈ ಮುಪ್ಪನ್ನು ಮತ್ತೊಬ್ಬನಿಗೆ ಬದಲಾಯಿಸು."

೩೯. ಯಯಾತಿ ಹೇಳಿದನು:—" ಎಲೈ ಬ್ರಾಹ್ಮಣನೇ, ನನಗೆ ಯೌವನವನ್ನು ಕೊಡುವವನಿಗೆ ರಾಜ್ಯವು ಸಲ್ಲಲಿ; ಅವನು ಪುಣ್ಯವನ್ನೂ ಕೀರ್ತಿಯನ್ನೂ ಪಡೆಯಲಿ. ಇದಕ್ಕೆ ನೀನು ಸಮ್ಮತಿಸು."

೪೦. ಶುಕ್ರಾಚಾರ್ಯನು ಹೇಳಿದನು:—" ಯಯಾತಿ ರಾಜಾ, ನಿನ್ನ ಇಷ್ಟಬಂದಂತೆ ಮುಪ್ಪನ್ನು ಬದಲಾಯಿಸು. ನನ್ನನ್ನು ಧೃಢಚಿತ್ತದಿಂದ ಧ್ಯಾನಿಸು. ನಿನಗೆ ಪಾಪವು ಬಾರದು.

**ವಯೋ ದಾಸ್ಯತಿ ತೇ ಪುತ್ರೋ ಯಃ ಸ ರಾಜಾ ಭವಿಷ್ಯತಿ ।**
**ಆಯುಷ್ಮಾನ್ ಕೀರ್ತಿಮಾಂಶ್ಚೈವ ಬಹ್ವಪತ್ಯಸ್ತಥೈವ ಚ ॥೪೧॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸೋಮವಂಶೇ ಯಯಾತಿಚರಿತೇ ದ್ವಾತ್ರಿಂಶೋಽಧ್ಯಾಯಃ**

---

೪೧. ನಿನ್ನ ಮಕ್ಕಳಲ್ಲಿ ಯಾವನು ನಿನಗೆ ಯೌವನವನ್ನು ಕೊಡುವನೋ ಅವನು ರಾಜನಾಗುವನು ; ಚಿರಾಯುವೂ, ಕೀರ್ತಿವಂತನೂ ಆಗುವನು. ಅವನಿಗೆ ಬಹುಮಂದಿ ಮಕ್ಕಳು ಹುಟ್ಟುವರು.''

**ಅಧ್ಯಾಯದ ಸಾರಾಂಶ**

ಯಯಾತಿ ಮಹಾರಾಜನಿಂದ ದೇವಯಾನಿಗೆ ಇಬ್ಬರು ಮಕ್ಕಳೂ, ಶರ್ಮಿಷ್ಠೆಗೆ ಮೂವರೂ ಜನಿಸಿದರು. ದೇವಯಾನಿಗೆ ಶರ್ಮಿಷ್ಠೆಯ ಮೇಲೆ ಅಸೂಯೆ ಹುಟ್ಟಿತು. ಅವಳನ್ನು ಈ ವಿಷಯವಾಗಿ ಪ್ರಶ್ನಿಸಲು, ಮಹರ್ಷಿಯೊಬ್ಬನ ಅನುಗ್ರಹದಿಂದ ತಾನು ಪುತ್ರವತಿಯಾದಳೆಂದು ಅವಳು ಹೇಳಿದಳು. ಕೆಲವು ದಿನಗಳ ತರುವಾಯ ವಾಸ್ತವಾಂಶವು ದೇವಯಾನಿಗೆ ತಿಳಿಯಿತು. ರಾಜನ ಮೇಲೆ ಕೋಪಗೊಂಡು, ತನ್ನ ತಂದೆಯ ಬಳಿಗೆ ಹೋಗಿ ಪತಿಯ ಮೇಲೂ ಶರ್ಮಿಷ್ಠೆಯ ಮೇಲೂ ದೂರು ಹೇಳಿದಳು. ಯಯಾತಿರಾಜನಾದರೋ, ಶರ್ಮಿಷ್ಠೆಯು ಋತುಕಾಲದಲ್ಲಿ ಸಮಾಗಮವನ್ನು ಅಪೇಕ್ಷಿಸಿದುದರಿಂದ ಧರ್ಮಕ್ಕೆ ಕಟ್ಟುಬಿದ್ದು ತಾನು ಅವಳ ಕೋರಿಕೆಯನ್ನು ನಡೆಸಿದುದಾಗಿ ಹೇಳಿದನು. ಆದರೂ ಶುಕ್ರಾಚಾರ್ಯನಿಗೆ ಸಮಾಧಾನವಾಗಲಿಲ್ಲ. ಯಯಾತಿಗೆ ಕೂಡಲೇ ಮುದುಕನಾಗುವಂತೆ ಶಾಪಕೊಟ್ಟನು. ಆದರೆ ರಾಜನ ಪ್ರಾರ್ಥನೆಯಿಂದ ಶಾಂತನಾಗಿ, ಅವನ ಇಷ್ಟದಂತೆ ಮುಪ್ಪನ್ನು ತನ್ನ ಮಕ್ಕಳಲ್ಲಿ ಯಾರಿಗಾದರೂ ಬದಲಾಯಿಸಬಹುದೆಂದೂ, ಆ ಮಗನು ರಾಜ್ಯಕ್ಕೆ ಅರ್ಹನೆಂದೂ ಅನುಗ್ರಹಿಸಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಚಂದ್ರವಂಶದೊಳಗೆ ಯಯಾತಿ ಚರಿತದಲ್ಲಿ ಮೂವತ್ತೆರಡನೆಯ ಅಧ್ಯಾಯವು ಮುಗಿದುದು

## ಅಥ ಶ್ರೀಮತ್ಸ್ಯಮಹಾಪುರಾಣೇ ತ್ರಯಸ್ತ್ರಿಂಶೋಽಧ್ಯಾಯಃ

|| ಶೌನಕ ಉವಾಚ ||

ಜರಾಂ ಪ್ರಾಪ್ಯ ಯಯಾತಿಸ್ತು ಸ್ವಪುರಂ ಪ್ರಾಪ್ಯ ಚೈವ ಹಿ ।
ಪುತ್ರಂ ಜ್ಯೇಷ್ಠಂ ವರಿಷ್ಠಂ ಚ ಯದುಮಿತ್ಯಬ್ರವೀದ್ವಚಃ || ೧ ||

|| ಯಯಾತಿರುವಾಚ ||

ಜರಾ ಬಲೀ ಚ ಮಾಂ ತಾತ ಪಲಿತಾನಿ ಚ ಪರ್ಯಗುಃ ।
ಕಾವ್ಯಸ್ಯೋಶನಸಃ ಶಾಪಾನ್ನ ಚ ತೃಪ್ತೋಽಸ್ಮಿ ಯೌವನೇ || ೨ ||

ತ್ವಂ ಯದೋ ಪ್ರತಿಪದ್ಯಸ್ವ ಪಾಪ್ಮಾನಂ ಜರಯಾ ಸಹ ।
ಯೌವನೇನ ತ್ವದೀಯೇನ ಚರೇಯಂ ವಿಷಯಾನಹಂ || ೩ ||

ಪೂರ್ಣೇ ವರ್ಷಸಹಸ್ರೇ ತು ತ್ವದೀಯಂ ಯೌವನಂ ತ್ವಹಂ ।
ದತ್ವಾ ಸಂಪ್ರತಿಪತ್ಸ್ಯಾಮಿ ಪಾಪ್ಮಾನಂ ಜರಯಾ ಸಹ || ೪ ||

---

೧. ಶೌನಕಮುನಿಯು ಹೇಳಿದನು.—ಯಯಾತಿರಾಜನಾದರೋ ಮುಪ್ಪನ್ನು ತಾಳಿ, ತನ್ನ ಪುರಕ್ಕೆ ತೆರಳಿ, ಮಕ್ಕಳಲ್ಲಿ ಜ್ಯೇಷ್ಠನೂ ಶ್ರೇಷ್ಠನೂ ಆದ ಯದುವನ್ನು ನೋಡಿ ಇಂತೆಂದನು.

೨. ಯಯಾತಿ ಹೇಳಿದನು.—“ಅಪ್ಪಾ ಮಗೂ, ನನಗೆ ಪ್ರಬಲವಾದ ಮುಪ್ಪು ಬಂತು. ಕೂದಲುಗಳೆಲ್ಲಾ ಬೆಳ್ಳಗಾದುವು. ಶುಕ್ರಾಚಾರ್ಯನ ಶಾಪದಿಂದ ಹೀಗಾಯಿತು. ಯೌವನದಲ್ಲಿ ನನಗೆ ತೃಪ್ತಿಯಾಗಲಿಲ್ಲ.

೩. ಯದೂ, ನೀನು ನನ್ನ ಪಾಪಕರ್ಮರೂಪವಾದ ಮುಪ್ಪನ್ನು ತೆಗೆದುಕೋ. ನಿನ್ನ ಯೌವನದಿಂದ ನಾನು ಇಂದ್ರಿಯಸುಖಗಳನ್ನು ಅನುಭವಿಸುವೆನು.

೪. ಒಂದು ಸಾವಿರ ವರ್ಷವು ತುಂಬಿದ ಮೇಲೆ ನಿನ್ನ ಯೌವನವನ್ನು ನಿನಗೆ ಕೊಟ್ಟು, ನನ್ನ ಪಾಪವನ್ನೂ ಮುಪ್ಪನ್ನೂ ಹಿಂದಕ್ಕೆ ತೆಗೆದುಕೊಳ್ಳುವೆನು.”

|| ಯದುರುವಾಚ ||

ಸಿತಶ್ಮಶ್ರುಧರೋ ದೀನೋ ಜರಸಾ ಶಿಥಿಲೀಕೃತಃ ।
ವಲೀಸಂತತಗಾತ್ರಶ್ಚ ದುರ್ದರ್ಶೋ ದುರ್ಬಲಃ ಕೃಶಃ || ೫ ||

ಅಶಕ್ತಃ ಕಾರ್ಯಕರಣೇ ಪರಿಭೂತಃ ಸ ಯೌವನೇ ।
ಸಹೋಪಜೀವಿಭಿಶ್ಚೈವ ತಜ್ಜರಾಂ ನಾಭಿಕಾಮಯೇ || ೬ ||

ಸಂತಿ ತೇ ಬಹವಃ ಪುತ್ರಾ ಮತ್ತಃ ಪ್ರಿಯತರಾ ನೃಪ ।
ಜರಾಂ ಗ್ರಹೀತುಂ ಧರ್ಮಜ್ಞ ಪುತ್ರಮನ್ಯಂ ವೃಣೀಷ್ವ ವೈ || ೭ ||

|| ಯಯಾತಿರುವಾಚ ||

ಯಸ್ತ್ವಂ ಮೇ ಹೃದಯಾಜ್ಜಾತೋ ವಯಃ ಸ್ವಂ ನ ಪ್ರಯಚ್ಛಸಿ ।
ಪಾಪಾನ್ಮಾತುಲಸಂಬಂಧಾದ್ದುಷ್ಟಪ್ರಜಾ ತೇ ಭವಿಷ್ಯತಿ || ೮ ||

ತುರ್ವಸೋ ಪ್ರತಿಪದ್ಯಸ್ವ ಪಾಪ್ಮಾನಂ ಜರಯಾ ಸಹ ।
ಯೌವನೇನ ಜರೇಯಂ ವೈ ವಿಷಯಾಂಸ್ತವ ಪುತ್ರಕ || ೯ ||

---

೫-೬. ಯದು ಹೇಳಿದನು.—''ಮುಪ್ಪಿನಿಂದ ಗಡ್ಡಮೀಸೆಗಳು ಬೆಳ್ಳಗಾಗುವುವು; ದೇಹವು ಶಿಥಿಲವಾಗುವುದು; ಮೈಮೇಲೆಲ್ಲಾ ಸುಕ್ಕುಗಳು ಮೂಡುವುವು; ಮನುಷ್ಯನು ನೋಡುವುದಕ್ಕೆ ಅಂದವಿಲ್ಲದೆ ಬಲ ಕುಗ್ಗಿ ಬಡವಾಗುವನು. ಕೆಲಸ ಮಾಡಲು ಕೈಯಲ್ಲಿ ನಾಗದು. ಪರಿಜನರೂ ಬಂಧುಗಳೂ ಅಲಕ್ಷ್ಯವಾಗಿ ಕಾಣುವರು. ಹೀಗಿರುವುದರಿಂದ ಯೌವನದಲ್ಲಿ ಈ ಮುಪ್ಪನ್ನು ನಾನು ಬಯಸೆನು.

೭. ಧರ್ಮಜ್ಞನಾದ ಭೂಪತಿಯೇ, ನನಗಿಂತಲೂ ಅಚ್ಚುಮೆಚ್ಚಾದ ಇನ್ನೂ ಹಲವರು ಮಕ್ಕಳು ನಿನಗೆ ಇದ್ದಾರೆ. ಮುಪ್ಪನ್ನು ತೆಗೆದುಕೊಳ್ಳುವಂತೆ ಇನ್ನಾರನ್ನಾದರೂ ಕೇಳು.''

೮. ಯಯಾತಿಯು ಹೇಳಿದನು.—''ನೀನು ನನ್ನ ಹೃದಯದಿಂದ ಹುಟ್ಟಿದವನು. ಆದರೂ ನಿನ್ನ ಯೌವನವನ್ನು ನನಗೆ ಕೊಡುವುದಿಲ್ಲ. ಆದಕಾರಣ ನಿನ್ನ ಸೋದರಮಾವನ ಸಂಬಂಧವಾದ ಪಾಪದಿಂದ ನಿನಗೆ ಕೆಟ್ಟ ಮಕ್ಕಳು ಹುಟ್ಟುವರು.

೯. ಮಗೂ, ತುರ್ವಸೂ, ಪಾಪಫಲ ಸಹಿತವಾಗಿ ನನ್ನ ಜರೆಯನ್ನು ನೀನಾದರೂ ತೆಗೆದುಕೋ. ನಿನ್ನ ಪ್ರಾಯದಿಂದ ನಾನು ಬಗೆಬಗೆಯ ಸುಖಗಳನ್ನು ಅನುಭವಿಸುವೆನು.

ಪೂರ್ಣೇ ವರ್ಷಸಹಸ್ರೇ ತು ಪುನರ್ದಾಸ್ಯಾಮಿ ಯೌವನಂ।
ತಥೈವ ಪ್ರತಿಪತ್ಸ್ಯಾಮಿ ಪಾಪ್ಮಾನಂ ಜರಯಾ ಸಹ ॥೧೦॥

॥ ತುರ್ವಸುರುವಾಚ ॥

ನ ಕಾಮಯೇ ಜರಾಂ ತಾತ ಕಾಮಭೋಗಪ್ರಣಾಶಿನೀಂ।
ಬಲರೂಪಾಂತಕರಣೀಂ ಬುದ್ಧಿಮಾನವಿನಾಶಿನೀಂ ॥೧೧॥

॥ ಯಯಾತಿರುವಾಚ ॥

ಯಸ್ತ್ವಂ ಮೇ ಹೃದಯಾಜ್ಜಾತೋ ವಯಃ ಸ್ವಂ ನ ಪ್ರಯಚ್ಛಸಿ।
ತಸ್ಮಾತ್ಪ್ರಜಾ ಸಮುಚ್ಛೇದಂ ತುರ್ವಸೋ ತವ ಯಾಸ್ಯತಿ ॥೧೨॥

ಸಂಕೀರ್ಣಾಚಾರಧರ್ಮೇಷು ಪ್ರತಿಲೋಮಚರೇಷು ಚ।
ಪಿಶಿತಾಶಿಷು ಲೋಕೇಷು ನೂನಂ ರಾಜಾ ಭವಿಷ್ಯಸಿ ॥೧೩॥

---

೧೦. ಸಾವಿರ ವರ್ಷಗಳು ಮುಗಿದ ಬಳಿಕ ನಿನ್ನ ಪ್ರಾಯವನ್ನು ಮತ್ತೆ ನಿನಗೆ ಕೊಡುವೆನು. ಹಾಗೆಯೇ ಮುಪ್ಪಿನೊಡನೆ ನನ್ನ ಪಾಪವನ್ನು ತೆಗೆದು ಕೊಳ್ಳುವೆನು."

೧೧. ತುರ್ವಸು ಹೇಳಿದನು.—"ತಂದೇ, ನನಗೆ ಮುಪ್ಪು ಬೇಕಿಲ್ಲ. ಅದು ಸುಖಾನುಭವವನ್ನು ತೊಲಗಿಸುವುದು. ಬಲವನ್ನೂ ರೂಪವನ್ನೂ ಕೊನೆಗಾಣಿಸುವುದು. ಮತ್ತು ಬುದ್ಧಿಯನ್ನೂ ಗೌರವವನ್ನೂ ಹಾಳುಮಾಡುವುದು."

೧೨. ಯಯಾತಿ ಹೇಳಿದನು.—"ನನ್ನ ಹೃದಯದಿಂದ ಹುಟ್ಟಿದ ನೀನು ನಿನ್ನ ವಯಸ್ಸನ್ನು ನನಗೆ ಕೊಡಲೊಪ್ಪದಿರುವೆ. ಆದುದರಿಂದ, ಎಲೈ ತುರ್ವಸೂ, ನಿನ್ನ ಸಂತತಿ ಬೆಳೆಯದೆ ಹೋಗಲಿ.

೧೩. ಮಿಶ್ರವರ್ಣದವರು, ಚೋರಧರ್ಮದಲ್ಲಿರುವವರು, ತಮಗಿಂತ ಉತ್ತಮ ವರ್ಣದವರೊಡನೆ ರತಿಸುಖವನ್ನು ಬಯಸುವವರು, ಮಾಂಸಾಹಾರಿಗಳು ಮುಂತಾದ ಜನರಿಗೆ ನೀನು ಅರಸನಾಗುವೆ.

**ಗುರುದಾರಪ್ರಸಕ್ತೇಷು ತಿರ್ಯಗ್ಯೋನಿರತೇಷು ಚ ।**
**ಪಶುಧರ್ಮಿಷು ಮ್ಲೇಚ್ಛೇಷು ಪಾಪೇಷು ಪ್ರಭವಿಷ್ಯಸಿ ॥೧೪॥**

**॥ ಶೌನಕ ಉವಾಚ ॥**

**ಏವಂ ಸ ತುರ್ವಸುಂ ಶಪ್ತ್ವಾ ಯಯಾತಿಃ ಸುತಮಾತ್ಮನಃ ।**
**ಶರ್ಮಿಷ್ಠಾಯಾಃ ಸುತಂ ಜ್ಯೇಷ್ಠಂ ದ್ರುಹ್ಯುಂ ವಚನಮಬ್ರವೀತ್ ॥೧೫॥**

**॥ ಯಯಾತಿರುವಾಚ ॥**

**ದ್ರುಹ್ಯೋ ತ್ವಂ ಪ್ರತಿಪದ್ಯಸ್ವ ವರ್ಣರೂಪವಿನಾಶಿನೀಂ ।**
**ಜರಾಂ ವರ್ಷಸಹಸ್ರಂ ಮೇ ಯೌವನಂ ಸ್ವಂ ಪ್ರಯಚ್ಛತಾಂ ॥೧೬॥**

**ಪೂರ್ಣೇ ವರ್ಷಸಹಸ್ರೇ ತು ತೇ ಪ್ರದಾಸ್ಯಾಮಿ ಯೌವನಂ ।**
**ಸ್ವಂ ಚಾದಾಸ್ಯಾಮಿ ಭೂಯೋಽಹಂ ಪಾಪ್ಮಾನಂ ಜರಯಾ ಸಹ ॥೧೭॥**

---

೧೪: ಗುರುಪತ್ನಿಯನ್ನು ಮೋಹಿಸುವವರು, ತಿರ್ಯಕ್ಪ್ರಾಣಿಗಳನ್ನು ಕಾಮಿಸುವವರು, ಧರ್ಮಾಧರ್ಮಗಳ ವಿಚಾರವಿಲ್ಲದೆ ಪಶುಗಳಂತೆ ವ್ಯವಹರಿಸುವವರು, ಮ್ಲೇಚ್ಛರು, ಪಾಪಿಷ್ಠರು ಇಂತಹವರ ನಡುವೆ ನೀನು ದೊರೆತನವನ್ನು ಮಾಡುವೆ."

೧೫. ಶೌನಕಮುನಿ ಹೇಳಿದನು.—ಯಯಾತಿ ಮಹಾರಾಜನು ಹೀಗೆ ತನ್ನ ಮಗನಾದ ತುರ್ವಸುವಿಗೆ ಶಾಪವನ್ನಿತ್ತು, ಶರ್ಮಿಷ್ಠೆಯ ಹಿರಿಯ ಮಗನಾದ ದ್ರುಹ್ಯುವನ್ನು ಕರೆದಿಂತೆಂದನು.

೧೬. ಯಯಾತಿಯು ಹೇಳಿದನು.—"ದ್ರುಹ್ಯೂ, ಮೈಯ ಬಣ್ಣವನ್ನೂ ರೂಪವನ್ನೂ ಕೆಡಿಸುವ ನನ್ನ ಮುಪ್ಪನ್ನು ನೀನು ತೆಗೆದುಕೋ. ಒಂದು ಸಾವಿರ ವರ್ಷಗಳ ಕಾಲ ನಿನ್ನ ಯೌವನವನ್ನು ಕೊಟ್ಟಿರು.

೧೭. ವರ್ಷ ಸಹಸ್ರವು ಪೂರ್ಣವಾದ ಬಳಿಕ ನಿನ್ನ ಯೌವನವನ್ನು ಕೊಟ್ಟು ಮುಪ್ಪಿನೊಡನೆ ನನ್ನ ಪಾಪವನ್ನು ಹಿಂದಕ್ಕೆ ತೆಗೆದುಕೊಳ್ಳುವೆನು.''

॥ ದ್ರುಹ್ಯುರುವಾಚ ॥

ನ ರಾಜ್ಯಂ ನ ರಥಂ ನಾಶ್ವಂ ಜೀರ್ಣೋ ಭುಙ್ಕ್ತೇ ನ ಚ ಸ್ತ್ರಿಯಂ ।
ನ ರಾಗಶ್ಚಾಸ್ಯ ಭವತಿ ತಜ್ಜರಾಂ ತೇ ನ ಕಾಮಯೇ ॥೧೮॥

॥ ಯಯಾತಿರುವಾಚ ॥

ಯಸ್ತ್ವಂ ಮೇ ಹೃದಯಾಜ್ಜಾತೋ ವಯಃ ಸ್ವಂ ನ ಪ್ರಯಚ್ಛಸಿ ।
ತದ್ದ್ರುಹ್ಯೋ ವೈ ಪ್ರಿಯಃ ಕಾಮೋ ನ ತೇ ಸಂಪತ್ಸ್ಯತೇ ಕ್ವಚಿತ್ ॥೧೯॥

ನೌರೂಪಪ್ಲವಸಂಚಾರೋ ಯತ್ರ ನಿತ್ಯಂ ಭವಿಷ್ಯತಿ ।
ಅರಾಜ್ಯಭೋಜಶಬ್ದಂ ತ್ವಂ ತತ್ರ ಪ್ರಾಪ್ಸ್ಯಸಿ ಸಾನ್ವಯಃ ॥೨೦॥

॥ ಯಯಾತಿರುವಾಚ ॥

ಅನೋ ತ್ವಂ ಪ್ರತಿಪದ್ಯಸ್ವ ಪಾಪ್ಮಾನಂ ಜರಯಾ ಸಹ ।
ಏಕಂ ವರ್ಷಸಹಸ್ರಂ ತು ಚರೇಯಂ ಯೌವನೇನ ತೇ ॥೨೧॥

---

೧೮. ದ್ರುಹ್ಯು ಹೇಳಿದನು.—"ಮುದುಕನಿಗೆ ರಾಜ್ಯ, ರಥ, ಕುದುರೆ ಇವುಗಳಿಂದ ಸುಖವು ದೊರೆಯದು. ಅವನು ಕಾಮಿನಿಯರೊಡನೆ ಸುಖಿಸಲಾರನು. ಅವನ ಮನಸ್ಸಿನಲ್ಲಿ ಪ್ರೇಮವು ನೆಲೆಸುವುದಿಲ್ಲ. ಆದುದರಿಂದ ನಿನ್ನ ಮುಪ್ಪು ನನಗೆ ಬೇಡ."

೧೯-೨೦. ಯಯಾತಿ ಹೇಳಿದನು.—"ನನ್ನ ಹೃದಯದಿಂದ ಹುಟ್ಟಿದ ನೀನು ನನ್ನ ಇಷ್ಟದಂತೆ ನಿನ್ನ ವಯಸ್ಸನ್ನು ಕೊಡಲೊಪ್ಪದಿರುವೆ. ಆದುದರಿಂದ, ಎಲೈ ದ್ರುಹ್ಯೋ, ನಿನಗೆ ಪ್ರಿಯವಾದ ವಿಷಯ ಸುಖವು ಎಂದಿಗೂ ದೊರಕದಿರಲಿ. ಜಲಮಯವಾಗಿ, ಸಂಚಾರಕ್ಕೆ ಅಡ್ಡಿಯೆನಿಸಿ ದೋಣಿ, ತೆಪ್ಪ ಇವುಗಳ ಮೂಲಕವೇ ಓಡಾಡಬೇಕಾಗಿರುವ ದೇಶದಲ್ಲಿ ನೀನೂ ನಿನ್ನ ವಂಶದವರೂ ವಾಸಮಾಡಿರಿ. ರಾಜ್ಯಸುಖಕ್ಕೆ ಅನರ್ಹರೆಂಬ ಹೆಸರು ನಿಮಗೆ ಬರಲಿ."

೨೧. ಯಯಾತಿ ಹೇಳಿದನು.—" ಓ ಅನೂ, ನೀನು ಮುಪ್ಪಿನೊಡನೆ ನನ್ನ ಪಾಪವನ್ನು ತೆಗೆದುಕೋ. ನಿನ್ನ ಯೌವನದ ಬಲದಿಂದ ಸಾವಿರ ವರ್ಷಗಳ ಕಾಲ ಸುಖಪಡುವೆನು."

|| ಅನುರುವಾಚ ||

ಜೀರ್ಣಃ ಶಿಶುರಿವಾದತ್ತೇ ಕಾಲೇಽನ್ನಮಶುಚಿರ್ಯಥಾ ।
ನ ಜುಹೋತಿ ಚ ಕಾಲೇಽಗ್ನಿಂ ತಾಂ ಜರಾಂ ನಾಭಿಕಾಮಯೇ ||೨೨||

|| ಯಯಾತಿರುವಾಚ ||

ಯಸ್ತ್ವಂ ಮೇ ಹೃದಯಾಜ್ಜಾತೋ ವಯಃ ಸ್ವಂ ನ ಪ್ರಯಚ್ಛಸಿ ।
ಜರಾದೋಷಸ್ತ್ವಯೋಕ್ತೋ ಯಸ್ತಸ್ಮಾತ್ತ್ವಂ ಪ್ರತಿಪದ್ಯಸೇ ||೨೩||
ಪ್ರಜಾಶ್ಚ ಯೌವನಂ ಪ್ರಾಪ್ತಾ ವಿನಶ್ಯಂತಿ ಹ್ಯನೋ ತವ ।
ಅಗ್ನಿಪ್ರಸ್ಕಂದನಗತಸ್ತ್ವಂ ಚಾಪ್ಯೇವಂ ಭವಿಷ್ಯಸಿ ||೨೪||

|| ಯಯಾತಿರುವಾಚ ||

ಪೂರೋ ತ್ವಂ ಪ್ರತಿಪದ್ಯಸ್ವ ಪಾಪ್ಮಾನಂ ಜರಯಾ ಸಹ ।
ತ್ವಂ ಮೇ ಪ್ರಿಯತರಃ ಪುತ್ರಸ್ತ್ವಂ ವರೀಯಾನ್ಭವಿಷ್ಯಸಿ ||೨೫||

---

೨೨. ಅನು ಹೇಳಿದನು.—"ಮುದುಕನು ಭೋಜನಕಾಲದಲ್ಲಿ ಮಗುವಿನಂತೆ ಆಹಾರವನ್ನು ತೆಗೆದುಕೊಳ್ಳುವನು ; ಎಂದರೆ ಇಂದ್ರಿಯದ ಬಲವಿಲ್ಲದಿರುವುದರಿಂದ ಪರರ ಸಹಾಯವು ಬೇಕಾಗುವುದು. ಮೈಮೇಲೆಲ್ಲಾ ಅನ್ನವನ್ನು ಚೆಲ್ಲಿಕೊಳ್ಳುವನು ಎಂದು ಅಭಿಪ್ರಾಯ. ಮೈಲಿಗೆಯವನಂತೆ ಆಯಾ ಕಾಲದಲ್ಲಿ ಅಗ್ನಿಹೋತ್ರಾದಿಗಳನ್ನು ನಡೆಸಲಾರನು. ಅಂತಹ ಮುಪ್ಪು ನನಗೆ ಬೇಡ."

೨೩. ಯಯಾತಿ ಹೇಳಿದನು.—"ನನ್ನ ಹೃದಯದಿಂದ ಹುಟ್ಟಿದವನಾದ ನೀನು ನನಗೆ ನಿನ್ನ ಯೌವನವನ್ನು ಕೊಡದಿರುವೆ. ಆದುದರಿಂದ ನೀನು ಹೇಳಿದ ಮುಪ್ಪಿನ ದೋಷಗಳು ನಿನಗೇ ಬರುವುವು.

೨೪. ಅನೂ, ನಿನ್ನ ಮಕ್ಕಳು ಯೌವನವಂತರಾಗಿ ಸಾಯುವರು. ನೀನೂ ಸಹ ಬೆಂಕಿಯನ್ನು ಹಾರತೊಡಗಿ ಹೀಗೆಯೇ ಆಗುವೆ. ಎಂದರೆ ಯೌವನದಲ್ಲಿಯೇ ಸಾಯುವೆ."

೨೫. "ಎಲೈ ಪೂರೂ, ನೀನು ಮುಪ್ಪಿನೊಡನೆ ನನ್ನ ಪಾಪವನ್ನು ತೆಗೆದುಕೋ. ಮಿಕ್ಕ ಮಕ್ಕಳಿಗಿಂತಲೂ ನೀನು ನನಗೆ ಪ್ರಿಯನಾದವನು. ಅವರಿಗಿಂತಲೂ ನೀನು ಶ್ರೇಷ್ಠನೆನಿಸುವೆ.

ಜರಾ ಬಲೀ ಚ ಮಾಂ ತಾತ ಪಲಿತಾನಿ ಚ ಪರ್ಯಗುಃ ।
ಕಾವ್ಯಸ್ಯೋಶನಸಃ ಶಾಪಾನ್ನ ಚ ತೃಪ್ತೋಽಸ್ಮಿ ಯೌವನೇ ॥೨೬॥

ಕಿಂಚಿತ್ಕಾಲಂ ಚರೇಯಂ ವೈ ವಿಷಯಾನ್ವಯಸಾ ತವ ।
ಪೂರ್ಣೇ ವರ್ಷಸಹಸ್ರೇ ತು ಪ್ರತಿದಾಸ್ಯಾಮಿ ಯೌವನಂ
ಸ್ವಂ ಚೈವ ಪ್ರತಿಪತ್ಸ್ಯೇಽಹಂ ಪಾಪ್ಮಾನಂ ಜರಯಾ ಸಹ ॥೨೭॥

॥ ಶೌನಕ ಉವಾಚ ॥

ಏವಮುಕ್ತಃ ಪ್ರತ್ಯುವಾಚ ಪೂರುಃ ಪಿತರಮಂಜಸಾ ।
ಯಥಾತ್ಥ ತ್ವಂ ಮಹಾರಾಜ ತತ್ಕರಿಷ್ಯಾಮಿ ತೇ ವಚಃ ॥೨೮॥

ಪ್ರತಿಪತ್ಸ್ಯಾಮಿ ತೇ ರಾಜನ್ಪಾಪ್ಮಾನಂ ಜರಯಾ ಸಹ ।
ಗೃಹಾಣ ಯೌವನಂ ಮತ್ತಶ್ಚರ ಕಾಮಾನ್ ಯಥೇಪ್ಸಿತಾನ್ ॥೨೯॥

---

೨೬. ಅಪ್ಪಾ, ಮಗೂ, ಬಲವತ್ತರವಾದ ಮುಪ್ಪು ನನಗೆ ಬಂದಿದೆ. ತಲೆಗೂದಲೂ ಮೈಯೂ ಕಾಂತಿಹೀನವಾಗಿ ಬಿಳುಪಾಗಿವೆ. ಇದು ಶುಕ್ರಾಚಾರ್ಯನ ಶಾಪ. ನನಗೆ ಯೌವನದಿಂದ ತೃಪ್ತಿಯಾಗಲಿಲ್ಲ.

೨೭. ನಿನ್ನ ವಯಸ್ಸಿನಿಂದ ಸ್ವಲ್ಪಕಾಲ ಸುಖವನ್ನನುಭವಿಸುವೆನು. ಸಾವಿರ ವರ್ಷಗಳು ಮುಗಿದ ಬಳಿಕ ಆ ನಿನ್ನ ಯೌವನವನ್ನು ಹಿಂದಕ್ಕೆ ಕೊಡುವೆನು. ಮತ್ತು ಮುಪ್ಪಿನೊಡನೆ ನನ್ನ ಪಾಪವನ್ನೂ ತೆಗೆದುಕೊಳ್ಳುವೆನು."

೨೮. ಶೌನಕಮಹರ್ಷಿ ಹೇಳಿದನು.—ತಂದೆಯು ಹೀಗೆ ಹೇಳಲು ಪೂರುವು ಅವನಿಗೆ ತಡಮಾಡದೆ ಉತ್ತರವಿತ್ತನು, "ಮಹಾರಾಜಾ, ನೀನು ಹೇಳಿದ ಮಾತನ್ನು ನಡೆಸುವೆನು.

೨೯. ನಿನ್ನ ಪಾಪವನ್ನೂ ಮುಪ್ಪನ್ನೂ ತೆಗೆದುಕೊಳ್ಳುವೆನು. ನನ್ನಿಂದ ಯೌವನವನ್ನು ತೆಗೆದುಕೋ. ನಿನಗೆ ಇಷ್ಟಬಂದ ಸುಖಗಳನ್ನು ಅನುಭವಿಸು.

**ಜರಯಾಹಂ ಪ್ರತಿಚ್ಛನ್ನೋ ವಯೋರೂಪಧರಸ್ತವ ।**
**ಯೌವನಂ ಭವತೇ ದತ್ವಾ ಚರಿಷ್ಯಾಮಿ ಯಥೇಚ್ಛಯಾ ॥೩೦॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸೋಮವಂಶೇ ಯಯಾತಿಚರಿತೇ ತ್ರಯಸ್ತ್ರಿಂಶೋಽಧ್ಯಾಯಃ**

---

೩೦. ನನಗೆ ಮುಪ್ಪು ಬರಲಿ. ನಿನ್ನ ವಯಸ್ಸನ್ನೂ ರೂಪವನ್ನೂ ಧರಿಸುವೆನು. ನನ್ನ ಯೌವನವನ್ನು ನಿನಗೆ ಕೊಟ್ಟು ನಿನ್ನ ಇಷ್ಟಾನುಸಾರವಾಗಿ ನಡೆಯುವೆನು."

## ಅಧ್ಯಾಯದ ಸಾರಾಂಶ

ಶುಕ್ರಾಚಾರ್ಯನ ಶಾಪದಿಂದ ಯಯಾತಿಗೆ ಬಲವಾದ ಮುಪ್ಪು ಬಂದಿತು. ಅವನಿಗೆ ವಿಷಯಾಭಿಲಾಷೆ ತೀರಿರಲಿಲ್ಲ. ಆದುದರಿಂದ ಅವನು ತನ್ನ ಮಕ್ಕಳಲ್ಲಿ ಮೊದಲನೆಯ ನಾಲ್ವರನ್ನೂ ಅನುಕ್ರಮವಾಗಿ ತನ್ನ ಮುಪ್ಪನ್ನು ತೆಗೆದುಕೊಂಡು ಅವರ ಯೌವನವನ್ನು ಕೊಡುವಂತೆ ಕೇಳಿದನು. ಅವರಾರೂ ಒಪ್ಪದಿರಲು ಅವರಿಗೆ ಬೇರೆ ಬೇರೆ ಶಾಪಗಳನ್ನು ಕೊಟ್ಟನು. ಕೊನೆಯವನಾದ ಪೂರು ಮಾತ್ರ ತಂದೆಯ ಇಷ್ಟವನ್ನು ನಡೆಸುವುದಾಗಿ ಒಪ್ಪಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಚಂದ್ರವಂಶದೊಳಗೆ ಯಯಾತಿ ಚರಿತದಲ್ಲಿ ಮೂವತ್ತಮೂರನೆಯ ಅಧ್ಯಾಯವು ಮುಗಿದುದು



## ಅಥ ಶ್ರೀಮತ್ಸ್ಯಮಹಾಪುರಾಣೇ ಚತುಸ್ತ್ರಿಂಶೋಽಧ್ಯಾಯಃ

॥ ಶೌನಕ ಉವಾಚ ॥

ಏವಮುಕ್ತಃ ಸ ರಾಜರ್ಷಿಃ ಕಾವ್ಯಂ ಸ್ಮೃತ್ವಾ ಮಹಾವ್ರತಂ ।
ಸಂಕ್ರಾಮಯಾಮಾಸ ಜರಾಂ ತದಾ ಪುತ್ರೇ ಮಹಾತ್ಮನಿ ॥ ೧ ॥

ಪೌರವೇಣಾಥ ವಯಸಾ ಯಯಾತಿರ್ನಹುಷಾತ್ಮಜಃ ।
ಪ್ರೀತಿಯುಕ್ತೋ ನರಶ್ರೇಷ್ಠಶ್ಚಚಾರ ವಿಷಯಾನ್ಪ್ರಿಯಾನ್ ॥ ೨ ॥

ಯಥಾಕಾಮಂ ಯಥೋತ್ಸಾಹಂ ಯಥಾಕಾಲಂ ಯಥಾಸುಖಂ ।
ಧರ್ಮಾವಿರುದ್ಧಾನ್ ರಾಜೇಂದ್ರೋ ಯಥಾರ್ಹತಿ ಸ ಏವ ಹಿ ॥ ೩ ॥

ದೇವಾನತರ್ಪಯದ್ಯಜ್ಞೈಃ ಶ್ರಾದ್ಧೈರಪಿ ಪಿತಾಮಹಾನ್ ।
ದೀನಾನನುಗ್ರಹೈರಿಷ್ಟೈಃ ಕಾಮೈಶ್ಚ ದ್ವಿಜಸತ್ತಮಾನ್ ॥ ೪ ॥

---

೧. ಶೌನಕಮುನಿಯು ಹೇಳಿದನು.—ಪೂರು ಹಿಂದೆ ತಿಳಿಸಿದಂತೆ ಹೇಳಲು, ಯಯಾತಿ ಮಹಾರಾಜನು ಮಹಾನಿಷ್ಠನಾದ ಶುಕ್ರಾಚಾರ್ಯನನ್ನು ಧ್ಯಾನಮಾಡಿ ಮಹಿಮಾಶಾಲಿಯಾದ ತನ್ನ ಮಗನಲ್ಲಿ ಮುಪ್ಪನ್ನು ಬದಲಾಯಿಸಿದನು.

೨. ನಹುಷಪುತ್ರನಾದ ಆ ರಾಜನು ಪೂರುವಿನ ಯೌವನದಿಂದ ಪ್ರೀತನಾಗಿ ತನಗೆ ಬೇಕಾದ ಸುಖವನ್ನನುಭವಿಸಿದನು.

೩. ಆ ರಾಜೇಂದ್ರನು ತನ್ನ ಅಭಿಲಾಷೆಗೆ ತಕ್ಕಂತೆ, ಉತ್ಸಾಹದಿಂದ, ಆಯಾ ಕಾಲವನ್ನನುಸರಿಸಿ, ಸುಖಕ್ಕೆ ಲೋಪವು ಬಾರದಂತೆ ಧರ್ಮಾವಿರುದ್ಧವಾದ ವಿಷಯಗಳನ್ನು ಭೋಗಿಸಿದನು.

೪. ದೇವತೆಗಳನ್ನು ಯಜ್ಞಗಳಿಂದಲೂ, ಪಿತೃಗಳನ್ನು ಶ್ರಾದ್ಧಗಳಿಂದಲೂ, ದೀನರನ್ನು ಪ್ರಸಾದದಿಂದಲೂ, ಬ್ರಾಹ್ಮಣರನ್ನು ಅವರ ಇಷ್ಟವಾದ ಕೋರಿಕೆಗಳಿಂದಲೂ ತೃಪ್ತಿಪಡಿಸಿದನು.

**ಅತಿಥೀನನ್ನಪಾನೈಶ್ಚ ವಿಶಶ್ಚ ಪ್ರತಿಪಾಲನೈಃ ।**
**ಆನೃಶಂಸ್ಯೇನ ಶೂದ್ರಾಂಶ್ಚ ದಸ್ಯೂನ್ನಿಗ್ರಹಣೇನ ಚ ॥ ೫ ॥**

**ಧರ್ಮೇಣ ಚ ಪ್ರಜಾಃ ಸರ್ವಾ ಯಥಾವದನುರಂಜಯನ್ ।**
**ಯಯಾತಿಃ ಪಾಲಯಾಮಾಸ ಸಾಕ್ಷಾದಿಂದ್ರ ಇವಾಪರಃ ॥ ೬ ॥**

**ಸ ರಾಜಾ ಸಿಂಹವಿಕ್ರಾಂತೋ ಯುವಾ ವಿಷಯಗೋಚರಃ ।**
**ಅವಿರೋಧೇನ ಧರ್ಮಸ್ಯ ಚಚಾರ ಸುಖಮುತ್ತಮಂ ॥ ೭ ॥**

**ಸ ಸಂಪ್ರಾಪ್ಯ ಶುಭಾನ್ ಕಾಮಾಂಸ್ತೃಪ್ತಃ ಖಿನ್ನಶ್ಚ ಪಾರ್ಥಿವಃ ।**
**ಕಾಲಂ ವರ್ಷಸಹಸ್ರಾಂತಂ ಸಸ್ಮಾರ ಮನುಜಾಧಿಪಃ ॥ ೮ ॥**

**ಪರಿಚಿಂತ್ಯ ಸ ಕಾಲಜ್ಞಃ ಕಲಾಃ ಕಾಷ್ಠಾಶ್ಚ ವೀರ್ಯವಾನ್ ।**
**ಪೂರ್ಣಂ ಮತ್ವಾ ತತಃ ಕಾಲಂ ಪೂರುಂ ಪುತ್ರಮುವಾಚ ಹ ॥ ೯ ॥**

---

೫-೬. ಅಭ್ಯಾಗತರಿಗೆ ಅನ್ನಪಾನಾದಿಗಳನ್ನು ನೀಡುತ್ತಿದ್ದನು. ವರ್ತಕರಿಂದ ತೆಗೆದುಕೊಳ್ಳುವ ಸುಂಕ, ಕಂದಾಯ ಮುಂತಾದುವುಗಳಿಗೆ ಪ್ರತಿಯಾಗಿ ಅವರಿಗೆ ರಕ್ಷಣೆ ಕೊಡುತ್ತಿದ್ದನು. ಶೂದ್ರರಲ್ಲಿ ದಯೆ ತೋರುತ್ತಿದ್ದನು. ಕಳ್ಳರನ್ನು ದಂಡಿಸುತ್ತಿದ್ದನು. ಪ್ರಜೆಗಳೆಲ್ಲರನ್ನೂ ಧರ್ಮದಿಂದ ಸಂತೋಷಪಡಿಸುತ್ತಾ ಬೇರೆ ರೂಪವನ್ನು ಧರಿಸಿ ಬಂದಿರುವ ಇಂದ್ರನೋ ಎಂಬಂತೆ ಯಯಾತಿ ಮಹಾರಾಜನು ರಾಜ್ಯವನ್ನು ಪಾಲಿಸುತ್ತಿದ್ದನು.

೭. ಸಿಂಹದಂತೆ ಪರಾಕ್ರಮಶಾಲಿಯಾದ ಆ ರಾಜನು ಯುವಕನಾಗಿ, ಧರ್ಮಕ್ಕೆ ಅಡ್ಡಿ ಬಾರದಂತೆ, ಶ್ಲಾಘ್ಯವಾದ ವಿಷಯಸುಖವನ್ನು ಅನುಭವಿಸುತ್ತಿದ್ದನು.

೮. ಶುಭಕರಗಳಾದ ಹಲವು ಇಷ್ಟಾರ್ಥಗಳನ್ನು ಅನುಭವಿಸಿ ಆ ಭೂಪತಿಯು ತೃಪ್ತನಾದನು. ಅದರ ಜೊತೆಯಲ್ಲಿಯೇ ಸಾವಿರ ವರ್ಷಗಳ ಕಾಲವು ಮುಗಿದುದನ್ನು ನೆನೆದು ದುಃಖಿತನೂ ಆದನು.

೯. ಕಾಲದ ಮಿತಿಯನ್ನು ಬಲ್ಲ ಆ ವೀರನು ಕಲೆಗಳನ್ನೂ* ಕಾಷ್ಠಗಳನ್ನೂ ಲೆಕ್ಕಹಾಕಿ, ಅವಧಿಯು ಮುಗಿಯಿತೆಂದು ತಿಳಿದು ಪುತ್ರನಾದ ಪೂರುವಿಗಿಂತೆಂದನು.

---

* ಹದಿನೆಂಟು ಸಾರಿ ರೆಪ್ಪೆಬಡಿಯುವ ಹೊತ್ತಿಗೆ ಕಾಷ್ಠವೆಂದೂ, ಅಂತಹ ಮೂವತ್ತು ಕಾಷ್ಠಗಳಿಗೆ ಕಲೆಯೆಂದೂ ಸಂಜ್ಞೆ.

**ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ ।**
**ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥೧೦॥**

**ಯತ್ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ಪಶವಃ ಸ್ತ್ರಿಯಃ ।**
**ನಾಲಮೇಕಸ್ಯ ತತ್ಸರ್ವಮಿತಿ ಮತ್ವಾ ಶಮಂ ವ್ರಜೇತ್ ॥೧೧॥**

**ಯಥಾಸುಖಂ ಯಥೋತ್ಸಾಹಂ ಯಥಾಕಾಮಮರಿಂದಮ ।**
**ಸೇವಿತಾ ವಿಷಯಾಃ ಪುತ್ರ ಯೌವನೇನ ಮಯಾ ತವ ॥೧೨॥**

**ಪೂರೋ ಪ್ರೀತೋಽಸ್ಮಿ ಭದ್ರಂ ತೇ ಗೃಹಾಣೇದಂ ಸ್ವಯೌವನಂ ।**
**ರಾಜ್ಯಂ ಚೈವ ಗೃಹಾಣೇದಂ ತ್ವಂ ಹಿ ಮೇ ಪ್ರಿಯಕೃತ್ಸುತಃ ॥೧೩॥**

---

೧೦. "ಸುಖಗಳನ್ನು ಅನುಭವಿಸುವುದರಿಂದ ಸುಖಾಭಿಲಾಷೆಯು ಎಂದಿಗೂ ತೀರುವುದಿಲ್ಲ. ತುಪ್ಪಸುರಿದಷ್ಟೂ ಬೆಂಕಿಯು ಪ್ರಜ್ವಲಿಸುವಂತೆ, ಸುಖಪಟ್ಟಷ್ಟೂ ಅದರ ಆಸೆ ತಿರುತಿರುಗಿ ಹೆಚ್ಚುತ್ತಲೇ ಇರುವುದು.

೧೧. ಜಗತ್ತಿನಲ್ಲಿರುವ ಬತ್ತ, ಗೋಧಿ, ಚಿನ್ನ, ಪಶುಗಳು ಮತ್ತು ಸ್ತ್ರೀಯರು ಇವೆಲ್ಲವೂ ಒಬ್ಬನಿಗೆ ಸಾಕಾಗುವುದಿಲ್ಲ. ಎಂದರೆ ಇವಿಷ್ಟು ದೊರೆತರೂ ಆತನ ಆಸೆ ತೀರುವುದಿಲ್ಲ. ಆದುದರಿಂದ ಇದನ್ನು ವಿಚಾರಮಾಡಿ ಮನುಜನು ಮನಸ್ಸಿಗೆ ಶಾಂತಿಯನ್ನು ತಂದುಕೊಳ್ಳಬೇಕು.

೧೨. ಶತ್ರುನಾಶಕನಾದ ಎಲೈ ಪುತ್ರನೇ, ನೀನು ಕೊಟ್ಟ ಯೌವನದಿಂದ ಸುಖವು ದೊರಕುವಂತೆ, ಉತ್ಸಾಹವನ್ನನುಸರಿಸಿ, ಅಭಿಲಾಷೆಗೆ ಅನುಗುಣವಾಗಿ ಬಗೆಬಗೆಯ ವಿಷಯಗಳನ್ನು ನಾನು ಅನುಭವಿಸಿದೆನು.

೧೩. ಓ ಪೂರೂ, ನಾನು ಪ್ರೀತನಾದೆನು. ನಿನಗೆ ಮಂಗಳವಾಗಲಿ. ನಿನ್ನ ಯೌವನವನ್ನೂ ಈ ರಾಜ್ಯವನ್ನೂ ತೆಗೆದುಕೋ. ನೀನೇ ನನಗೆ ಪ್ರಿಯವನ್ನಾಚರಿಸಿದ ಮಗನು."

**॥ ಶೌನಕ ಉವಾಚ ॥**

**ಪ್ರತಿಪೇದೇ ಜರಾಂ ರಾಜಾ ಯಯಾತಿರ್ನಾಹುಷಸ್ತದಾ ।**
**ಯೌವನಂ ಪ್ರತಿಪೇದೇ ಸ ಪೂರುಃ ಸ್ವಂ ಪುನರಾತ್ಮನಃ** ॥೧೪॥

**ಅಭಿಷೇಕ್ತುಕಾಮಂ ಚ ನೃಪಂ ಪೂರುಂ ಪುತ್ರಂ ಕನೀಯಸಂ ।**
**ಬ್ರಾಹ್ಮಣಪ್ರಮುಖಾ ವರ್ಣಾ ಇದಂ ವಚನಮಬ್ರುವನ್** ॥೧೫॥

**ಕಥಂ ಶುಕ್ರಸ್ಯ ದೌಹಿತ್ರಂ ದೇವಯಾನ್ಯಾಃ ಸುತಂ ಪ್ರಭೋ ।**
**ಜ್ಯೇಷ್ಠಂ ಯದುಮತಿಕ್ರಮ್ಯ ರಾಜ್ಯಂ ಪೂರೋಃ ಪ್ರದಾಸ್ಯಸಿ** ॥೧೬॥

**ಜ್ಯೇಷ್ಠೋ ಯದುಸ್ತವ ಸುತಸ್ತುರ್ವಸುಸ್ತದನಂತರಂ ।**
**ಶರ್ಮಿಷ್ಠಾಯಾಃ ಸುತೋ ದ್ರುಹ್ಯುಸ್ತಥಾನುಃ ಪೂರುರೇವ ಚ** ॥೧೭॥

**ಕಥಂ ಜ್ಯೇಷ್ಠಮತಿಕ್ರಮ್ಯ ಕನೀಯಾನ್ರಾಜ್ಯಮರ್ಹತಿ ।**
**ಏತತ್ಸಂಬೋಧಯಾಮಸ್ತ್ವಾಂ ಸ್ವಧರ್ಮಮನುಪಾಲಯ** ॥೧೮॥

---

೧೪. ಶೌನಕಮುನಿಯು ಹೇಳಿದನು.—ನಹುಷಾತ್ಮಜನಾದ ಯಯಾತಿ ರಾಜನು ತನ್ನ ಮುಪ್ಪನ್ನು ತೆಗೆದುಕೊಂಡನು. ಪೂರುವೂ ಮತ್ತೆ ತನ್ನ ಯೌವನವನ್ನು ಪಡೆದನು.

೧೫. ರಾಜನು ಕಿರಿಯ ಮಗನಾದ ಪೂರುವಿಗೆ ರಾಜ್ಯಾಭಿಷೇಕವನ್ನು ಮಾಡಬೇಕೆಂದಿರಲು ಬ್ರಾಹ್ಮಣಾದಿ ಪ್ರಮುಖವರ್ಣದವರು ಅವನಿಗೆ ಹೇಳಿದರು.

೧೬. " ರಾಜಾ, ಶುಕ್ರಾಚಾರ್ಯನ ಮೊಮ್ಮಗನೂ, ದೇವಯಾನಿಯ ಮಗನೂ, ಹಿರಿಯವನೂ ಆದ ಯದುವನ್ನು ಬಿಟ್ಟು ಪೂರುವಿಗೆ ರಾಜ್ಯವನ್ನೆಂತು ಕೊಡುವೆ ?

೧೭. ನಿನ್ನ ಮಕ್ಕಳಲ್ಲಿ ಯದುವು ಹಿರಿಯವನು. ಬಳಿಕ ತುರ್ವಸು. ಶರ್ಮಿಷ್ಠೆಯ ಮಕ್ಕಳಲ್ಲಾದರೋ ದ್ರುಹ್ಯು ಮತ್ತು ಅನು ದೊಡ್ಡವರು ; ಆ ತರುವಾಯ ಪೂರು.

೧೮. ಹೀಗಿರಲು ಜ್ಯೇಷ್ಠನನ್ನು ಬಿಟ್ಟು ಕನಿಷ್ಠನಿಗೆ ರಾಜ್ಯವೆಂತು ಸಲ್ಲುವುದು? ನಿನಗೆ ಇದನ್ನು ತಿಳಿಸಿದ್ದೇವೆ. ಪರಂಪರಾಗತವಾದ ಧರ್ಮವನ್ನು ರಕ್ಷಿಸು."

|| ಯಯಾತಿರುವಾಚ ||

ಬ್ರಾಹ್ಮಣಪ್ರಮುಖಾ ವರ್ಣಾಃ ಸರ್ವೇ ಶೃಣ್ವಂತು ಮೇ ವಚಃ ।
ಜ್ಯೇಷ್ಠಂ ಪ್ರತಿ ಯತೋ ರಾಜ್ಯಂ ನ ದೇಯಂ ಮೇ ಕಥಂಚನ ||೧೯||

ಮಮ ಜ್ಯೇಷ್ಠೇನ ಯದುನಾ ನಿಯೋಗೋ ನಾನುಪಾಲಿತಃ ।
ಪ್ರತಿಕೂಲಃ ಪಿತುರ್ಯಶ್ಚ ನ ಸ ಪುತ್ರಃ ಸತಾಂ ಮತಃ ||೨೦||

ಮಾತಾಪಿತ್ರೋರ್ವಚನಕೃದ್ಧಿತಃ ಪಥ್ಯಶ್ಚ ಯಃ ಸುತಃ ।
ಸ ಪುತ್ರಃ ಪುತ್ರವದ್ಯಶ್ಚ ವರ್ತತೇ ಪಿತೃಮಾತೃಷು ||೨೧||

ಯದುನಾಹಮವಜ್ಞಾತಸ್ತಥಾ ತುರ್ವಸುನಾಪಿ ವಾ ।
ದ್ರುಹ್ಯುಣಾ ಚಾನುನಾ ಚೈವ ಮಯ್ಯವಜ್ಞಾ ಕೃತಾ ಭೃಶಂ ||೨೨||

ಪೂರುಣಾ ಮೇ ಕೃತಂ ವಾಕ್ಯಂ ಮಾನಿತಂ ಚ ವಿಶೇಷತಃ ।
ಕನೀಯಾನ್ಮಮ ದಾಯಾದೋ ಜರಾ ಯೇನ ಧೃತಾ ಮಮ ||೨೩||

---

೧೯. ಯಯಾತಿ ಹೇಳಿದನು.—"ಬ್ರಾಹ್ಮಣಾದಿ ಸಕಲವರ್ಣದವರೇ, ಜ್ಯೇಷ್ಠನಾದ ಯದುವಿಗೆ ನಾನೇಕೆ ರಾಜ್ಯವನ್ನು ಕೊಡುವುದಿಲ್ಲವೆಂಬುದನ್ನು ಹೇಳುವೆನು ಕೇಳಿರಿ.

೨೦. ಹಿರಿಯವನಾದ ಯದುವು ನನ್ನ ಅಪ್ಪಣೆಯನ್ನು ಮನ್ನಿಸಲಿಲ್ಲ; ತಂದೆಗೆ ಪ್ರತಿಕೂಲನಾದವನು ಮಗನಲ್ಲವೆಂಬುದು ಧರ್ಮಶಾಸ್ತ್ರಜ್ಞರ ಅಭಿಪ್ರಾಯ.

೨೧. ತಾಯಿತಂದೆಗಳ ಮಾತನ್ನು ನಡೆಸಿ, ಹಿತವನ್ನು ಕೋರಿ, ಅವರ ಮನಸ್ಸೊಪ್ಪುವಂತೆ ನಡೆಯುವ ಮಗನೇ ಮಗನು. ಈ ಗುಣಗಳಿಂದ ಕೂಡಿ ನಡೆಯುತಕ್ಕವನು ಯಾವನಾದರೂ ಸರಿ, ದೇಹಸಂಬಂಧದಿಂದ ಅವನು ಮಗನಲ್ಲದಿದ್ದರೂ ನಿಜವಾಗಿ ಮಗನೇ ಎನಿಸುವನು.

೨೨. ಯದು, ತುರ್ವಸು, ದ್ರುಹ್ಯು ಮತ್ತು ಅನು ಇವರೆಲ್ಲರೂ ನನ್ನನ್ನು ಬಹಳ ಅಲಕ್ಷ್ಯವಾಗಿ ಕಂಡರು.

೨೩. ಪೂರುವು ನನ್ನ ಮಾತನ್ನು ನಡೆಯಿಸಿದನು. ಅಷ್ಟೇ ಅಲ್ಲ; ಅದಕ್ಕೆ ಬಹಳ ಗೌರವವನ್ನೂ ಕೊಟ್ಟನು. ಹೀಗೆ ನನ್ನ ಮುಪ್ಪನ್ನು ತೆಗೆದುಕೊಂಡವನು ನನ್ನ ಕಿರಿಯ ಮಗ.

**ಮಮ ಕಾಮಃ ಸ ಚ ಕೃತಃ ಪೂರುಣಾ ಪುತ್ರರೂಪಿಣಾ ।**
**ಶುಕ್ರೇಣ ಚ ವರೋ ದತ್ತಃ ಕಾವ್ಯೇನೋಶನಸಾ ಸ್ವಯಂ ॥೨೪॥**

**ಪುತ್ರೋ ಯಸ್ತ್ವಾನುವರ್ತೇತ ಸ ರಾಜಾ ಪೃಥಿವೀಪತಿಃ ।**
**ಭವಂತಃ ಪ್ರತಿಜಾನಂತು ಪೂರೂ ರಾಜ್ಯೇಽಭಿಷಿಚ್ಯತಾಂ ॥೨೫॥**

**॥ ಪ್ರಕೃತಯ ಊಚುಃ ॥**

**ಯಃ ಪುತ್ರೋ ಗುಣಸಂಪನ್ನೋ ಮಾತಾಪಿತ್ರೋರ್ಹಿತಃ ಸದಾ ।**
**ಸರ್ವಂ ಸೋಽರ್ಹತಿ ಕಲ್ಯಾಣಂ ಕನೀಯಾನಪಿ ಸ ಪ್ರಭುಃ ॥೨೬॥**

**ಅರ್ಹಂ ಪೂರೋರಿದಂ ರಾಜ್ಯಂ ಯಃ ಪ್ರಿಯಃ ಪ್ರಿಯಕೃತ್ತವ ।**
**ವರದಾನೇನ ಶುಕ್ರಸ್ಯ ನ ಶಕ್ಯಂ ವಕ್ತುಮುತ್ತರಂ ॥೨೭॥**

---

೨೪-೨೫. ನನ್ನ ಕೋರಿಕೆಯನ್ನು ನೆರವೇರಿಸಿದ ಮಗನು ಪೂರು. "ನಿನ್ನ ಮಕ್ಕಳಲ್ಲಿ ಯಾವನು ನಿನ್ನ ಇಷ್ಟದಂತೆ ನಡೆಯುವನೋ ಅವನೇ ದೊರೆ, ರಾಜ್ಯದ ಅಧಿಪತಿ" ಎಂದು ಶುಕ್ರಾಚಾರ್ಯನೇ ಸಾಕ್ಷಾತ್ತಾಗಿ ವರವನ್ನು ಕೊಟ್ಟಿರುವನು. ಆದುದರಿಂದ ನೀವೆಲ್ಲರೂ ಅನುಮೋದಿಸಿರಿ. ಪೂರುವಿಗೆ ರಾಜ್ಯಾಭಿಷೇಕವಾಗಲಿ."

೨೬. ಪ್ರಜೆಗಳು ಹೇಳಿದರು.—"ಯಾವನು ಗುಣಶಾಲಿಯೋ, ತಾಯಿ ತಂದೆಗಳ ಹಿತವನ್ನು ಬಯಸುವನೋ, ಆ ಮಗನೇ ಎಲ್ಲ ಬಗೆಯ ಶುಭಫಲಗಳಿಗೆ ಭಾಗಿಯೆನಿಸುವನು. ಅವನು ಕಿರಿಯವನಾದರೂ ದೊರೆತನಕ್ಕೆ ಅರ್ಹನು.

೨೭. ನಿನ್ನ ಬಯಕೆಯನ್ನು ನಡೆಸಿ ನಿನಗೆ ಪ್ರಿಯನೆನಿಸಿರುವ ಪೂರುವಿಗೆ ಈ ರಾಜ್ಯವು ಸೇರತಕ್ಕದ್ದೇ ಸರಿ. ಶುಕ್ರಾಚಾರ್ಯನೂ ಸಹ ಹೀಗೆ ವರವನ್ನು ಕೊಟ್ಟಿರುವ ಕಾರಣ ನಿನ್ನ ಮಾತಿಗೆ ಬದಲು ಹೇಳಲು ಸಾಧ್ಯವಿಲ್ಲ."

॥ ಶೌನಕ ಉವಾಚ ॥

ಪೌರಜಾನಪದೈಸ್ತುಷ್ಟೈರಿತ್ಯುಕ್ತೋ ನಾಹುಷಸ್ತದಾ ।
ಅಭಿಷಿಚ್ಯ ತತಃ ಪೂರುಂ ರಾಜ್ಯೇ ಸ್ವಸುತಮಾತ್ಮಜಂ ॥೨೮॥

ದತ್ವಾ ಚ ಪೂರವೇ ರಾಜ್ಯಂ ವನವಾಸಾಯ ದೀಕ್ಷಿತಃ ।
ಪುರಾತ್ಸ ನಿರ್ಯಯೌ ರಾಜಾ ಬ್ರಾಹ್ಮಣೈಸ್ತಾಪಸೈಃ ಸಹ ॥೨೯॥

ಯದೋಸ್ತು ಯಾದವಾ ಜಾತಾ ತುರ್ವಸೋರ್ಯವನಾಃ ಸುತಾಃ ।
ದ್ರುಹ್ಯೋಶ್ಚೈವ ಸುತಾ ಭೋಜಾ ಅನೋಸ್ತು ಮ್ಲೇಚ್ಛಜಾತಯಃ ॥೩೦॥

ಪೂರೋಸ್ತು ಪೌರವೋ ವಂಶೋ ಯತ್ರ ಜಾತೋಽಸಿ ಪಾರ್ಥಿವ ।
ಇದಂ ವರ್ಷಸಹಸ್ರಾತ್ತು ರಾಜ್ಯಂ ಕುರುಕುಲಾಗತಂ ॥೩೧॥

ಇತಿ ಶ್ರೀಮತ್ಸ್ಯೇ ಮಹಾಪುರಾಣೇ ಯಯಾತಿಚರಿತೇ
ಚತುಸ್ತ್ರಿಂಶೋಽಧ್ಯಾಯಃ

---

೨೮-೨೯. ಶೌನಕಮುನಿ ಹೇಳಿದನು.—ಪಟ್ಟಣಿಗರೂ ನಾಡಿನ ಮುಂದಾಳುಗಳೂ ಸಂತೋಷದಿಂದ ಹೀಗೆ ಹೇಳಲು, ಯಯಾತಿ ಮಹಾರಾಜನು ತನ್ನ ಪುತ್ರನಾದ ಪೂರುವಿಗೆ ರಾಜ್ಯಾಭಿಷೇಕವನ್ನು ಮಾಡಿದನು. ತಾನು ವನವಾಸಕ್ಕೆ ದೀಕ್ಷೆಯನ್ನು ತಳೆದು ಬ್ರಾಹ್ಮಣರು ಮತ್ತು ಮುನಿಗಳೊಡನೆ ನಗರದಿಂದ ಹೊರಟನು.

೩೦. ಯದುವಿನಿಂದ ಯಾದವರೂ, ತುರ್ವಸುವಿನಿಂದ ಯವನರೂ ಹುಟ್ಟಿದರು. ದ್ರುಹ್ಯುವಿನ ಮಕ್ಕಳು ಭೋಜರು. ಮ್ಲೇಚ್ಛಜಾತಿಯವರು ಅನುವಿನಿಂದ ಉತ್ಪನ್ನರಾದರು.

೩೧. ಓ ರಾಜಾ, ಪೂರುವಿನ ವಂಶಕ್ಕೆ ಪೌರವವಂಶವೆಂದು ಹೆಸರು. ನೀನು ಇದರಲ್ಲೇ ಹುಟ್ಟಿರುವೆ. ಕುರುಕುಲದ ಪರಂಪರೆಯಲ್ಲಿ ಈ ರಾಜ್ಯವು ಸಾವಿರಾರು ವರ್ಷಗಳಿಂದ ನಡೆದು ಬಂದಿದೆ.

## ಅಧ್ಯಾಯದ ಸಾರಾಂಶ

ಯಯಾತಿರಾಜನು ಪೂರುವಿಗೆ ತನ್ನ ಮುಪ್ಪನ್ನು ಕೊಟ್ಟು ಅವನ ಯೌವನದಿಂದ ಯುವಕನಾದನು. ಬೇಕುಬೇಕಾದ ಸುಖಗಳನ್ನು ಅನುಭವಿಸಿ ಧರ್ಮಕಾರ್ಯಗಳನ್ನು ನಡೆಸಿದನು. ಆದರೂ ಅವನಿಗೆ ಭೋಗಾಭಿಲಾಷೆ ತೀರಲಿಲ್ಲ. ಹೇಳಿದ್ದ ಅವಧಿ ಮುಗಿಯಲು ಪೂರುವನ್ನು ಕರೆದು "ಕಾಮವನ್ನು ಅಡಗಿಸುವ ಮದ್ದೆಂದರೆ ಶಾಂತಿ; ಸುಖಾನುಭವವಲ್ಲ" ಎಂದು ಹೇಳಿ, ಅವನ ಯೌವನವನ್ನು ಕೊಟ್ಟು ಮರಳಿ ತಾನು ಮುದುಕನಾದನು. ತನ್ನ ಪ್ರಿಯಪುತ್ರನಾದ ಪೂರುವಿಗೆ ರಾಜ್ಯಾಭಿಷೇಕಮಾಡಲು ಯತ್ನಿಸಿದಾಗ, ಪ್ರಜೆಗಳಲ್ಲಿ ಮುಂದಾಳುಗಳು ಅದು ಧರ್ಮವಿರುದ್ಧವೆಂದೂ, ಹಿರಿಯವನಿರುವಾಗ ಕಿರಿಯವನಿಗೆ ರಾಜ್ಯವು ಸಲ್ಲದೆಂದೂ ಹೇಳಿದರು. ದೊರೆಯು ಹಿರಿಯ ನಾಲ್ವರು ಮಕ್ಕಳೂ ಅವಿಧೇಯರಾದುದರಿಂದ ರಾಜ್ಯಾರ್ಹರಲ್ಲವೆಂದೂ, ಶುಕ್ರಾಚಾರ್ಯನ ವರವೂ ಹೀಗೆಯೇ ಇರುವುದೆಂದೂ ತಿಳಿಸಿ ಅವರನ್ನೊಪ್ಪಿಸಿದನು.

ಪೂರುವಿಗೆ ಪಟ್ಟವಾಯಿತು. ರಾಜನು ವನವಾಸಕ್ಕೆ ತೆರಳಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಯಯಾತಿ ಚರಿತದೊಳಗೆ
ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು



## ಅಥ ಶ್ರೀಮತ್ಸ್ಯಮಹಾಪುರಾಣೇ ಪಂಚತ್ರಿಂಶೋಽಧ್ಯಾಯಃ

॥ ಶೌನಕ ಉವಾಚ ॥

ಏವಂ ಸ ನಾಹುಷೋ ರಾಜಾ ಯಯಾತಿಃ ಪುತ್ರಮೀಪ್ಸಿತಂ ।
ರಾಜ್ಯೇಽಭಿಷಿಚ್ಯ ಮುದಿತೋ ವಾನಪ್ರಸ್ಥೋಽಭವನ್ಮುನಿಃ ॥ ೧ ॥

ಉಷಿತ್ವಾ ವನವಾಸಂ ಸ ಬ್ರಾಹ್ಮಣೈಃ ಸಹ ಸಂಶ್ರಿತಃ ।
ಫಲಮೂಲಾಶನೋ ದಾಂತೋ ಯಥಾ ಸ್ವರ್ಗಮಿತೋ ಗತಃ ॥ ೨ ॥

ಸ ಗತಃ ಸ್ವರ್ಗವಾಸಂ ತು ನ್ಯವಸನ್ಮುದಿತಃ ಸುಖೀ ।
ಕಾಲಸ್ಯ ನಾತಿಮಹತಃ ಪುನಃ ಶಕ್ರೇಣ ಪಾತಿತಃ ॥ ೩ ॥

ವಿವಶಃ ಪ್ರಚ್ಯುತಃ ಸ್ವರ್ಗಾದಪ್ರಾಪ್ತೋ ಮೇದಿನೀತಲಂ ।
ಸ್ಥಿತಶ್ಚಾಸೀದಂತರಿಕ್ಷೇ ಸ ತದೇತಿ ಶ್ರುತಂ ಮಯಾ ॥ ೪ ॥

---

೧. ಶೌನಕಮುನಿಯು ಹೇಳಿದನು.—ಹೀಗೆ ಯಯಾತಿಮಹಾರಾಜನು ತನ್ನ ಪ್ರಿಯಪುತ್ರನನ್ನು ರಾಜ್ಯದಲ್ಲಿರಿಸಿ, ಸಂತೋಷದಿಂದ ವಾನಪ್ರಸ್ಥಾಶ್ರಮವನ್ನು ಕೈಗೊಂಡು ತಪೋನಿರತನಾದನು.

೨. ಅವನು ಬ್ರಾಹ್ಮಣರೊಡನೆ ವನವಾಸಮಾಡುತ್ತ, ಹಣ್ಣುಗಳನ್ನೂ, ಗೆಡ್ಡೆಗೆಣಸುಗಳನ್ನೂ ತಿನ್ನುತ್ತ, ಇಂದ್ರಿಯಗಳನ್ನು ಜಯಿಸಿ ಕಾಲವಶದಿಂದ ಸ್ವರ್ಗವನ್ನು ಸೇರಿದನು.

೩. ಅವನು ಸಂತೋಷದಿಂದ ಸ್ವರ್ಗದಲ್ಲಿ ವಾಸಿಸುತ್ತ ಸುಖವನ್ನನುಭವಿಸುತ್ತಿದ್ದನು. ಕೆಲವು ಕಾಲಾನಂತರ ಇಂದ್ರನು ಅವನನ್ನು ಮತ್ತೆ ಅಲ್ಲಿಂದ ಹೊರಕ್ಕೆ ತಳ್ಳಿದನು.

೪. ಆಗ ಪರವಶನಾಗಿ ಸ್ವರ್ಗದಿಂದ ಜಾರಿಬಿದ್ದು, ಅವನು ಭೂಮಿಯನ್ನು ಮುಟ್ಟದೆ ಅಂತರಿಕ್ಷದಲ್ಲಿಯೇ ನಿಂತನಂತೆ.

ತತ ಏವ ಪುನಶ್ಚಾಪಿ ಗತಃ ಸ್ವರ್ಗಮಿತಿ ಶ್ರುತಿಃ ।
ರಾಜ್ಞಾ ವಸುಮತಾ ಸಾರ್ಧಮಷ್ಟಕೇನ ಚ ವೀರ್ಯವಾನ್ ॥
ಪ್ರತರ್ದನೇನ ಶಿಬಿನಾ ಸಮೇತ್ಯ ಕಿಲ ಸಂಸದಿ ॥ ೫ ॥

॥ ಶತಾನೀಕ ಉವಾಚ ॥

ಕರ್ಮಣಾ ಕೇನ ಸ ದಿವಂ ಪುನಃ ಪ್ರಾಪ್ತೋ ಮಹೀಪತಿಃ ।
ಕಥಮಿಂದ್ರೇಣ ಭಗವನ್ಪಾತಿತೋ ಮೇದಿನೀತಲೇ ॥ ೬ ॥

ಸರ್ವಮೇತದಶೇಷೇಣ ಶ್ರೋತುಮಿಚ್ಛಾಮಿ ತತ್ತ್ವತಃ ।
ಕಥ್ಯಮಾನಂ ತ್ವಯಾ ವಿಪ್ರ ದೇವರ್ಷಿಗಣಸನ್ನಿಧೌ ॥ ೭ ॥

ದೇವರಾಜಸಮೋ ಹ್ಯಾಸೀದ್ಯಯಾತಿಃ ಪೃಥಿವೀಪತಿಃ ।
ವರ್ಧನಃ ಕುರುವಂಶಸ್ಯ ವಿಭಾವಸುಸಮದ್ಯುತಿಃ ॥ ೮ ॥

ತಸ್ಯ ವಿಸ್ತೀರ್ಣಯಶಸಃ ಸತ್ಯಕೀರ್ತೇರ್ಮಹಾತ್ಮನಃ ।
ಶ್ರೋತುಮಿಚ್ಛಾಮಿ ದೇವೇಶ ದಿವಿ ಚೇಹ ಚ ಸರ್ವಶಃ ॥ ೯ ॥

---

೫. ಪರಾಕ್ರಮಶಾಲಿಯಾದ ಆ ರಾಜನು ವಸುಮಂತ, ಅಷ್ಟಕ, ಪ್ರತರ್ದನ, ಶಿಬಿ ಈ ಭೂಪತಿಗಳೊಡನೆ ಅಲ್ಲಿಂದಲೇ ಪುನಃ ಸ್ವರ್ಗಕ್ಕೆ ಹೋದನೆಂದು ಹೇಳುತ್ತಾರೆ.

೬. ಶತಾನೀಕನು ಹೇಳಿದನು.—ಪೂಜ್ಯನೇ, ಆ ರಾಜನು ಯಾವ ಸತ್ಕರ್ಮದಿಂದ ಪುನಃ ಸ್ವರ್ಗಕ್ಕೆ ಹೋದನು ? ಇಂದ್ರನು ಅವನನ್ನು ಏಕೆ ನೆಲಕ್ಕೆ ನೂಕಿದನು ?

೭. ಓ ದ್ವಿಜೋತ್ತಮಾ, ಇವೆಲ್ಲವನ್ನೂ ಯಥಾವತ್ತಾಗಿ ಕೇಳಬೇಕೆಂದು ಬಯಸುತ್ತೇನೆ. ದೇವತೆಗಳ ಮತ್ತು ಋಷಿಗಳ ಈ ಸಭೆಯಲ್ಲಿ ಹೇಳು.

೮-೯. ಯಯಾತಿ ಮಹಾರಾಜನು ದೇವೇಂದ್ರನಂತಿದ್ದನು. ಅವನು ಕುರುವಂಶವನ್ನು ಬೆಳೆಸಿದನು. ತೇಜಸ್ಸಿನಲ್ಲಿ ಅಗ್ನಿಗೆ ಸಮನಾಗಿದ್ದನು. ಸ್ವರ್ಗಲೋಕದಲ್ಲೂ, ಭೂಲೋಕದಲ್ಲೂ, ಅವನ ಕೀರ್ತಿ ಹರಡಿತ್ತು. ಆ ಮಹಾತ್ಮನ ವೃತ್ತಾಂತವನ್ನು ಕೇಳಬೇಕೆಂದಿರುವೆನು.

॥ ಶೌನಕ ಉವಾಚ ॥

**ಹಂತ ತೇ ಕಥಯಿಷ್ಯಾಮಿ ಯಯಾತೇರುತ್ತಮಾಂ ಕಥಾಂ।**
**ದಿವಿ ಚೇಹ ಚ ಪುಣ್ಯಾರ್ಥಾಂ ಸರ್ವಪಾಪಪ್ರಣಾಶಿನೀಂ ॥೧೦॥**

**ಯಯಾತಿರ್ನಾಹುಷೋ ರಾಜಾ ಪೂರುಂ ಪುತ್ರಂ ಕನೀಯಸಂ।**
**ರಾಜ್ಯೇಽಭಿಷಿಚ್ಯ ಮುದಿತಃ ಪ್ರವವ್ರಾಜ ವನಂ ತದಾ ॥೧೧॥**

**ಅಂತೇಷು ಸ ವಿನಿಕ್ಷಿಪ್ಯ ಪುತ್ರಾನ್ಯದುಪುರೋಗಮಾನ್ ।**
**ಫಲಮೂಲಾಶನೋ ರಾಜಾ ವನೇಽಸೌ ನ್ಯವಸಚ್ಚಿರಂ ॥೧೨॥**

**ಸ ಜಿತಾತ್ಮಾ ಜಿತಕ್ರೋಧಸ್ತರ್ಪಯನ್ ಪಿತೃದೇವತಾಃ ।**
**ಅಗ್ನೀಂಶ್ಚ ವಿಧಿವಜ್ಜುಹ್ವನ್ವಾನಪ್ರಸ್ಥವಿಧಾನತಃ ॥೧೩॥**

**ಅತಿಥೀನ್ಪೂಜಯನ್ನಿತ್ಯಂ ವನ್ಯೇನ ಹವಿಷಾ ವಿಭುಃ ।**
**ಶಿಲೋಂಛವೃತ್ತಿಮಾಸ್ಥಾಯ ಶೇಷಾನ್ನಕೃತಭೋಜನಃ ॥೧೪॥**

---

೧೦. ಶೌನಕಮಹರ್ಷಿ ಹೇಳಿದನು.—ಆಗಲಪ್ಪಾ, ಯಯಾತಿ ಮಹಾರಾಜನ ಉತ್ತಮ ಕಥೆಯನ್ನು ಹೇಳುವೆನು. ಅದು ಇಹಪರಗಳಲ್ಲಿ ಪುಣ್ಯಪ್ರದವಾದುದು ; ಪಾಪಗಳೆಲ್ಲವನ್ನೂ ಕಳೆಯುವಂತಹುದು.

೧೧. ನಹುಷ ಪುತ್ರನಾದ ಯಯಾತಿ ರಾಜನು ಕಿರಿಯ ಮಗನಾದ ಪೂರುವಿಗೆ ರಾಜ್ಯದಲ್ಲಿ ಅಭಿಷೇಕಮಾಡಿ, ಸಂತೋಷದಿಂದ ಕಾಡಿಗೆ ತಪಸ್ಸಿಗಾಗಿ ಹೋದನು.

೧೨. ಆ ಭೂಪತಿಯು ತನ್ನ ದೇಶದ ಬೇರೆ ಬೇರೆ ಗಡಿಗಳಲ್ಲಿ ಯದು ಮೊದಲಾದ ಮಕ್ಕಳನ್ನು ಇರಹೇಳಿ, ಗೆಡ್ಡೆಗಳನ್ನೂ ಹಣ್ಣುಗಳನ್ನೂ ತಿಂದುಕೊಂಡು ಬಹಳಕಾಲ ವನದಲ್ಲಿ ವಾಸಿಸಿದನು.

೧೩-೧೪. ಅವನು ಮನಸ್ಸನ್ನು ಗೆದ್ದು, ಕೋಪವನ್ನು ತ್ಯಜಿಸಿ, ಪಿತೃಗಳನ್ನೂ ದೇವತೆಗಳನ್ನೂ ತೃಪ್ತಿಪಡಿಸುತ್ತಿದ್ದನು. ವಾನಪ್ರಸ್ಥಾಶ್ರಮಕ್ಕೆ ಉಕ್ತವಾದ ವಿಧಿಯಿಂದ ದಕ್ಷಿಣಾಗ್ನಿ, ಗಾರ್ಹಪತ್ಯ, ಮತ್ತು ಆಹವನೀಯ ಎಂಬ ಅಗ್ನಿಗಳಲ್ಲಿ ಕಾಡಿನಲ್ಲಿ ದೊರಕಬಹುದಾದ ಹವಿಸ್ಸಿನಿಂದ ಹೋಮಮಾಡುತ್ತಿದ್ದನು. ಧಾನ್ಯಗಳ ತೆನೆಗಳನ್ನು ಆರಿಸಿ ತಂದು ಅವುಗಳಿಂದ ಅತಿಥಿಗಳನ್ನು ಸತ್ಕರಿಸುತ್ತಿದ್ದನು. ಅವರ ಭೋಜನಾನಂತರ ಶೇಷಾನ್ನವನ್ನು ತಾನು ಉಪಯೋಗಿಸುತ್ತಿದ್ದನು.

**ಪೂರ್ಣಂ ಸಹಸ್ರಂ ವರ್ಷಾಣಾಮೇವಂವೃತ್ತಿರಭೂನ್ನೃಪಃ ।**
**ಅಂಬುಭಕ್ಷಃ ಸ ಚಾಬ್ದಾಂಸ್ತ್ರೀನಾಸೀನ್ನಿಯತವಾಙ್ಮನಾಃ ॥೧೫॥**

**ತತಸ್ತು ವಾಯುಭಕ್ಷೋಽಭೂತ್ಸಂವತ್ಸರಮತಂದ್ರಿತಃ ।**
**ಪಂಚಾಗ್ನಿಮಧ್ಯೇ ಚ ತಪಸ್ತೇಪೇ ಸಂವತ್ಸರಂ ಪುನಃ ॥೧೬॥**

**ಏಕಪಾದಸ್ಥಿತಶ್ಚಾಸೀತ್ಷಣ್ಮಾಸಾನನಿಲಾಶನಃ ।**
**ಪುಣ್ಯಕೀರ್ತಿಸ್ತತಃ ಸ್ವರ್ಗಂ ಜಗಾಮಾವೃತ್ಯ ರೋದಸೀ ॥೧೭॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸೋಮವಂಶೇ ಯಯಾತಿಚರಿತೇ ಪಂಚತ್ರಿಂಶೋಽಧ್ಯಾಯಃ**

---

೧೫. ಹೀಗೆ ಸಾವಿರ ವರ್ಷಗಳ ಕಾಲ ಆ ರಾಜನು ನಿತ್ಯಚರ್ಯಗಳಲ್ಲಿದ್ದನು. ಮೂರು ವರ್ಷಗಳು ಬರಿಯ ನೀರನ್ನೇ ಸೇವಿಸುತ್ತ, ಮೌನವ್ರತವನ್ನು ತಾಳಿ ಜಿತ ಮನಸ್ಕನಾಗಿದ್ದನು.

೧೬. ಬಳಿಕ ಒಂದು ವರ್ಷಕಾಲ ವಾಯುವನ್ನು ಭಕ್ಷಿಸುತ್ತ ಜಾಗರೂಕ ನಾಗಿದ್ದನು. ಅನಂತರ ಸಂವತ್ಸರಕಾಲ ಪಂಚಾಗ್ನಿ ಮಧ್ಯದಲ್ಲಿ ಎಂದರೆ ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ, ಸಭ್ಯ, ಆವಸಥ್ಯಗಳೆಂಬ ಐದು ವಿಧವಾದ ಪವಿತ್ರಾಗ್ನಿ ಗಳ ಮಧ್ಯದಲ್ಲಿ ತಪಸ್ಸನ್ನು ಮಾಡಿದನು.

೧೭. ಆರು ತಿಂಗಳು ವಾಯುಸೇವನೆ ಮಾಡುತ್ತಾ ಒಂಟಿಗಾಲಿನಲ್ಲಿ ನಿಂತಿದ್ದನು. ಭೂಮ್ಯಾಕಾಶಗಳಲ್ಲೆಲ್ಲಾ ಅವನ ಕೀರ್ತಿಯು ವ್ಯಾಪಿಸಿತು. ಬಳಿಕ ಅವನು ಸ್ವರ್ಗವನ್ನು ಸೇರಿದನು.

## ಅಧ್ಯಾಯದ ಸಾರಾಂಶ

ಯಯಾತಿ ಮಹಾರಾಜನು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ, ಅರಣ್ಯದಲ್ಲಿ ಸಕಲ ಧರ್ಮಗಳನ್ನೂ ಆಚರಿಸುತ್ತಾ, ಅಗ್ನಿಹೋತ್ರ, ದೇವಪೂಜೆ, ಪಿತೃಪೂಜೆ, ಅತಿಥಿಪೂಜೆಗಳನ್ನು ತಪ್ಪದೆ ಮಾಡುತ್ತಿದ್ದನು. ಬಳಿಕ ಪಂಚಾಗ್ನಿಮಧ್ಯದಲ್ಲಿ ದುಷ್ಕರ ವಾದ ತಪಸ್ಸನ್ನು ಮಾಡಿದನು. ಜಲಾಹಾರದಲ್ಲೂ, ವಾತಾಹಾರದಲ್ಲೂ, ದೇಹ ಧಾರಣೆಮಾಡಿಕೊಂಡಿದ್ದು ತನ್ನ ಪುಣ್ಯಬಲದಿಂದ ಸ್ವರ್ಗಕ್ಕೆ ಹೋದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಚಂದ್ರವಂಶ ವರ್ಣನದೊಳಗೆ ಯಯಾತಿ ಚರಿತದಲ್ಲಿ ಮೂವತ್ತೈದನೆಯ ಅಧ್ಯಾಯವು ಸಮಾಪ್ತವಾದುದು

## ಅಥ ಶ್ರೀಮತ್ಸ್ಯಮಹಾಪುರಾಣೇ ಷಟ್ತ್ರಿಂಶೋಽಧ್ಯಾಯಃ

॥ ಶೌನಕ ಉವಾಚ ॥

ಸ್ವರ್ಗತಸ್ತು ಸ ರಾಜೇಂದ್ರೋ ನ್ಯವಸದ್ದೇವಸದ್ಮನಿ ।
ಪೂಜಿತಸ್ತ್ರಿದಶೈಃ ಸಾಧ್ಯೈರ್ಮರುದ್ಭಿರ್ವಸುಭಿಸ್ತಥಾ ॥ ೧ ॥

ದೇವಲೋಕಾದ್ಬ್ರಹ್ಮಲೋಕಂ ಸಂಚರನ್ ಪುಣ್ಯಕೃದ್ವಶೀ ।
ಅವಸತ್ಪೃಥಿವೀಪಾಲೋ ದೀರ್ಘಕಾಲಮಿತಿ ಶ್ರುತಿಃ ॥ ೨ ॥

ಸ ಕದಾಚಿನ್ನೃಪಶ್ರೇಷ್ಠೋ ಯಯಾತಿಃ ಶಕ್ರಮಾಗತಃ ।
ಕಥಾಂತೇ ತತ್ರ ಶಕ್ರೇಣ ಪೃಷ್ಟಃ ಸ ಪೃಥಿವೀಪತಿಃ ॥ ೩ ॥

॥ ಶಕ್ರ ಉವಾಚ ॥

ಯದಾ ಸ ಪೂರುಸ್ತವ ರೂಪೇಣ ರಾಜ
ಜ್ಜರಾಂ ಗೃಹೀತ್ವಾ ಪ್ರಚಚಾರ ಲೋಕೇ ।
ತದಾ ರಾಜ್ಯಂ ಸಂಪ್ರದಾಯೈವಮಸ್ಮೈ
ತ್ವಯಾ ಕಿಮುಕ್ತಃ ಕಥಯೇಹ ಸತ್ಯಂ ॥ ೪ ॥

---

೧. ಶೌನಕಮುನಿಯು ಹೇಳಿದನು.—ಆ ರಾಜೇಂದ್ರನು ಸ್ವರ್ಗದಲ್ಲಿ ದೇವತೆಗಳ ದಿವ್ಯಭವನದಲ್ಲಿ ವಾಸಿಸುತ್ತಿದ್ದನು. ತ್ರಿದಶರು, ಸಾಧ್ಯರು, ಮರುತ್ತುಗಳು, ವಸುಗಳು ಎಲ್ಲರೂ ಅವನನ್ನು ಸತ್ಕರಿಸುತ್ತಿದ್ದರು.

೨. ಪುಣ್ಯಶಾಲಿಯೂ, ಜಿತೇಂದ್ರಿಯನೂ ಆದ ಆ ರಾಜನು ದೇವಲೋಕದಿಂದ ಬ್ರಹ್ಮಲೋಕಕ್ಕೆ ಸಂಚರಿಸುತ್ತ, ಬಹಳ ಕಾಲ ಸುಖದಿಂದಿದ್ದನೆಂದು ಕೇಳಿದ್ದೇನೆ.

೩. ರಾಜಶ್ರೇಷ್ಠನಾದ ಆ ಯಯಾತಿಯು ಒಂದು ಸಾರಿ ಇಂದ್ರನ ಬಳಿಗೆ ಬಂದನು. ಯೋಗಕ್ಷೇಮವಾದ ಬಳಿಕ ಇಂದ್ರನು ಅವನನ್ನು ಕೇಳಿದನು.

೪. ಇಂದ್ರನು ಹೇಳಿದನು.—ಪೂರುವು ನಿನ್ನಿಂದ ಮುಪ್ಪನ್ನು ತೆಗೆದುಕೊಂಡು ನಿನ್ನ ರೂಪದಿಂದ ಲೋಕದಲ್ಲಿ ಸಂಚರಿಸುತ್ತಿರುವಾಗ, ಅವನಿಗೆ ರಾಜ್ಯವನ್ನು ಕೊಟ್ಟು ನೀನು ಏನು ಹೇಳಿದೆ? ನಿಜವಾಗಿ ಹೇಳು.

॥ ಯಯಾತಿರುವಾಚ ॥

ಪ್ರಕೃತ್ಯನುಮತೇ ಪೂರುಂ ರಾಜ್ಯೇ ಕೃತ್ವೇದಮಬ್ರುವಂ ।
ಗಂಗಾಯಮುನಯೋರ್ಮಧ್ಯೇ ಕೃತ್ಸ್ನೋಽಯಂ ವಿಷಯಸ್ತವ
ಮಧ್ಯೇ ಪೃಥಿವ್ಯಾಸ್ತ್ವಂ ರಾಜಾ ಭ್ರಾತರೋಽಂತೇಽಧಿಪಾಸ್ತವ ॥ ೫ ॥

ಅಕ್ರೋಧನಃ ಕ್ರೋಧನೇಭ್ಯೋ ವಿಶಿಷ್ಟ
ಸ್ತಥಾ ತಿತಿಕ್ಷುರತಿತಿಕ್ಷೋರ್ವಿಶಿಷ್ಟಃ ।
ಅಮಾನುಷೇಭ್ಯೋ ಮಾನುಷಶ್ಚ ಪ್ರಧಾನೋ
ವಿದ್ವಾಂಸ್ತಥೈವಾವಿದುಷಃ ಪ್ರಧಾನಃ ॥ ೬ ॥

ಆಕ್ರೋಶ್ಯಮಾನೋ ನಾಕ್ರೋಶೇನ್ಮನ್ಯುಮೇವ ತಿತಿಕ್ಷತಿ ।
ಆಕ್ರೋಷ್ಟಾರಂ ನಿರ್ದಹತಿ ಸುಕೃತಂ ಚಾಸ್ಯ ವಿಂದತಿ ॥ ೭ ॥

ನಾರುಂತುದಃ ಸ್ಯಾನ್ನ ನೃಶಂಸವಾದೀ
ನ ಹೀನತಃ ಪರಮಭ್ಯಾದದೀತ ।
ಯಯಾಽಸ್ಯ ವಾಚಾ ಪರ ಉದ್ವಿಜೇತ
ನ ತಾಂ ವದೇದ್ರುಶತೀಂ ಪಾಪಲೌಲ್ಯಾಂ ॥ ೮ ॥

---

೫. ಯಯಾತಿ ಹೇಳಿದನು.—ಪ್ರಜೆಗಳ ಒಪ್ಪಿಗೆಯಂತೆ ಪೂರುವನ್ನು ಪಟ್ಟಕ್ಕೆ ತಂದು ಅವನಿಗೆ ಹೀಗೆ ಹೇಳಿದೆನು.—ಗಂಗಾ ಯಮುನೆಗಳ ಮಧ್ಯದಲ್ಲಿರುವ ದೇಶವೆಲ್ಲ ನಿನ್ನದು. ಈ ನಾಡಿನ ಮಧ್ಯದಲ್ಲಿ ನೀನು ಅರಸನಾಗಿರು. ಎಲ್ಲೆಕಟ್ಟು ಗಳಲ್ಲಿ ನಿನ್ನ ಸೋದರರು ದೊರೆತನವನ್ನು ಮಾಡಲಿ.

೬. ಕೋಪಿಷ್ಠರಿಗಿಂತಲೂ ಕೋಪವಿಲ್ಲದವನು ಮೇಲು. ಸೈರಣೆಯಿಲ್ಲದವನಿಗಿಂತ ಸೈರಣೆವಂತನು ಶ್ರೇಷ್ಠನು. ಮನುಷ್ಯೇತರ ಪ್ರಾಣಿಗಳಿಗಿಂತ ಮನುಷ್ಯನೇ ಉತ್ತಮನು. ಅಜ್ಞಾನಿಗಿಂತ ಜ್ಞಾನಿಯು ಶ್ಲಾಘ್ಯನು.

೭. ಇತರರು ರೇಗಿಸಿದರೂ ಸಿಟ್ಟಾಗಬಾರದು. ಕೋಪವನ್ನು ತಡೆಯಲೇ ಬೇಕು. ಏಕೆಂದರೆ ಕೋಪಗೊಂಡವನನ್ನು ಕೋಪವು ಸುಡುವುದು. ಅಷ್ಟೇ ಅಲ್ಲ; ಇವನ ಪುಣ್ಯವು ಕೋಪಕ್ಕೆ ಗುರಿಯಾದವನಿಗೆ ಹೋಗುವುದು.

೮. ನೋಯಿಸಬಾರದು; ಬಿರುನುಡಿಗಳನ್ನಾಡಬಾರದು; ಕೀಳ್ತರದ ಒಡವೆಯನ್ನು ಕೊಟ್ಟು ಉತ್ತಮವಾದುದನ್ನು ತೆಗೆದುಕೊಳ್ಳಬಾರದು. ಪರರ ಮನವನ್ನು ಕದಡಿ ಸಂಕಟಗೊಳಿಸುವ ಪಾಪವಾಕ್ಯಗಳನ್ನು ಹೇಳಬಾರದು.

ಅರುಂತುದಂ ಪುರುಷಂ ತೀವ್ರವಾಚಂ
ವಾಕ್ಕಂಟಕೈರ್ವಿತುದಂತಂ ಮನುಷ್ಯಾನ್ ।
ವಿಂದ್ಯಾದಲಕ್ಷ್ಮೀಕತಮಂ ಜನಾನಾಂ
ಮುಖೇ ನಿಬದ್ಧಾಂ ನಿರ್ಋತಿಂ ವಹಂತಂ ॥ ೯ ॥

ಸದ್ಭಿಃ ಪುರಸ್ತಾದಭಿಪೂಜಿತಃ ಸ್ಯಾ
ತ್ಸದ್ಭಿಸ್ತಥಾ ಪೃಷ್ಠತೋ ರಕ್ಷಿತಃ ಸ್ಯಾತ್ ।
ಸದಾ ಸತಾಮತಿವಾದಾಂಸ್ತಿತಿಕ್ಷೇ
ತ್ಸತಾಂ ವೃತ್ತಂ ಪಾಲಯನ್ಸಾಧುವೃತ್ತಃ ॥೧೦॥

ವಾಕ್ಸಾಯಕಾ ವದನಾನ್ನಿಷ್ಪತಂತಿ
ಯೈರಾಹತಃ ಶೋಚತಿ ವಾ ತ್ರ್ಯಹಾನಿ ।
ಪರಸ್ಯ ನೋ ಮರ್ಮಸು ತೇ ಪತಂತಿ
ತಾನ್ಪಂಡಿತೋ ನಾವಸೃಜೇತ್ಪರೇಷು ॥೧೧॥

---

೯. ಮಾತುಗಳೆಂಬ ಮುಳ್ಳುಗಳಿಂದ ಜನರನ್ನು ಚುಚ್ಚುತ್ತ, ಕ್ರೂರವಚನಗಳನ್ನು ಆಡುತ್ತ ಮನನೋಯಿಸುವ ಮನುಷ್ಯನನ್ನು ಎಲ್ಲರಿಗಿಂತಲೂ ಅಮಂಗಲದವನೆಂದು ತಿಳಿಯಬೇಕು. ಅವನು ಯಾವಾಗಲೂ ತನ್ನ ಬಾಯಲ್ಲಿ ರಾಕ್ಷಸನನ್ನು ಹೊತ್ತುಕೊಂಡೇ ಇರುವನು. (ಇಂತಹವನ ಮಾತಿನಿಂದ ಜನರಿಗೆ ಹಿಂಸೆಯೇ ಹೆಚ್ಚೆಂದು ಭಾವ.)

೧೦. ಸತ್ಪುರುಷರು ಒಂದು ವೇಳೆ ಮೀರಿ ಮಾತನಾಡಿದರೂ ಅದನ್ನು ಸೈರಿಸಿಕೊಳ್ಳಬೇಕು. ಅವರು ತಮ್ಮ ಶೀಲವನ್ನು ಕಾಪಾಡಿಕೊಳ್ಳಲು ಅನುಕೂಲಗಳನ್ನೊದಗಿಸಬೇಕು. ಸತ್ಸ್ವಭಾವದವನಾಗಬೇಕು. ಹೀಗೆ ಇರುವವನನ್ನು ಸಜ್ಜನರು ಮುಂದೆ ಗೌರವಿಸುವರು; ಹಿಂದೆ ಅವನಿಗೆ ಕೇಡು ಬಾರದಂತೆ ರಕ್ಷಿಸುವರು.

೧೧. ಬಿರುಮಾತುಗಳು ಬಾಯಿಂದ ಹೊರಡತಕ್ಕ ಬಾಣಗಳು. ಅವು ತಗುಲಿದರೆ ಮೂರು ದಿನಗಳಾದರೂ ಮನುಜನು ದುಃಖಿಸುವನು. ಅವು ಇತರರ ಮರ್ಮವನ್ನು ಸೋಕಬಾರದು. ಆದುದರಿಂದ ತಿಳಿದವನು ಪರರ ವಿಷಯದಲ್ಲಿ ಕ್ರೂರವಾದ ಮಾತಗಳನ್ನಾಡಬಾರದು.

**ನಾಸ್ತೀದೃಶಂ ಸಂವನನಂ ತ್ರಿಷು ಲೋಕೇಷು ಕಿಂಚನ ।**
**ಯಥಾ ಮೈತ್ರೀ ಚ ಲೋಕೇಷು ದಾನಂ ಚ ಮಧುರಾ ಚ ವಾಕ್ ॥೧೨॥**

**ತಸ್ಮಾತ್ಸಾಂತ್ವಂ ಸದಾ ವಾಚ್ಯಂ ನ ವಾಚ್ಯಂ ಪರುಷಂ ಕ್ವಚಿತ್ ।**
**ಪೂಜ್ಯಾನ್ ಸಂಪೂಜಯೇದ್ದದ್ಯಾನ್ನಾಭಿಶಾಪಂ ಕದಾಚನ ॥೧೩॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸೋಮವಂಶೇ ಯಯಾತಿ ಚರಿತೇ ಷಟ್ತ್ರಿಂಶೋಽಧ್ಯಾಯಃ**

---

೧೨. ಸ್ನೇಹ, ದಾನ, ಇಂಪಾದ ಮಾತು ಇವು ಮೂರರಿಂದ ಜನರನ್ನು ಒಲಿಸಿಕೊಳ್ಳಬಹುದು. ಇವುಗಳಿಗೆ ಸಮಾನವಾದ ವಶೀಕರಣೋಪಾಯವು ಮೂರು ಲೋಕಗಳಲ್ಲಿ ಬೇರೆ ಯಾವುದೂ ಇಲ್ಲ.

೧೩. ಆದುದರಿಂದ ಯಾವಾಗಲೂ ಸಮಾಧಾನೋಕ್ತಿಯನ್ನೇ ಹೇಳಬೇಕು. ಕ್ರೂರವಾಕ್ಯವನ್ನೆಂದಿಗೂ ನುಡಿಯಬಾರದು. ಪೂಜ್ಯರಿಗೆ ಗೌರವವನ್ನು ಸಲ್ಲಿಸಬೇಕು. ಹೀನವಚನಗಳನ್ನು ಸರ್ವಥಾ ಬಳಸಬಾರದು.

## ಅಧ್ಯಾಯದ ಸಾರಾಂಶ

ಒಂದು ದಿನ ಇಂದ್ರನೂ ಯಯಾತಿಯೂ ಮಾತನಾಡುತ್ತಿದ್ದರು. ರಾಜ್ಯ ಭಾರವನ್ನು ವಹಿಸಿದ ಬಳಿಕ ಪೂರುವಿಗೆ ರಾಜನು ಹೇಳಿದ ಬುದ್ಧಿವಾದವೇನೆಂದು ಇಂದ್ರನು ಕೇಳಿದನು. "ತಾಳ್ಮೆಗೆ ಸರಿಯೆನಿಸಿದ ಭೂಷಣವಿಲ್ಲ; ಕೋಪವನ್ನು ತಡೆಯಬೇಕು. ಅದು ಪುಣ್ಯವನ್ನು ಹಾಳುಮಾಡುವುದು. ಇತರರ ಮನಸ್ಸು ನೋಯುವಂತಹ ಮಾತನ್ನು ಎಂದಿಗೂ ಆಡಬಾರದು. ಯಾವಾಗಲೂ ಪ್ರಿಯ ವಚನಗಳನ್ನೇ ಹೇಳಬೇಕು" ಎಂಬುದೇ ತನ್ನ ಉಪದೇಶದ ತಿರುಳೆಂದು ಯಯಾತಿ ಉತ್ತರವಿತ್ತನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಚಂದ್ರವಂಶದೊಳಗೆ ಯಯಾತಿ ಚರಿತದಲ್ಲಿ ಮೂವತ್ತಾರನೆಯ ಅಧ್ಯಾಯವು ಮುಗಿದುದು

## ಅಥ ಶ್ರೀಮತ್ಸ್ಯಮಹಾಪುರಾಣೇ ಸಪ್ತತ್ರಿಂಶೋಽಧ್ಯಾಯಃ

॥ ಇಂದ್ರ ಉವಾಚ ॥

ಸರ್ವಾಣಿ ಕಾರ್ಯಾಣಿ ಸಮಾಪ್ಯ ರಾಜನ್
ಗೃಹಾನ್ ಪರಿತ್ಯಜ್ಯ ವನಂ ಗತೋಽಸಿ ।
ತತ್ತ್ವಾಂ ಪೃಚ್ಛಾಮಿ ನಹುಷಸ್ಯ ಪುತ್ರ
ಕೇನಾಸಿ ತುಲ್ಯಸ್ತಪಸಾ ಯಯಾತೇ ॥ ೧ ॥

॥ ಯಯಾತಿರುವಾಚ ॥

ನಾಹಂ ದೇವಮನುಷ್ಯೇಷು ನ ಗಂಧರ್ವಮಹರ್ಷಿಷು ।
ಆತ್ಮನಸ್ತಪಸಾ ತುಲ್ಯಂ ಕಂಚಿತ್ಪಶ್ಯಾಮಿ ವಾಸವ ॥ ೨ ॥

॥ ಇಂದ್ರ ಉವಾಚ ॥

ಯದಾಽವಮಂಸ್ಥಾಃ ಸದೃಶಃ ಶ್ರೇಯಸಶ್ಚ
ಪಾಪೀಯಸಶ್ಚಾವಿದಿತಪ್ರಭಾವಃ ।
ತಸ್ಮಾಲ್ಲೋಕಾ ಹ್ಯಂತವಂತಸ್ತವೇಮೇ
ಕ್ಷೀಣೇ ಪುಣ್ಯೇ ಪತಿತೋಽಸ್ಯದ್ಯ ರಾಜನ್ ॥ ೩ ॥

---

೧. ಇಂದ್ರನು ಹೇಳಿದನು.—ಕರ್ತವ್ಯಗಳನ್ನೆಲ್ಲಾ ಮುಗಿಸಿ, ಮನೆಯನ್ನು ಬಿಟ್ಟು ವನಕ್ಕೆ ತೆರಳಿದೆ. ನಹುಷಪುತ್ರನಾದ ಯಯಾತಿ ಭೂಪನೇ, ನೀನು ತಪಸ್ಸಿನಲ್ಲಿ ಯಾರಿಗೆ ಸಮನೆನಿಸಿರುವೆ. ಇದನ್ನು ಕೇಳಬೇಕೆಂದಿರುವೆನು.

೨. ಯಯಾತಿ ಹೇಳಿದನು.—ಓ ಇಂದ್ರಾ, ದೇವತೆಗಳು, ಮನುಷ್ಯರು, ಗಂಧರ್ವರು, ಮನುಷ್ಯರು ಇವರಲ್ಲಿ ನನಗೆ ತಪಸ್ಸಿನಲ್ಲಿ ಸಮಾನರಾದವರನ್ನು ಯಾರನ್ನೂ ನಾನು ಕಾಣೆನು.

೩. ಇಂದ್ರನು ಹೇಳಿದನು.—ಓ ರಾಜಾ, ನೀನು ಶ್ರೇಷ್ಠರನ್ನೂ, ನಿನಗೆ ಸಮಾನರನ್ನೂ, ಅವರ ಮಹಿಮೆಯನ್ನರಿಯದೆ ಅಲ್ಪ ಪುಣ್ಯರೆಂದು ತಿಳಿದೆ. ಆದುದರಿಂದ ನಿನಗೆ ಈ ಲೋಕಗಳಲ್ಲಿ ವಾಸವು ಕೊನೆಗಂಡಿತು. ನಿನ್ನ ಪುಣ್ಯವು ಮುಗಿಯಿತು. ನೀನೀಗ ಇಲ್ಲಿಂದ ಭೂಮಿಗೆ ಬಿದ್ದೆಯೆಂದು ತಿಳಿ.

**॥ ಯಯಾತಿರುವಾಚ ॥**

**ಸುರರ್ಷಿಗಂಧರ್ವನರಾವಮಾನಾ**
**ತ್ಕ್ಷಯಂ ಗತಾ ಮೇ ಯದಿ ಶಕ್ರಲೋಕಾಃ ।**
**ಇಚ್ಛಾಮ್ಯಹಂ ಸುರಲೋಕಾದ್ವಿಹೀನಃ**
**ಸತಾಂ ಮಧ್ಯೇ ಪತಿತುಂ ದೇವರಾಜ** ॥ ೪ ॥

**॥ ಇಂದ್ರ ಉವಾಚ ॥**

**ಸತಾಂ ಸಕಾಶೇ ಪತಿತೋಽಸಿ ರಾಜ**
**ಚ್ಯುತಃ ಪ್ರತಿಷ್ಠಾಂ ಯತ್ರ ಲಬ್ಧಾಸಿ ಭೂಯಃ ।**
**ಏವಂ ವಿದಿತ್ವಾ ತು ಪುನರ್ಯಯಾತೇ**
**ನ ತೇಽವಮಾನ್ಯಾಃ ಸದೃಶಃ ಶ್ರೇಯಸೇ ಚ** ॥ ೫ ॥

**॥ ಶೌನಕ ಉವಾಚ ॥**

**ತತಃ ಪಪಾತಾಮರರಾಜಜುಷ್ಟಾ**
**ತ್ಪುಣ್ಯಾಲ್ಲೋಕಾತ್ಪತಮಾನಂ ಯಯಾತಿಂ ।**
**ಸಂಪ್ರೇಕ್ಷ್ಯ ರಾಜರ್ಷಿವರೋಽಷ್ಟಕಸ್ತ**
**ಮುವಾಚ ಸದ್ಧರ್ಮವಿಧಾನಗೋಪ್ತಾ** ॥ ೬ ॥

---

೪. ಯಯಾತಿ ಹೇಳಿದನು.—ದೇವರಾಜಾ, ದೇವತೆಗಳು, ಗಂಧರ್ವರು, ಮನುಷ್ಯರು ಇವರನ್ನು ಅಲಕ್ಷ್ಯವಾಗಿ ಕಂಡಕಾರಣ ಪುಣ್ಯಲೋಕಗಳು ನನಗೆ ಕೊನೆಗಂಡರೆ, ನಾನು ಸ್ವರ್ಗದಿಂದ ಉರುಳಿ ಸತ್ಪುರುಷರ ಮಧ್ಯದಲ್ಲಾದರೂ ಬೀಳ ಬೇಕೆಂದು ಬಯಸುತ್ತೇನೆ.

೫. ಇಂದ್ರನು ಹೇಳಿದನು.—ಎಲೈ ರಾಜನೇ, ನೀನು ಸ್ವರ್ಗದಿಂದ ಜಾರಿ ಸತ್ಪುರುಷರ ಬಳಿಯಲ್ಲಿ ಬೀಳುವೆ. ಅಲ್ಲಿ ಮರಳಿ ನಿನಗೆ ಗೌರವವು ದೊರಕುವುದು. ಈಗ ನಿನಗೆ ತಿಳಿವಳಿಕೆ ಬಂದಿದೆ. ಓ ಯಯಾತೀ, ನಿನಗೆ ಸಮಾನರಾದವರನ್ನು ಅವಮಾನ ಪಡಿಸಬೇಡ. ಇದರಿಂದ ನಿನಗೆ ಶ್ರೇಯಸ್ಸುಂಟು.

೬. ಶೌನಕನು ಹೇಳಿದನು.—ಬಳಿಕ ಯಯಾತಿಯು ದೇವೇಂದ್ರನ ಪುಣ್ಯ ಲೋಕದಿಂದ ಬಿದ್ದನು. ಸದ್ಧರ್ಮರಕ್ಷಕನೂ, ರಾಜರ್ಷಿಶ್ರೇಷ್ಠನೂ ಆದ ಅಷ್ಟಕನು ಬೀಳುತ್ತಿರುವ ಆ ರಾಜನಿಗೆ ಹೀಗೆ ಹೇಳಿದನು.

|| ಅಷ್ಟಕ ಉವಾಚ ||

ಕಸ್ತ್ವಂ ಯುವಾ ವಾಸವತುಲ್ಯರೂಪಃ
ಸ್ವತೇಜಸಾ ದೀಪ್ಯಮಾನೋ ಯಥಾಗ್ನಿಃ ।
ಪತಸ್ಯುದೀರ್ಣಾಽಂಬುಧರಪ್ರಕಾಶಃ
ಖೇ ಖೇಚರಾಣಾಂ ಪ್ರವರೋ ಯಥಾರ್ಕಃ || ೭ ||

ದೃಷ್ಟ್ವಾ ಚ ತ್ವಾಂ ಸೂರ್ಯಪಥಾತ್ಪತಂತಂ
ವೈಶ್ವಾನರಾರ್ಕದ್ಯುತಿಮಪ್ರಮೇಯಂ ।
ಕಿಂನುಸ್ವಿದೇತತ್ಪತತೀವ ಸರ್ವೇ
ವಿತರ್ಕಯಂತಃ ಪರಿಮೋಹಿತಾಃ ಸ್ಮಃ || ೮ ||

ದೃಷ್ಟ್ವಾ ಚ ತ್ವಾಧಿಷ್ಠಿತಂ ದೇವಮಾರ್ಗೇ
ಶಕ್ರಾರ್ಕವಿಷ್ಣುಪ್ರತಿಮಪ್ರಭಾವಂ ।
ಪ್ರತ್ಯುದ್ಗತಾಸ್ತ್ವಾಂ ವಯಮುದ್ಯ ಸರ್ವೇ
ತಸ್ಮಾತ್ಪಾತೇ ತವ ಜಿಜ್ಞಾಸಮಾನಾಃ || ೯ ||

---

೭. ಅಷ್ಟಕನು ಹೇಳಿದನು.—ಯುವಕನಾದ ನೀನು ಯಾರು? ರೂಪದಲ್ಲಿ ಇಂದ್ರನಿಗೆ ಸಮಾನನಾಗಿರುವೆ. ತೇಜಸ್ಸಿನಲ್ಲಿ ಅಗ್ನಿಯಂತೆ ಬೆಳಗುತ್ತಿರುವೆ. ನೀಲ ಮೇಘದಂತೆ ಪ್ರಕಾಶಿಸುತ್ತ ಬೀಳುತ್ತಿರುವೆ. ಅಂತರಿಕ್ಷಚಾರಿಗಳಲ್ಲೆಲ್ಲ ಮೇಲಾದ ಸೂರ್ಯನಂತೆ ನೀನು ಗಗನದಲ್ಲಿ ತೇಲುವೆ.

೮. ಅಗ್ನಿಸೂರ್ಯರಂತೆ ಪ್ರಕಾಶಿಸುತ್ತ ಗಗನಮಾರ್ಗದಿಂದ ಬೀಳುತ್ತಿರುವ ಊಹಾತೀತನಾದ ನಿನ್ನನ್ನು ಕಂಡು, ನಾವೆಲ್ಲರೂ " ಇದೇನು ಬೀಳುತ್ತಿದೆ " ಎಂದು ಯೋಚಿಸುತ್ತಾ ಭ್ರಾಂತರಾಗಿದ್ದೇವೆ.

೯. ಇಂದ್ರ, ಸೂರ್ಯ, ವಿಷ್ಣು ಇವರಂತೆ ಮಹಿಮಶಾಲಿಯಾದ ನೀನು ಅಂತರಿಕ್ಷದಲ್ಲಿ ಇದ್ದುದನ್ನು ಕಂಡು ನಾವೆಲ್ಲರೂ ಗೌರವದಿಂದೆದ್ದು ಬಂದೆವು. ನೀನು ಬೀಳಲು ಕಾರಣವನ್ನು ವಿಚಾರಮಾಡುತ್ತಿದ್ದೇವೆ.

**ನ ಚಾಪಿ ತ್ವಾಂ ಧೃಷ್ಣವಃ ಪ್ರಷ್ಟುಮುಗ್ರೇ**
**ನ ಚ ತ್ವಮಸ್ಮಾನ್ ಪೃಚ್ಛಸಿ ಕೇ ವಯಂ ಸ್ಮ ।**
**ತತ್ತ್ವಾಂ ಪೃಚ್ಛಾಮಿ ಸ್ಪೃಹಣೀಯರೂಪಂ**
**ಕಸ್ಯ ತ್ವಂ ವಾ ಕಿಂನಿಮಿತ್ತಂ ತ್ವಮಾಗಾಃ** ॥೧೦॥

**ಭಯಂ ತು ತೇ ವ್ಯೇತು ವಿಷಾದಮೋಹೌ**
**ತ್ಯಜಾಶು ದೇವೇಂದ್ರಸಮಾನರೂಪ ।**
**ತ್ವಾಂ ವರ್ತಮಾನಂ ಹಿ ಸತಾಂ ಸಕಾಶೇ**
**ಶಕ್ರೋ ನ ಸೋಢುಂ ಬಲಹಾಪಿ ಶಕ್ತಃ** ॥೧೧॥

**ಸಂತಃ ಪ್ರತಿಷ್ಠಾ ಹಿ ಸುಖಚ್ಯುತಾನಾಂ**
**ಸತಾಂ ಸದೈವಾಮರರಾಜಕಲ್ಪ ।**
**ತೇ ಸಂಗತಾಃ ಸ್ಥಾವರಜಂಗಮೇಶಾಃ**
**ಪ್ರತಿಷ್ಠಿತಸ್ತ್ವಂ ಸದೃಶೇಷು ಸತ್ಸು** ॥೧೨॥

---

೧೦. ನಿನ್ನನ್ನು ಪ್ರಶ್ನೆಮಾಡಲು ನಮಗೆ ಸಾಹಸವು ಸಾಲದು. ನಾವು ಯಾರೆಂದು ನೀನೂ ಸಹ ನಮ್ಮನ್ನು ಕೇಳಲಿಲ್ಲ. ಆದುದರಿಂದ ಮನೋಹರ ರೂಪನಾದ ನಿನ್ನನ್ನು ನಾನು ಕೇಳುತ್ತೇನೆ "ನೀನು ಯಾರ ಮಗ? ಏಕೆ ಬಂದೆ?"

೧೧. ರೂಪದಲ್ಲಿ ದೇವೇಂದ್ರನಿಗೆ ಸದೃಶನಾದ ಎಲೈ ಮಹಾತ್ಮನೇ, ನಿನ್ನ ಭಯವು ಹೋಗಲಿ; ವಿಷಾದವನ್ನೂ, ಮೋಹವನ್ನೂ ಬೇಗನೆ ಬಿಡು. ನೀನು ಸತ್ಪುರುಷರ ಸಮೀಪದಲ್ಲಿದ್ದರೆ ನಿನ್ನ ತೇಜಸ್ಸನ್ನು ಸೈರಿಸಲು ಬಲಾಸುರನನ್ನು ಸಂಹರಿಸಿದ ಇಂದ್ರನಿಗೂ ಸಾಧ್ಯವಾಗದು.

೧೨. ದೇವರಾಜನಿಗೆ ಸಮನೆನಿಸಿದ ಎಲೈ ಸತ್ಪುರುಷನೇ, ಸುಖವನ್ನುಳಿದ ಸಜ್ಜನರಿಗೆ ಸಾಧುಗಳೇ ಯಾವಾಗಲೂ ಸುಖಕ್ಕೆ ನೆಲೆ. ಚರಾಚರಗಳಿಗೆ ಅಧಿಪತಿಗಳಾದ ಅವರೇ ಸಹವಾಸಾರ್ಹರು. ನೀನು ನಿನಗೆ ಅನುರೂಪರಾದ ಸತ್ಪುರುಷರೊಡನೆ ಕೂಡಿರುವೆ.

**ಪ್ರಭುರಗ್ನಿಃ ಪ್ರತಪನೇ ಭೂಮಿರಾವಪನೇ ಪ್ರಭುಃ ।**
**ಪ್ರಭುಃ ಸೂರ್ಯಃ ಪ್ರಕಾಶಾಚ್ಚ ಸತಾಂ ಚಾಭ್ಯಾಗತಃ ಪ್ರಭುಃ ॥೧೩॥**

**ಇತಿ ಶ್ರೀಮತ್ಸ್ಯೇ ಮಹಾಪುರಾಣೇ ಸೋಮವಂಶೇ ಯಯಾತಿ ಚರಿತೇ ಸಪ್ತತ್ರಿಂಶೋಽಧ್ಯಾಯಃ**

---

೧೩. ತಾಪ ಹುಟ್ಟಿಸುವುದರಲ್ಲಿ ಅಗ್ನಿ ಸಮರ್ಥನು; ಬೀಜವನ್ನು ಬಿತ್ತುವುದಕ್ಕೆ ಭೂಮಿಯೇ ತಕ್ಕುದು; ಪ್ರಕಾಶದಲ್ಲಿ ಸೂರ್ಯನೇ ಪ್ರಭು. ಸಜ್ಜನರಿಗೆ ಅತಿಥಿಯೇ ದೇವನು.

## ಅಧ್ಯಾಯದ ಸಾರಾಂಶ

ಯಯಾತಿ ರಾಜನು ತಪಸ್ಸಿನಲ್ಲಿ ತನ್ನ ಸಮಾನರು ಯಾರೂ ಇಲ್ಲವೆಂದು ತಿಳಿದಿದ್ದುದರಿಂದ ಅವನ ಪುಣ್ಯವೆಲ್ಲವೂ ಮುಗಿಯಿತು. ಇಂದ್ರನು ಅವನನ್ನು ಸ್ವರ್ಗದಿಂದ ನೂಕಿದನು. ಅವನು ಬೀಳುತ್ತಿರುವಾಗ ರಾಜರ್ಷಿಶ್ರೇಷ್ಠನಾದ ಅಷ್ಟಕನು ಅವನನ್ನು ಕಂಡು, ಅವನ ತೇಜಸ್ಸನ್ನೂ ಮಹಿಮೆಯನ್ನೂ ಶ್ಲಾಘಿಸಿದನು. ಸತ್ಪುರುಷರ ಮಧ್ಯದಲ್ಲಿ ಅವನು ಬಿದ್ದುದರಿಂದ ಅವನಿಗೇನೂ ಕೊರತೆಯಿಲ್ಲವೆಂದೂ, ಇಂದ್ರನನ್ನು ಗಣಿಸಬೇಕಾಗಿಲ್ಲವೆಂದೂ ಹೇಳಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಚಂದ್ರವಂಶದೊಳಗೆ ಯಯಾತಿ ಚರಿತದಲ್ಲಿ ಮೂವತ್ತೇಳನೆಯ ಅಧ್ಯಾಯವು ಮುಗಿದುದು



# ಅಥ ಶ್ರೀಮತ್ಸ್ಯಮಹಾಪುರಾಣೇ ಅಷ್ಟತ್ರಿಂಶೋಽಧ್ಯಾಯಃ

॥ ಯಯಾತಿರುವಾಚ ॥

ಅಹಂ ಯಯಾತಿರ್ನಹುಷಸ್ಯ ಪುತ್ರಃ
ಪೂರೋಃ ಪಿತಾ ಸರ್ವಭೂತಾವಮಾನಾತ್ ।
ಪ್ರಭ್ರಂಶಿತೋಽಹಂ ಸುರಸಿದ್ಧಲೋಕಾ
ತ್ಪರಿಚ್ಯುತಃ ಪ್ರಪತಾಮ್ಯಲ್ಪಪುಣ್ಯಃ ॥ ೧ ॥
ಅಹಂ ಹಿ ಪೂರ್ವೋ ವಯಸಾ ಭವದ್ಭ್ಯ
ಸ್ತೇನಾಭಿವಾದಂ ಭವತಾಂ ನ ಯುಂಜೇ ।
ಯೋ ವಿದ್ಯಯಾ ತಪಸಾ ಜನ್ಮನಾ ವಾ
ವೃದ್ಧಃ ಸ ವೈ ಸಂಭವತಿ ದ್ವಿಜಾನಾಂ ॥ ೨ ॥

॥ ಅಷ್ಟಕ ಉವಾಚ ॥

ಅವಾದೀಸ್ತ್ವಂ ವಯಸಾಸ್ಮಿ ವೃದ್ಧ
ಇತಿ ವೈ ರಾಜನ್ನಧಿಕಃ ಕಥಂಚಿತ್ ।
ಯೋ ವೈ ವಿದ್ವಾಂಸ್ತಪಸಾ ಚ ವೃದ್ಧಃ
ಸ ಏವ ಪೂಜ್ಯೋ ಭವತಿ ದ್ವಿಜಾನಾಂ ॥ ೩ ॥

---

೧. ಯಯಾತಿಯು ಹೇಳಿದನು.—ನಾನು ನಹುಷಭೂಪತಿಯ ಪುತ್ರನಾದ ಯಯಾತಿ ; ಪೂರುವಿನ ತಂದೆ. ಎಲ್ಲ ಜಂತುಗಳನ್ನೂ ತಿರಸ್ಕಾರವಾಗಿ ಕಂಡಕಾರಣ ಪುಣ್ಯಮಯವಾದ ದೇವಲೋಕಗಳಿಂದ ನನ್ನನ್ನು ನೂಕಿದರು. ಸುಕೃತವು ತೀರಿದುದರಿಂದ ಬೀಳುತ್ತಿದ್ದೇನೆ.

೨. ನಾನು ನಿಮಗಿಂತಲೂ ವಯಸ್ಸಿನಲ್ಲಿ ಕಿರಿಯವನು ; ಆದುದರಿಂದ ನಿಮ್ಮ ನಮಸ್ಕಾರಕ್ಕೆ ನಾನು ಅರ್ಹನಲ್ಲ. ವಿದ್ಯೆ, ತಪಸ್ಸು ಅಥವಾ ಜನ್ಮ ಇವುಗಳಲ್ಲಿ ಹಿರಿಯವನಿಗೆ ಮಾತ್ರವೇ ದ್ವಿಜರ ಪ್ರಣಾಮವು ಸಲ್ಲುವುದು.

೩. ಅಷ್ಟಕನು ಹೇಳಿದನು.—ಓ ರಾಜಾ, ವಯಸ್ಸಿನಲ್ಲಿ ನಾನು ನಿನಗಿಂತ ದೊಡ್ಡವನೆಂದು ಹೇಳಿದೆ. ಹೌದು ! ಸ್ವಲ್ಪ ಹಿರಿಯವನಿರಬಹುದು. ಆದರೆ ವಿದ್ಯೆ ಮತ್ತು ತಪಸ್ಸುಗಳಲ್ಲಿ ವೃದ್ಧನೆನಿಸಿದವನೇ ದ್ವಿಜರಿಗೆ ಪೂಜಾರ್ಹನು.

|| ಯಯಾತಿರುವಾಚ ||

ಪ್ರತಿಕೂಲಂ ಕರ್ಮಣಾಂ ಪಾಪಮಾಹು
ಸ್ತದ್ವರ್ತಿನಾಂ ಪ್ರವಣಂ ಪಾಪಲೋಕಂ ।
ಸಂತೋಽಸತೋ ನಾನುವರ್ತಂತ ತೇ ವೈ
ಯದಾತ್ಮನೈಷಾಂ ಪ್ರತಿಕೂಲವಾದೀ || ೪ ||

ಅಭೂದ್ಧನಂ ಮೇ ವಿಪುಲಂ ಮಹದ್ವೈ
ವಿಚೇಷ್ಟಮಾನೋಽಧಿಗಂತಾ ತದಸ್ಮಿ ।
ಏವಂ ಪ್ರಧಾರ್ಯಾತ್ಮಹಿತೇ ನಿವಿಷ್ಟೋ
ಯೋ ವರ್ತತೇ ಸ ವಿಜಾನಾತಿ ಧೀರಃ || ೫ ||

ನಾನಾಭಾವಾ ಬಹವೋ ಜೀವಲೋಕೇ
ದೈವಾಧೀನಾ ನಷ್ಟಚೇಷ್ಟಾಧಿಕಾರಾಃ ।
ತತ್ತತ್ಪ್ರಾಪ್ಯ ನ ವಿಹನ್ಯೇತ ಧೀರೋ
ದಿಷ್ಟಂ ಬಲೀಯ ಇತಿ ಮತ್ವಾತ್ಮಬುದ್ಧ್ಯಾ || ೬ ||

---

೪. ಯಯಾತಿ ಹೇಳಿದನು.—ವಿಹಿತಕರ್ಮಗಳಿಗೆ ವಿರೋಧವಾಗಿ ನಡೆಯುವುದೇ ಪಾಪ; ಅದರಲ್ಲಿ ತೊಡಗಿದವರಿಗೆ ಪಾಪಲೋಕವೇ ಗತಿ. ಸಜ್ಜನರು ದುರ್ಜನರನ್ನು ಅನುಸರಿಸುವುದಿಲ್ಲ. ಏಕೆಂದರೆ ದುರ್ಜನನು ಇವರಿಗೆ ಪ್ರತಿಕೂಲವಾಗಿ ಮಾತನಾಡುವ ಸ್ವಭಾವದವನು.

೫. "ಶ್ರೇಷ್ಠವಾದ ಸಂಪದವು ನನಗೆ ಬೇಕಾದಷ್ಟಿತ್ತು; ಪ್ರಯತ್ನಮಾಡಿ ನಾನು ಅದನ್ನು ಮರಳಿ ಪಡೆಯುವೆನು" ಎಂದು ನಿಶ್ಚಯಿಸಿ ತನ್ನ ಹಿತಸಾಧನೆಯಲ್ಲಿ ಯಾವನು ತೊಡಗುವನೋ ಅವನೇ ಬಲ್ಲವನು; ಧೀರನು.

೬. "ಜೀವರಾಶಿಯಲ್ಲಿ ಎಷ್ಟೋ ಪ್ರಾಣಿಗಳಿವೆ; ಅವು ಬಗೆಬಗೆಯವು; ದೈವದ ಅಧೀನದಲ್ಲಿರತಕ್ಕವು. ಸ್ವತಂತ್ರವಾಗಿ ಕೆಲಸಮಾಡುವ ಅಧಿಕಾರವು ಅವಕ್ಕಿಲ್ಲ. ಕಾಲಾನುಗುಣವಾಗಿ ಒದಗುವ ಆಯಾ ಕಷ್ಟಸುಖಗಳಿಂದ ಧೀರನಾದವನು ಮನಸ್ಸಿನಲ್ಲಿ ವಿಕಾರವನ್ನು ಹೊಂದಬಾರದು. ವಿಧಿಯು ಬಲಿಷ್ಠವಾದುದು" ಎಂದು ತಿಳಿದು ದೃಢಬುದ್ಧಿಯಿಂದ ಇರಬೇಕು.

**ಸುಖಂ ಹಿ ಜಂತುರ್ಯದಿವಾಪಿ ದುಃಖಂ**
**ದೈವಾಧೀನಂ ವಿಂದತಿ ನಾತ್ಮಶಕ್ತ್ಯಾ ।**
**ತಸ್ಮಾದ್ದಿಷ್ಟಂ ಬಲವನ್ಮನ್ಯಮಾನೋ**
**ನ ಸಂಜ್ವರೇನ್ನಾಪಿ ಹೃಷ್ಯೇತ್ಕದಾಚಿತ್** ॥ ೭ ॥

**ದುಃಖೇ ನ ತಪ್ಯೇತ ಸುಖೇ ನ ಹೃಷ್ಯೇ**
**ತ್ಸಮೇನ ವರ್ತೇತ ಸದೈವ ಧೀರಃ ।**
**ದಿಷ್ಟಂ ಬಲೀಯ ಇತಿ ಮನ್ಯಮಾನೋ**
**ನ ಸಂಜ್ವರೇನ್ನಾಪಿ ಹೃಷ್ಯೇತ್ಕದಾಚಿತ್** ॥ ೮ ॥

**ಭಯೇ ನ ಮುಹ್ಯಾಮ್ಯಷ್ಟಕಾಹಂ ಕದಾಚಿ**
**ತ್ಸಂತಾಪೋ ಮೇ ಮಾನಸೋ ನಾಸ್ತಿ ಕಶ್ಚಿತ್ ।**
**ಧಾತಾ ಯಥಾ ಮಾಂ ವಿದಧಾತಿ ಲೋಕೇ**
**ಧ್ರುವಂ ತಥಾಹಂ ಭವಿತೇತಿ ಮತ್ವಾ** ॥ ೯ ॥

---

೭. "ಸುಖವೋ ದುಃಖವೋ ಪ್ರಾಣಿಗೆ ದೈವವಶದಿಂದ ಬರುತ್ತದೆ. ಅದರ ಸ್ವಂತ ಶಕ್ತಿಯಿಂದಲ್ಲ. ಆದುದರಿಂದ ದೈವವೇ ಪ್ರಬಲ" ಎಂದರಿಯಬೇಕು. ದುಃಖ ಬಂತೆಂದು ಸಂತಾಪಗೊಳ್ಳುವುದೂ, ಸುಖವೊದಗಿತೆಂದು ಉಬ್ಬಿಹೋಗುವುದೂ ಎಂದಿಗೂ ಕೂಡದು.

೮. ದುಃಖದಿಂದ ಬೇಯಬಾರದು ; ಸುಖದಿಂದ ಹಿಗ್ಗಬಾರದು. ಜ್ಞಾನಿಯು ಯಾವಾಗಲೂ ಸಮಚಿತ್ತದಿಂದಿರಬೇಕು. ದೈವವು ಬಲಿಷ್ಠವಾದುದೆಂದರಿತು ಸಂತಾಪಕ್ಕೂ, ಸಂತೋಷಕ್ಕೂ ಮನಸ್ಸಿನಲ್ಲಿ ಎಂದಿಗೂ ಎಡೆಗೊಡಬಾರದು.

೯. ಓ ಅಷ್ಟಕಾ, ಹೆದರಿಕೆಯಾದಾಗ ನಾನೆಂದಿಗೂ ಮೋಹಗೊಳ್ಳುವುದಿಲ್ಲ ; ನನ್ನ ಮನಸ್ಸಿನಲ್ಲಿ ಯಾವ ಸಂತಾಪವೂ ಇಲ್ಲ. "ಬ್ರಹ್ಮನು ಲೋಕದಲ್ಲಿ ನನ್ನನ್ನು ಯಾವಾಗ ಹೇಗೆ ಮಾಡುವನೋ ಆಗ ಹಾಗೆ ಆಗುವೆನು" ಎಂದು ತಿಳಿದಿದ್ದೇನೆ.

ಸಂಸ್ವೇದಜಾ ಹ್ಯಂಡಜಾ ಹ್ಯುದ್ಭಿದಶ್ಚ
ಸರೀಸೃಪಾಃ ಕೃಮಯೋऽಪ್ಸು ಮತ್ಸ್ಯಾಃ ।
ತಥಾಶ್ಮಾನಸ್ತೃಣಕಾಷ್ಠಂ ಚ ಸರ್ವಂ
ದಿಷ್ಟಕ್ಷಯೇ ಸ್ವಾಂ ಪ್ರಕೃತಿಂ ಭಜಂತೇ ॥೧೦॥

ಅನಿತ್ಯತಾಂ ಸುಖದುಃಖಸ್ಯ ಬುದ್ಧ್ವಾ
ಕಸ್ಮಾತ್ಸಂತಾಪಮಷ್ಟಕಾಹಂ ಭಜೇಯಂ ।
ಕಿಂ ಕುರ್ಯಾಂ ವೈ ಕಿಂಚ ಕೃತ್ವಾ ನ ತಪ್ಯೇ
ತಸ್ಮಾತ್ಸಂತಾಪಂ ವರ್ಜಯಾಮ್ಯಪ್ರಮತ್ತಃ ॥೧೧॥

॥ ಶೌನಕ ಉವಾಚ ॥

ಏವಂ ಬ್ರುವಾಣಂ ನೃಪತಿಂ ಯಯಾತಿ
ಮಥಾಷ್ಟಕಃ ಪುನರೇವಾನ್ವಪೃಚ್ಛತ್ ।
ಮಾತಾಮಹಂ ಸರ್ವಗುಣೋಪಪನ್ನಂ
ಯತ್ರ ಸ್ಥಿತಂ ಸ್ವರ್ಗಲೋಕೇ ಯಥಾವತ್ ॥೧೨॥

---

೧೦. ಬೆವರಿನಿಂದ ಹುಟ್ಟಿದುವು, ಮೊಟ್ಟೆಯಿಂದ ಬಂದುವು, ನೆಲವನ್ನು ಸೀಳಿ ಹೊರಟುವು, ಹರಿದಾಡುವಂತಹವು ಈ ನಾಲ್ಕು ಬಗೆಯ ಜಂತುಗಳೂ, ಹುಳುಗಳೂ, ನೀರಿನಲ್ಲಿರುವ ಮೀನುಗಳೂ, ಹಾಗೆಯೇ ಕಲ್ಲು ಮತ್ತು ಹುಲ್ಲುಕಡ್ಡಿಗಳೂ ಅದೃಷ್ಟವು ತೀರಿದರೆ ತಮ್ಮ ತಮ್ಮ ಮೂಲರೂಪಗಳನ್ನು ಸೇರಿಕೊಳ್ಳುವುವು.

೧೧. ಸುಖದುಃಖಗಳು ಸ್ಥಿರವಲ್ಲವೆಂದು ತಿಳಿದಿದ್ದೇನೆ. ಆದುದರಿಂದ, ಓ ಅಷ್ಟಕಾ, ನಾನೇಕೆ ಸಂತಾಪಪಡಲಿ? "ಏನು ಮಾಡಲಿ? ಏನು ಮಾಡಿದರೆ ಸಂಕಟ ಬಾರದು?" ಎಂದು ನಾನು ಕೊರಗುವುದಿಲ್ಲ. ಆದಕಾರಣ ಎಚ್ಚರಿಕೆಯಿಂದ ದುಃಖವನ್ನು ತೊರೆದಿದ್ದೇನೆ.

೧೨. ಶೌನಕಮಹರ್ಷಿ ಹೇಳಿದನು.—ಯಯಾತಿ ರಾಜನು ಇಂತೆನಲು, ಅಷ್ಟಕನು ಸರ್ವಗುಣಸಂಪೂರ್ಣನೂ, ತನ್ನ ತಾಯಿಯ ತಂದೆಯೂ ಆದ ಆ ರಾಜನು ಸ್ವರ್ಗಲೋಕದಲ್ಲಿ ಹೇಗೆ ಇದ್ದನೆಂಬುದನ್ನು ವಿವರವಾಗಿ ಕೇಳಿದನು.

॥ ಅಷ್ಟಕ ಉವಾಚ ॥

ಯೇ ಯೇ ಲೋಕಾಃ ಪಾರ್ಥಿವೇಂದ್ರ ಪ್ರಧಾನಾ
ಸ್ತ್ವಯಾ ಭುಕ್ತಾ ಯಂ ಚ ಕಾಲಂ ಯಥಾ ಚ ।
ತನ್ಮೇ ರಾಜನ್ ಬ್ರೂಹಿ ಸರ್ವಂ ಯಥಾವ
ತ್ಕ್ಷೇತ್ರಜ್ಞವದ್ಭಾಷಸೇ ತ್ವಂ ಹಿ ಧರ್ಮಂ ॥೧೩॥

॥ ಯಯಾತಿರುವಾಚ ॥

ರಾಜಾಹಮಾಸಂತ್ವಿಹ ಸಾರ್ವಭೌಮ
ಸ್ತತೋ ಲೋಕಾನ್ಮಹತಶ್ಚಾರ್ಜಯಂ ವೈ ।
ತತ್ರಾವಸಂ ವರ್ಷಸಹಸ್ರಮಾತ್ರಂ
ತತೋ ಲೋಕಾನ್ ಪರಮಾನಭ್ಯುಪೇತಃ ॥೧೪॥

ತತಃ ಪುರೀಂ ಪುರುಹೂತಸ್ಯ ರಮ್ಯಾಂ
ಸಹಸ್ರದ್ವಾರಾಂ ಶತಯೋಜನಾಂತಾಂ ।
ಅಧ್ಯಾವಸಂ ವರ್ಷಸಹಸ್ರಮಾತ್ರಂ
ತತೋ ಲೋಕಾನ್ ಪರಮಾನಭ್ಯುಪೇತಃ ॥೧೫॥

---

೧೩. ಅಷ್ಟಕನು ಹೇಳಿದನು.—ಓ ರಾಜೇಶ್ವರಾ, ನೀನು ಯಾವ ಯಾವ ಪ್ರಧಾನ ಲೋಕಗಳಲ್ಲಿ ಸುಖವನ್ನನುಭವಿಸಿದೆ? ಎಷ್ಟು ಕಾಲ? ಯಾವ ರೀತಿಯಲ್ಲಿ? ಇದೆಲ್ಲವನ್ನೂ ನನಗೆ ವಿವರವಾಗಿ ಹೇಳು. ನೀನು ಸಕಲಕ್ಷೇತ್ರಗಳನ್ನೂ ಅರಿತವನಂತೆ ಧರ್ಮವನ್ನು ಹೇಳುತ್ತಿರುವೆ.

೧೪. ಯಯಾತಿ ಹೇಳಿದನು.—ನಾನು ಈ ಲೋಕದಲ್ಲಿ ಚಕ್ರವರ್ತಿಯಾಗಿದ್ದೆನು. ಬಳಿಕ ಪುಣ್ಯಪ್ರಭಾವದಿಂದ ಶ್ರೇಷ್ಠವಾದ ಲೋಕಗಳನ್ನು ಗಳಿಸಿದೆನು. ಅಲ್ಲಿ ಸಾವಿರ ವರ್ಷಗಳ ಕಾಲ ವಾಸಮಾಡಿದೆನು. ಆ ಮೇಲೆ ಇನ್ನೂ ಉತ್ತಮವಾದ ಲೋಕಗಳಿಗೆ ತೆರಳಿದೆನು.

೧೫. ಅಲ್ಲಿಂದ ಇಂದ್ರನ ರಮ್ಯವಾದ ನಗರಿಗೆ ಹೋದೆನು. ಅದಕ್ಕೆ ಸಾವಿರ ಬಾಗಿಲುಗಳು. ಅದು ನೂರುಯೋಜನ ವಿಸ್ತಾರವಾದುದು. ಅಲ್ಲಿ ಸಾವಿರ ವರ್ಷಗಳ ಕಾಲವಿದ್ದು ಅದಕ್ಕಿಂತಲೂ ಉತ್ತಮವಾದ ಲೋಕಗಳಿಗೆ ಹೋದೆನು.

ತತೋ ದಿವ್ಯಮಜರಂ ಪ್ರಾಪ್ಯ ಲೋಕಂ
ಪ್ರಜಾಪತೇರ್ಲೋಕಪತೇರ್ದುರಾಪಂ ।
ತತ್ರಾವಸಂ ವರ್ಷಸಹಸ್ರಮಾತ್ರಂ
ತತೋ ಲೋಕಾರ್ ಪರಮಾನಭ್ಯುಪೇತಃ ॥೧೬॥

ದೇವಸ್ಯ ದೇವಸ್ಯ ನಿವೇಶನೇ ಚ
ವಿಜಿತ್ಯ ಲೋಕಾನ್ನ್ಯವಸಂ ಯಥೇಷ್ಟಂ ।
ಸಂಪೂಜ್ಯಮಾನಸ್ತ್ರಿದಶೈಃ ಸಮಸ್ತೈ
ಸ್ತುಲ್ಯಪ್ರಭಾವದ್ಯುತಿರೀಶ್ವರಾಣಾಂ ॥೧೭॥

ತಥಾವಸಂ ನಂದನೇ ಕಾಮರೂಪೀ
ಸಂವತ್ಸರಾಣಾಮಯುತಂ ಶತಾನಾಂ ।
ಸಹಾಪ್ಸರೋಭಿರ್ವಿಚರರ್ ಪುಣ್ಯಗಂಧಾರ್
ಪಶ್ಯನ್ನಗಾನ್ಪುಷ್ಪಿತಾಂಶ್ಚಾರುರೂಪಾರ್ ॥೧೮॥

---

೧೬. ಬಳಿಕ ಲೋಕಾಧಿಪತಿಯಾದ ಬ್ರಹ್ಮನ ದಿವ್ಯಲೋಕಕ್ಕೆ ತೆರಳಿದೆನು. ಅಲ್ಲಿ ಮುಪ್ಪೇ ಇಲ್ಲ; ಅದು ದೊರಕುವುದು ದುರ್ಲಭ. ಅಲ್ಲಿ ಸಾವಿರ ವರ್ಷಗಳಿದ್ದು, ಅನಂತರ ಇನ್ನೂ ಶ್ರೇಷ್ಠವೆನಿಸಿದ ಲೋಕಗಳನ್ನು ಸೇರಿದೆನು.

೧೭. ಸುಕೃತವಶದಿಂದ ಪುಣ್ಯಲೋಕಗಳು ಸ್ವಾಧೀನವಾಗಲು, ಒಬ್ಬೊಬ್ಬ ದೇವನ ಮನೆಯಲ್ಲೂ ಇಷ್ಟಬಂದಂತೆ ವಾಸಿಸಿದೆನು. ದೇವತೆಗಳೆಲ್ಲರೂ ನನ್ನನ್ನು ಸತ್ಕರಿಸಿದರು. ಲೋಕಾಧಿಪತಿಗಳಿಗೆ ಸಮಾನವಾದ ಮಹಿಮೆಯೂ ಕಾಂತಿಯೂ ನನಗೆ ಬಂದುವು.

೧೮. ಹಾಗೆಯೇ ಸ್ವೇಚ್ಛಾರೂಪವನ್ನು ತಾಳಿ ಇಂದ್ರನ ಉದ್ಯಾನದಲ್ಲಿ ಲಕ್ಷಗಟ್ಟಲೆ ವರ್ಷಗಳಕಾಲ ಇದ್ದೆನು. ಅಪ್ಸರಸ್ತ್ರೀಯರೊಡನೆ ಸಂಚರಿಸುತ್ತ, ಹೂಬಿಟ್ಟು ಪರಿಮಳವನ್ನು ಬೀರುತ್ತಿರುವ ಸುಂದರವಾದ ಮರಗಳನ್ನು ನೋಡಿದೆನು.

ತತ್ರ ಸ್ಥಿತಂ ಮಾಂ ದೇವಸುಖೇಷು ಸಕ್ತಂ
 ಕಾಲೇಽತೀತೇ ಮಹತಿ ತತೋಽತಿಮಾತ್ರಂ ।
ದೂತೋ ದೇವಾನಾಮಬ್ರವಿದುಗ್ರರೂಪೋ
 ಧ್ವಂಸೇತ್ಯುಚ್ಚೈಸ್ತ್ರಿಃ ಪ್ಲುತೇನ ಸ್ವರೇಣ ॥೧೯॥

ಏತಾವನ್ಮೇ ವಿದಿತಂ ರಾಜಸಿಂಹ
 ತತೋ ಭ್ರಷ್ಟೋಽಹಂ ನಂದನಾತ್ಕ್ಷೀಣಪುಣ್ಯಃ ।
ವಾಚೋಽಶ್ರೌಷಂ ಚಾಂತರಿಕ್ಷೇ ಸುರಾಣಾ
 ಮನುಕ್ರೋಶಾಚ್ಛೋಚತಾಂ ಮಾಂ ನರೇಂದ್ರ ॥೨೦॥

ಅಕಸ್ಮಾದ್ವೈ ಕ್ಷೀಣಪುಣ್ಯೋ ಯಯಾತಿಃ
 ಪತತ್ಯಸೌ ಪುಣ್ಯಕೃತ್ಪುಣ್ಯಕೀರ್ತಿಃ ।
ತಾನಬ್ರುವಂ ಪತಮಾನಸ್ತದಾಹಂ
 ಸತಾಂ ಮಧ್ಯೇ ನಿಪತೇಯಂ ಕಥಂ ನು ॥೨೧॥

---

೧೯. ದೇವಭೋಗಗಳಲ್ಲಿ ಮನಸ್ಸಿಟ್ಟು ಅಲ್ಲಿ ಸಂತೋಷದಿಂದಿದ್ದೆನು. ಎಷ್ಟೋ ಕಾಲ ಕಳೆಯಿತು. ಒಂದು ದಿನ ಭಯಂಕರ ರೂಪದ ದೇವದೂತನೊಬ್ಬನು ಬಂದು "ಬೀಳು" ಎಂದು ಮೂರು ಸಾರಿ ಪ್ಲುತಸ್ವರದಿಂದ ಎಂದರೆ ಅತಿ ದೀರ್ಘ ಸ್ವರದಿಂದ ಗಟ್ಟಿಯಾಗಿ ಹೇಳಿದನು.

೨೦. ಎಲೈ ರಾಜಶ್ರೇಷ್ಠನೇ, ನನಗೆ ಗೊತ್ತಾದುದು ಇಷ್ಟೇ. ಬಳಿಕ ನನ್ನ ಪುಣ್ಯವೆಲ್ಲವೂ ಮುಗಿಯಿತು. ನಂದನವನದಿಂದ ಉರುಳಿ ಬಿದ್ದೆನು. ಅಂತರಿಕ್ಷದಲ್ಲಿ ದೇವತೆಗಳು ನನಗಾಗಿ ಮರುಗುತ್ತಿದ್ದರು. ಅವರ ಮಾತು ನನಗೆ ಕೇಳ ಬಂದಿತು.

೨೧. "ಸುಕೃತಗಳನ್ನೆಸಗಿ, ಪವಿತ್ರಕೀರ್ತಿಯನ್ನು ಗಳಿಸಿದ್ದ ಯಯಾತಿ ಮಹಾರಾಜನು ಥಟ್ಟನೆ ಪುಣ್ಯವೆಲ್ಲಾ ತೀರಿಹೋಗಿ, ಇಗೋ! ನೆಲಕ್ಕೆ ಬೀಳುತ್ತಿರುವನು" ಎಂದು ಅವರು ಹೇಳುತ್ತಿದ್ದರು. "ಹೇಗಾದರೂ ಆಗಲಿ! ಸತ್ಪುರುಷರ ಮಧ್ಯದಲ್ಲಾದರೂ ಬಿದ್ದೇನೇ?" ಎಂದು ನೆಲಕ್ಕೆ ಉರುಳುತ್ತಿದ್ದ ನಾನು ಅವರೊಡನೆ ಹೇಳಿದೆನು.

**ತೈರಾಖ್ಯಾತಾಂ ಭವತಾಂ ಯಜ್ಞಭೂಮಿಂ**
**ಸಮೀಕ್ಷ್ಯ ಚೈನಾಮುಹಮಾಗತೋಽಸ್ಮಿ ।**
**ಹವಿರ್ಗಂಧೈರ್ದರ್ಶಿತಾಂ ಯಜ್ಞಭೂಮಿಂ**
**ಧೂಮಾಪಾಂಗಂ ಪರಿಗೃಹ್ಯ ಪ್ರತೀತಾಂ ॥೨೨॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸೋಮವಂಶೇ ಯಯಾತಿಚರಿತೇ ಅಷ್ಟತ್ರಿಂಶೋಽಧ್ಯಾಯಃ**

---

೨೨. ನೀವು ಯಜ್ಞಮಾಡುತ್ತಿರುವ ಪ್ರದೇಶವನ್ನು ಅವರು ನನಗೆ ಹೇಳಿದರು. ಹವಿಸ್ಸುಗಳ ವಾಸನೆ ಹರಡುತ್ತಿರಲು, ಹೊಗೆಯು ಮೇಲಕ್ಕೇರುತ್ತಿರಲು, ಇದೇ ಆ ಪವಿತ್ರ ಸ್ಥಳವೆಂದರಿತು ಇಲ್ಲಿಗೆ ಬಂದಿರುವೆನು.

## ಅಧ್ಯಾಯದ ಸಾರಾಂಶ

ಅಷ್ಟಕನಿಗೂ ಯಯಾತಿಗೂ ಸಂಭಾಷಣೆ ನಡೆಯಿತು. "ದೇಹವು ನಶ್ವರವಾದುದು; ಸುಖಭೋಗಗಳು ಶಾಶ್ವತವಲ್ಲ. ದೈವವನ್ನು ಎದುರಿಸಬಲ್ಲವರಾರೂ ಇಲ್ಲ. ಕಷ್ಟಸುಖಗಳು ಆಯಾಕಾಲಕ್ಕೆ ತಕ್ಕಂತೆ ತಾವಾಗಿಯೇ ಬರುತ್ತವೆ. ಅದಕ್ಕಾಗಿ ಹಿಗ್ಗುವುದೂ ಕುಗ್ಗುವುದೂ ತಪ್ಪು. ದೇವಲೋಕಗಳಲ್ಲಿ ಎಷ್ಟೋ ಬಗೆಯ ಸುಖಗಳನ್ನು ಅನುಭವಿಸಿದೆನು. ನನ್ನ ಪುಣ್ಯವು ತೀರಲು ಅಲ್ಲಿಂದ ಬಿದ್ದೆನು. ನೀವು ಯಜ್ಞಮಾಡುವ ಸ್ಥಳವನ್ನು ದೇವತೆಗಳು ತಿಳಿಸಲು ಇಲ್ಲಿಗೆ ಬರುತ್ತಿರುವೆನು" ಎಂದು ಯಯಾತಿ ರಾಜನು ಹೇಳಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಚಂದ್ರವಂಶದೊಳಗೆ ಯಯಾತಿ ಚರಿತದಲ್ಲಿ ಮೂವತ್ತೆಂಟನೆಯ ಅಧ್ಯಾಯವು ಮುಗಿದುದು

## ಅಥ ಶ್ರೀಮತ್ಸ್ಯಮಹಾಪುರಾಣೇ ಏಕೋನಚತ್ವಾರಿಂಶೋಽಧ್ಯಾಯಃ

॥ ಅಷ್ಟಕ ಉವಾಚ ॥

ಯದಾ ವಸನ್ನಂದನೇ ಕಾಮರೂಪೇ
ಸಂವತ್ಸರಾಣಾಮಯುತಂ ಶತಾನಾಂ ।
ಕಿಂ ಕಾರಣಂ ಕಾರ್ತಯುಗಪ್ರಧಾನ
ಹಿತ್ವಾ ತದ್ವೈ ವಸುಧಾಮನ್ವಪದ್ಯಃ ॥ ೧ ॥

॥ ಯಯಾತಿರುವಾಚ ॥

ಜ್ಞಾತಿಃ ಸುಹೃತ್ಸ್ವಜನೋ ಯೋ ಯಥೇಹ
ಕ್ಷೀಣೇ ವಿತ್ತೇ ತ್ಯಜ್ಯತೇ ಮಾನವೈರ್ಹಿ ।
ತಥಾ ಸ್ವರ್ಗೇ ಕ್ಷೀಣಪುಣ್ಯಂ ಮನುಷ್ಯಂ
ತ್ಯಜಂತಿ ಸದ್ಯಃ ಖಚರಾ ದೇವಸಂಘಾಃ ॥ ೨ ॥

॥ ಅಷ್ಟಕ ಉವಾಚ ॥

ಕಥಂ ತಸ್ಮಿನ್ ಕ್ಷೀಣಪುಣ್ಯಾ ಭವಂತಿ
ಸಂಮುಹ್ಯತೇ ಮೇಽತ್ರ ಮನೋಽತಿಮಾತ್ರಂ ।
ಕಿಂವಿಶಿಷ್ಟಾಃ ಕಸ್ಯ ಧಾಮೋಪಯಾಂತಿ
ತದ್ವೈ ಬ್ರೂಹಿ ಕ್ಷೇತ್ರವಿತ್ತ್ವಂ ಮತೋ ಮೇ ॥ ೩ ॥

---

೧. ಅಷ್ಟಕನು ಹೇಳಿದನು.—ಕೃತಯುಗದಲ್ಲಿ ಪ್ರಸಿದ್ಧನೆನಿಸಿದ್ದ ಓ ಯಯಾತಿಭೂಪಾ, ಕಾಮರೂಪದಿಂದ ನಂದನವನದಲ್ಲಿ ಲಕ್ಷಗಟ್ಟಲೆ ವರ್ಷಗಳ ಕಾಲ ಸುಖದಿಂದಿದ್ದೆಯಷ್ಟೆ! ಅದನ್ನು ಬಿಟ್ಟು ಭೂಮಿಗೆ ಬರಲು ಕಾರಣವೇನು?

೨. ಯಯಾತಿಯು ಹೇಳಿದನು.—ದಾಯಾದಿಯಾಗಲಿ, ಸ್ನೇಹಿತನಾಗಲಿ, ಬಂಧುವಾಗಲಿ, ಆಸ್ತಿ ಹೋದ ಮೇಲೆ ಲೋಕದಲ್ಲಿ ಜನರು ಅವನನ್ನು ದೂರಮಾಡುವರಲ್ಲವೇ? ಹಾಗೆಯೇ ಸ್ವರ್ಗದಲ್ಲಿಯೂ ಸಹ ಗಗನಚಾರಿಗಳಾದ ದೇವತೆಗಳು, ಪುಣ್ಯ ಮುಗಿದವನನ್ನು ಅಲ್ಲಿಂದ ಹೊರಡಿಸುತ್ತಾರೆ.

೩. ಅಷ್ಟಕನು ಹೇಳಿದನು.—ಆ ಲೋಕದಲ್ಲಿ ಅವರ ಪುಣ್ಯವು ಹೇಗೆ ಕ್ಷಯಿಸುತ್ತದೆ? ಇದೇ ನನ್ನ ಮನಸ್ಸಿಗೆ ಸರಿಯಾಗಿ ಹಿಡಿಯದಿರುವ ವಿಷಯ. ಎಂತಹ ಗುಣರೂಪಗಳಿಂದ ಕೂಡಿ ಯಾರ ವಸತಿಯನ್ನೈದುವರು? ಅದನ್ನು ಹೇಳು. ನೀನು ಸಕಲ ದೇಶವನ್ನೂ ಚೆನ್ನಾಗಿ ಬಲ್ಲವನೆಂದು ತೋರುವೆ.

|| ಯಯಾತಿರುವಾಚ ||

ಇಮಂ ಭೌಮಂ ನರಕಂ ತೇ ಪತಂತಿ
ಲಾಲಪ್ಯಮಾನಾ ನರದೇವ ಸರ್ವೇ |
ತೇ ಕಂಕಗೋಮಾಯುಪಲಾಶನಾರ್ಥಂ
ಕ್ಷಿತೌ ವಿವೃದ್ಧಿಂ ಬಹುಧಾ ಪ್ರಯಾಂತಿ || ೪ ||

ತಸ್ಮಾದೇವಂ ವರ್ಜನೀಯಂ ನರೇಂದ್ರ
ದುಷ್ಟಂ ಲೋಕೇ ಗರ್ಹಣೀಯಂ ಚ ಕರ್ಮ |
ಆಖ್ಯಾತಂ ತೇ ಪಾರ್ಥಿವ ಸರ್ವಮೇತ
ದ್ಭೂಯಶ್ಚೇದಾನೀಂ ವದ ಕಿಂ ತೇ ವದಾಮಿ || ೫ ||

|| ಅಷ್ಟಕ ಉವಾಚ ||

ಯದಾ ತು ತಾಂಸ್ತೇ ವಿತುದಂತೇ ವಯಾಂಸಿ
ತಥಾ ಗೃಧ್ರಾಃ ಶಿತಿಕಂಠಾಃ ಪತಂಗಾಃ |
ಕಥಂ ಭವಂತಿ ಕಥಮಾಭವಂತಿ
ತ್ವತ್ತೋ ಭೌಮಂ ನರಕಮಹಂ ಶೃಣೋಮಿ || ೬ ||

---

೪. ಯಯಾತಿ ಹೇಳಿದನು.—ಓ ನರೋತ್ತಮಾ, ಅವರೆಲ್ಲರೂ ಗೋಳಿಡುತ್ತ ಈ ಭೂಲೋಕದ ನರಕಕ್ಕೆ ಬೀಳುತ್ತಾರೆ. ಹದ್ದು, ನರಿ, ರಾಕ್ಷಸರು ಇವರ ಬಾಯಿಗೆ ಬೀಳುವುದಕ್ಕಾಗಿ ಹಲವು ದೇಹಗಳನ್ನೆತ್ತಿ ಬೆಳೆಯುತ್ತಾರೆ.

೫. ಆದುದರಿಂದ, ಎಲೈ ನರಪತಿಯೇ, ದುಷ್ಟವೂ, ದೂಷ್ಯವೂ ಆದ ಕಾರ್ಯವನ್ನು ಬಿಡಬೇಕು. ಇದೆಲ್ಲವನ್ನೂ ನಿನಗೆ ವಿವರಿಸಿದೆನು. ಮತ್ತೇನು ಹೇಳಲಿ? ತಿಳಿಸು.

೬. ಅಷ್ಟಕನು ಹೇಳಿದನು.—ಆ ಕಾಗೆಗಳು, ಹದ್ದುಗಳು, ನವಿಲುಗಳು ಮತ್ತು ಇತರ ಪಕ್ಷಿಗಳು ಅವರನ್ನು ಹಿಂಸಿಸುವಾಗ ಅವರು ಹೇಗಿರುತ್ತಾರೆ? ಆ ಮೇಲೆ ಹೇಗೆ ಆಗುತ್ತಾರೆ? ಭೂನರಕದ ವಿಚಾರವನ್ನು ನಿನ್ನಿಂದ ಕೇಳಲು ಇಚ್ಛಿಸುವೆನು.

|| ಯಯಾತಿರುವಾಚ ||

ಊರ್ಧ್ವಂ ದೇಹಾತ್ಕರ್ಮಣೋ ಜೃಂಭಮಾಣಾ
ದ್ವ್ಯಕ್ತಂ ಪೃಥಿವ್ಯಾಮನುಸಂಚರಂತಿ ।
ಇಮಂ ಭೌಮಂ ನರಕಂ ತೇ ಪತಂತಿ
ನಾವೇಕ್ಷಂತೇ ವರ್ಷಪೂಗಾನನೇಕಾನ್ || ೭ ||

ಷಷ್ಟಿಂ ಸಹಸ್ರಾಣಿ ಪತಂತಿ ವ್ಯೋಮ್ನಿ
ತಥಾಶೀತಿಂ ಚೈವ ತು ವತ್ಸರಾಣಾಂ ।
ತಾನ್ವೈ ತುದಂತೇ ಪ್ರಪತಂತಃ ಪ್ರಯಾತಾನ್
ಭೀಮಾ ಭೌಮಾ ರಾಕ್ಷಸಾಸ್ತೀಕ್ಷ್ಣದಂಷ್ಟ್ರಾಃ || ೮ ||

|| ಅಷ್ಟಕ ಉವಾಚ ||

ಯದೇತಾಂಸ್ತೇ ಸಂಪತತಸ್ತುದಂತಿ
ಭೀಮಾ ಭೌಮಾ ರಾಕ್ಷಸಾಸ್ತೀಕ್ಷ್ಣದಂಷ್ಟ್ರಾಃ ।
ಕಥಂ ಭವಂತಿ ಕಥಮಾಭವಂತಿ
ಕಥಂಭೂತಾ ಗರ್ಭಭೂತಾ ಭವಂತಿ || ೯ ||

---

೭. ಯಯಾತಿ ಹೇಳಿದನು.—ದೇಹವೆತ್ತಿದ ಬಳಿಕ ಪ್ರಬಲವಾದ ಕರ್ಮ ವಶದಿಂದ ಅವರು ಭೂಮಿಯಮೇಲೆ ಸಂಚರಿಸುವರು. ಈ ಭೂನರಕಕ್ಕೆ ಬೀಳುವರು. ಅವರಿಗೆ ತಿಳಿಯದೆಯೆ ಎಷ್ಟೋ ವರ್ಷಗಳು ಕಳೆದುಹೋಗುವುವು.

೮. ಅವರು ಅರವತ್ತು ಅಥವಾ ಎಂಬತ್ತು ಸಾವಿರ ವರ್ಷಗಳ ಕಾಲ ಆಕಾಶದಲ್ಲಿ ಬೀಳುತ್ತಿರುವರು. ಹಾಗೆ ಬೀಳುತ್ತಿರುವಾಗಲೇ ಅವರನ್ನು ಆ ಪಕ್ಷಿಗಳು ಹಿಂಸಿಸುವುವು. ನೆಲವನ್ನು ಸೇರಿದಮೇಲೆ ಕ್ರೂರಿಗಳೂ, ಮೊನೆಯಾದ ಕೋರೆಹಲ್ಲಿನವರೂ ಆದ ರಾಕ್ಷಸರು ಅವರನ್ನು ಪೀಡಿಸುವರು.

೯. ಅಷ್ಟಕನು ಹೇಳಿದನು.—ಬೀಳುತ್ತಿರುವಾಗ ಅವರನ್ನು ಭಯಂಕರ ರಾದ, ಕೂರ್ದಾಡೆಗಳ ರಾಕ್ಷಸರು ಹಿಂಸಿಸುತ್ತಾರಲ್ಲವೇ ? ಆಗ ಅವರು ಹೇಗೆ ಇರು ತ್ತಾರೆ ? ಆ ಮೇಲೆ ಹೇಗೆ ಆಗುತ್ತಾರೆ ? ಮರಳಿ ಹೇಗೆ ಗರ್ಭವನ್ನು ಸೇರುತ್ತಾರೆ ?

॥ ಯಯಾತಿರುವಾಚ ॥

ಅಸೃಗ್ರೇತಃ ಪುಷ್ಪರಸಾನುಯುಕ್ತ
ಮನ್ವೇತಿ ಸದ್ಯಃ ಪುರುಷೇಣ ಸೃಷ್ಟಂ ।
ತದ್ವೈ ತಸ್ಯಾ ರಜ ಆಪದ್ಯತೇ ಚ
ಸ ಗರ್ಭಭೂತಃ ಸಮುಪೈತಿ ತತ್ರ ॥೧೦॥

ವನಸ್ಪತೀನೋಷಧೀಂಶ್ಚಾವಿಶಂತಿ
ಅಪೋ ವಾಯುಂ ಪೃಥಿವೀಂ ಚಾಂತರಿಕ್ಷಂ ।
ಚತುಷ್ಪದಂ ದ್ವಿಪದಂ ಚಾಪಿ ಸರ್ವಂ
ಏವಂಭೂತಾ ಗರ್ಭಭೂತಾ ಭವಂತಿ ॥೧೧॥

॥ ಅಷ್ಟಕ ಉವಾಚ ॥

ಅನ್ಯದ್ವಪುರ್ವಿದಧಾತೀಹ ಗರ್ಭ
ಉತಾಹೋಸ್ವಿತ್ಸ್ವೇನ ಕಾಮೇನ ಯಾತಿ ।
ಆಪದ್ಯಮಾನೋ ನರಯೋನಿಮೇತಾ
ಮಾಚಕ್ಷ್ವ ಮೇ ಸಂಶಯಾತ್ಪೃಚ್ಛತಸ್ತ್ವಂ ॥೧೨॥

---

೧೦. ಯಯಾತಿ ಹೇಳಿದನು.—ಜೀವನು ಬಿಟ್ಟ ರಕ್ತವೂ, ರೇತಸ್ಸೂ ಪುಷ್ಪರಸದೊಡಗೂಡಿ ಕೂಡಲೇ ಅವನನ್ನು ಅನುಸರಿಸುವುವು. ಯಾವಳಲ್ಲಿ ಅವನು ಜನಿಸುವನೋ ಅವಳ ರಜಸ್ಸಿನ ರೂಪವನ್ನು ಅದು ತಾಳುತ್ತದೆ. ಅವನು ಗರ್ಭರೂಪವಾಗಿ ಅಲ್ಲಿ ಸೇರುವನು.

೧೧. ಗಿಡಮರಗಳು, ಮೂಲಿಕೆಗಳು, ನೀರು, ವಾಯು, ಪೃಥಿವಿ, ಅಂತರಿಕ್ಷ, ನಾಲ್ಕು ಅಥವಾ ಎರಡು ಕಾಲಿನ ಪ್ರಾಣಿಗಳು ಇವೆಲ್ಲವನ್ನೂ ಜೀವರು ಪ್ರವೇಶಿಸುವರು. ಅವರು ಈ ರೀತಿಯಲ್ಲಿ ಗರ್ಭಗತರಾಗುವರು.

೧೨. ಅಷ್ಟಕನು ಹೇಳಿದನು.—ಈ ಮನುಷ್ಯಜನ್ಮವನ್ನು ಹೊಂದತಕ್ಕವನಿಗೆ ಬೇರೆ ದೇಹವು ಗರ್ಭದಲ್ಲಿ ತಾನಾಗಿಯೇ ಬರುತ್ತದೆಯೋ? ಇಲ್ಲವೇ ಆತನ ಇಚ್ಛೆಯಿಂದ ಒದಗುವುದೋ? ನನಗೆ ಈ ವಿಷಯದಲ್ಲಿ ಸಂಶಯವಿದೆ. ಇದಕ್ಕಾಗಿ ನಿನ್ನನ್ನು ಕೇಳುತ್ತೇನೆ. ನನಗೆ ಹೇಳು.

ಶರೀರದೇಹಾದಿಸಮುಚ್ಛ್ರಯಂ ಚ
ಚಕ್ಷುಃ ಶ್ರೋತ್ರೇ ಲಭತೇ ಕೇನ ಸಂಜ್ಞಾಂ।
ಏತತ್ಸರ್ವಂ ತಾತ ಆಚಕ್ಷ್ವ ಪೃಷ್ಟಃ
ಕ್ಷೇತ್ರಜ್ಞಂ ತ್ವಾಂ ಮನ್ಯಮಾನಾ ಹಿ ಸರ್ವೇ ॥೧೩॥

॥ ಯಯಾತಿರುವಾಚ ॥

ವಾಯುಃ ಸಮುತ್ಕರ್ಷತಿ ಗರ್ಭಯೋನಿ
ಮೃತೌ ರೇತಃ ಪುಷ್ಪರಸಾನುಯುಕ್ತಂ।
ಸ ತತ್ರ ತನ್ಮಾತ್ರಕೃತಾಧಿಕಾರಃ
ಕ್ರಮೇಣ ಸಂವರ್ಧಯತೀಹ ಗರ್ಭಂ ॥೧೪॥

ಸ ಜಾಯಮಾನೋಽಥ ಗೃಹೀತಗಾತ್ರಃ
ಸಂಜ್ಞಾಮಧಿಷ್ಠಾಯ ತತೋ ಮನುಷ್ಯಃ।
ಸ ಶ್ರೋತ್ರಾಭ್ಯಾಂ ವೇದಯತೀಹ ಶಬ್ದಂ
ಸ ವೈ ರೂಪಂ ಪಶ್ಯತಿ ಚಕ್ಷುಷಾ ಚ ॥೧೫॥

---

೧೩. ಶರೀರ ಮತ್ತು ಅವಯವಗಳು ಬೆಳೆಯುವುದು ಹೇಗೆ? ಕಣ್ಣು, ಕಿವಿ ಮೊದಲಾದ ಇಂದ್ರಿಯಗಳೂ, ಬುದ್ಧಿಯೂ ಹೇಗೆ ಹುಟ್ಟುವುವು? ಇದೆಲ್ಲವನ್ನೂ ತಿಳಿಸು. ಅಪ್ಪಾ, ನೀನು ಎಲ್ಲ ದೇಶಗಳ ವಿಷಯವನ್ನೂ ಬಲ್ಲೆ. ನಿನ್ನನ್ನು ಸರ್ವಜ್ಞನೆಂದು ನಾವು ತಿಳಿದಿದ್ದೇವೆ.

೧೪. ಯಯಾತಿ ಹೇಳಿದನು.—ಪುಷ್ಪರಸಮೊಡಗೂಡಿದ ರೇತಸ್ಸನ್ನು ವಾಯುವು ಗರ್ಭವನ್ನು ಧರಿಸತಕ್ಕವಳ ಯೋನಿಗೆ ಋತುಕಾಲದಲ್ಲಿ ಹೊತ್ತುಕೊಂಡು ಹೋಗುವುದು. ಅಲ್ಲಿ ಅದು ಅತಿಸೂಕ್ಷ್ಮರೂಪದಿಂದ ಗರ್ಭವನ್ನು ಸ್ಥಾಪಿಸಿ ಕ್ರಮೇಣ ಅದನ್ನು ಬೆಳೆಸುತ್ತದೆ.

೧೫. ಬಳಿಕ ಆ ಮನುಷ್ಯನು ಶರೀರವನ್ನು ಧರಿಸಿ, ಹುಟ್ಟಿ, ಸಂಜ್ಞೆಯನ್ನು ಪಡೆಯುವನು. ಅವನು ಕಿವಿಗಳಿಂದ ಶಬ್ದವನ್ನು ಅರಿಯುವನು. ಕಣ್ಣಿನಿಂದ ರೂಪವನ್ನು ನೋಡುವನು.

**ಘ್ರಾಣೇನ ಗಂಧಂ ಜಿಹ್ವಯಾಽಥೋ ರಸಂ ಚ**
**ತ್ವಚಾ ಸ್ಪರ್ಶಂ ಮನಸಾ ವೇದ ಭಾವಂ ।**
**ಇತ್ಯಷ್ಟಕೇಹೋಪಚಿತಂ ಹಿ ವಿದ್ಧಿ**
**ಮಹಾತ್ಮನಃ ಪ್ರಾಣಭೃತಃ ಶರೀರೇ** ॥೧೬॥

॥ **ಅಷ್ಟಕ ಉವಾಚ** ॥

**ಯಃ ಸಂಸ್ಥಿತಃ ಪುರುಷೋ ದಹ್ಯತೇ ವಾ**
**ನಿಖನ್ಯತೇ ವಾಪಿ ನಿಕೃಷ್ಯತೇ ವಾ ।**
**ಅಭಾವಭೂತಃ ಸ ವಿನಾಶಮೇತ್ಯ**
**ಕೇನಾತ್ಮಾನಂ ಚೇತಯತೇ ಪುರಸ್ತಾತ್** ॥೧೭॥

॥ **ಯಯಾತಿರುವಾಚ** ॥

**ಹಿತ್ವಾ ಸೋಽಸೂನ್ಸುಪ್ತವನ್ನಿಷ್ಠಿತತ್ವಾ**
**ತ್ಪುರೋಧಾಯ ಸುಕೃತಂ ದುಷ್ಕೃತಂ ಚ ।**
**ಅನ್ಯಾಂ ಯೋನಿಂ ಪುಣ್ಯಪಾಪಾನುಸಾರಾಂ**
**ಹಿತ್ವಾ ದೇಹಂ ಭಜತೇ ರಾಜಸಿಂಹ** ॥೧೮॥

---

೧೬. ಮೂಗಿನಿಂದ ವಾಸನೆಯನ್ನೂ, ನಾಲಗೆಯಿಂದ ರುಚಿಯನ್ನೂ, ಚರ್ಮದಿಂದ ಸ್ಪರ್ಶವನ್ನೂ, ಮನಸ್ಸಿನಿಂದ ಅಭಿಪ್ರಾಯವನ್ನೂ ತಿಳಿಯುವನು. ಎಲೈ ಅಷ್ಟಕಾ, ಮಹಾತ್ಮನೆನಿಸಿದ ಜೀವನು ಧರಿಸಿದ ಶರೀರದಲ್ಲಿ ಈ ಮೇಲೆ ತಿಳಿಸಿದಂತೆ ಬೆಳವಣಿಗೆಯು ಆಗುತ್ತದೆಯೆಂದು ತಿಳಿ.

೧೭. ಅಷ್ಟಕನು ಹೇಳಿದನು.—ಮನುಷ್ಯನು ಸತ್ತರೆ ಅವನನ್ನು ಸುಡುವರು ; ಹೂಳುವರು ; ಇಲ್ಲವೇ ದೂರವಾಗಿ ಎಳೆದು ಹಾಕುವರು. ಹೀಗಾಗಿ ಅವನು ಏನೇನೂ ಉಳಿಯದಂತೆ ನಷ್ಟವಾಗುವನು. ಅಲ್ಲಿಂದ ಮುಂದೆ ಮತ್ತೆ ಅವನು ಬದುಕುವುದು ಹೇಗೆ ?

೧೮. ಯಯಾತಿ ಹೇಳಿದನು.—ಎಲೈ ರಾಜೋತ್ತಮಾ, ಪ್ರಾಣಬಿಟ್ಟ ಬಳಿಕ ಅವನು ನಿದ್ರಾವಶನಾದಂತಿರುವನು. ಹಿಂದಿನ ದೇಹವು ಹೋದ ಮೇಲೆ ಪುಣ್ಯಪಾಪಗಳನ್ನು ಮುಂದಿಟ್ಟುಕೊಂಡು ತನ್ನ ಕರ್ಮಾನುಸಾರವಾಗಿ ಬೇರೆ ಜನ್ಮವನ್ನು ತಾಳುವನು.

**ಪುಣ್ಯಾಂ ಯೋನಿಂ ಪುಣ್ಯಕೃತೋ ವಿಶಂತಿ**
**ಪಾಪಾಂ ಯೋನಿಂ ಪಾಪಕೃತೋ ವ್ರಜಂತಿ ।**
**ಕೀಟಾಃ ಪತಂಗಾಶ್ಚ ಭವಂತಿ ಪಾಪಾ**
**ನ್ನ ಮೇ ವಿವಕ್ಷಾಸ್ತಿ ಮಹಾನುಭಾವ** ॥೧೯॥

**ಚತುಷ್ಪದಾ ದ್ವಿಪದಾಃ ಪಕ್ಷಿಣಶ್ಚ**
**ತಥಾಭೂತಾ ಗರ್ಭಭೂತಾ ಭವಂತಿ ।**
**ಆಖ್ಯಾತಮೇತನ್ನಿಖಿಲಂ ಹಿ ಸರ್ವಂ**
**ಭೂಯಸ್ತು ಕಿಂ ಪೃಚ್ಛಸಿ ರಾಜಸಿಂಹ** ॥೨೦॥

**॥ ಅಷ್ಟಕ ಉವಾಚ ॥**

**ಕಿಂಸ್ವಿತ್ಕೃತ್ವಾ ಲಭತೇ ತಾತ ಸಂಜ್ಞಾಂ**
**ಮರ್ತ್ಯಃ ಶ್ರೇಷ್ಠಾಂ ತಪಸಾ ವಿದ್ಯಯಾ ವಾ ।**
**ತನ್ಮೇ ಪೃಷ್ಟಃ ಶಂಸ ಸರ್ವಂ ಯಥಾವ**
**ಚ್ಛುಭಾಂಲ್ಲೋಕಾನ್ಯೇನ ಗಚ್ಛೇತ್ಕ್ರಮೇಣ** ॥೨೧॥

---

೧೯. ಓ ಮಹಾನುಭಾವಾ, ಪುಣ್ಯಮಾಡಿದವರು ಉತ್ತಮಜನ್ಮವನ್ನು ಪಡೆಯುತ್ತಾರೆ. ಪಾಪಮಾಡಿದವರು ಪಾಪ ಜನ್ಮವನ್ನೈತ್ತುತ್ತಾರೆ. ಪಾಪವಶದಿಂದ ಹುಳುಗಳೂ ಪಕ್ಷಿಗಳೂ ಆಗುತ್ತಾರೆ. ಇನ್ನು ವಿಶೇಷವಾಗಿ ಹೇಳಲು ನನಗೆ ಇಚ್ಛೆಯಿಲ್ಲ.

೨೦. ನಾಲ್ಕು ಕಾಲಿನ ಮತ್ತು ಎರಡು ಕಾಲಿನ ಪ್ರಾಣಿಗಳೂ, ಪಕ್ಷಿಗಳೂ ಆಗಿ ಹುಟ್ಟುವುದೂ ಸಹ ಪಾಪಕರ್ಮದಿಂದಲೇ. ಓ ರಾಜಸಿಂಹಾ, ಇದೆಲ್ಲವನ್ನೂ ಹೇಳಿಯಾಯಿತು. ಮತ್ತೇನನ್ನು ಕೇಳುವೆ ?

೨೧. ಅಷ್ಟಕನು ಹೇಳಿದನು.—ಅಪ್ಪಾ, ಮನುಷ್ಯನು ಏನು ಮಾಡಿದರೆ ಒಳ್ಳೆಯ ಬುದ್ಧಿಯನ್ನು ಪಡೆಯುವನು ? ವಿದ್ಯೆಯಿಂದಲೋ ? ತಪಸ್ಸಿನಿಂದಲೋ ? ಏತರಿಂದ ಕ್ರಮಕ್ರಮವಾಗಿ ಶುಭಲೋಕಗಳನ್ನು ಸೇರುವನು ? ಇದೆಲ್ಲವನ್ನೂ ವಿವರವಾಗಿ ಹೇಳು.

|| ಯಯಾತಿರುವಾಚ ||

ತಪಶ್ಚ ದಾನಂ ಚ ಶಮೋ ದಮಶ್ಚ
ಹ್ರೀರಾರ್ಜವಂ ಸರ್ವಭೂತಾನುಕಂಪಾ ।
ಸ್ವರ್ಗಸ್ಯ ಲೋಕಸ್ಯ ವದಂತಿ ಸಂತೋ
ದ್ವಾರಾಣಿ ಸಪ್ತೈವ ಮಹಾಂತಿ ಪುಂಸಾಂ ||೨೨||

ಸರ್ವಾಣಿ ಚೈತಾನಿ ಯಥೋದಿತಾನಿ
ತಪಃಪ್ರಧಾನಾನ್ಯಭಿಮರ್ಷಕೇಣ ।
ನಶ್ಯಂತಿ ಮಾನೇನ ತಮೋಽಭಿಭೂತಾಃ
ಪುಂಸಃ ಸದೈವೇತಿ ವದಂತಿ ಸಂತಃ ||೨೩||

ಅಧೀಯಾನಃ ಪಂಡಿತಂಮನ್ಯಮಾನೋ
ಯೋ ವಿದ್ಯಯಾ ಹಂತಿ ಯಶಃ ಪರಸ್ಯ ।
ತಸ್ಯಾಂತವಂತಃ ಪುರುಷಸ್ಯ ಲೋಕಾ
ನ ಚಾಸ್ಯ ತದ್ಬ್ರಹ್ಮ ಫಲಂ ದದಾತಿ ||೨೪||

---

೨೨. ಯಯಾತಿ ಹೇಳಿದನು.—ತಪಸ್ಸು, ದಾನ, ಅಂತರಿಂದ್ರಿಯ ನಿಗ್ರಹ, ಬಹಿರಿಂದ್ರಿಯನಿಗ್ರಹ, ಅಕಾರ್ಯದಲ್ಲಿ ಲಜ್ಜೆ, ನಿಷ್ಕಪಟತೆ ಮತ್ತು ಸರ್ವ ಜಂತುಗಳಲ್ಲಿ ದಯೆ ಎಂಬುವು ಸ್ವರ್ಗಲೋಕಕ್ಕೆ ಉತ್ತಮವಾದ ಏಳು ಬಾಗಿಲುಗಳೆನ್ನುವರು.

೨೩. ತಪಸ್ಸೇ ಮೊದಲಾದ ಏಳು ಸದ್ಗುಣಗಳನ್ನೂ ಗರ್ವವು ಹಾಳು ಮಾಡುವುದು. ಅದು ತಮೋಗುಣವನ್ನು ಬೆಳೆಸಿ, ಮನುಷ್ಯರನ್ನು ದುರ್ಗತಿಗೊಯ್ಯುವುದೆಂದು ಸಾಧುಗಳು ಹೇಳುತ್ತಾರೆ.

೨೪. ಶಾಸ್ತ್ರಗಳನ್ನೋದಿ, ತಾನೇ ವಿದ್ವಾಂಸನೆಂದು ತಿಳಿದು, ವಿದ್ಯಾಮದದಿಂದ ಇತರರ ಕೀರ್ತಿಯನ್ನು ಕೆಡಿಸುವ ಮನುಷ್ಯನಿಗೆ ಮರಣಾನಂತರದಲ್ಲಿ ಶುಭಲೋಕಗಳು ಸಿಕ್ಕುವುದಿಲ್ಲ. ಅವನು ಅಧ್ಯಯನಮಾಡಿದ ವೇದವೂ ಸಹ ಅವನಿಗೆ ಫಲವನ್ನು ಕೊಡುವುದಿಲ್ಲ.

**ಚತ್ವಾರಿ ಕರ್ಮಾಣಿ ಭಯಂಕರಾಣಿ**
**ಭಯಂ ಪ್ರಯಚ್ಛಂತ್ಯಯಥಾಕೃತಾನಿ ।**
**ಪಾನಾಗ್ನಿಹೋತ್ರಮುತ ಮಾನಮೌನಂ**
**ಮಾನೇನಾಧೀತಮುತ ಮಾನಯಜ್ಞಃ** ॥೨೫॥

**ನ ಮಾನ್ಯಮಾನೋ ಮುದಮಾದದೀತ**
**ನ ಸಂತಾಪಂ ಪ್ರಾಪ್ನುಯಾಚ್ಚಾವಮಾನಾತ್ ।**
**ಸಂತಃ ಸತಃ ಪೂಜಯಂತೀಹ ಲೋಕೇ**
**ನಾಸಾಧವಃ ಸಾಧುಬುದ್ಧಿಂ ಲಭಂತೇ** ॥೨೬॥

**ಇತಿ ದದ್ಯಾದಿತಿ ಯಜೇದಿತ್ಯಧೀಯೀತ ಮೇ ಶ್ರುತಂ ।**
**ಇತ್ಯೇತಾನ್ಯಭಯಾನ್ಯಾಹುಸ್ತಾನ್ಯವರ್ಜ್ಯಾನಿ ನಿತ್ಯಶಃ** ॥೨೭॥

---

೨೫. ನಾಲ್ಕು ಕರ್ಮಗಳು ಭಯಂಕರವಾದುವು. ಉಕ್ತಮಾರ್ಗವನ್ನುಳಿದು ಬೇರೆ ರೀತಿಯಲ್ಲಿ ಅವುಗಳನ್ನು ಆಚರಿಸಿದರೆ ಅವುಗಳಿಂದ ಭಯವುಂಟು. ಪಾನ, ಅಗ್ನಿಹೋತ್ರ, ಮಾನ, ಮೌನ ಇವೇ ಆ ನಾಲ್ಕು. ವಿದ್ಯಾಭ್ಯಾಸಮಾಡುವಾಗ ಆಚಾರ್ಯರಲ್ಲಿ ಮತ್ತು ವಿದ್ಯೆಯಲ್ಲಿ ತೋರಿಸಿದ ಮಾನವು ಎಂದರೆ ಗೌರವವು ಶ್ರೇಷ್ಠವಾದುದು. ಅದೇ ಬುದ್ಧಿ ತನ್ನ ವಿಷಯದಲ್ಲಿ ಹುಟ್ಟಿದರೆ ಅದು ದೂಷ್ಯವಾದುದು. ವಿವೇಕಸಹಿತವಾದ ಮಾನವು ಒಂದು ಬಗೆಯ ಯಜ್ಞವೇ ಸರಿ.

೨೬. ಗೌರವ ಸಿಕ್ಕಿದಾಗ ಹಿಗ್ಗಿಹೋಗಬಾರದು. ಅವಮಾನವಾದಾಗ ಕೊರಗಲೂ ಬಾರದು. ಲೋಕದಲ್ಲಿ ಸಜ್ಜನರು ಸತ್ಪುರುಷರನ್ನು ಗೌರವಿಸುತ್ತಾರೆ. ದುರ್ಜನರಿಗೆ ಒಳ್ಳೆಯ ಬುದ್ಧಿ ಹುಟ್ಟದು.

೨೭. "ಹೀಗೆ ದಾನಮಾಡಬೇಕು; ಇದೇ ಕ್ರಮದಲ್ಲಿ ಯಾಗ ನಡೆಸಬೇಕು; ಈ ರೀತಿಯಲ್ಲೇ ವೇದಾಧ್ಯಯನವನ್ನು ಆಚರಿಸಬೇಕು" ಎಂದು ಶಾಸ್ತ್ರದಲ್ಲಿ ಹೇಳಿರುವುದನ್ನು ಕೇಳಿದ್ದೇನೆ. ಈ ಮಾರ್ಗಗಳು ಭಯರಹಿತವಾದುವು. ಪ್ರತಿದಿನವೂ ಇವನ್ನು ಬಿಡದಿರಬೇಕು.

**ಯೋನಾಽಽಶ್ರಯಂ ವೇದಯಂತೇ ಪುರಾಣಂ**
**ಮನೀಷಿಣೋ ಮಾನಸೇ ಮಾನಯುಕ್ತಂ।**
**ತನ್ನಿಶ್ಶ್ರೇಯಸ್ತೇನ ಸಂಯೋಗಮೇತ್ಯ**
**ಪರಾಂ ಶಾಂತಿಂ ಪ್ರಾಪ್ನುಯುಃ ಪ್ರೇತ್ಯ ಚೇಹ** ॥ ೨೮॥

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸೋಮವಂಶೇ ಯಯಾತಿಚರಿತೇ ಏಕೋನಚತ್ವಾರಿಂಶೋಽಧ್ಯಾಯಃ**

---

೨೮. ಇಂತಹ ವಿಹಿತಮಾರ್ಗಾಚರಣೆಯಿಂದ ಜ್ಞಾನಿಗಳು ಸಕಲ ಲೋಕಾಶ್ರಯನೂ, ಹೃದಯಾಂತರಾಳಸ್ಥಿತನೂ, ಪೂಜಾರ್ಹನೂ ಆದ ಆ ಪುರಾಣ ಪುರಷನನ್ನರಿಯುವರು. ಅದೇ ಅತ್ಯುತ್ತಮಸುಖವು. ಅವನೊಡನೆ ಸಂಯೋಗಹೊಂದಿ ಇಹಪರಗಳಲ್ಲಿ ಸ್ಥಿರವಾದ ಶಾಂತಿಯನ್ನು ಪಡೆಯುವರು.

## ಅಧ್ಯಾಯದ ಸಾರಾಂಶ

" ಸುಕೃತವು ತೀರಿದ ಮೇಲೆ ಪುಣ್ಯಲೋಕಗಳಿಂದ ಜೀವನು ಭೂಲೋಕಕ್ಕಿಳಿಯುವನು. ತನ್ನ ಪುಣ್ಯಪಾಪಾನುಸಾರವಾಗಿ ಉತ್ತಮವಾದ, ಇಲ್ಲವೇ ನೀಚವಾದ ಜನ್ಮವನ್ನು ತಾಳುವನು. ತಪಸ್ಸು, ದಾನ ಮುಂತಾದುವು ಸ್ವರ್ಗಕ್ಕೆ ಸಾಧನಗಳು. ದಾನ, ಯಾಗ ಮತ್ತು ಅಧ್ಯಯನ ಇವುಗಳಿಗೆ ಶಾಸ್ತ್ರೋಕ್ತವಾದ ಕ್ರಮವಿದೆ. ಅವರಂತೆ ನಡೆದರೆ ಇಹಪರಗಳಲ್ಲಿ ಸುಖವುಂಟು " ಎಂದು ಯಯಾತಿ ಮಹಾರಾಜನು ಅಷ್ಟಕನಿಗೆ ಉಪದೇಶಮಾಡಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಚಂದ್ರವಂಶ ವರ್ಣನದೊಳಗೆ ಯಯಾತಿ ಚರಿತದಲ್ಲಿ ಮೂವತ್ತೊಂಬತ್ತನೆಯ ಅಧ್ಯಾಯವು ಮುಗಿದುದು



## ಅಥ ಶ್ರೀಮತ್ಸ್ಯಮಹಾಪುರಾಣೇ ಚತ್ವಾರಿಂಶೋಽಧ್ಯಾಯಃ

॥ ಅಷ್ಟಕ ಉವಾಚ ॥

ಚರನ್ಗೃಹಸ್ಥಃ ಕಥಮೇತಿ ದೇವಾನ್
ಕಥಂ ಭಿಕ್ಷುಃ ಕಥಮಾಚಾರ್ಯಕರ್ಮಾ ।
ವಾನಪ್ರಸ್ಥಃ ಸತ್ಪಥೇ ಸನ್ನಿವಿಷ್ಟೋ
ಬಹೂನ್ಯಸ್ಮಿನ್ ಸಂಪ್ರತಿ ವೇದಯಂತಿ ॥ ೧ ॥

॥ ಯಯಾತಿರುವಾಚ ॥

ಆಹೂತಾಧ್ಯಾಯೀ ಗುರುಕರ್ಮಸು ಚೋದ್ಯತಃ
ಪೂರ್ವೋತ್ಥಾಯೀ ಚರಮಂ ಚಾಥ ಶಾಯೀ ।
ಮೃದುರ್ದಾಂತೋ ಧೃತಿಮಾನಪ್ರಮತ್ತಃ
ಸ್ವಾಧ್ಯಾಯಶೀಲಃ ಸಿಧ್ಯತಿ ಬ್ರಹ್ಮಚಾರೀ ॥ ೨ ॥

---

೧. ಅಷ್ಟಕನು ಹೇಳಿದನು.—ಗೃಹಸ್ಥನು ಯಾವ ಧರ್ಮವನ್ನು ಆಚರಿಸಿದರೆ ದೇವತೆಗಳಿಗೆ ಸಮಾನನಾಗಿ ಅವರೊಡನೆ ಬೆರೆಯುವನು ? ಸನ್ಯಾಸಿಯೂ ಬ್ರಹ್ಮಚಾರಿಯೂ ಸದ್ಗತಿಯನ್ನು ಪಡೆಯಬೇಕಾದರೆ ಅನುಸರಿಸಬೇಕಾದ ಧರ್ಮಗಳಾವುವು ? ಸನ್ಮಾರ್ಗನಿಷ್ಠನಾದ ವಾನಪ್ರಸ್ಥನ ಆಚಾರವೆಂತು ? ಈ ಲೋಕದಲ್ಲಿ ಇವರು ಹೇಗೆ ನಡೆದರೆ ಒಳ್ಳೆಯ ಜ್ಞಾನಿಗಳಾಗುವರು ?

೨. ಯಯಾತಿ ಹೇಳಿದನು.—ಗುರುವು ಹೇಳಿದಾಗ ವೇದವನ್ನು ಅಭ್ಯಾಸ ಮಾಡಬೇಕು; ಗುರುವಿಗಿಂತ ಮೊದಲು ಏಳುವುದು, ಅವನು ಮಲಗಿದ ಮೇಲೆ ಮಲಗುವುದು ಹೀಗೆ ಭಯಭಕ್ತಿಗಳಿಂದ ಅವನ ಸೇವೆಯಲ್ಲಿ ಆಸಕ್ತಿಯನ್ನು ವಹಿಸಬೇಕು. ಮೃದುಸ್ವಭಾವದವನೂ, ಜಿತೇಂದ್ರಿಯನೂ, ಜಾಗರೂಕನೂ ಆಗಿ ವೇದಾಧ್ಯಯನದಲ್ಲಿ ಮನವಿಟ್ಟರೆ ಬ್ರಹ್ಮಚಾರಿಯು ತನ್ನ ವ್ರತದಲ್ಲಿ ಫಲವನ್ನು ಪಡೆಯುವನು.

**ಧರ್ಮಾಗತಂ ಪ್ರಾಪ್ಯ ಧನಂ ಯಜೇತ**
**ದದ್ಯಾತ್ಸದೈವಾತಿಥೀನ್ ಭೋಜಯೇಚ್ಚ ।**
**ಅನಾದದಾನಶ್ಚ ಪರೈರದತ್ತಂ**
**ಸೈಷಾ ಗೃಹಸ್ಥೋಪನಿಷತ್ಪುರಾಣೀ** ॥ ೩ ॥

**ಸ್ವವೀರ್ಯಜೀವೀ ವೃಜಿನಾನ್ನಿವೃತ್ತೋ**
**ದಾತಾ ಪರೇಭ್ಯೋ ನ ಪರೋಪತಾಪೀ ।**
**ತಾದೃಙ್ಮುನಿಃ ಸಿದ್ಧಿಮುಪೈತಿ ಮುಖ್ಯಾಂ**
**ವಸನ್ನರಣ್ಯೇ ನಿಯತಾಹಾರಚೇಷ್ಟಃ** ॥ ೪ ॥

**ಅಶಿಲ್ಪಜೀವೀ ವಿಗೃಹಶ್ಚ ನಿತ್ಯಂ**
**ಜಿತೇಂದ್ರಿಯಃ ಸರ್ವತೋ ವಿಪ್ರಮುಕ್ತಃ ।**
**ಅನೋಕಶಾಯೀ ಲಘು ಲಿಪ್ಸಮಾನ**
**ಶ್ಚರನ್ದೇಶಾನೇಕಾಂಬರಃ ಸ ಭಿಕ್ಷುಃ** ॥ ೫ ॥

---

೩. ಧರ್ಮದಿಂದ ದ್ರವ್ಯವನ್ನು ಸಂಪಾದಿಸಿ, ಅದನ್ನು ಯಜ್ಞಯಾಗಾದಿಗಳಿಗೂ, ಸತ್ಪಾತ್ರದಲ್ಲಿ ದಾನಕ್ಕೂ ವಿನಿಯೋಗಿಸಬೇಕು. ಅತಿಥಿಗಳಿಗೆ ಭೋಜನವನ್ನು ನೀಡಬೇಕು. ಇತರರ ಪದಾರ್ಥವನ್ನು ಅವರು ಕೊಡದಿರುವಾಗ ತೆಗೆದುಕೊಳ್ಳಬಾರದು. ಇದೇ ಅನಾದಿಕಾಲದಿಂದಲೂ ನಡೆದು ಬಂದ ಗೃಹಸ್ಥಧರ್ಮವು.

೪. ತನ್ನ ಬಲದಿಂದ ಜೀವಿಸುತ್ತ ಪಾಪದೂರನಾಗಿ, ಇತರರಿಗೆ ದಾನ ಮಾಡುತ್ತ, ಮತ್ತೊಬ್ಬರನ್ನು ನೋಯಿಸದೆ, ಮನನಶೀಲನಾಗಿ, ಆಹಾರದಲ್ಲೂ ನಿತ್ಯಕೃತ್ಯಗಳಲ್ಲಿಯೂ ನಿಯಮವನ್ನು ತಾಳಿ ಅರಣ್ಯದಲ್ಲಿ ವಾಸಿಸುವವನೇ ವಾನಪ್ರಸ್ಥನು. ಇಂತಹವನು ಸಿದ್ಧಿಯನ್ನು ಪಡೆಯುವನು.

೫. ಸನ್ಯಾಸಿಯಾದವನು ಯಾವ ಕುಶಲವಿದ್ಯೆಯನ್ನೂ ತನ್ನ ಜೀವಿಕೆಗಾಗಿ ಉಪಯೋಗಿಸಿಕೊಳ್ಳಬಾರದು. ಅವನಿಗೆ ಸ್ವಂತ ಮನೆಯಿಲ್ಲ. ಯಾವಾಗಲೂ ಅವನು ಜಿತೇಂದ್ರಿಯನಾಗಿರಬೇಕು. ಯಾವ ಬಗೆಯ ಮೋಹಪಾಶಕ್ಕೂ ಸಿಕ್ಕಬಾರದು. ಮನೆಯಲ್ಲಿ ಮಲಗಬಾರದು. ಅವನ ಅವಶ್ಯಕತೆಗೆ ಬೇಕಾದ ಪದಾರ್ಥಗಳು ಎಲ್ಲೋ ಬಹಳ ಸ್ವಲ್ಪ. ಒಂದೇ ವಸ್ತ್ರವನ್ನುಟ್ಟು ಅವನು ದೇಶಾಟನ ಮಾಡುತ್ತಿರಬೇಕು.

ರಾತ್ರ್ಯಾ ಯಯಾ ಚಾಭಿರತಾಶ್ಚ ಲೋಕಾ
ಭವಂತಿ ಕಾಮಾಭಿಜಿತಾಃ ಸುಖೇನ ಚ।
ತಾಮೇವ ರಾತ್ರಿಂ ಪ್ರಯತೇತ ವಿದ್ವಾ
ನರಣ್ಯಸಂಸ್ಥೋ ಭವಿತುಂ ಯತಾತ್ಮಾ ॥ ೬ ॥
ದಶೈವ ಪೂರ್ವಾರ್ನ್ ದಶ ಚಾಪರಾಂಸ್ತು
ಜ್ಞಾತೀಂಸ್ತಥಾತ್ಮಾನಮಥೈಕವಿಂಶಂ।
ಅರಣ್ಯವಾಸೀ ಸುಕೃತಂ ದಧಾತಿ
ಮುಕ್ತ್ವಾ ತ್ವರಣ್ಯೇ ಸ್ವಶರೀರಧಾತೂನ್ ॥ ೭ ॥

॥ ಅಷ್ಟಕ ಉವಾಚ ॥

ಕತಿಸ್ವಿದ್ದೇವ ಮುನಯೋ ಮೌನಾನಿ ಕತಿ ಚಾಪ್ಯುತ।
ಭವಂತೀತಿ ತದಾಚಕ್ಷ್ವ ಶ್ರೋತುಮಿಚ್ಛಾಮಹೇ ವಯಂ ॥ ೮ ॥

॥ ಯಯಾತಿರುವಾಚ ॥

ಅರಣ್ಯೇ ವಸತೋ ಯಸ್ಯ ಗ್ರಾಮೋ ಭವತಿ ಪೃಷ್ಠತಃ।
ಗ್ರಾಮೇ ವಾ ವಸತೋಽರಣ್ಯಂ ಸ ಮುನಿಃ ಸ್ಯಾಜ್ಜನಾಧಿಪ ॥ ೯ ॥

---

೬. ಜನರು ಕಾಮುಪರವಶರಾಗಿ ಸುಖಾಸಕ್ತಿಯಿಂದ ಯಾವ ರಾತ್ರಿಯನ್ನು ಕಳೆಯುತ್ತಾರೋ, ಅದೇ ರಾತ್ರಿಯನ್ನು ಜ್ಞಾನಿಯಾದವನು ಇಂದ್ರಿಯಗಳನ್ನೂ, ಮನಸ್ಸನ್ನೂ ಗೆಲ್ಲುವುದಕ್ಕೆ ಯತ್ನಿಸುತ್ತ ಅರಣ್ಯದಲ್ಲಿ ಕಳೆಯಬೇಕು.

೭. ಮೇಲೆ ಹೇಳಿದಂತೆ ಅರಣ್ಯವಾಸದಲ್ಲೇ ತೊಡಗಿ, ಅಲ್ಲೇ ಈ ಪಾಂಚ ಭೌತಿಕವಾದ ದೇಹವನ್ನು ಬಿಡುವಂತಹ ಯೋಗಿಯು ತನ್ನ ಹಿಂದಿನ ಹತ್ತು ತಲೆಮಾರಿನ ಪಿತೃಗಳನ್ನೂ, ಮುಂದಿನ ಹತ್ತು ತಲೆಯ ಜ್ಞಾತಿಗಳನ್ನೂ, ಈ ಇಪ್ಪತ್ತು ಮಂದಿಯಲ್ಲದೆ ತನ್ನನ್ನೂ ಸಹ ಸುಕೃತಕ್ಕೆ ಭಾಗಿಯೆನಿಸುವನು.

೮. ಅಷ್ಟಕನು ಹೇಳಿದನು.—ದೇವಾ, ಮುನಿಗಳಲ್ಲಿ ಎಷ್ಟು ಬಗೆ? ಮೌನವೂ ಸಹ ಎಷ್ಟು ವಿಧವಾಗಿರುವುದು? ಇದನ್ನು ಹೇಳು. ನಮಗೆ ಕೇಳಬೇಕೆಂಬ ಇಚ್ಛೆಯಿದೆ.

೯. ಯಯಾತಿ ಹೇಳಿದನು.—ಓ ರಾಜಾ, ಅರಣ್ಯದಲ್ಲಿ ವಾಸಿಸುತ್ತ ಗ್ರಾಮವನ್ನು ಹಿಂದೆ ಬಿಟ್ಟಿರುವವನು ಎಂದರೆ ಗ್ರಾಮಾಪೇಕ್ಷೆಯಿಲ್ಲದವನು ಮುನಿಯೆನಿಸುವನು. ಹಾಗೆಯೇ ಗ್ರಾಮದಲ್ಲಿ ನೆಲೆಸಿ ಅರಣ್ಯವಿಮುಖನಾಗಿ ಇರುವವನಿಗೂ ಸಹ ಮುನಿಯೆಂದೇ ಹೆಸರು.

|| ಅಷ್ಟಕ ಉವಾಚ ||

ಕಥಂಸ್ವಿದ್ವಸತೋಽರಣ್ಯೇ ಗ್ರಾಮೋ ಭವತಿ ಪೃಷ್ಠತಃ
ಗ್ರಾಮೇ ವಾ ವಸತೋಽರಣ್ಯಂ ಕಥಂ ಭವತಿ ಪೃಷ್ಠತಃ ||೧೦||

|| ಯಯಾತಿರುವಾಚ ||

ನ ಗ್ರಾಮ್ಯಮುಪಯುಂಜೀತ ಯ ಆರಣ್ಯೋ ಮುನಿರ್ಭವೇತ್
ತಥಾಸ್ಯ ವಸತೋಽರಣ್ಯೇ ಗ್ರಾಮೋ ಭವತಿ ಪೃಷ್ಠತಃ ||೧೧||

ಅನಗ್ನಿರನಿಕೇತಶ್ಚಾಪ್ಯಗೋತ್ರಚರಣೋ ಮುನಿಃ |
ಕೌಪೀನಾಚ್ಛಾದನಂ ಯಾವತ್ತಾವದಿಚ್ಛೇಚ್ಚ ಚೀವರಂ ||೧೨||

ಯಾವತ್ಪ್ರಾಣಾಭಿಸಂಧಾನಂ ತಾವದಿಚ್ಛೇಚ್ಚ ಭೋಜನಂ |
ತದಾಸ್ಯ ವಸತೋ ಗ್ರಾಮೇಽರಣ್ಯಂ ಭವತಿ ಪೃಷ್ಠತಃ ||೧೩

ಯಸ್ತು ಕಾಮಾನ್ಪರಿತ್ಯಜ್ಯ ತ್ಯಕ್ತಕರ್ಮಾ ಜಿತೇಂದ್ರಿಯಃ |
ಆತಿಷ್ಠೇತ ಮುನಿರ್ಮೌನಂ ಸ ಲೋಕೇ ಸಿದ್ಧಿಮಾಪ್ನುಯಾತ್ ||೧೪||

---

೧೦. ಅಷ್ಟಕನು ಹೇಳಿದನು.—ಅರಣ್ಯದಲ್ಲಿ ವಾಸಿಸುವವನಿಗೆ ಗ್ರಾಮವು ಹಿಂಭಾಗದಲ್ಲಿರುವುದೆಂದರೇನು? ಹಾಗೆಯೇ ಗ್ರಾಮದಲ್ಲಿರುವವನಿಗೆ ಅರಣ್ಯವು ಬೆನ್ನ ಕಡೆ ಇರುವುದೆಂತು?

೧೧. ಯಯಾತಿ ಹೇಳಿದನು—ಅರಣ್ಯವಾಸಿಯಾದ ಮುನಿಯು ಗ್ರಾಮದಲ್ಲಿನ ಪದಾರ್ಥವಾವುದನ್ನೂ ಉಪಯೋಗಿಸಬಾರದು. ಹಾಗಾದರೆ ವನದಲ್ಲಿರುವವನಿಗೆ ಗ್ರಾಮವು ಹಿಂದುಗಡೆ ಬಂದಿತೆಂದರ್ಥ.

೧೨-೧೩. ಅಗ್ನಿಯಿಲ್ಲದವನೂ, ಗೃಹರಹಿತನೂ, ಮಮತೆಯಿಂದ ಬಂಧುಗಳೊಡನೆ ಬೆರೆಯದಿರುವವನೂ ಮುನಿಯೆನಿಸುವನು. ಮಾನಸಂರಕ್ಷಣೆಗೆ ಬೇಕಾದಷ್ಟು ಬಟ್ಟೆಯನ್ನು ಮಾತ್ರವೇ ಅವನು ಅಪೇಕ್ಷಿಸಬೇಕು. ಪ್ರಾಣಧಾರಣೆಗೆ ಆಹಾರವು ಎಷ್ಟು ಬೇಕೋ ಅಷ್ಟನ್ನು ಮಾತ್ರ ಭುಜಿಸಬೇಕು. ಹೀಗಿದ್ದರೆ ಗ್ರಾಮವಾಸಿಯಾದ ಅವನು ಅರಣ್ಯವನ್ನು ಹಿಂದೆ ಹಾಕಿದಂತಾಗುವುದು.

೧೪. ವಿಷಯಾಭಿಲಾಷೆಯನ್ನು ಬಿಟ್ಟು, ಕಾಮ್ಯಕರ್ಮಗಳನ್ನು ತೊರೆದು, ಇಂದ್ರಿಯಗಳನ್ನು ಜಯಿಸಿ ಮೌನವ್ರತದಿಂದಿರುವ ಮುನಿಯು ಸಿದ್ಧಿಯನ್ನು ಪಡೆಯುವನು.

**ಧೌತದಂತಂ ಕೃತ್ತನಖಂ ಸದಾ ಸ್ನಾತಮಲಂಕೃತಂ ।**
**ಅಸಿತಂ ಸಿತಕರ್ಮಸ್ಥಂ ಕಸ್ತಂ ನಾರ್ಚಿತುಮರ್ಹತಿ ॥೧೫॥**

**ತಪಸಾ ಕರ್ಶಿತಃ ಕ್ಷಾಮಃ ಕ್ಷೀಣಮಾಂಸಾಸ್ಥಿಶೋಣಿತಃ ।**
**ಯದಾ ಭವತಿ ನಿರ್ದ್ವಂದ್ವೋ ಮುನಿರ್ಮೌನಂ ಸಮಾಸ್ಥಿತಃ ॥೧೬॥**

**ಅಥ ಲೋಕಮಿಮಂ ಜಿತ್ವಾ ಲೋಕಂ ಚಾಪಿ ಜಯೇತ್ಪರಂ ।**
**ಆಸ್ಯೇನ ತು ಯದಾಹಾರಂ ಗೋವನ್ಮೃಗಯತೇ ಮುನಿಃ ॥**
**ಅಥಾಸ್ಯ ಲೋಕಃ ಸರ್ವೋ ಯಃ ಸೋಽಮೃತತ್ವಾಯ ಕಲ್ಪತೇ ॥೧೭॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸೋಮವಂಶೇ ಯಯಾತಿಚರಿತೇ ಚತ್ವಾರಿಂಶೋಽಧ್ಯಾಯಃ**

---

೧೫. ಬೆಳಗಿದ ಹಲ್ಲು, ಕತ್ತರಿಸಿದ ಉಗುರು, ತ್ರಿಕಾಲಸ್ನಾನ, ಪುಂಡ್ರಾದಿಗಳ ಅಲಂಕಾರ, ತಪಃಕ್ಲೇಶದಿಂದ ಶ್ಯಾಮಲವಾದ ದೇಹ ಮತ್ತು ಸಾತ್ವಿಕ ಕರ್ಮಾನುಷ್ಠಾನ ಇವುಗಳಿಂದ ಕೂಡಿದ ಮುನಿಯನ್ನು ಯಾರು ತಾನೇ ಗೌರವಿಸರು ?

೧೬. ತಪಸ್ಸಿನಿಂದ ಬಳಲಿ ಕೃಶನಾಗಿ, ಮಾಂಸ, ಮೂಳೆ ಮತ್ತು ರಕ್ತಗಳು ಬತ್ತಿಹೋಗಿರಲು, ಮುನಿಯು ಶೀತೋಷ್ಣಾದಿ ದ್ವಂದ್ವಗಳಿಂದ ವಿಕಾರವನ್ನು ಹೊಂದದೆ ಸಮಭಾವವನ್ನು ತಾಳಿದರೆ, ಆಗ ಅವನು ಮೌನವನ್ನು ಧರಿಸಿದವನೆಂದು ತಿಳಿಯಬೇಕು.

೧೭. ಅವನು ಈ ಲೋಕವನ್ನು ಸ್ವಾಧೀನಮಾಡಿಕೊಂಡು, ಬಳಿಕ ಪರಲೋಕವನ್ನೂ ಸಹ ಜಯಿಸುವನು. (ಇಂತಹವನಿಗೆ ಇಹದಲ್ಲೂ, ಪರದಲ್ಲೂ ನೆರವೇರದಿರುವ ಕೋರಿಕೆ ಯಾವುದೂ ಇಲ್ಲವೆಂದು ಭಾವ). ಶರೀರ ಸುಖಕ್ಕಾಗಿ ಅವನು ಯಾವ ಪ್ರಯತ್ನವನ್ನೂ ಮಾಡುವುದಿಲ್ಲ. ಹಸುವಿನಂತೆ ಸಂಚರಿಸುತ್ತ, ಯಾದೃಚ್ಛಿಕವಾಗಿ ಸಿಕ್ಕಿದ ಆಹಾರವನ್ನು ತೆಗೆದುಕೊಳ್ಳುವನು. ಈ ಸ್ಥಿತಿಯಲ್ಲಿರುವಾಗ ಲೋಕವೆಲ್ಲವೂ ಅವನದೇ. ಅವನಿಗೆ ಮೋಕ್ಷಸುಖವು ಸಿದ್ಧವಾಗಿರುವುದು.

ಅಧ್ಯಾಯ ೪೦

## ಅಧ್ಯಾಯದ ಸಾರಾಂಶ

ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸನ್ಯಾಸಗಳೆಂಬ ನಾಲ್ಕು ಆಶ್ರಮಗಳ ಲಕ್ಷಣವನ್ನು ಯಯಾತಿ ರಾಜನು ಅಷ್ಟಕನಿಗೆ ತಿಳಿಸಿದನು. ಮುನಿಯು ಅರಣ್ಯದಲ್ಲಿರಲಿ, ಗ್ರಾಮದಲ್ಲಿರಲಿ ಸುಖಲೋಲುಪನಾಗದೆ ಜತೇಂದ್ರಿಯನಾಗಿರ ಬೇಕು. ಶೀತೋಷ್ಣಾದಿ ದ್ವಂದ್ವಗಳನ್ನು ಸಮಭಾವದಿಂದ ಕಾಣುವ ಆ ಮಹಾತ್ಮನಿಗೆ ಎಲ್ಲಲೋಕಗಳೂ ವಶವಾಗುವುವು. ಅವನನ್ನು ಗೌರವಿಸದವರೇ ಇಲ್ಲ. ಮೋಕ್ಷ ಸುಖವು ಅವನಿಗೆ ಸಿದ್ಧವಾಗಿರುವುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಚಂದ್ರವಂಶದೊಳಗೆ ಯಯಾತಿ ಚರಿತದಲ್ಲಿ
ನಾಲ್ವತ್ತನೆಯ ಅಧ್ಯಾಯವು ಮುಗಿದುದು



## ಅಥ ಶ್ರೀಮತ್ಸ್ಯಮಹಾಪುರಾಣೇ ಏಕಚತ್ವಾರಿಂಶೋಽಧ್ಯಾಯಃ

॥ ಅಷ್ಟಕ ಉವಾಚ ॥

ಕತರಸ್ತ್ವೇತಯೋಃ ಪೂರ್ವಂ ದೇವಾನಾಮೇತಿ ಸಾಮ್ಯತಾಂ ।
ಉಭಯೋರ್ಧಾವತೋ ರಾಜನ್ ಸೂರ್ಯಾಚಂದ್ರಮಸೋರಿವ ॥ ೧ ॥

॥ ಯಯಾತಿರುವಾಚ ॥

ಅನಿಕೇತೋ ಗೃಹಸ್ಥೇಷು ಕಾಮವೃತ್ತೇಷು ಸಂಯತಃ ।
ಗ್ರಾಮ ಏವ ಚರನ್ಭಿಕ್ಷುಸ್ತಯೋಃ ಪೂರ್ವತರಂ ಗತಃ ॥ ೨ ॥

ಅಪ್ರಾಪ್ಯಂ ದೀರ್ಘಮಾಯುಶ್ಚ ಯಃ ಪ್ರಾಪ್ತೋ ವಿಕೃತಿಂ ಚರೇತ್ ।
ತಪ್ಯೇತ ಯದಿ ತತ್ಕೃತ್ವಾ ಚರೇತ್ಸೋಽಗ್ರಂ ತಪಸ್ತತಃ ॥ ೩ ॥

---

೧. ಅಷ್ಟಕನು ಹೇಳಿದನು.—ಎಲೈ ಯಯಾತಿ ರಾಜನೇ, ಗಗನದಲ್ಲಿ ಓಡುವ ಚಂದ್ರ ಸೂರ್ಯರಂತಿರುವ ಮೇಲೆ ಹೇಳಿದ ಎರಡು ಬಗೆಯ ಮುನಿಗಳಲ್ಲಿ ಯಾರಿಗೆ ಮೊದಲು ದೇವತೆಗಳೊಡನೆ ಸಾಮ್ಯವು ಲಭಿಸುವುದು ?

೨. ಯಯಾತಿ ಹೇಳಿದನು.—ಸ್ವಂತಮನೆಯನ್ನು ಮಾಡಿಕೊಳ್ಳದೆ, ವಿಷಯ ಸುಖಲೋಲುಪರಾದ ಗೃಹಸ್ಥರ ನಡುವೆ ಜಿತೇಂದ್ರಿಯನಾಗಿ ಗ್ರಾಮದಲ್ಲೇ ಸಂಚರಿಸುವ ಮುನಿಯು ಮೊದಲು ದೇವತೆಗಳೊಡನೆ ಸೇರುವನು.

೩. ದೀರ್ಘಾಯುವು ದೊರೆಯುವುದು ದುರ್ಲಭ. ಅದು ದೊರೆತಿರುವಾಗ ನಿಷಿದ್ಧಕಾರ್ಯವನ್ನು ಆಚರಿಸಿದರೆ ಮುಂದೆ ಪಶ್ಚಾತ್ತಾಪಪಡಬೇಕಾದೀತು. ಅಂತಹ ಅಕಾರ್ಯವನ್ನು ಮಾಡಿದವನು ಅದರ ಪ್ರಾಯಶ್ಚಿತ್ತಕ್ಕಾಗಿ ಬಳಿಕ ತೀವ್ರವಾದ ತಪಸ್ಸನ್ನು ಎಸಗಬೇಕು.

ಯದ್ವೈ ನೃಶಂಸಂ ತದಪಥ್ಯಮಾಹುಃ
ಯಃ ಸೇವತೇಽಧರ್ಮಮನರ್ಥಬುದ್ಧಿಃ ।
ಅಸಾವನೀಶಃ ಸ ತಥೈವ ರಾಜಂ
ಸ್ತದಾರ್ಜವಂ ಸ ಸಮಾಧಿಸ್ತದಾರ್ಯಂ ॥ ೪ ॥

॥ ಅಷ್ಟಕ ಉವಾಚ ॥

ಕೇನಾದ್ಯ ತ್ವಂ ತು ಪ್ರಹಿತೋಽಸಿ ರಾಜನ್
ಯುವಾ ಸ್ರಗ್ವೀ ದರ್ಶನೀಯಃ ಸುವರ್ಚಾಃ ।
ಕುತ ಆಗತಃ ಕತಮಸ್ಯಾಂ ದಿಶಿ ತ್ವ
ಮುತಾಹೋಸ್ವಿತ್ಪಾರ್ಥಿವಸ್ಥಾನಮಸ್ತಿ ॥ ೫ ॥

॥ ಯಯಾತಿರುವಾಚ ॥

ಇಮಂ ಭೌಮಂ ನರಕಂ ಕ್ಷೀಣಪುಣ್ಯಃ
ಪ್ರವೇಷ್ಟುಮುರ್ವೀಂ ಗಗನಾದ್ವಿಪ್ರಕೀರ್ಣಃ ।
ಉಕ್ತ್ವಾಹಂ ವಃ ಪ್ರಪತಿಷ್ಯಾಮ್ಯನಂತರಂ
ತ್ವರಂತ್ವಮೀ ಬ್ರಹ್ಮಣೋ ಲೋಕಪಾ ಯೇ ॥ ೬ ॥

---

೪. ಯಾವುದು ಕ್ರೂರಕರ್ಮವೋ ಅದು ಅಹಿತವು. ಧರ್ಮವಿರುದ್ಧವಾದುದನ್ನು ಮಾಡುವ ವ್ಯರ್ಥಬುದ್ಧಿಯುವನು ಜಿತೇಂದ್ರಿಯನಲ್ಲ. ಎಲೈ ರಾಜಾ, ಮನೋವಾಕ್ಕಾಯಗಳಲ್ಲಿ ನಿಷ್ಕಪಟವರ್ತನವಿದ್ದರೆ ಅದೇ ತಪಸ್ಸಿನ ಸಿದ್ಧಿ. ಅದೇ ಗೌರವಾರ್ಹವಾದುದು.

೫. ಅಷ್ಟಕನು ಹೇಳಿದನು.—ನರೇಂದ್ರಾ, ನಿನ್ನನ್ನು ಕಳುಹಿಸಿದವರು ಯಾರು? ನೀನು ಯುವಕ; ಹಾರಗಳನ್ನು ಧರಿಸಿರುವೆ; ಸುಂದರನಾಗಿರುವೆ; ಒಳ್ಳೆಯ ಕಾಂತಿಯಿಂದ ಮೆರೆಯುತ್ತಿರುವೆ. ಎಲ್ಲಿಂದ ಬಂದೆ? ಯಾವ ದಿಕ್ಕಿಗೆ ಹೋಗುವೆ? ಅಥವಾ ಎಲ್ಲಿಯಾದರೂ ನಿನಗೆ ಈಗ ದೊರೆತನವುಂಟೋ?

೬. ಯಯಾತಿ ಹೇಳಿದನು.—ನನ್ನ ಪುಣ್ಯವು ಸವೆದ ಕಾರಣ ಈ ಭೂಲೋಕದ ನರಕವನ್ನು ಪ್ರವೇಶಿಸುವುದಕ್ಕಾಗಿ ಗಗನದಿಂದ ನನ್ನನ್ನು ಭೂಮಿಗೆ ನೂಕಿದರು. ನಿಮಗೆ ಹೇಳಿ ತರುವಾಯ ನಾನು ಬೀಳುವೆನು. ಲೋಕರಕ್ಷಕರಾದ ಈ ಬ್ರಾಹ್ಮಣರು ನನ್ನ ಮಾತನ್ನು ಕೇಳಲು ತ್ವರೆಮಾಡಲಿ.

**ಸತಾಂ ಸಕಾಶೇ ತು ವೃತಃ ಪ್ರಪಾತ**
**ಸ್ತೇ ಸಂಗತಾ ಗುಣವಂತಸ್ತು ಸರ್ವೇ ।**
**ಶಕ್ರಾಚ್ಚ ಲಬ್ಧೋ ಹಿ ವರೋ ಮಯೈಷ**
**ಪತಿಷ್ಯತಾ ಭೂಮಿತಲಂ ನರೇಂದ್ರ** ॥ ೭ ॥

**॥ ಅಷ್ಟಕ ಉವಾಚ ॥**

**ಪೃಚ್ಛಾಮಿ ತ್ವಾಂ ಪ್ರಪತಂತಂ ಪ್ರಪಾತಂ**
**ಯದಿ ಲೋಕಾಃ ಪಾರ್ಥಿವ ಸಂತಿ ಮೇಽತ್ರ ।**
**ಯದ್ಯಂತರಿಕ್ಷೇ ಯದಿ ವಾ ದಿವಿ ಶ್ರಿತಾಃ**
**ಕ್ಷೇತ್ರಜ್ಞಂ ತ್ವಾಂ ತಸ್ಯ ಧರ್ಮಸ್ಯ ಮನ್ಯೇ** ॥ ೮ ॥

**ಯಾವತ್ಪೃಥಿವ್ಯಾಂ ವಿಹಿತಂ ಗವಾಶ್ವಂ**
**ಸಹಾರಣ್ಯೈಃ ಪಶುಭಿಃ ಪಕ್ಷಿಭಿಶ್ಚ ।**
**ತಾವಲ್ಲೋಕಾ ದಿವಿ ತೇ ಸಂಸ್ಥಿತಾ ವೈ**
**ತಥಾ ವಿಜಾನೀಹಿ ನರೇಂದ್ರಸಿಂಹ** ॥ ೯ ॥

---

೭. ಸಜ್ಜನರ ಸಮೀಪದಲ್ಲಿ ಬೀಳಬೇಕೆಂದು ನಾನು ಬೇಡಿದೆನು. ಗುಣಶಾಲಿಗಳಾದ ಆ ಮಹಾತ್ಮರೆಲ್ಲಾ ಇಲ್ಲಿ ಸೇರಿದ್ದಾರೆ. ಎಲೈ ಭೂಪತೀ, ಭೂಮಿಗೆ ನಾನು ಬೀಳುತ್ತಿರುವಾಗ ಇಂದ್ರನೂ ಸಹ ನನಗೆ ಈ ವರವನ್ನು ಕರುಣಿಸಿದನು.

೮. ಅಷ್ಟಕನು ಹೇಳಿದನು.—ಭೂಮಿಗೆ ಬೀಳುತ್ತಿರುವ ಎಲೈ ಯಯಾತಿ ಮಹಾರಾಜನೇ, ನಿನ್ನನ್ನು ನಾನು ಒಂದು ಪ್ರಶ್ನೆಯನ್ನು ಕೇಳುವೆನು. ನನ್ನ ಸುಕೃತ ವಶದಿಂದ ಇಲ್ಲಿ, ಅಂತರಿಕ್ಷದಲ್ಲಿ, ಇಲ್ಲವೇ ಸ್ವರ್ಗಾದಿಸ್ಥಾನಗಳಲ್ಲಿ ನನಗೆ ಶುಭಲೋಕಗಳು ಏನಾದರೂ ಪ್ರಾಪ್ತವಾಗುವುವೇ? ಈ ಧರ್ಮರಹಸ್ಯವನ್ನು ನೀನು ಬಲ್ಲವನೆಂದು ತಿಳಿದಿದ್ದೇನೆ.

೯. ಯಯಾತಿ ಹೇಳಿದನು.—ಓ ರಾಜೋತ್ತಮಾ, ಭೂಮಿಯಲ್ಲಿ ಹಸುಗಳು, ಕುದುರೆಗಳು, ಕಾಡಿನ ಪಶುಪಕ್ಷಿಗಳು ಎಷ್ಟಿವೆಯೋ ಅಷ್ಟು ಲೋಕಗಳು ನಿನಗೆ ಸ್ವರ್ಗದಲ್ಲಿ ಸಿದ್ಧವಾಗಿವೆಯೆಂದು ತಿಳಿ.

|| ಅಷ್ಟಕ ಉವಾಚ ||

ತಾಂಸ್ತೇ ದದಾಮಿ ಮಾ ಪ್ರಪತ ಪ್ರಪಾತಂ
ಯೇ ಮೇ ಲೋಕಾ ದಿವಿ ರಾಜೇಂದ್ರ ಸಂತಿ ।
ಯದ್ಯಂತರಿಕ್ಷೇ ಯದಿ ವಾ ದಿವಿ ಶ್ರಿತಾ
ಸ್ತಾನಾಕ್ರಮ ಕ್ಷಿಪ್ರಮಮಿತ್ರಹಾಸಿ ||೧೦||

|| ಯಯಾತಿರುವಾಚ ||

ನಾಸ್ಮದ್ವಿಧೋ ಬ್ರಾಹ್ಮಣೋ ಬ್ರಹ್ಮವಿಚ್ಚ
ಪ್ರತಿಗ್ರಹೇ ವರ್ತತೇ ರಾಜಮುಖ್ಯ ।
ಯಥಾ ಪ್ರದೇಯಂ ಸತತಂ ದ್ವಿಜೇಭ್ಯ
ಸ್ತಥಾ ದದೇ ಪೂರ್ವಮಹಂ ನರೇಂದ್ರ ||೧೧||

ನಾಬ್ರಾಹ್ಮಣಃ ಕೃಪಣೋ ಜಾತು ಜೀವೇ
ದ್ಯದ್ಯಪಿ ಸ್ಯಾದ್ಬ್ರಾಹ್ಮಣೀ ವೀರಪತ್ನೀ ।
ಸೋಽಹಂ ಯದೇವಾಕೃತಪೂರ್ವಂ ಚರೇಯಂ
ವಿವಿತ್ಸಮಾನಃ ಕಿಮು ತತ್ರ ಸಾಧುಃ ||೧೨||

---

೧೦. ಅಷ್ಟಕನು ಹೇಳಿದನು.—ರಾಜಶ್ರೇಷ್ಠಾ, ಅಂತರಿಕ್ಷದಲ್ಲೂ, ಸ್ವರ್ಗದಲ್ಲೂ, ಮಿಕ್ಕ ಊರ್ಧ್ವಲೋಕಗಳಲ್ಲೂ ಸುಕೃತವಶದಿಂದ ನನಗೆ ದೊರಕುವ ಪುಣ್ಯಲೋಕಗಳನ್ನು ನಿನಗೆ ಕೊಡುತ್ತೇನೆ. ಬೀಳಬೇಡ. ಬೇಗನೆ ಅಲ್ಲಿಗೆ ನಡೆ. ನೀನು ಶತ್ರುಗಳನ್ನಡಗಿಸಿದ ಮಹಾವೀರನು.

೧೧. ಯಯಾತಿಯು ಹೇಳಿದನು.—ರಾಜಮುಖ್ಯನಾದ ಓ ಅಷ್ಟಕಾ, ವೇದಾಧ್ಯಯನಸಂಪನ್ನನೂ ಬ್ರಹ್ಮಜ್ಞಾನಿಯೂ ಆದ ನನ್ನಂತಹವನು ದಾನವನ್ನು ತೆಗೆದುಕೊಳ್ಳಬಾರದು. ಶಾಸ್ತ್ರದಲ್ಲಿ ಹೇಗೆ ಹೇಳಿದೆಯೋ ಅದೇ ಕ್ರಮದಲ್ಲಿ ಹಿಂದೆ ನಾನು ಬ್ರಾಹ್ಮಣರಿಗೆ ಯಾವಾಗಲೂ ದಾನಮಾಡಿದ್ದೇನೆ.

೧೨. ವೀರನಾದ ನನ್ನ ಪತ್ನಿಯು ಬ್ರಾಹ್ಮಣಸ್ತ್ರೀಯೇನೋ ನಿಜ. ಆದರೂ ಕ್ಷತ್ರಿಯನಾದವನು ಮತ್ತೊಬ್ಬರಿಂದ ದಾನ ತೆಗೆದುಕೊಂಡು ದೀನನಾಗಿ ಬಾಳಬಾರದು. ಆದುದರಿಂದ ಈ ಸನ್ನಿವೇಶದಲ್ಲಿ ಯಾವದು ಉಚಿತವೆಂದು ತಿಳಿದು, ಹಿಂದೆ ಯಾರೂ ಕೈಗೊಳ್ಳದಿರುವಂತಹ ಅಪೂರ್ವವಾದ ಕಾರ್ಯವನ್ನು ನಾನು ಮಾಡುವೆನು.

|| ಪ್ರತರ್ದನ ಉವಾಚ ||

**ಪೃಚ್ಛಾಮಿ ತ್ವಾಂ ಸ್ಪೃಹಣೀಯರೂಪ**
**ಪ್ರತರ್ದನೋಽಹಂ ಯದಿ ಮೇ ಸಂತಿ ಲೋಕಾಃ।**
**ಯದ್ಯಂತರಿಕ್ಷೇ ಯದಿ ವಾ ದಿವಿ ಶ್ರಿತಾಃ**
**ಕ್ಷೇತ್ರಜ್ಞಂ ತ್ವಾಂ ತಸ್ಯ ಧರ್ಮಸ್ಯ ಮನ್ಯೇ** ||೧೩||

|| ಯಯಾತಿರುವಾಚ ||

**ಸಂತಿ ಲೋಕಾ ಬಹವಸ್ತೇ ನರೇಂದ್ರ**
**ಅಪ್ಯೇಕೈಕಂ ಸಪ್ತ ಶತಾನ್ಯಹಾನಿ ।**
**ಮಧುಚ್ಯುತೋ ಘೃತವಂತೋ ವಿಶೋಕಾ**
**ಸ್ತೇನಾಂತವಂತಃ ಪ್ರತಿಪಾಲಯಂತಿ** ||೧೪||

|| ಪ್ರತರ್ದನ ಉವಾಚ ||

**ತಾಂಸ್ತೇ ದದಾಮಿ ಪತಮಾನಸ್ಯ ರಾಜ**
**ನ್ಯೇ ಮೇ ಲೋಕಾಸ್ತವ ತೇ ವೈ ಭವಂತು ।**
**ಯದ್ಯಂತರಿಕ್ಷೇ ಯದಿ ವಾ ದಿವಿ ಶ್ರಿತಾ**
**ಸ್ತಾನಾಕ್ರಮ ಕ್ಷಿಪ್ರಮಪೇತಮೋಹಃ** ||೧೫||

---

೧೩. ಪ್ರತರ್ದನನು ಹೇಳಿದನು.—ಎಲೈ ಸುಂದರಾಕಾರಾ, ಪ್ರತರ್ದನನೆಂಬ ನಾನು ನಿನ್ನನ್ನು ಕೇಳುತ್ತೇನೆ. ಅಂತರಿಕ್ಷದಲ್ಲೋ, ಸ್ವರ್ಗದಲ್ಲೋ ನನಗೆ ದೊರಕಬಹುದಾದ ಶುಭಲೋಕಗಳುಂಟೋ ? ನೀನು ಈ ಧರ್ಮದ ರಹಸ್ಯವನ್ನು ಬಲ್ಲೆಯೆಂದು ತಿಳಿದಿರುವೆನು.

೧೪. ಯಯಾತಿ ಹೇಳಿದನು.—ನರೇಂದ್ರಾ, ನಿನಗೆ ದೊರೆಯುವ ಲೋಕಗಳು ಅನೇಕವಾಗಿವೆ. ಒಂದೊಂದರಲ್ಲೂ ನೀನು ಏಳು ನೂರು ದಿವಸಗಳು ಇರಬಹುದು. ತುಪ್ಪವೂ, ಜೇನೂ ಅಲ್ಲಿ ಸಮೃದ್ಧವಾಗಿವೆ. ಶೋಕವೆಂಬುದೇ ಇಲ್ಲ. ಆ ಶಾಶ್ವತ ಲೋಕಗಳು ನಿನ್ನನ್ನು ಎದುರು ನೋಡುತ್ತಿವೆ.

೧೫. ಪ್ರತರ್ದನನು ಹೇಳಿದನು.—ರಾಜಾ, ಬೀಳುತ್ತಿರುವ ನಿನಗೆ ಅವುಗಳನ್ನು ಕೊಡುವೆನು. ನನಗೆ ದೊರಕಬೇಕಾದ ಲೋಕಗಳು ನಿನಗೆ ಸಿಕ್ಕಲಿ. ಅಂತರಿಕ್ಷದಲ್ಲಿರಲಿ, ಸ್ವರ್ಗದಲ್ಲಿರಲಿ ಅವುಗಳಿಗೆ ನೀನು ಬೇಗನೆ ನಡೆ. ಮೋಹವನ್ನು ಬಿಡು.

|| ಯಯಾತಿರುವಾಚ ||

ನ ತುಲ್ಯತೇಜಾಃ ಸುಕೃತಂ ಹಿ ಕಾಮಯೇ
ಯೋಗಕ್ಷೇಮಂ ಪಾರ್ಥಿವಾತ್ಪಾರ್ಥಿವಃ ಸನ್ ।
ದೈವಾದೇಶಾದಾಪದಂ ಪ್ರಾಪ್ಯ ವಿದ್ವಾಂ
ಶ್ಚರೇನ್ನೃಶಂಸಂ ಹಿ ನ ಜಾತು ರಾಜಾ ||೧೬||

ಧರ್ಮಂ ಮಾರ್ಗಂ ಚಿಂತಯಾನೋ ಯಶಸ್ಯಂ
ಕುರ್ಯಾತ್ತ್ಪೋಧರ್ಮಮವೇಕ್ಷಮಾಣಃ ।
ನ ಮದ್ವಿಧೋ ಧರ್ಮಬುದ್ಧಿರ್ಹಿ ರಾಜಾ
ಹ್ಯೇವಂ ಕುರ್ಯಾತ್ಕೃಪಣಂ ಮಾಂ ಯಥಾತ್ಥ ||೧೭||

ಕುರ್ಯಾಮಪೂರ್ವಂ ನ ಕೃತಂ ಯದನ್ಯೈ
ರ್ವಿವಿತ್ಸಮಾನಃ ಕಿಮು ತತ್ರ ಸಾಧುಃ ।
ಬ್ರುವಾಣಮೇವಂ ನೃಪತಿಂ-ಯಯಾತಿಂ
ನೃಪೋತ್ತಮೋ ವಸುಮಾನಬ್ರವೀತ್ತಂ ||೧೮||

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸೋಮವಂಶೇ ಯಯಾತಿ
ಚರಿತೇ ಏಕಚತ್ವಾರಿಂಶೋಽಧ್ಯಾಯಃ

---

೧೬. ಯಯಾತಿ ಹೇಳಿದನು.—'' ನಾನು ರಾಜನಾಗಿದ್ದುಕೊಂಡು ಸಮಾನ ತೇಜಸ್ವಿಯಾದ ಮತ್ತೊಬ್ಬ ರಾಜನಿಂದ ಪುಣ್ಯವನ್ನು ಬಯಸಲಾರೆನು. ಹಾಗೆ ನನ್ನ ಯೋಗಕ್ಷೇಮವನ್ನು* ಅವನು ನೋಡುವುದು ಸರಿಯಲ್ಲ. ಜ್ಞಾನಿಯಾದ ಭೂಪಾಲನು, ದೈವಾಜ್ಞೆಯಿಂದ ಕಷ್ಟವೊದಗಿರುವಾಗ ಹೀನಕಾರ್ಯವನ್ನೆಂದಿಗೂ ಮಾಡಬಾರದು.

೧೭. ಧರ್ಮಮಾರ್ಗವನ್ನು ನೆನೆದು, ಧರ್ಮವನ್ನು ತಿಳಿದು ಯಶಸ್ಸನ್ನು ತರುವ ಕಾರ್ಯವನ್ನು ಮಾಡಬೇಕು. ಧರ್ಮದಲ್ಲಿ ಬುದ್ಧಿಯಿರುವ ನನ್ನಂತಹ ರಾಜನು ನೀವು ಹೇಳಿದಂತೆ ದೀನ ಕೃತ್ಯಕ್ಕೆ ಕೈಹಾಕಬಾರದು.

೧೮. ಇಂತಹ ಸಂದರ್ಭದಲ್ಲಿ ಯಾವುದು ಯುಕ್ತವೆಂದು ಪರಿಶೀಲಿಸಿ, ಇತರರು ಮಾಡದಿರುವಂತಹ ಅಪೂರ್ವಕಾರ್ಯವನ್ನು ಮಾಡುವೆನು'' ಎಂದು ಯಯಾತಿ ಮಹಾರಾಜನು ಹೇಳಲು ವಸುಮಂತನೆಂಬ ರಾಜಶ್ರೇಷ್ಠನಿಂತೆಂದನು.

---

* ಅಪೇಕ್ಷಿಸಿದ ಇಷ್ಟಾರ್ಥವು ಕೈಗೂಡಿದರೆ ಯೋಗವೆಂದೂ, ಅದು ಕೈತಪ್ಪದಂತೆ ಮಾಡುವ ರಕ್ಷಣೆಗೆ ಕ್ಷೇಮವೆಂದೂ ಹೆಸರು.

## ಅಧ್ಯಾಯದ ಸಾರಾಂಶ

ಅಷ್ಟಕನೂ, ಪ್ರತರ್ದನನೂ ತಮ್ಮತಮ್ಮ ಸುಕೃತಗಳನ್ನು ಧಾರೆಯೆರೆದು ಕೊಡುವೆವೆಂದೂ, ತಮಗೆ ಪ್ರಾಪ್ತವಾಗುವ ಪುಣ್ಯಲೋಕಗಳಿಗೆ ಅವನು ಹೋಗ ಬಹುದೆಂದೂ ಯಯಾತಿ ಮಹಾರಾಜನಿಗೆ ಹೇಳಿದರು. "ತೇಜೋವಂತನಾದ ರಾಜನು ಇತರರ ಪುಣ್ಯವನ್ನು ದಾನತೆಗೆದುಕೊಳ್ಳುವುದು ಯುಕ್ತವಲ್ಲ" ಎಂದು ಅವನು ಉತ್ತರವಿತ್ತನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಚಂದ್ರವಂಶದೊಳಗೆ ಯಯಾತಿ ಚರಿತದಲ್ಲಿ
ನಲವತ್ತೊಂದನೆಯ ಅಧ್ಯಾಯವು ಮುಗಿದುದು



## ಅಥ ಶ್ರೀಮತ್ಸ್ಯಮಹಾಪುರಾಣೇ ದ್ವಿಚತ್ವಾರಿಂಶೋಽಧ್ಯಾಯಃ

|| ವಸುಮಾನುವಾಚ ||

ಪೃಚ್ಛಾಮ್ಯಹಂ ವಸುಮಾನೌಷದಶ್ವಿ
ರ್ಯದ್ಯಸ್ತಿ ಲೋಕೋ ದಿವಿ ಮಹ್ಯಂ ನರೇಂದ್ರ ।
ಯದ್ಯಂತರಿಕ್ಷೇ ಪ್ರಥಿತೋ ಮಹಾತ್ಮನ್
ಕ್ಷೇತ್ರಜ್ಞಂ ತ್ವಾಂ ತಸ್ಯ ಧರ್ಮಸ್ಯ ಮನ್ಯೇ || ೧ ||

|| ಯಯಾತಿರುವಾಚ ||

ಯದಂತರಿಕ್ಷಂ ಪೃಥಿವೀ ದಿಶಶ್ಚ
ಯತ್ತೇಜಸಾ ತಪತೇ ಭಾನುಮಾಂಶ್ಚ ।
ಲೋಕಾಸ್ತಾವಂತೋ ದಿವಿ ಸಂಸ್ಥಿತಾ ವೈ
ತೇ ತ್ವಾಂ ಭವಂತಂ ಪ್ರತಿಪಾಲಯಂತಿ || ೨ ||

---

೧. ವಸುಮಂತನು ಹೇಳಿದನು.—ನಾನು ಓಷದಶ್ವನ ಮಗನಾದ ವಸುಮಂತನು. ನರೇಂದ್ರಾ, ನಿನ್ನನ್ನು ಕೇಳುತ್ತೇನೆ. ಸ್ವರ್ಗದಲ್ಲಾಗಲೀ ಅಂತರಿಕ್ಷದಲ್ಲಾಗಲೀ ನನಗೆ ಶುಭಲೋಕವುಂಟೋ ? ಮಹಾತ್ಮನಾದ ನೀನು ಅದರ ಧರ್ಮರಹಸ್ಯವನ್ನು ಬಲ್ಲವನೆಂದು ತಿಳಿಯುತ್ತೇನೆ.

೨. ಯಯಾತಿ ಹೇಳಿದನು.—ಅಂತರಿಕ್ಷ, ಭೂಮಿ, ದಿಕ್ಕುಗಳು, ಸೂರ್ಯನು ತನ್ನ ತೇಜಸ್ಸಿನಿಂದ ಬೆಳಗಿಸುವ ಮಿಕ್ಕ ಪ್ರದೇಶಗಳು ಇವೆಲ್ಲ ಎಷ್ಟು ವಿಸ್ತಾರವಾಗಿವೆಯೋ ಅಷ್ಟು ವಿಶಾಲವಾದ ಶುಭಲೋಕಗಳು ಸ್ವರ್ಗದಲ್ಲಿ ನಿನಗಾಗಿ ಕಾದುಕೊಂಡಿವೆ.

॥ ವಸುಮಾನುವಾಚ ॥

ತಾಂಸ್ತೇ ದದಾಮಿ ಪತ ಮಾ ಪ್ರಪಾತಂ
ಯೇ ಮೇ ಲೋಕಾಸ್ತವ ತೇ ವೈ ಭವಂತು ।
ಕ್ರೀಣೀಷ್ವೈನಾಂಸ್ತೃಣಕೇನಾಪಿ ರಾಜನ್
ಪ್ರತಿಗ್ರಹಸ್ತೇ ಯದಿ ಸಮ್ಯಕ್ಪ್ರದುಷ್ಟಃ ॥ ೩ ॥

॥ ಯಯಾತಿರುವಾಚ ॥

ನ ಮಿಥ್ಯಾಹಂ ವಿಕ್ರಯಂ ವೈ ಸ್ಮರಾಮಿ
ಮಯಾ ಕೃತಂ ಶಿಶುಭಾವೇಽಪಿ ರಾಜನ್ ।
ಕುರ್ಯಾಂ ನ ಚೈವಾಕೃತಪೂರ್ವಮನ್ಯೈ
ರ್ವಿವಿತ್ಸಮಾನೋ ವಸುಮನ್ನ ಸಾಧು ॥ ೪ ॥

॥ ವಸುಮಾನುವಾಚ ॥

ತಾಂಸ್ತ್ವಂ ಲೋಕಾನ್ ಪ್ರತಿಪದ್ಯಸ್ವ ರಾಜನ್
ಮಯಾ ದತ್ತಾನ್ಯದಿ ನೇಷ್ಟಃ ಕ್ರಯಸ್ತೇ ।
ನಾಹಂ ತಾನ್ವೈ ಪ್ರತಿಗಂತಾ ನರೇಂದ್ರ
ಸರ್ವೇ ಲೋಕಾಸ್ತಾವಕಾ ವೈ ಭವಂತು ॥ ೫ ॥

---

೩. ವಸುಮಂತನು ಹೇಳಿದನು.—ಅವೆಲ್ಲವನ್ನೂ ನಿನಗೆ ಕೊಡುತ್ತೇನೆ. ಈ ಅಧೋಲೋಕಕ್ಕೆ ಬೀಳಬೇಡ. ನನ್ನ ಲೋಕವೆಲ್ಲವೂ ನಿನ್ನದಾಗಲಿ. ರಾಜಾ, ದಾನ ತೆಗೆದುಕೊಳ್ಳುವುದು ಬಹು ದೋಷಕರವೆಂದು ಭಾವಿಸಿದರೆ ಒಂದು ಹುಲ್ಲು ಕಡ್ಡಿಯನ್ನಾದರೂ ನನಗೆ ಕೊಟ್ಟು ಇವನ್ನು ಬೆಲೆಗೆ ತೆಗೆದುಕೋ.

೪. ಯಯಾತಿ ಹೇಳಿದನು.—ಬಾಲ್ಯದಲ್ಲಿ ಸಹ ಹುಡುಗಾಟಕ್ಕಾದರೂ ಅಸತ್ಯವಾದ ವ್ಯಾಪಾರವನ್ನು ಮಾಡಿದಂತೆ ನನಗೆ ನೆನಪಿಲ್ಲ. ಓ ರಾಜಾ, ವಸುಮಂತಾ, ಇದು ಸರಿಯಲ್ಲವೆಂದು ನನ್ನ ನಂಬಿಕೆ. ಆದುದರಿಂದ ಇದುವರೆಗೆ ಇತರರಾರೂ ಆಚರಿಸದಿರುವಂತಹ ಕಾರ್ಯವನ್ನು ಮಾಡುವೆನು.

೫. ವಸುಮಂತನು ಹೇಳಿದನು.—ಯಯಾತಿಭೂಪಾಲಾ, ನನಗೆ ಬರುವಂತಹ ಆಶುಭಲೋಕಗಳನ್ನು ತೆಗೆದುಕೋ ; ನಾನು ಕೊಡುವೆನು. ನಿನಗೆ ನಾನು ಹೇಳಿದಂತೆ ಬೆಲೆಗೆ ಕೊಂಡುಕೊಳ್ಳಲು ಇಷ್ಟವಿಲ್ಲದಿದ್ದರೆ ನಾನು ಸಹ ಆ ಲೋಕಗಳಿಗೆ ಹೋಗುವುದಿಲ್ಲ. ಅವೆಲ್ಲವೂ ನಿನಗೇ ಸೇರಲಿ.

|| ಶಿಬಿರುವಾಚ ||

ಪೃಚ್ಛಾಮಿ ತ್ವಾಂ ಶಿಬಿರೌಶೀನರೋಽಹಂ
ಮಮಾಪಿ ಲೋಕಾ ಯದಿ ಸಂತಿ ತಾತ ।
ಯದ್ಯಂತರಿಕ್ಷೇ ಯದಿ ವಾ ದಿವಿ ಶ್ರಿತಾಃ
ಕ್ಷೇತ್ರಜ್ಞಂ ತ್ವಾಂ ತಸ್ಯ ಧರ್ಮಸ್ಯ ಮನ್ಯೇ || ೬ ||

|| ಯಯಾತಿರುವಾಚ ||

ನ ತ್ವಂ ವಾಚಾ ಹೃದಯೇನಾಪಿ ರಾಜನ್
ಪರೀಪ್ಸಮಾನೋ ನಾವಮಂಸ್ಥಾ ನರೇಂದ್ರ ।
ತೇನಾನಂತಾ ದಿವಿ ಲೋಕಾಃ ಸ್ಥಿತಾ ವೈ
ವಿದ್ಯುದ್ರೂಪಾಃ ಸ್ವನವಂತೋ ಮಹಾಂತಃ || ೭ ||

|| ಶಿಬಿರುವಾಚ ||

ತಾಂಸ್ತ್ವಂ ಲೋಕಾನ್ಪ್ರತಿಪದ್ಯಸ್ವ ರಾಜನ್
ಮಯಾ ದತ್ತಾನ್ಯದಿ ನೇಷ್ಟಃ ಕ್ರಯಸ್ತೇ ।
ನ ಚಾಹಂ ತಾನ್ಪ್ರತಿಪದ್ಯ ದತ್ವಾ
ಯತ್ರ ತ್ವಂ ತಾತ ಗಂತಾಸಿ ಲೋಕೇ || ೮ ||

---

೬. ಶಿಬಿಯು ಹೇಳಿದನು.—ಉಶೀನರನ ಪುತ್ರನಾದ ಶಿಬಿಯು ನಾನು. ಅಪ್ಪಾ, ಅಂತರಿಕ್ಷದಲ್ಲಾಗಲೀ ಸ್ವರ್ಗದಲ್ಲಾಗಲೀ ನನಗೂ ಏನಾದರೂ ಪುಣ್ಯ ಲೋಕಗಳುಂಟೋ? ಆ ಧರ್ಮದ ರಹಸ್ಯವನ್ನು ನೀನು ಚೆನ್ನಾಗಿ ಬಲ್ಲೆಯೆಂದು ನಾನು ತಿಳಿದಿದ್ದೇನೆ.

೭. ಯಯಾತಿ ಹೇಳಿದನು.—ಭೂಪಾ, ಶುಭಲೋಕಾಕಾಂಕ್ಷಿಯಾದ ನೀನು ಮಾತಿನಲ್ಲಾಗಲಿ, ಮನಸ್ಸಿನಲ್ಲಾಗಲಿ "ಪುಣ್ಯಲೋಕಗಳು ನನಗೆ ಸಿಕ್ಕುವುವೇ" ಎಂದು ಸಂದೇಹವಾಗಿ ಎಣಿಸಬೇಡ. ಸ್ವರ್ಗದಲ್ಲಿ ಲೆಕ್ಕವಿಲ್ಲದಷ್ಟು ಶುಭಸ್ಥಾನಗಳು ನಿನಗೆ ಸಿದ್ಧವಾಗಿವೆ. ಅವು ಮಿಂಚಿನಂತೆ ಪ್ರಕಾಶಯುಕ್ತವಾದುವು. ಸುಸ್ವರ ಭರಿತ ವಾದುವು. ಅತಿ ಶ್ರೇಷ್ಠವಾದುವು.

೮. ಶಿಬಿ ಹೇಳಿದನು.—ಎಲೈ ಯಯಾತಿ ರಾಜನೇ, ಆ ಲೋಕಗಳನ್ನು ನಾನು ನಿನಗೆ ಕೊಡುವೆನು; ತೆಗೆದುಕೋ. ಕ್ರಯಕ್ಕೆ ತೆಗೆದುಕೊಳ್ಳುವುದು ನಿನಗೆ ಇಷ್ಟವಿಲ್ಲದಿದ್ದರೆ ನಿನಗಾಗಿ ಉದ್ದೇಶಮಾಡಿದ ಅವುಗಳನ್ನು ನಾನೂ ಹಿಂದಕ್ಕೆ ತೆಗೆದು ಕೊಳ್ಳುವುದಿಲ್ಲ. ಅಪ್ಪಾ, ನೀನು ಹೋಗುವ ಲೋಕಕ್ಕೆ ನಾನೂ ಸಹ ಬರುವೆನು.

॥ ಯಯಾತಿರುವಾಚ ॥

**ಯಥಾ ತ್ವಮಿಂದ್ರಪ್ರತಿಮಪ್ರಭಾವ**
**ಸ್ತೇ ಚಾಪ್ಯನಂತಾ ನರದೇವ ಲೋಕಾಃ ।**
**ತಥಾದ್ಯ ಲೋಕೇ ನ ರಮೇಽನ್ಯದತ್ತೇ**
**ತಸ್ಮಾಚ್ಛಿಬೇ ನಾಭಿನಂದಾಮಿ ವಾಚಂ** ॥ ೯ ॥

॥ ಅಷ್ಟಕ ಉವಾಚ ॥

**ನ ಚೇದೇಕೈಕಶೋ ರಾಜನ್ ಲೋಕಾನ್ನಃ ಪ್ರತಿನಂದಸಿ ।**
**ಸರ್ವೇ ಪ್ರದಾಯ ತಾನ್ ಲೋಕಾನ್ ಗಂತಾರೋ ನರಕಂ ವಯಂ** ॥೧೦॥

॥ ಯಯಾತಿರುವಾಚ ॥

**ಯದರ್ಹಾಸ್ತದ್ವದಧ್ವಂ ವಃ ಸಂತಃ ಸತ್ಯಾದಿದರ್ಶನಃ ।**
**ಅಹಂ ತು ನಾಭಿಗೃಹ್ಣಾಮಿ ಯತ್ಕೃತಂ ನ ಮಯಾ ಪುರಾ** ॥೧೧॥

---

೯. ಯಯಾತಿ ಹೇಳಿದನು.—ಓ ನರಾಧಿಪಾ, ನೀನು ಇಂದ್ರನ ಹಾಗೆ ಮಹಿಮಾನ್ವಿತನು. ನೀನು ಸಂಪಾದಿಸಿರುವ ಲೋಕಗಳು ಅನಂತವಾದುವು. ಇತರರು ಕೊಟ್ಟ ಶುಭಸ್ಥಾನದಲ್ಲಿ ಸುಖಪಡುವುದು ನನಗಿಷ್ಟವಿಲ್ಲ; ಆದುದರಿಂದ, ಶಿಬೀ, ನಿನ್ನ ಮಾತು ನನಗೆ ಸರಿಯೆಂದು ತೋರುವುದಿಲ್ಲ.

೧೦. ಅಷ್ಟಕನು ಹೇಳಿದನು.—ನಮ್ಮಲ್ಲಿ ಯಾರೊಬ್ಬರ ಶುಭಲೋಕಗಳನ್ನೂ ನೀನು ಒಲ್ಲದಿರುವೆ. ಆದುದರಿಂದ ಎಲ್ಲರೂ ನಮ್ಮ ನಮ್ಮ ಪುಣ್ಯಲಭ್ಧವಾದ ಸ್ಥಾನಗಳನ್ನು ನಿನಗೆ ಕೊಟ್ಟು ನರಕಕ್ಕೆ ಹೋಗುವೆವು.

೧೧. ಯಯಾತಿ ಹೇಳಿದನು.—ನಿಮ್ಮ ಸ್ವಭಾವಕ್ಕೆ ಅನುಗುಣವಾಗಿ ನೀವು ಹೇಳುವಿರಿ; ಏಕೆಂದರೆ ಸತ್ಪುರುಷರಿಗೆ ಸತ್ಯ, ಪರೋಪಕಾರ ಮುಂತಾದ ಸುದ್ಗುಣಗಳ ಮೇಲೆಯೇ ದೃಷ್ಟಿ. ನಾನಾದರೋ, ಹಿಂದೆ ನಾನು ಮಾಡದಿರುವ ಸುಕೃತವನ್ನು ಸ್ವೀಕರಿಸಲಾರೆನು.

ಅಲಿಪ್ಸಮಾನಸ್ಯ ತು ಮೇ ಯದುಕ್ತಂ
ನ ತತ್ತಥಾಸ್ತೀಹ ನರೇಂದ್ರಸಿಂಹ ।
ಅಸ್ಯ ಪ್ರದಾನಸ್ಯ ಯದೇವ ಯುಕ್ತಂ
ತಸ್ಯೈವ ಚಾನಂತಫಲಂ ಭವಿಷ್ಯಂ ॥೧೨॥

॥ ಅಷ್ಟಕ ಉವಾಚ ॥

ಕಸ್ಯೈತೇ ಪ್ರತಿದೃಶ್ಯಂತೇ ರಥಾಃ ಪಂಚ ಹಿರಣ್ಮಯಾಃ ।
ಉಚ್ಚೈಃ ಸಂತಃ ಪ್ರಕಾಶಂತೇ ಜ್ವಲಂತೋಽಗ್ನಿಶಿಖಾ ಇವ ॥೧೩॥

॥ ಯಯಾತಿರುವಾಚ ॥

ಭವತಾಂ ಮಮ ಚೈವೈತೇ ರಥಾ ಭಾಂತಿ ಹಿರಣ್ಮಯಾಃ ।
ಆರುಹ್ಯೈತೇಷು ಗಂತವ್ಯಂ ಭವದ್ಭಿಶ್ಚ ಮಯಾ ಸಹ ॥೧೪॥

॥ ಅಷ್ಟಕ ಉವಾಚ ॥

ಆತಿಷ್ಠಸ್ವ ರಥಂ ರಾಜನ್ ವಿಕ್ರಮಸ್ವ ವಿಹಾಯಸಾ ।
ವಯಮಪ್ಯನುಯಾಸ್ಯಾಮೋ ಯದಾ ಕಾಲೋ ಭವಿಷ್ಯತಿ ॥೧೫॥

---

೧೨. ಎಲೈ ರಾಜೋತ್ತಮಾ, ನಿಮ್ಮ ದಾನವನ್ನು ನಾನು ಅಪೇಕ್ಷಿಸದಿರಲು, "ನಾವೆಲ್ಲರೂ ಪುಣ್ಯಲೋಕಗಳನ್ನು ನಿನಗೆ ಕೊಟ್ಟು ನರಕಕ್ಕೆ ಹೋಗುತ್ತೇವೆ" ಎಂದು ನೀನು ಹೇಳಿದೆಯಷ್ಟೆ. ಆ ಮಾತು ನೀನು ಹೇಳಿದಂತೆ ನಡೆಯುವುದಿಲ್ಲ. ಏಕೆಂದರೆ ಈ ದಾನಕ್ಕೆ ತಕ್ಕಂತೆ ಅಪರಿಮಿತವಾದ ಫಲವು ಮುಂದೆ ಬಂದೇ ಬರುವುದು. ಅದರಿಂದ ಸದ್ಗತಿಯಲ್ಲದೆ ನರಕವೆಂತು ಬಂದೀತು?

೧೩. ಅಷ್ಟಕನು ಹೇಳಿದನು.—ಇಗೋ! ಐದು ಚಿನ್ನದ ತೇರುಗಳು ಕಾಣುತ್ತವಲ್ಲಾ ಅವು ಯಾರವು? ಓ ಸಜ್ಜನರೇ, ಅವು ಎತ್ತರವಾಗಿ ಬೆಂಕಿಯ ಜ್ವಾಲೆಯಂತೆ ಪ್ರಕಾಶಿಸುತ್ತಿವೆ.

೧೪. ಯಯಾತಿ ಹೇಳಿದನು.—ಪ್ರಕಾಶಮಾನವಾದ ಈ ಚಿನ್ನದ ತೇರುಗಳು ನಿಮಗೋಸ್ಕರವೂ ನನಗೋಸ್ಕರವೂ ಬಂದಿವೆ. ಇವುಗಳಲ್ಲಿ ಹತ್ತಿ ಕುಳಿತು ನಾನೂ ನೀವೂ ಹೋಗಬೇಕು.

೧೫. ಅಷ್ಟಕನು ಹೇಳಿದನು.—ರಾಜಾ, ನೀನು ತೇರಿನಲ್ಲಿ ಕುಳಿತುಕೊಂಡು ಆಕಾಶಮಾರ್ಗದಿಂದ ನಡೆ. ಸಮಯ ಬಂದಾಗ ನಾವೂ ನಿನ್ನ ಹಿಂದೆ ಬರುವೆವು.

|| ಯಯಾತಿರುವಾಚ ||

ಸರ್ವೈರಿದಾನೀಂ ಗಂತವ್ಯಂ ಸಹ ಸ್ವರ್ಗೋ ಜಿತೋ ಯತಃ |
ಏಷ ವೋ ವಿರಜಾಃ ಪಂಥಾ ದೃಶ್ಯತೇ ದೇವಸದ್ಮಗಃ ||೧೬||

|| ಶೌನಕ ಉವಾಚ ||

ತೇಽಭಿರುಹ್ಯ ರಥಂ ಸರ್ವೇ ಪ್ರಯಾತಾ ನೃಪತೇ ನೃಪಾಃ |
ಆಕ್ರಮಂತೋ ದಿವಂ ಭಾಂತಿ ಧರ್ಮೇಣಾವೃತ್ಯ ರೋದಸೀ ||೧೭||

|| ಅಷ್ಟಕ ಉವಾಚ ||

ಅಹಂ ಮನ್ಯೇ ಪೂರ್ವಮೇಕೋಽಭಿಗಂತಾ
ಸಖಾ ಚೇಂದ್ರಃ ಸರ್ವಥಾ ಮೇ ಮಹಾತ್ಮಾ |
ಕಸ್ಮಾದೇವಂ ಶಿಬಿರೌಶೀನರೋಽಯ
ಮೇಕೋಽತ್ಯಯಾತ್ಸರ್ವವೇಗೇನ ವಾಹಾನ್ ||೧೮||

|| ಯಯಾತಿರುವಾಚ ||

ಅದದಾದ್ದೇವಯಾನಾಯ ಯಾವದ್ವಿತ್ತಮನಿಂದಿತಃ |
ಉಶೀನರಸ್ಯ ಪುತ್ರೋಽಯಂ ತಸ್ಮಾಚ್ಛ್ರೇಷ್ಠೋ ಹಿ ವಃ ಶಿಬಿಃ ||೧೯||

---

೧೬. ಯಯಾತಿ ಹೇಳಿದನು.—ನಾವೆಲ್ಲರೂ ಈಗ ಹೋಗಬೇಕು. ಏಕೆಂದರೆ ಸ್ವರ್ಗವನ್ನು ಎಲ್ಲರೂ ಸೇರಿ ಒಟ್ಟಿಗೆ ಸಂಪಾದಿಸಿದ್ದೇವೆ. ಇದೋ! ದೇವ ಲೋಕಕ್ಕೆ ಹೋಗುವ ನಿರ್ಮಲವಾದ ದಾರಿ ಕಾಣುತ್ತದೆ.

೧೭. ಶೌನಕಮುನಿ ಹೇಳಿದನು.—ಓ ರಾಜಾ, ಶತಾನೀಕಾ, ಆ ರಾಜ ರೆಲ್ಲರೂ ತೇರನ್ನೇರಿ ಹೊರಟರು. ಅವರು ಸ್ವರ್ಗವನ್ನಡರಿ, ಧರ್ಮದಿಂದ ಭೂಮ್ಯಂತ ರಿಕ್ಷಗಳನ್ನು ಆವರಿಸಿ ಪ್ರಕಾಶಿಸುತ್ತಿದ್ದಾರೆ.

೧೮. ಅಷ್ಟಕನು ಹೇಳಿದನು.—ಮಹಾತ್ಮನಾದ ಇಂದ್ರನು ನನಗೆ ಸ್ನೇಹಿ ತನು; ಆದುದರಿಂದ ನಾನೊಬ್ಬನೇ ಮೊದಲು ಹೋಗತಕ್ಕವನೆಂದು ತಿಳಿದಿದ್ದೇನೆ. ಹೀಗಿರುವಾಗ ಉಶೀನರನ ಪುತ್ರನಾದ ಈ ಶಿಬಿಯು ವೇಗಾತಿಶಯದಿಂದ ಮಿಕ್ಕ ತೇರುಗಳನ್ನೂ ಮೀರಿಸುತ್ತಿದ್ದಾನಲ್ಲಾ! ಇದೇತರಿಂದ?

೧೯. ಯಯಾತಿ ಹೇಳಿದನು.—ನಿರ್ದುಷ್ಟನೂ, ಉಶೀನರನ ಪುತ್ರನೂ ಆದ ಈ ಶಿಬಿಯು ಸ್ವರ್ಗಪ್ರಾಪ್ತಿಗೋಸ್ಕರ ತನ್ನ ದ್ರವ್ಯವೆಲ್ಲವನ್ನೂ ದಾನಮಾಡಿದನು. ಆದುದರಿಂದ ನಿಮ್ಮೆಲ್ಲರಲ್ಲಿ ಇವನು ಶ್ರೇಷ್ಠನೆನಿಸಿದನು.

ದಾನಂ ಶೌಚಂ ಸತ್ಯಮಥೋ ಹ್ಯಹಿಂಸಾ
ಹ್ರೀಃ ಶ್ರೀಸ್ತಿತಿಕ್ಷಾ ಸಮತಾಽಽನೃಶಂಸ್ಯಂ ।
ರಾಜಂತ್ಯೇತಾನ್ಯಥ ಸರ್ವಾಣಿ ರಾಜ್ಞಿ
ಶಿಬೌ ಸ್ಥಿತಾನ್ಯಪ್ರತಿಮೇಷು ಬುದ್ಧ್ಯಾ ।
ಏವಂ ವೃತ್ತಂ ಹ್ರೀನಿಷೇವೀ ಬಿಭರ್ತಿ
ತಸ್ಮಾಚ್ಛಿಬಿರಭಿಗಂತಾ ರಥೇನ ॥೨೦॥

॥ ಶೌನಕ ಉವಾಚ ॥

ಅಥಾಷ್ಟಕಃ ಪುನರೇವಾನ್ವಪೃಚ್ಛ
ನ್ಮಾತಾಮಹಂ ಕೌತುಕಾದಿಂದ್ರಕಲ್ಪಂ ।
ಪೃಚ್ಛಾಮಿ ತ್ವಾಂ ನೃಪತೇ ಬ್ರೂಹಿ ಸತ್ಯಂ
ಕುತಶ್ಚ ಕಶ್ಚಾಸಿ ಕಥಂ ತ್ವಮಾಗಾಃ ।
ಕೃತಂ ತ್ವಯಾ ಯದ್ಧಿ ನ ತಸ್ಯ ಕರ್ತಾ
ಲೋಕೇ ತ್ವದನ್ಯೋ ಬ್ರಾಹ್ಮಣಃ ಕ್ಷತ್ರಿಯೋ ವಾ ॥೨೧॥

---

೨೦. ದಾನ, ಪಾರಿಶುದ್ಧ್ಯ, ಸತ್ಯ, ಅಹಿಂಸೆ, ಲಜ್ಜೆ, ಸಂಪತ್ತು, ತಾಳ್ಮೆ, ಸಮಾನಬುದ್ಧಿ, ಭೂತದಯೆ ಮುಂತಾದ ಸದ್ಗುಣಗಳು ಶಿಬಿರಾಜನಲ್ಲಿ ನೆಲೆಸಿವೆ. ಬುದ್ಧಿಯಲ್ಲಿ ಅಸಮಾನರೆನಿಸಿದವರು ಬೇಕಾದಷ್ಟು ಜನರಿರಬಹುದು. ಆದರೆ ಈ ಗುಣಯುಕ್ತವಾದ ನಡತೆಯು ವಿನಯಸಂಪನ್ನನಾದ ಶಿಬಿಯಲ್ಲಿದೆ. ಆದುದರಿಂದ ಅವನು ರಥದಲ್ಲಿ ಎಲ್ಲರಿಗಿಂತ ಮುಂದೆ ಹೋಗತಕ್ಕವನು.

೨೧. ಶೌನಕನು ಹೇಳಿದನು.—ಬಳಿಕ ಅಷ್ಟಕನು ಇಂದ್ರಸಮಾನನೂ, ಮಾತಾಮಹನೂ ಆದ ಯಯಾತಿ ರಾಜನನ್ನು ಮತ್ತೆ ಕೇಳಿದನು. "ರಾಜಾ, ಸತ್ಯವನ್ನು ಹೇಳು. ನೀನೆಲ್ಲಿಂದ ಬಂದೆ? ನೀನು ಯಾರು? ಹೇಗೆ ಬಂದೆ? ನೀನು ಮಾಡಿದ ಅಸಾಧ್ಯ ಕಾರ್ಯವನ್ನು ಬೇರೆ ಯಾವ ಬ್ರಾಹ್ಮಣನಾಗಲಿ, ಕ್ಷತ್ರಿಯನಾಗಲಿ ಮಾಡಲಾರನು.''

|| ಯಯಾತಿರುವಾಚ ||

ಯಯಾತಿರಸ್ಮಿ ನಹುಷಸ್ಯ ಪುತ್ರೋ
ಪೂರೋಃ ಪಿತಾ ಸಾರ್ವಭೌಮಸ್ತ್ವಿಹಾಸಂ ।
ಗುಹ್ಯಂ ಮಂತ್ರಂ ಮಾಮಕೇಭ್ಯೋ ಬ್ರವೀಮಿ
ಮಾತಾಮಹೋ ಭವತಾಂ ಸುಪ್ರಕಾಶಃ ||೨೨||

ಸರ್ವಾಮಿಮಾಂ ಪೃಥಿವೀಂ ನಿರ್ಜಿಗಾಯ
ಋದ್ಧಾಂ ಮಹೀಮದದಾಂ ಬ್ರಾಹ್ಮಣೇಭ್ಯಃ ।
ಮೇಧ್ಯಾನಶ್ವಾನ್ನೈಕಶಸ್ತಾನ್ಸುರೂಪಾಂ
ಸ್ತದಾ ದೇವಾಃ ಪುಣ್ಯಭಾಜೋ ಭವಂತಿ ||೨೩||

ಅದಾಮಹಂ ಪೃಥಿವೀಂ ಬ್ರಾಹ್ಮಣೇಭ್ಯಃ
ಪೂರ್ಣಾಮಿಮಾಮಖಿಲಾನ್ನೈಃ ಪ್ರಶಸ್ತಾಂ ।
ಗೋಭಿಃ ಸುವರ್ಣೈಶ್ಚ ಧನೈಶ್ಚ ಮುಖ್ಯೈ
ರಶ್ವಾಃ ಸನಾಗಾಃ ಶತಶಸ್ತ್ವರ್ಬುದಾನಿ ||೨೪||

---

೨೨. ಯಯಾತಿ ಹೇಳಿದನು.—ನಾನು ನಹುಷಪುತ್ರನಾದ ಯಯಾತಿ; ಪೂರುವಿನ ತಂದೆ; ಹಿಂದೆ ಚಕ್ರವರ್ತಿಯಾಗಿದ್ದೆನು. ಈ ಮುಂದಿನ ರಹಸ್ಯವನ್ನು ನಮ್ಮವರಾದುದರಿಂದ ನಿಮಗೆ ಹೇಳುತ್ತೇನೆ. ತೇಜಸ್ವಿಯಾದ ನಾನು ನಿಮ್ಮ ತಾಯಿಯ ತಂದೆ. (ಯಯಾತಿ ರಾಜನು ತಾನು ಹಿಂದೆ ಮಾಡಿದ ಅಪರಿಮಿತವಾದ ದಾನವನ್ನು ವರ್ಣಿಸುತ್ತಾನೆ. ಕೊಟ್ಟುದನ್ನು ಯಾರ ಮುಂದೆಯೂ ಹೇಳಬಾರದೆಂಬುದು ಸಂಪ್ರದಾಯ. ಅದಕ್ಕೋಸ್ಕರವೇ ಅದನ್ನು ರಹಸ್ಯ ವಿಷಯವೆಂದೂ, ಹೇಳತಕ್ಕುದಲ್ಲವೆಂದೂ ನುಡಿದನು.)

೨೩. ಈ ಭೂಮಂಡಲವೆಲ್ಲವನ್ನೂ ಗೆದ್ದೆನು. ಸಕಲ ಸಂಪತ್ಸಮೃದ್ಧವಾದ ಪೃಥಿವಿಯನ್ನೂ, ಯಜ್ಞಾರ್ಹವೂ ಸುಂದರವೂ ಆದ ಎಷ್ಟೋ ಕುದುರೆಗಳನ್ನೂ ಬ್ರಾಹ್ಮಣರಿಗೆ ಕೊಟ್ಟೆನು. ಈ ದಾನದಿಂದ ದೇವತೆಗಳೂ ಪುಣ್ಯಭಾಗಿಗಳಾದರು.

೨೪. ಸಕಲ ವಿಧವಾದ ಆಹಾರ ಸಾಮಗ್ರಿಗಳು, ಹಸುಗಳು, ಬಂಗಾರ, ಉತ್ತಮ ಸಂಪತ್ತು, ಕೋಟಿಗಟ್ಟಲೆಯ ಆನೆ ಕುದುರೆಗಳು ಇವುಗಳಿಂದ ತುಂಬಿದ ಮಹೀಮಂಡಲವನ್ನು ದ್ವಿಜರಿಗೆ ದಾನವಾಗಿತ್ತೆನು.

ಸತ್ಯೇನ ಮೇ ದ್ಯೌಶ್ಚ ವಸುಂಧರಾ ಚ
ತಥೈವಾಗ್ನಿರ್ಜ್ವಲತೇ ಮಾನುಷೇಷು ।
ನ ಮೇ ವೃಥಾ ವ್ಯಾಹೃತಮೇವ ವಾಕ್ಯಂ
ಸತ್ಯಂ ಹಿ ಸಂತಃ ಪ್ರತಿಪೂಜಯಂತಿ ॥೨೫॥

ಸಾಧ್ವಷ್ಟಕ ಪ್ರಬ್ರವೀಮೀಹ ಸತ್ಯಂ
ಪ್ರತರ್ದನಂ ವಸುಮಂತಂ ಶಿಬಿಂ ಚ ।
ಸರ್ವೇ ದೇವಾ ಮುನಯಶ್ಚ ಲೋಕಾಃ
ಸತ್ಯೇನ ಪೂಜ್ಯಾ ಇತಿ ಮೇ ಮನೋಗತಂ ॥೨೬॥

ಯೋ ನಃ ಸ್ವರ್ಗಜಿತಂ ಸರ್ವಂ ಯಥಾವೃತ್ತಂ ನಿವೇದಯೇತ್ ।
ಅನಸೂಯುರ್ದ್ವಿಜಾಗ್ರೇಭ್ಯಃ ಸ ಭಜೇನ್ನಃ ಸಲೋಕತಾಂ ॥೨೭॥

॥ ಶೌನಕ ಉವಾಚ ॥

ಏವಂ ರಾಜರ್ಷಿ ಸ ಮಹಾತ್ಮಾ ಯಯಾತಿಃ
ಸ್ವದೌಹಿತ್ರೈಸ್ತಾರಿತೋ ಮಿತ್ರವರ್ಯೈಃ ।

---

೨೫ ನನ್ನ ಸತ್ಯದಿಂದ ಭೂವ್ಯೋಮಾಕಾಶಗಳು ಚಲಿಸದೆ ನಿಂತಿವೆ. ಮನುಷ್ಯ ಲೋಕಗಳಲ್ಲಿ ಬೆಂಕಿಯುರಿಯುತ್ತದೆ. ನಾನು ವ್ಯರ್ಥವಾಗಿ ಮಾತನಾಡಿದವನೇ ಅಲ್ಲ. ಏಕೆಂದರೆ ಸತ್ಪುರುಷರು ಸತ್ಯಕ್ಕೆ ಮಾತ್ರವೇ ಮನ್ನಣೆಕೊಡುವರು.

೨೬. ಅಷ್ಟಕಾ, ನಿನಗೂ ಪ್ರತರ್ದನ, ವಸುಮಂತ ಮತ್ತು ಶಿಬಿಗಳಿಗೂ ಶ್ರೇಯಸ್ಕರವಾದ ಸತ್ಯವಚನವನ್ನಾಡುವೆನು ಕೇಳು. ಸತ್ಯವನ್ನು ಸಾಧಿಸಿದರೆ ಎಲ್ಲ ದೇವತೆಗಳನ್ನೂ, ಮುನಿಗಳನ್ನೂ, ಜನರನ್ನೂ ಪೂಜಿಸಿದಂತಾಗುವುದೆಂದು ತಿಳಿದಿದ್ದೇನೆ.

೨೭. ನಮ್ಮ ಈ ಸ್ವರ್ಗಜಯದ ವೃತ್ತಾಂತವೆಲ್ಲವನ್ನೂ ಆಮೂಲಾಗ್ರವಾಗಿ ಮತ್ಸರವಿಲ್ಲದೆ ಬ್ರಾಹ್ಮಣೋತ್ತಮರಿಗೆ ಹೇಳುವ ಮನುಷ್ಯನು ನಮ್ಮ ಲೋಕವನ್ನೈದುವನು.

೨೮. ಶೌನಕಮಹರ್ಷಿ ಹೇಳಿದನು.—ರಾಜಾ, ಮಹಾತ್ಮನಾದ ಯಯಾತಿ ಭೂಪತಿಯನ್ನು ಅವನ ಹಿತೈಷಿಗಳಾದ ಮೊಮ್ಮಕ್ಕಳು ಇಂತು ಉದ್ಧಾರಮಾಡಿದರು.

**ತ್ಯಕ್ತ್ವಾ ಮಹೀಂ ಪರಮೋದಾರಕರ್ಮಾ**
**ಸ್ವರ್ಗಂ ಗತಃ ಕರ್ಮಭಿರ್ವ್ಯಾಪ್ಯ ಪೃಥ್ವೀಂ** ||೨೮||
**ಏವಂ ಸರ್ವಂ ವಿಸ್ತರತೋ ಯಥಾವ**
**ದಾಖ್ಯಾತಂ ತೇ ಚರಿತಂ ನಾಹುಷಸ್ಯ ।**
**ವಂಶೋ ಯಸ್ಯ ಪ್ರಥಿತಃ ಪೌರವೇಯೋ**
**ಯಸ್ಮಿಞ್ಜಾತಸ್ತ್ವಂ ಮನುಜೇಂದ್ರಕಲ್ಪಃ** ||೨೯||

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸೋಮವಂಶೇ ಯಯಾತಿಚರಿತೇ ದ್ವಿಚತ್ವಾರಿಂಶೋಽಧ್ಯಾಯಃ**

---

ಅಪರಿಮಿತವಾದ ದಾನಗಳನ್ನೆಸಗಿ, ತನ್ನ ಧರ್ಮಕಾರ್ಯಗಳಿಂದ ಲೋಕವನ್ನು ಕೀರ್ತಿಮಯವಾಗಿ ಮಾಡಿದ ಆ ಭೂಪಾಲಕನು ಭೂಮಿಯನ್ನು ಬಿಟ್ಟು ಸ್ವರ್ಗಕ್ಕೆ ತೆರಳಿದನು.

೨೯. ನಹುಷಪುತ್ರನಾದ ಯಯಾತಿ ಮಹಾರಾಜನ ಚರಿತ್ರವನ್ನು ವಿಸ್ತಾರವಾಗಿ ಹೇಳಿದೆನು. ಪ್ರಸಿದ್ಧವಾದ ಅವನ ವಂಶಕ್ಕೆ ಪುರುವಂಶವೆಂದು ಹೆಸರು. ಮನುಷ್ಯರಲ್ಲಿ ಇಂದ್ರನಿಗೆ ಸಮಾನನೆನಿಸಿದ ನೀನು ಹುಟ್ಟಿರುವುದು ಅದೇ ವಂಶದಲ್ಲಿ.

## ಅಧ್ಯಾಯದ ಸಾರಾಂಶ

ವಸುಮಂತನೂ, ಶಿಬಿಯೂ ತಮ್ಮ ಸುಕೃತಗಳನ್ನಾದರೂ ಸ್ವೀಕರಿಸುವಂತೆ ಯಯಾತಿಯನ್ನು ಬೇಡಿದರು. ಅವನೊಪ್ಪಲಿಲ್ಲ. ಕೊನೆಗೆ ಅವರೆಲ್ಲರೂ ತಮ್ಮ ಪುಣ್ಯಫಲಗಳನ್ನು ತೊರೆದು ನರಕಕ್ಕೆ ಹೋಗುವುದಾಗಿ ಹೇಳಿದರು. ಹಾಗೂ ಯಯಾತಿ ಸಮ್ಮತಿಸಲಿಲ್ಲ. ಹೀಗೆ ಅವರ ದೃಢಮನೋಭಾವದ ಫಲವಾಗಿ ಅವರನ್ನು ಸ್ವರ್ಗಕ್ಕೊಯ್ಯಲು ಸುವರ್ಣಮಯವಾದ ದಿವ್ಯರಥಗಳೈದು ಅಲ್ಲಿಗೆ ಬಂದುವು. ಅಷ್ಟಕನ ಪ್ರಾರ್ಥನೆಯಂತೆ ಯಯಾತಿರಾಜನು ತನ್ನ ವೃತ್ತಾಂತವನ್ನೂ, ತಾನೆಸಗಿದ ಅಕ್ಷಯವಾದ ದಾನಧರ್ಮಗಳನ್ನೂ ವರ್ಣಿಸಿ ಸತ್ಯದ ಮಹಿಮೆಯನ್ನು ಉಪದೇಶಿಸಿದನು. ಬಳಿಕ ಐವರೂ ದಿವ್ಯಲೋಕಗಳಿಗೆ ತೆರಳಿದರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಸೋಮವಂಶದೊಳಗೆ ಯಯಾತಿ ಚರಿತದಲ್ಲಿ ನಲವತ್ತೆರಡನೆಯ ಅಧ್ಯಾಯವು ಮುಗಿದುದು

## ಅಥ ಶ್ರೀಮತ್ಸ್ಯಮಹಾಪುರಾಣೇ ತ್ರಿಚತ್ವಾರಿಂಶೋಽಧ್ಯಾಯಃ

॥ ಸೂತ ಉವಾಚ ॥

ಇತ್ಯೇತಚ್ಛೌನಕಾದ್ರಾಜಾ ಶತಾನೀಕೋ ನಿಶಮ್ಯ ತು ।
ವಿಸ್ಮಿತಃ ಪರಯಾ ಪ್ರೀತ್ಯಾ ಪೂರ್ಣಚಂದ್ರ ಇವಾಬಭೌ ॥ ೧ ॥

ಪೂಜಯಾಮಾಸ ನೃಪತಿರ್ವಿಧಿವಚ್ಚಾಥ ಶೌನಕಂ ।
ರತ್ನೈರ್ಗೋಭಿಃ ಸುವರ್ಣೈಶ್ಚ ವಾಸೋಭಿರ್ವಿವಿಧೈಸ್ತಥಾ ॥ ೨ ॥

ಪ್ರತಿಗೃಹ್ಯ ತತಃ ಸರ್ವಂ ಯದ್ರಾಜ್ಞಾ ಪ್ರಹಿತಂ ಧನಂ ।
ದತ್ವಾ ಚ ಬ್ರಾಹ್ಮಣೇಭ್ಯಶ್ಚ ಶೌನಕೋಽನ್ತರಧೀಯತ ॥ ೩ ॥

॥ ಋಷಯ ಊಚುಃ ॥

ಯಯಾತೇರ್ವಂಶಮಿಚ್ಛಾಮಃ ಶ್ರೋತುಂ ವಿಸ್ತರತೋ ವದ ।
ಯದುಪ್ರಭೃತಿಭಿಃ ಪುತ್ರೈರ್ಯಥಾ ಲೋಕೇ ಪ್ರತಿಷ್ಠಿತಂ ॥ ೪ ॥

---

೧. ಸೂತನು ಹೇಳಿದನು.—ಶೌನಕನಿಂದ ಶತಾನೀಕ ಭೂಪತಿಯು ಈ ಯಯಾತಿ ವೃತ್ತಾಂತವನ್ನು ಕೇಳಿ, ಆಶ್ಚರ್ಯಪಟ್ಟು, ವಿಶೇಷ ಪ್ರೀತಿಯಿಂದ ಪೂರ್ಣಚಂದ್ರನಂತೆ ಪ್ರಕಾಶಿಸಿದನು.

೨. ರಾಜನು ರತ್ನಗಳು, ಹಸುಗಳು, ಸುವರ್ಣವಸ್ತುಗಳು, ಬಗೆಬಗೆಯ ವಸ್ತ್ರಗಳು ಇವುಗಳಿಂದ ಶಾಸ್ತ್ರೋಕ್ತವಾಗಿ ಶೌನಕಮುನಿಯನ್ನು ಪೂಜಿಸಿದನು.

೩. ಶತಾನೀಕನು ಕೊಟ್ಟ ದ್ರವ್ಯವೆಲ್ಲವನ್ನೂ ತೆಗೆದುಕೊಂಡು, ಬ್ರಾಹ್ಮಣರಿಗೆ ದಾನಮಾಡಿ ಶೌನಕಮುನಿಯು ಅದೃಶ್ಯನಾದನು.

೪. ಋಷಿಗಳು ಹೇಳಿದರು.—ಯದುವೇ ಮುಂತಾದ ಮಕ್ಕಳು ಲೋಕದಲ್ಲಿ ನೆಲೆಗೊಳಿಸಿದ ಯಯಾತಿ ರಾಜನ ವಂಶವನ್ನು ಕೇಳಲಿಚ್ಛಿಸುವೆವು. ವಿಸ್ತಾರವಾಗಿ ತಿಳಿಸು.

|| ಸೂತ ಉವಾಚ ||

**ಯದೋರ್ವಂಶಂ ಪ್ರವಕ್ಷ್ಯಾಮಿ ಜ್ಯೇಷ್ಠಸ್ಯೋತ್ತಮತೇಜಸಃ ।**
**ವಿಸ್ತರೇಣಾನುಪೂರ್ವ್ಯಾ ಚ ಗದತೋ ಮೇ ನಿಬೋಧತ || ೫ ||**

**ಯದೋಃ ಪುತ್ರಾ ಬಭೂವುರ್ಹಿ ಪಂಚ ದೇವಸುತೋಪಮಾಃ ।**
**ಮಹಾರಥಾ ಮಹೇಷ್ವಾಸಾ ನಾಮತಸ್ತಾನ್ನಿಬೋಧತ || ೬ ||**

**ಸಹಸ್ರಜಿರಥೋ ಜ್ಯೇಷ್ಠಃ ಕ್ರೋಷ್ಟುರ್ನೀಲೋಽಂತಿಕೋ ಲಘುಃ ।**
**ಸಹಸ್ರಜೇಸ್ತು ದಾಯಾದೋ ಶತಜಿರ್ನಾಮ ಪಾರ್ಥಿವಃ || ೭ ||**

**ಶತಜೇರಪಿ ದಾಯಾದಾಸ್ತ್ರಯಃ ಪರಮಕೀರ್ತಯಃ ।**
**ಹೈಹಯಶ್ಚ ಹಯಶ್ಚೈವ ತಥಾ ವೇಣುಹಯಶ್ಚ ಯಃ || ೮ ||**

**ಹೈಹಯಸ್ಯ ತು ದಾಯಾದೋ ಧರ್ಮನೇತ್ರಃ ಪ್ರತಿಶ್ರುತಃ ।**
**ಧರ್ಮನೇತ್ರಸ್ಯ ಕುಂತಿಸ್ತು ಸಂಹತಸ್ತಸ್ಯ ಚಾತ್ಮಜಃ || ೯ ||**

**ಸಂಹತಸ್ಯ ತು ದಾಯಾದೋ ಮಹಿಷ್ಮಾನ್ನಾಮ ಪಾರ್ಥಿವಃ ।**
**ಆಸೀನ್ಮಹಿಷ್ಮತಃ ಪುತ್ರೋ ರುದ್ರಶ್ರೇಣ್ಯಃ ಪ್ರತಾಪವಾನ್ ||೧೦||**

---

೫. ಸೂತಪೌರಾಣಿಕನು ಹೇಳಿದನು.—ಜ್ಯೇಷ್ಠನೂ, ಅತಿಶಯತೇಜಸ್ವಿಯೂ ಆದ ಯದುವಿನ ವಂಶವನ್ನು ವಿಸ್ತಾರವಾಗಿ ಕ್ರಮವರಿತು ಹೇಳುವೆನು ಕೇಳಿರಿ.

೬. ಯದುವಿಗೆ ಐವರು ಮಕ್ಕಳು. ಅವರು ದೇವಕುಮಾರರಂತಿದ್ದರು; ಮಹಾರಥರೂ, ಧನುರ್ವಿದ್ಯಾನಿಪುಣರೂ ಆಗಿದ್ದರು. ಸಹಸ್ರಜಿ, ಕ್ರೋಷ್ಟು, ನೀಲ, ಅಂತಿಕ ಮತ್ತು ಲಘುಗಳೆಂದು ಅವರ ಹೆಸರು.

೭. ಶತಜಿ ಎಂಬ ರಾಜನು ಸಹಸ್ರಜಿಯ ಮಗನಾಗಿ ಹುಟ್ಟಿದನು.

೮. ಶತಜಿಗೂ ಸಹ ಪರಮಕೀರ್ತಿಶಾಲಿಗಳಾದ ಹೈಹಯ, ಹಯ ಮತ್ತು ವೇಣುಹಯರೆಂಬ ಮೂವರು ಮಕ್ಕಳು ಹುಟ್ಟಿದರು.

೯. ಹೈಹಯನ ಪುತ್ರನು ಪ್ರಸಿದ್ಧನಾದ ಧರ್ಮನೇತ್ರ. ಅವನ ಮಗ ಕುಂತಿ. ಅವನ ಸುತನು ಸಂಹತ.

೧೦. ಮಹಿಷ್ಮಂತನೆಂಬ ರಾಜನು ಸಂಹತನ ಪುತ್ರನು. ಪ್ರತಾಪವಂತನಾದ ರುದ್ರಶ್ರೇಣ್ಯನೆಂಬುವನು ಅವನ ಮಗನು.

ವಾರಾಣಸ್ಯಾಮಭೂದ್ರಾಜಾ ಕಥಿತಂ ಪೂರ್ವಮೇವ ತು ।
ರುದ್ರಶ್ರೇಣ್ಯಸ್ಯ ಪುತ್ರೋಽಭೂದ್ದುರ್ದಮೋ ನಾಮ ಪಾರ್ಥಿವಃ ॥೧೧॥

ದುರ್ದಮಸ್ಯ ಸುತೋ ಧೀಮಾನ್ ಕನಕೋ ನಾಮ ವೀರ್ಯವಾನ್ ।
ಕನಕಸ್ಯ ತು ದಾಯಾದಾಶ್ಚತ್ವಾರೋ ಲೋಕವಿಶ್ರುತಾಃ ॥೧೨॥

ಕೃತವೀರ್ಯಃ ಕೃತಾಗ್ನಿಶ್ಚ ಕೃತವರ್ಮಾ ತಥೈವ ಚ ।
ಕೃತೌಜಾಶ್ಚ ಚತುರ್ಥೋಽಭೂತ್ಕೃತವೀರ್ಯಾತ್ತತೋಽರ್ಜುನಃ ॥೧೩॥

ಜಾತಃ ಕರಸಹಸ್ರೇಣ ಸಪ್ತದ್ವೀಪೇಶ್ವರೋ ನೃಪಃ ।
ವರ್ಷಾಯುತಂ ತಪಸ್ತೇಪೇ ದುಶ್ಚರಂ ಪೃಥಿವೀಪತಿಃ ॥೧೪॥

ದತ್ತಮಾರಾಧಯಾಮಾಸ ಕಾರ್ತವೀರ್ಯೋಽತ್ರಿಸಂಭವಂ ।
ತಸ್ಮೈ ದತ್ತಾ ವರಾಸ್ತೇನ ಚತ್ವಾರಃ ಪುರುಷೋತ್ತಮ ॥೧೫॥

ಪೂರ್ವಂ ಬಾಹುಸಹಸ್ರಂ ತು ಸ ವವ್ರೇ ರಾಜಸತ್ತಮಃ ।
ಅಧರ್ಮಂ ಚರಮಾಣಸ್ಯ ಸದ್ಭಿಶ್ಚಾಪಿ ನಿವಾರಣಂ ॥೧೬॥

---

೧೧. ರುದ್ರಶ್ರೇಣ್ಯನು ಕಾಶಿಯಲ್ಲಿ ರಾಜನಾಗಿದ್ದನೆಂದು ಹಿಂದೆಯೇ ಹೇಳಿದೆ. ದುರ್ದಮನೆಂಬುವನು ಈತನ ಮಗನು.

೧೨. ದುರ್ದಮನಿಗೆ ಪ್ರಾಜ್ಞನೂ ವೀರನೂ ಆದ ಕನಕನು ಮಗನಾದನು. ಇವನ ಮಕ್ಕಳು ಲೋಕದಲ್ಲೆಲ್ಲಾ ಪ್ರಸಿದ್ಧರಾದ ನಾಲ್ವರು.

೧೩-೧೪. ಅವರು ಯಾರೆಂದರೆ ಕೃತವೀರ್ಯ, ಕೃತಾಗ್ನಿ, ಕೃತವರ್ಮ ಮತ್ತು ನಾಲ್ಕನೆಯವನಾದ ಕೃತೌಜ. ಕೃತ ವೀರ್ಯನಿಂದ ಅರ್ಜುನನು ಜನಿಸಿದನು. ಇವನಿಗೆ ಸಾವಿರ ಕೈಗಳಿದ್ದುವು. ಇವನು ಸಪ್ತದ್ವೀಪಗಳಿಗೂ ಚಕ್ರವರ್ತಿಯಾಗಿದ್ದನು. ಹತ್ತು ಸಾವಿರ ವರ್ಷಗಳ ಕಾಲ ಬಹಳ ಶ್ರಮಸಾಧ್ಯವಾದ ತಪಸ್ಸನ್ನು ಮಾಡಿದನು.

೧೫. ಕಾರ್ತವೀರ್ಯನು ಅತ್ರಿಯ ಮಗನಾದ ದತ್ತಾತ್ರೇಯನನ್ನು ಆರಾಧಿಸಿದನು. ಓ ರಾಜಾ, ಅವನಿಗೆ ನಾಲ್ಕು ವರಗಳು ದೊರೆತುವು.

೧೬-೧೭. ಆ ರಾಜಶ್ರೇಷ್ಠನು ಸಾವಿರ ತೋಳುಗಳನ್ನು ಮೊದಲನೆಯ ವರದಿಂದ ಬೇಡಿದನು. ಅಧರ್ಮನಿರತನಾದರೆ ಸತ್ಪುರುಷರು ತನ್ನನ್ನು ಅಡ್ಡಿಪಡಿಸ

**ಯುದ್ಧೇನ ಪೃಥಿವೀಂ ಜಿತ್ವಾ ಧರ್ಮೇಣೈವಾನುಪಾಲನಂ ।**
**ಸಂಗ್ರಾಮೇ ವರ್ತಮಾನಸ್ಯ ವಧಶ್ಚೈವಾಧಿಕಾದ್ಭವೇತ್ ॥೧೭॥**

**ತೇನೇಯಂ ಪೃಥಿವೀ ಸರ್ವಾ ಸಪ್ತದ್ವೀಪಾ ಸಪರ್ವತಾ ।**
**ಸಮೋದಧಿಪರಿಕ್ಷಿಪ್ತಾ ಕ್ಷಾತ್ರೇಣ ವಿಧಿನಾ ಜಿತಾ ॥೧೮॥**

**ಜಜ್ಞೇ ಬಾಹುಸಹಸ್ರಂ ವೈ ಇಚ್ಛತಸ್ತಸ್ಯ ಧೀಮತಃ ।**
**ರಥೋ ಧ್ವಜಶ್ಚ ಸಂಜಜ್ಞೇ ಇತ್ಯೇವಮನುಶುಶ್ರುಮಃ ॥೧೯॥**

**ದಶ ಯಜ್ಞಸಹಸ್ರಾಣಿ ರಾಜ್ಞಾ ದ್ವೀಪೇಷು ವೈ ತದಾ ।**
**ನಿರರ್ಗಲಾನಿ ವೃತ್ತಾನಿ ಶ್ರೂಯಂತೇ ತಸ್ಯ ಧೀಮತಃ ॥೨೦॥**

**ಸರ್ವೇ ಯಜ್ಞಾ ಮಹಾರಾಜ್ಞಸ್ತಸ್ಯಾಸನ್ ಭೂರಿದಕ್ಷಿಣಾಃ ।**
**ಸರ್ವೇ ಕಾಂಚನಯೂಪಾಸ್ತೇ ಸರ್ವಾಃ ಕಾಂಚನವೇದಿಕಾಃ ॥೨೧॥**

---

ಬೇಕು; ಯುದ್ಧದಿಂದ ಭೂಮಿಯನ್ನು ಗೆದ್ದು ಧರ್ಮದಿಂದಲೇ ಆಳಬೇಕು; ಸಂಗ್ರಾಮದಲ್ಲಿ ತನಗಿಂತಲೂ ಬಲಿಷ್ಠನಾದವನಿಂದಲೇ ತನ್ನ ವಧವಾಗಬೇಕು. ಎಂಬುವು ಮಿಕ್ಕ ವರಗಳು.

೧೮. ಆ ವರದ ಬಲದಿಂದ ಅವನು ಏಳು ದ್ವೀಪಗಳೂ, ಪರ್ವತಗಳೂ ಉಳ್ಳ, ಸಪ್ತಮಹಾಸಮುದ್ರಗಳಿಂದ ಆವೃತವಾದ ಭೂಮಿಯೆಲ್ಲವನ್ನೂ ಕ್ಷತ್ರಿಯೋಚಿತವಾದ ವೃತ್ತಿಯಿಂದ ಗೆದ್ದನು.

೧೯. ಆ ಮೇಧಾವಿಯ ಇಷ್ಟದಂತೆ ಅವನಿಗೆ ಸಾವಿರ ತೋಳುಗಳು ಮೂಡಿದವು. ಹಾಗೆಯೇ ರಥವೂ, ಧ್ವಜವೂ ಲಭಿಸಿದುವೆಂದು ಕೇಳಿದ್ದೇವೆ.

೨೦. ಆ ರಾಜನು ತನ್ನ ದ್ವೀಪಗಳಲ್ಲಿ ಹತ್ತು ಸಾವಿರ ಯಜ್ಞಗಳನ್ನು ನಿರ್ವಿಘ್ನವಾಗಿ ನೆರವೇರಿಸಿದನೆಂದು ಹೇಳುತ್ತಾರೆ.

೨೧. ಆ ಚಕ್ರವರ್ತಿಯು ನೆರವೇರಿಸಿದ ಯಾಗಗಳಲ್ಲೆಲ್ಲ ಯಥೇಚ್ಛವಾಗಿ ದಕ್ಷಿಣೆಯನ್ನು ಕೊಟ್ಟನು. ಯೂಪಸ್ತಂಭಗಳೆಲ್ಲವೂ ಸುವರ್ಣಮಯವಾದುವು. ವೇದಿಕೆಗಳೂ ಸಹ ಹಿರಣ್ಮಯವೇ ಆಗಿದ್ದುವು.

ಸರ್ವೇ ದೇವೈಸ್ಸಮಂ ಪ್ರಾಪ್ತೈರ್ವಿಮಾನಸ್ಥೈರಲಂಕೃತಾಃ ।
ಗಂಧರ್ವೈರಪ್ಸರೋಭಿಶ್ಚ ನಿತ್ಯಮೇವೋಪಶೋಭಿತಾಃ ॥೨೨॥

ತಸ್ಯ ಯಜ್ಞೇ ಜಗೌ ಗಾಥಾಂ ಗಂಧರ್ವೋ ನಾರದಸ್ತಥಾ ।
ಕಾರ್ತವೀರ್ಯಸ್ಯ ರಾಜರ್ಷೇರ್ಮಹಿಮಾನಂ ನಿರೀಕ್ಷ್ಯ ಸಃ ॥೨೩॥

ನ ನೂನಂ ಕಾರ್ತವೀರ್ಯಸ್ಯ ಗತಿಂ ಯಾಸ್ಯಂತಿ ಕ್ಷತ್ರಿಯಾಃ ।
ಯಜ್ಞೈರ್ದಾನೈಸ್ತಪೋಭಿಶ್ಚ ವಿಕ್ರಮೇಣ ಶ್ರುತೇನ ಚ ॥೨೪॥

ಸ ಹಿ ಸಪ್ತಸು ದ್ವೀಪೇಷು ಖಡ್ಗೀ ಚಕ್ರೀ ಶರಾಸನೀ ।
ರಥೀ ದ್ವಿಪಾನ್ಯನುಚರನ್ ಯೋಗೀ ಪಶ್ಯತಿ ತಸ್ಕರಾನ್ ॥೨೫॥

ಪಂಚಾಶೀತಿಸಹಸ್ರಾಣಿ ವರ್ಷಾಣಾಂ ಸ ನರಾಧಿಪಃ ।
ಸ ಸರ್ವರತ್ನಸಂಪೂರ್ಣಶ್ಚಕ್ರವರ್ತೀ ಬಭೂವ ಹ ॥೨೬॥

---

೨೨. ದೇವತೆಗಳೊಡನೆ ಬಂದು, ಗಂಧರ್ವರೂ, ಅಪ್ಸರಸ್ತ್ರೀಯರೂ ಅಲಂಕೃತರಾಗಿ ವಿಮಾನದಲ್ಲಿ ಕುಳಿತು, ಆ ಯಜ್ಞಗಳಿಗೆಲ್ಲ ಸೊಬಗನ್ನುಂಟು ಮಾಡುತ್ತಿದ್ದರು.

೨೩. ರಾಜರ್ಷಿಯಾದ ಕಾರ್ತವೀರ್ಯನ ಮಹಿಮೆಯನ್ನು ನೋಡಿ ಗಾನ ವಿದ್ಯಾವಿಶಾರದನಾದ ನಾರದನು ಯಜ್ಞದಲ್ಲಿಂತು ಹಾಡಿದನು.

೨೪. ಯಜ್ಞ, ದಾನ, ತಪಸ್ಸು, ಪರಾಕ್ರಮ, ಶಾಸ್ತ್ರಜ್ಞಾನ ಇವುಗಳಲ್ಲಿ ಉಳಿದ ಕ್ಷತ್ರಿಯರು ಕಾರ್ತವೀರ್ಯನಿಗೆ ಖಂಡಿತವಾಗಿಯೂ ಸರಿಬರಲಾರರು.

೨೫. ಏಳು ದ್ವೀಪಗಳಲ್ಲಿಯೂ ಖಡ್ಗ, ಚಕ್ರ, ಬಿಲ್ಲು ಇವನ್ನು ಹಿಡಿದವ ನೆಂದರೆ ಅವನೊಬ್ಬನೇ. ರಥದಲ್ಲಿ ಕುಳಿತು ಯುದ್ಧಮಾಡುವುದರಲ್ಲಿ ಅವನು ಅಸಮಾನನು. ದ್ವೀಪಗಳಲ್ಲಿ ಸಂಚರಿಸುತ್ತ ಆ ಯೋಗಿಯು ಕಳ್ಳರನ್ನು ಎಚ್ಚರದಿಂದ ಕಂಡು ಹಿಡಿಯುತ್ತಾನೆ.

೨೬. ಆ ರಾಜನು ಎಂಬತ್ತೈದು ಸಾವಿರ ವರ್ಷಗಳ ಕಾಲ ಸಕಲರತ್ನ ಸಂಪೂರ್ಣನೆನಿಸಿ ಚಕ್ರವರ್ತಿಯಾಗಿದ್ದನು.

**ಸ ಏವ ಪಶುಪಾಲೋಽಭೂತ್ಕ್ಷೇತ್ರಪಾಲಃ ಸ ಏವ ಹಿ ।**
**ಸ ಏವ ವೃಷ್ಟ್ಯಾ ಪರ್ಜನ್ಯೋ ಯೋಗಿತ್ವಾದರ್ಜುನೋಽಭವತ್ ॥೨೭॥**
**ಯೋಽಸೌ ಬಾಹುಸಹಸ್ರೇಣ ಜ್ಯಾಘಾತಕಠಿನತ್ವಚಾ ।**
**ಭಾತಿ ರಶ್ಮಿಸಹಸ್ರೇಣ ಶಾರದೇನೇವ ಭಾಸ್ಕರಃ ॥೨೮॥**
**ಏಷ ನಾಗಂ ಮನುಷ್ಯೇಷು ಮಾಹಿಷ್ಮತ್ಯಾಂ ಮಹಾದ್ಯುತಿಃ ।**
**ಕರ್ಕೋಟಕಸುತಂ ಜಿತ್ವಾ ಪುರ್ಯಾಂ ತತ್ರ ನ್ಯವೇಶಯತ್ ॥೨೯॥**
**ಏಷ ವೇಗಂ ಸಮುದ್ರಸ್ಯ ಪ್ರಾವೃಟ್ಕಾಲೇ ಭಜೇತ ವೈ ।**
**ಕ್ರೀಡನ್ನೇವ ಸುಖೋದ್ಭಿನ್ನಃ ಪ್ರತಿಸ್ರೋತೋ ಮಹೀಪತಿಃ ॥೩೦॥**
**ಲಲನಾಃ ಕ್ರೀಡಿತಾಸ್ತೇನ ಪ್ರತಿಸ್ರಗ್ದಾಮಮಾಲಿಕಾಃ ।**
**ಯಸ್ಯ ಭ್ರುಕುಟಿಸಂತ್ರಾಸಾಚ್ಛಂಕಿತಾಭ್ಯೇತಿ ನರ್ಮದಾ ॥೩೧॥**

---

೨೭. ಯೋಗವನ್ನು ಚೆನ್ನಾಗಿ ಬಲ್ಲವನಾದ ಕಾರಣ ಆ ಅರ್ಜುನನೇ ವನ ಕಾಯುವವನೂ, ಹೊಲ ಕಾಯುವವನೂ ಆಗುತ್ತಿದ್ದನು. ಅವನೇ ಪರ್ಜನ್ಯನಾಗಿ ಮಳೆಗರೆಯುತ್ತಿದ್ದನು.

೨೮. ಬಿಲ್ಲಿನ ಹೆದೆಯನ್ನು ಹಿಡಿದೆಳೆದು ಅವನ ಕೈಚರ್ಮವು ಒರಟಾಗಿತ್ತು. ಶರದೃತುವಿನಲ್ಲಿ ಕಿರಣಸಹಸ್ರದಿಂದ ಸೂರ್ಯನು ಪ್ರಕಾಶಿಸುವಂತೆ ಸಾವಿರ ತೋಳುಗಳಿಂದ ಅವನು ಮೆರೆಯುತ್ತಿದ್ದನು.

೨೯. ಅತಿಶಯ ಕಾಂತಿಯುಕ್ತನಾದ ಅವನು ಸರ್ಪರಾಜನಾದ ಕಾರ್ಕೋಟಕನ ಪುತ್ರನಾದ ನಾಗನನ್ನು ಜಯಿಸಿ, ತನ್ನ ಪಟ್ಟಣವಾದ ಮಾಹಿಷ್ಮತಿಯಲ್ಲಿ ಮನುಷ್ಯರ ನಡುವೆ ಇರಿಸಿದನು.

೩೦. ಮಳೆಗಾಲದಲ್ಲಿ ಸಮುದ್ರಕ್ಕಿರುವಷ್ಟು ವೇಗವು ಈ ರಾಜನಿಗುಂಟು. ನೀರಾಟವಾಡುತ್ತಲೇ ಪ್ರವಾಹಕ್ಕೆದುರಾಗಿ ಅನಾಯಾಸದಿಂದ ಅವನು ಹಾದು ಹೋಗಬಲ್ಲನು.

೩೧. ಅವನು ಪುಷ್ಪಮಾಲೆಗಳನ್ನೂ, ರತ್ನಹಾರಗಳನ್ನೂ ಹಾಕಿಕೊಂಡಿರುವ ಸ್ತ್ರೀಯರನ್ನು ನೀರಿನಲ್ಲಿ ಆಡಿಸುತ್ತಿದ್ದರೆ "ಎಲ್ಲಿ ಅವನು ಕೋಪದಿಂದ ಹುಬ್ಬು ಗಂಟಿಕ್ಕುವನೋ" ಎಂದು ಹೆದರಿ ನರ್ಮದಾ ನದಿಯು ಅವನ ಬಳಿಯಲ್ಲಿ ಮೆಲ್ಲಗೆ ಹರಿಯುತ್ತಿತ್ತು.

**ಏಕೋ ಬಾಹುಸಹಸ್ರೇಣ ಜಗಾಹ ಸ ಮಹಾರ್ಣವಂ ।**
**ಕರೋತ್ಯಾವೃತ್ತವೇಗಾಂ ತು ನರ್ಮದಾಂ ಪ್ರಾವೃಡುತ್ಥಿತಾಂ ॥೩೨॥**

**ತಸ್ಯ ಬಾಹುಸಹಸ್ರೇಣ ಕ್ಷೋಭ್ಯಮಾಣೇ ಮಹೋದಧೌ ।**
**ಭವಂತ್ಯತೀವ ನಿಶ್ಚೇಷ್ಟಾಃ ಪಾತಾಲಸ್ಥಾ ಮಹಾಸುರಾಃ ॥೩೩॥**

**ಚೂರ್ಣೀಕೃತಮಹಾವೀಚಿಲೀನಮೀನಮಹಾತಿಮಿಂ ।**
**ಮಾರುತಾವಿದ್ಧಫೇನೌಘಮಾವರ್ತಾಕ್ಷಿಪ್ತದುಸ್ಸಹಂ ॥೩೪॥**

**ಕರೋತ್ಯಾಲೋಡಯನ್ನೇವ ದೋಸ್ಸಹಸ್ರೇಣ ಸಾಗರಂ ।**
**ಮಂದರಕ್ಷೋಭಚಕಿತಾ ಹ್ಯಮೃತೋತ್ಪಾದಶಂಕಿತಾಃ ॥೩೫॥**

---

೩೨. ಅವನೊಬ್ಬನೇ ಮಹೋದಧಿಯನ್ನು* ಪ್ರವೇಶಿಸುವನು. ನರ್ಮದಾ ನದಿಯಲ್ಲಿ ನಿಂತು ತನ್ನ ಸಾವಿರ ತೋಳುಗಳಿಂದ ಅಡ್ಡಗಟ್ಟಿ, ತಡೆದು, ನದಿಯ ಪ್ರವಾಹವೇ ಬೇರೆ ಕಡೆಗೆ ತಿರುಗುವಂತೆ ಮಾಡುವನು. ಮಳೆಗಾಲದಲ್ಲಿ ಬರುವಷ್ಟು ಮಿತಿಮೀರಿದ ಪ್ರವಾಹವು ಆಗ ಆ ನದಿಯಲ್ಲಿ ಉಂಟಾಗುವುದು.

೩೩. ತನ್ನ ಸಾವಿರ ತೋಳುಗಳಿಂದ ಮಹಾಸಮುದ್ರವನ್ನು ಅವನು ಕಲಕುತ್ತಿದ್ದರೆ ಪಾತಾಲಲೋಕದಲ್ಲಿರುವ ಮಹಾಸುರರು ಬೆಪ್ಪಾಗಿ ನಿಶ್ಚೇಷ್ಟರಾಗುತ್ತಾರೆ.

೩೪. ಅವನು ಸಾಗರವನ್ನು ತನ್ನ ಸಾವಿರ ತೋಳುಗಳಿಂದ ಬಗ್ಗಡ ಮಾಡುವನು. ಆಗ ದೊಡ್ಡ ದೊಡ್ಡ ಅಲೆಗಳೂ, ಅಲ್ಲಿ ಅಡಗಿದ್ದ ಮೀನುಗಳೂ, ತಿಮಿಂಗಿಲಗಳೂ ಪುಡಿಪುಡಿಯಾಗುವುವು. ಕೈಯ ವೇಗದಿಂದೆದ್ದ ಗಾಳಿಯು ನೊರೆಗಳನ್ನೆಬ್ಬಿಸಿ ಒಡಿಯುವುದು. ಸುಳಿಗಳು ಸಹಿಸಲಾರದಷ್ಟು ವೇಗದಿಂದ ಸೆಳೆಯುವುವು.

೩೫–೩೬. ಮಹಾಸರ್ಪಗಳು ಮಂದರ ಪರ್ವತದಿಂದ ಸಾಗರವನ್ನು ಮತ್ತೆ ಕಡೆಯುತ್ತಿದ್ದಾರೆಂದು ಗಾಬರಿಗೊಂಡು, ಅಮೃತವು ಹುಟ್ಟುವುದೆಂದು ಸಂದೇಹ

---

* ಬಂಗಾಳಾ ಕೊಲ್ಲಿಗೆ ರತ್ನಾಕರವೆಂದೂ, ಅರಬ್ಬಿ ಸಮುದ್ರಕ್ಕೆ ಮಹೋದಧಿಯೆಂದೂ ಹೆಸರು.

**ತದಾ ನಿಶ್ಚಲಮೂರ್ಧಾನೋ ಭವಂತಿ ಚ ಮಹೋರಗಾಃ ।**
**ಸಾಯಾಹ್ನೇ ಕದಲೀಖಂಡಾ ನಿರ್ವಾತಸ್ತಿಮಿತಾ ಇವ** ॥೩೬॥

**ಏವಂ ಬದ್ಧ್ವಾ ಧನುರ್ಜ್ಯಾಯಾಮುತ್ಸಿಕ್ತಂ ಪಂಚಭಿಶ್ಶರೈಃ ।**
**ಲಂಕಾಯಾಂ ಮೋಹಯಿತ್ವಾ ತು ಸಬಲಂ ರಾವಣಂ ಬಲಾತ್** ॥೩೭॥

**ನಿರ್ಜಿತ್ಯ ಬದ್ಧ್ವಾ ಚಾನೀಯ ಮಾಹಿಷ್ಮತ್ಯಾಂ ಬಬಂಧ ಚ ।**
**ತತೋ ಗತ್ವಾ ಪುಲಸ್ತ್ಯಸ್ತು ಹ್ಯರ್ಜುನಂ ಸಂಪ್ರಸಾದಯತ್** ॥೩೮॥

**ಮುಮೋಚ ರಕ್ಷಃ ಪೌಲಸ್ತ್ಯಂ ಪುಲಸ್ತ್ಯೇನೇಹ ಸಾಂತ್ವಿತಂ ।**
**ತಸ್ಯ ಬಾಹುಸಹಸ್ರೇಣ ಬಭೂವ ಜ್ಯಾತಲಸ್ವನಃ** ॥೩೯॥

**ಯುಗಾಂತಾಭ್ರಸಹಸ್ರಸ್ಯ ಆಸ್ಫೋಟಸ್ತ್ವಶನೇರಿವ ।**
**ಅಹೋ ಬತ ವಿಧೇರ್ವೀರ್ಯಂ ಭಾರ್ಗವೋಯಂ ಯದಾಚ್ಛಿನತ್** ॥೪೦॥

**ತದ್ವೈ ಸಹಸ್ರಂ ಬಾಹೂನಾಂ ಹೇಮತಾಲವನಂ ಯಥಾ ।**
**ಯತ್ರಾಽಽಪವಸ್ತು ಸಂಕ್ರುದ್ಧೋ ಹ್ಯರ್ಜುನಂ ಶಪ್ತವಾನ್ ಪ್ರಭುಃ** ॥೪೧॥

---

ಪಡುವುವು. ಗಾಳಿಯಿಲ್ಲದಿರುವಾಗ ಸಾಯಂಕಾಲದಲ್ಲಿ ಅಲುಗಾಡದೆ ನಿಂತ ಬಾಳೆಯ ಕಂಬಗಳಂತೆ ಅವು ತಲೆಯನ್ನು ಅಲ್ಲಾಡಿಸದೆ ಸ್ತಬ್ಧವಾಗಿ ಇರುವುವು.

೩೭-೩೮. ಕಾರ್ತವೀರ್ಯಾರ್ಜುನನು ಸಾಗರವನ್ನಿಂತು ತಡೆಗಟ್ಟಿದನು. ಬಳಿಕ ಬಿಲ್ಲಿನ ಹೆದೆಗೆ ಐದು ಬಾಣಗಳನ್ನು ಹೂಡಿ, ಲಂಕಾಪಟ್ಟಣದಲ್ಲಿ ಸೈನ್ಯ ಸಮೇತನಾದ ರಾವಣನನ್ನು ಮೂರ್ಛೆಗೊಳಿಸಿ, ಯುದ್ಧದಲ್ಲಿ ಗೆದ್ದು, ತನ್ನ ಶಕ್ತಿಯಿಂದ ಕಟ್ಟಿ ತಂದು ಮಾಹಿಷ್ಮತೀ ನಗರದಲ್ಲಿ ಸೆರೆಹಾಕಿದನು. ತರುವಾಯ ಪುಲಸ್ತ್ಯನು ಹೋಗಿ ಅರ್ಜುನನನ್ನು ಸಮಾಧಾನಪಡಿಸಲು, ಅವನು ರಾವಣಾಸುರನನ್ನು ಬಿಟ್ಟನು.

೩೯-೪೦. ಅವನು ಸಾವಿರ ಕೈಗಳಿಂದಲೂ ಹೆದೆಯನ್ನು ಮಿಡಿದರೆ, ಪ್ರಳಯಕಾಲದ ಸಾವಿರಾರು ಮೇಘಗಳಲ್ಲಿ ಸಿಡಿಲಿನ ಅಬ್ಬರವಾದಂತೆ ಧ್ವನಿಯಾಗುತ್ತಿತ್ತು. ಅಬ್ಬಬ್ಬಾ! ದೈವದ ಶಕ್ತಿಯು ಎಷ್ಟು ಅಧಿಕವಾದುದು! ಪರಶುರಾಮನು ಚಿನ್ನದ ತಾಳೆಯ ಮರಗಳ ಕಾಡಿನಂತಿದ್ದ ಆ ಬಾಹು ಸಹಸ್ರವನ್ನೂ ಕತ್ತರಿಸಿದನು.

೪೧-೪೩. ಪೂರ್ವದಲ್ಲಿ ತಪೋಬಲದಿಂದ ಕೂಡಿದ ಆಪವಮಹರ್ಷಿಯು ಕ್ರುದ್ಧನಾಗಿ ಅರ್ಜುನನಿಗೆ ಶಾಪಕೊಟ್ಟಿದ್ದನು. "ಎಲೈ ಕಾರ್ತವೀರ್ಯ, ಪ್ರಸಿದ್ಧವಾದ

ಯಸ್ಮಾದ್ವನಂ ಪ್ರದಗ್ಧಂ ವೈ ವಿಶ್ರುತಂ ಮಮ ಹೈಹಯ ।
ತಸ್ಮಾತ್ತೇ ದುಷ್ಕೃತಂ ಕರ್ಮ ಕೃತಮನ್ಯೋ ಹರಿಷ್ಯತಿ ॥೪೨॥

ಛಿತ್ತ್ವಾ ಬಾಹುಸಹಸ್ರಂ ತೇ ಪ್ರಥಮಂ ತರಸಾ ಬಲೀ ।
ತಪಸ್ವೀ ಬ್ರಾಹ್ಮಣಶ್ಚ ತ್ವಾಂ ಸ ವಧಿಷ್ಯತಿ ಭಾರ್ಗವಃ ॥೪೩॥

॥ ಸೂತ ಉವಾಚ ॥

ತಸ್ಯ ರಾಮಸ್ತದಾ ತ್ವಾಸೀನ್ಮೃತ್ಯುಃ ಶಾಪೇನ ಧೀಮತಾ ।
ವರಶ್ಚೈವಂ ತು ರಾಜರ್ಷೇಃ ಸ್ವಯಮೇವ ವೃತಃ ಪುರಾ ॥೪೪॥

ತಸ್ಯ ಪುತ್ರಶತಂ ತ್ವಾಸೀತ್ಪಂಚ ತತ್ರ ಮಹಾರಥಾಃ ।
ಕೃತಾಸ್ತ್ರಾ ಬಲಿನಶ್ಶೂರಾ ಧರ್ಮಾತ್ಮಾನೋ ಮಹಾಬಲಾಃ ॥೪೫॥

ಶೂರಸೇನಶ್ಚ ಶೂರಶ್ಚ ಧೃಷ್ಟಃ ಕ್ರೋಷ್ಟುಸ್ತಥೈವ ಚ ।
ಜಯಧ್ವಜಶ್ಚ ವೈಕರ್ತಾ ಅವಂತಿಶ್ಚ ವಿಶಾಂಪತೇ ॥೪೬॥

---

ನನ್ನ ಈ ತಪೋವನವನ್ನು ನೀನು ಸುಟ್ಟೆ. ಆದುದರಿಂದ ನೀನು ಮಾಡಿದ ಅತಿ ಮಹತ್ತರವಾದ ತಪಸ್ಸಿನ ಕಾರ್ಯವು ಬೇರೊಬ್ಬನಿಂದ ನಾಶವಾಗಲಿ. ಬ್ರಾಹ್ಮಣನೂ, ತಪಸ್ವಿಯೂ, ಬಲಶಾಲಿಯೂ ಆದ ಪರಶುರಾಮನು ಬೇಗನೆ ನಿನ್ನ ಸಾವಿರ ತೋಳುಗಳನ್ನು ಕತ್ತರಿಸಿ ನಿನ್ನನ್ನು ವಧಿಸುವನು'' ಎಂಬುದೇ ಅವನ ಶಾಪ.

೪೪. ಸೂತಮಹರ್ಷಿ ಹೇಳಿದನು.—ಶಾಪವಶದಿಂದ ಪರಶುರಾಮನು ಅವನಿಗೆ ಆಗ ಮೃತ್ಯುವಾಗಿ ಪರಿಣಮಿಸಿದನು. ಪ್ರಾಜ್ಞನಾದ ಆ ಅರ್ಜುನನು ದತ್ತಾತ್ರೇಯನಿಂದ ಹಿಂದೆ ಇದೇ ರೀತಿಯಲ್ಲಿ ವರವನ್ನು ಬೇಡಿ ಪಡೆದಿದ್ದನಷ್ಟೆ !

೪೫. ಅವನಿಗೆ ನೂರು ಜನ ಮಕ್ಕಳು. ಅವರಲ್ಲಿ ಐವರು ಮಹಾರಥರು. ಅವರು ಅಸ್ತ್ರವಿದ್ಯೆಯನ್ನು ಚೆನ್ನಾಗಿ ಬಲ್ಲವರು; ಬಲಿಷ್ಠರು, ಶೂರರು, ಧರ್ಮಬುದ್ಧಿಯವರು ಮತ್ತು ಅಧಿಕ ಬಲಶಾಲಿಗಳು.

೪೬. ರಾಜಾ, ಶೂರಸೇನ, ಶೂರ, ಧೃಷ್ಟ, ಕ್ರೋಷ್ಟು, ಜಯಧ್ವಜ, ವಿಕರ್ತನ, ಮತ್ತು ಅವಂತಿ ಎಂಬುವರು ಕಾರ್ತವೀರ್ಯಾರ್ಜುನನ ಮಕ್ಕಳಲ್ಲಿ ಪ್ರಸಿದ್ಧರಾದವರು.

**ಜಯಧ್ವಜಸ್ಯ ಪುತ್ರಸ್ತು ತಾಲಜಂಘೋ ಮಹಾಬಲಃ ।**
**ತಸ್ಯ ಪುತ್ರಶತಾನ್ಯೇವ ತಾಲಜಂಘಾ ಇತಿ ಶ್ರುತಾಃ ॥೪೭॥**

**ತೇಷಾಂ ಪಂಚ ಕುಲಾಃ ಖ್ಯಾತಾಃ ಹೈಹಯಾನಾಂ ಮಹಾತ್ಮನಾಂ ।**
**ವೀತಿಹೋತ್ರಾಶ್ಚ ಶರ್ಯಾತಾ ಭೋಜಾಶ್ಚಾವಂತಯಸ್ತಥಾ ॥೪೮॥**

**ಕುಂಡಿಕೇರಾಶ್ಚ ವಿಕ್ರಾಂತಾಸ್ತಾಲಜಂಘಾಸ್ತಥೈವ ಚ ।**
**ವೀತಿಹೋತ್ರಸುತಶ್ಚಾಪಿ ಆನರ್ತೋ ನಾಮ ವೀರ್ಯವಾನ್ ।**
**ದುರ್ಜೇಯಸ್ತಸ್ಯ ಪುತ್ರಸ್ತು ಬಭೂವಾಮಿತ್ರಕರ್ಶನಃ ॥೪೯॥**

**ಸದ್ಭಾವೇನ ಮಹಾರಾಜ ಪ್ರಜಾ ಧರ್ಮೇಣ ಪಾಲಯನ್ ।**
**ಕಾರ್ತವೀರ್ಯಾರ್ಜುನೋ ನಾಮ ರಾಜಾ ಬಾಹುಸಹಸ್ರವಾನ್ ॥೫೦॥**

**ಯೇನ ಸಾಗರಪರ್ಯಂತಾ ಧನುಷಾ ನಿರ್ಜಿತಾ ಮಹೀ ।**
**ಯಸ್ತಸ್ಯ ಕೀರ್ತಯೇನ್ನಾಮ ಕಲ್ಯಮುತ್ಥಾಯ ಮಾನವಃ ॥೫೧॥**

---

೪೭. ಜಯಧ್ವಜನಿಗೆ ಮಹಾಬಲನಾದ ತಾಲಜಂಘನು ಮಗನಾದನು. ಅವನಿಗೆ ನೂರ್ವರು ಮಕ್ಕಳು. ಎಲ್ಲರಿಗೂ ತಾಲಜಂಘರೆಂದೇ ಪ್ರಖ್ಯಾತಿಯಿತ್ತು.

೪೮. ಮಹಾತ್ಮರಾದ ಆ ಹೈಹಯರ ವಂಶೀಯರಲ್ಲಿ ಪ್ರಸಿದ್ಧರಾದವರು ಐದು ಮನೆತನದವರು. ವೀತಿಹೋತ್ರರು, ಶರ್ಯಾತರು, ಭೋಜರು, ಆವಂತಿಗಳು, ಕುಂಡಿಕೇರರು. ಇವರಲ್ಲದೆ ಶೂರರಾದ ತಾಲಜಂಘರೂ ಸಹ ಪ್ರಖ್ಯಾತರೇ ಆಗಿದ್ದರು.

೪೯. ವೀತಿಹೋತ್ರನಿಗೆ ಪರಾಕ್ರಮಶಾಲಿಯಾದ ಆನರ್ತನೆಂಬ ಪುತ್ರನು ಉದಿಸಿದನು. ಅವನ ಮಗನಾದರೋ ಶತ್ರುಗಳಿಗೆ ಜಯಿಸಲಸಾಧ್ಯನಾದ ಅಮಿತ್ರಕರ್ಶನನೆಂಬುವನು.

೫೦. ಓ ಮಹಾರಾಜಾ, ಸಾವಿರ ತೋಳುಗಳಿಂದ ಮೆರೆಯುತ್ತಿದ್ದ ಕಾರ್ತವೀರ್ಯಾರ್ಜುನನು ಧರ್ಮದಿಂದಲೂ ಹಿತಬುದ್ಧಿಯಿಂದಲೂ ಪ್ರಜೆಗಳನ್ನು ಪಾಲಿಸುತ್ತಿದ್ದನು.

೫೧-೫೨. ಅವನು ಸಾಗರದವರಗಿನ ಭೂಮಿಯನ್ನು ತನ್ನ ಬಿಲ್ಲಿನಿಂದ ಗೆದ್ದನು. ಪ್ರಾತಃಕಾಲದಲ್ಲೆದ್ದು ಅವನ ಹೆಸರನ್ನು ಹೇಳುವ ಮನುಜನಿಗೆ ದ್ರವ್ಯ ನಷ್ಟವಿಲ್ಲ. ಕಳೆದುಹೋದದ್ದು ಸಹ ಮತ್ತೆ ಸಿಕ್ಕುವುದು. ಪ್ರಾಜ್ಞನಾದ ಆ ಕಾರ್ತ

**ನ ತಸ್ಯ ವಿತ್ತನಾಶಃ ಸ್ಯಾನ್ನಷ್ಟಂ ಚ ಲಭತೇ ಪುನಃ ।**
**ಕಾರ್ತವೀರ್ಯಸ್ಯ ಯೋ ಜನ್ಮ ಕಥಯೇದಿಹ ಧೀಮತಃ ।**
**ಯಥಾವತ್ಸ್ವಿಷ್ಟಪೂತಾತ್ಮಾ ಸ್ವರ್ಗಲೋಕೇ ಮಹೀಯತೇ ॥೫೨॥**

**ಇತಿ ಶ್ರೀಮತ್ಸ್ಯೇ ಮಹಾಪುರಾಣೇ ಸೋಮವಂಶೇ ಯಯಾತಿಚರಿತೇ ತ್ರಿಚತ್ವಾರಿಂಶೋಽಧ್ಯಾಯಃ**

---

ವೀರ್ಯನ ಜೀವನ ಚರಿತ್ರವನ್ನು ಕೀರ್ತಿಸುವಾತನು ಶಾಸ್ತ್ರೋಕ್ತವಾಗಿ ಯಾಗವನ್ನಾಚರಿಸಿದವನಂತೆ ಪರಿಶುದ್ಧಾತ್ಮನಾಗುವನು; ಮತ್ತು ಸ್ವರ್ಗದಲ್ಲಿ ಮನ್ನಣೆಯನ್ನು ಪಡೆಯುವನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಯದುವಿನ ವಂಶವನ್ನು ವರ್ಣಿಸಿದೆ. ಕೃತವೀರ್ಯನಿಗೆ ಅರ್ಜುನನೆಂಬುವನು ಮಗನಾದನು. ಇವನಿಗೆ ಕಾರ್ತವೀರ್ಯಾರ್ಜುನನೆಂದು ಪ್ರಸಿದ್ಧಿಯುಂಟು. ದತ್ತಾತ್ರೇಯನನ್ನು ಆರಾಧಿಸಿ ಇವನು ಸಾವಿರ ತೋಳುಗಳನ್ನು ಪಡೆದನು. ಇವನಿಗೆ ಎದುರೇ ಇಲ್ಲ. ಇವನು ಸಮುದ್ರವನ್ನು ಕದಡಿ ಬಗ್ಗಡಮಾಡಿದನು. ರಾವಣನನ್ನು ಸೋಲಿಸಿ ಸೆರೆಹಿಡಿದನು. ಮಹಾಧರ್ಮಿಷ್ಠನಾಗಿ ಎಷ್ಟೋ ಯಜ್ಞಗಳನ್ನು ಆಚರಿಸಿದನು. ಪ್ರಜೆಗಳನ್ನು ಧರ್ಮದಿಂದ ಪಾಲಿಸಿದನು. ಪರಶುರಾಮನಿಂದ ಇವನಿಗೆ ಮರಣವೊದಗಬೇಕೆಂಬುದು ಆಪವ ಮಹರ್ಷಿಯ ಶಾಪ. ಅದರಂತೆಯೇ ಇವನು ಹತನಾದನು. ಇವನ ಚರಿತ್ರವು ಮಹಾಪವಿತ್ರವೂ ಸ್ವರ್ಗಪ್ರದವೂ ಆದದ್ದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಚಂದ್ರವಂಶದೊಳಗೆ ಯಯಾತಿ ಚರಿತದಲ್ಲಿ ನಾಲ್ವತ್ತಮೂರನೆಯ ಅಧ್ಯಾಯವು ಮುಗಿದುದು

## ಅಥ ಶ್ರೀಮತ್ಸ್ಯಮಹಾಪುರಾಣೇ ಚತುಶ್ಚತ್ವಾರಿಂಶೋಽಧ್ಯಾಯಃ

|| ಋಷಯ ಊಚುಃ ||

ಕಿಮರ್ಥಂ ತದ್ವನಂ ದಗ್ಧಮಾಪವಸ್ಯ ಮಹಾತ್ಮನಃ |
ಕಾರ್ತವೀರ್ಯೇಣ ವಿಕ್ರಮ್ಯ ಸೂತ ಪ್ರಬ್ರೂಹಿ ತತ್ವತಃ || ೧ ||

ರಕ್ಷಿತಾ ಸ ತು ರಾಜರ್ಷಿಃ ಪ್ರಜಾನಾಮಿತಿ ನಃ ಶ್ರುತಂ |
ಸ ಕಥಂ ರಕ್ಷಿತಾ ಭೂತ್ವಾ ಅದಹತ್ತತ್ತಪೋವನಂ || ೨ ||

|| ಸೂತ ಉವಾಚ ||

ಆದಿತ್ಯೋ ದ್ವಿಜರೂಪೇಣ ಕಾರ್ತವೀರ್ಯಮುಪಸ್ಥಿತಃ |
ತೃಪ್ತಿಮೇಕಾಂ ಪ್ರಯಚ್ಛಸ್ವ ಆದಿತ್ಯೋಽಹಂ ನರೇಶ್ವರ || ೩ ||

|| ರಾಜೋವಾಚ ||

ಭಗವನ್ ಕೇನ ತೃಪ್ತಿಸ್ತೇ ಭವತ್ಯೇವ ದಿವಾಕರ |
ಕೀದೃಶಂ ಭೋಜನಂ ದದ್ಮಿ ಶ್ರುತ್ವಾ ತು ವಿದಧಾಮ್ಯಹಂ || ೪ ||

---

೧-೨. ಋಷಿಗಳು ಹೇಳಿದರು.—ವಿಕ್ರಮಶಾಲಿಯಾದ ಕಾರ್ತವೀರ್ಯನು ಮಹಾತ್ಮನಾದ ಆಪವನ ವನವನ್ನೇಕೆ ಸುಟ್ಟನು ? ಆ ರಾಜರ್ಷಿಯು ಪ್ರಜೆಗಳನ್ನು ಸುಖವಾಗಿ ಪಾಲಿಸುತ್ತಿದ್ದನೆಂದು ಕೇಳಿದ್ದೇವೆ. ತಾನೇ ರಕ್ಷಕನಾಗಿದ್ದು ಆ ತಪೋವನವನ್ನು ಸುಡಲು ಕಾರಣವೇನು ? ಓ ಸೂತಾ, ಇದನ್ನು ವಿವರಿಸಿ ಹೇಳು.

೩. ಸೂತಮುನಿ ಹೇಳಿದನು.—ಸೂರ್ಯನು ಬ್ರಾಹ್ಮಣನ ರೂಪದಿಂದ ಕಾರ್ತವೀರ್ಯನ ಬಳಿಗೆ ಬಂದು "ರಾಜಾ, ನನಗೆ ತೃಪ್ತಿಯನ್ನು ಕೊಡುವ ಕಾರ್ಯವೊಂದುಂಟು. ಅದನ್ನು ನೀನು ನೆರವೇರಿಸಬೇಕು. ನಾನು ಸೂರ್ಯನು'' ಎಂದು ಹೇಳಿದನು.

೪. ರಾಜನು ಹೇಳಿದನು.—ಎಲೈ ಪೂಜ್ಯನೇ, ಸೂರ್ಯದೇವಾ, ನಿನಗೇತರಿಂದ ತೃಪ್ತಿಯಾದೀತು ? ಎಂತಹ ಭೋಜನವನ್ನು ಕೊಡಲಿ ? ನಿನ್ನಿಂದ ಕೇಳಿ ಅದನ್ನು ನಡೆಸಿ ಕೊಡುವೆನು.

|| ಆದಿತ್ಯ ಉವಾಚ ||

ಸ್ಥಾವರಂ ದೇಹಿ ಮೇ ಸರ್ವಮಾಹಾರಂ ದದತಾಂ ವರ ।
ತೇನ ತೃಪ್ತೋ ಭವೇಯಂ ವೈ ಸಾ ಮೇ ತೃಪ್ತಿರ್ಹಿ ಪಾರ್ಥಿವ || ೫ ||

|| ಕಾರ್ತವೀರ್ಯ ಉವಾಚ ||

ನ ಶಕ್ಯಾಃ ಸ್ಥಾವರಾಃ ಸರ್ವೇ ತೇಜಸಾ ಚ ಬಲೇನ ಚ ।
ನಿರ್ದಗ್ಧುಂ ತಪತಾಂ ಶ್ರೇಷ್ಠ ತೇನ ತ್ವಾಂ ಪ್ರಣಮಾಮ್ಯಹಂ || ೬ ||

|| ಆದಿತ್ಯ ಉವಾಚ ||

ತುಷ್ಟಸ್ತೇಽಹಂ ಶರಾನ್ ದದ್ಮಿ ಅಕ್ಷಯಾನ್ ಸರ್ವತೋಮುಖಾನ್ ।
ಯೇ ಪ್ರಕ್ಷಿಪ್ತಾ ಜ್ವಲಿಷ್ಯಂತಿ ಮಮ ತೇಜಸ್ಸಮನ್ವಿತಾಃ || ೭ ||
ಆವಿಷ್ಟಾ ಮಮ ತೇಜೋಭಿಃ ಶೋಷಯಿಷ್ಯಂತಿ ಸ್ಥಾವರಾನ್ ।
ಶುಷ್ಕಾನ್ ಭಸ್ಮೀಕರಿಷ್ಯಂತಿ ತೇನ ತೃಪ್ತಿರ್ನರಾಧಿಪ || ೮ ||

---

೫. ಸೂರ್ಯನು ಹೇಳಿದನು.—ದಾನಿಗಳಲ್ಲಿ ಮೊದಲಿಗನಾದ ಓ ರಾಜಾ, ಚಲಿಸದೆ ನೆಲೆಯಾಗಿ ನಿಂತಿರುವ ಗಿಡಮರವೇ ಮುಂತಾದ ಸ್ಥಾವರಗಳೆಲ್ಲವನ್ನೂ ನನಗೆ ಆಹಾರವಾಗಿ ಕೊಡು. ಅದರಿಂದ ನಾನು ತುಷ್ಟನಾಗುವೆನು. ಇದೇ ನನಗೆ ಮಾಡಿಕೊಡಬೇಕಾದ ತೃಪ್ತಿಕರವಾದ ಕಾರ್ಯ.

೬. ಕಾರ್ತವೀರ್ಯನು ಹೇಳಿದನು.—ಪ್ರತಾಪವಂತರಲ್ಲಿ ಶ್ರೇಷ್ಠನಾದ ಎಲೈ ಭಾಸ್ಕರನೇ, ಸ್ಥಾವರಗಳೆಲ್ಲವನ್ನೂ ಸುಡುವಂತಹ ತೇಜಸ್ಸೂ ಬಲವೂ ನನ್ನಲ್ಲಿಲ್ಲ. ಆದುದರಿಂದ, ಇದೋ! ನಿನಗೆ ನಮಸ್ಕರಿಸುವೆನು.

೭-೮. ಸೂರ್ಯನು ಹೇಳಿದನು.—ಭೂಪಾಲಕಾ, ನನಗೆ ಸಂತೋಷವಾಯಿತು. ನಿನಗೆ ಅಕ್ಷಯ ಬಾಣಗಳನ್ನು ಕೊಡುವೆನು. ಅವು ಎಲ್ಲದಿಕ್ಕುಗಳಿಗೂ ಹೋಗಬಲ್ಲವು. ಪ್ರಯೋಗಮಾಡಿದಾಗ ನನ್ನ ತೇಜಸ್ಸಿನಿಂದ ಉರಿಯುವುವು; ಅವುಗಳಲ್ಲಿ ನನ್ನ ಪ್ರತಾಪವು ಅಡಗಿರುವುದು. ಅವು ಗಿಡಮರಗಳನ್ನು ಒಣಗಿಸುವುವು; ಒಣಗಿದುವನ್ನು ಬೂದಿಮಾಡುವುವು. ಆದುದರಿಂದ ನನಗೆ ತೃಪ್ತಿಯಾಗುವುದು.

**॥ ಸೂತ ಉವಾಚ ॥**

**ತತಶ್ಶರಾಂಸ್ತದಾದಿತ್ಯಸ್ತ್ವರ್ಜುನಾಯ ಪ್ರಯಚ್ಛತ ।**
**ತತೋ ದದಾಹ ಸಂಪ್ರಾಪ್ತಾನ್ ಸ್ಥಾವರಾನ್ ಸರ್ವನೇವ ಚ ॥ ೯ ॥**

**ಗ್ರಾಮಾಂಸ್ತಥಾಶ್ರಮಾಂಶ್ಚೈವ ಘೋಷಾಣಿ ನಗರಾಣಿ ಚ ।**
**ತಪೋವನಾನಿ ರಮ್ಯಾಣಿ ವನಾನ್ಯುಪವನಾನಿ ಚ ॥೧೦॥**

**ಏವಂ ಪ್ರಾಚೀಮನ್ವದಹತ್ತತಸ್ಸರ್ವಾಂ ಸದಕ್ಷಿಣಾಂ ।**
**ನಿರ್ವೃಕ್ಷಾ ನಿಸ್ತೃಣಾ ಭೂಮಿರ್ಹತಾ ಘೋರೇಣ ತೇಜಸಾ ॥೧೧॥**

**ಏತಸ್ಮಿನ್ನೇವ ಕಾಲೇ ತು ಆಪವೋ ಜಲಮಾಸ್ಥಿತಃ ।**
**ದಶ ವರ್ಷಸಹಸ್ರಾಣಿ ತತ್ರಾಸ್ತೇ ಸ ಮಹಾನೃಷಿಃ ॥೧೨॥**

**ಪೂರ್ಣೇ ವ್ರತೇ ಮಹಾತೇಜಾ ಉದತಿಷ್ಠಂಸ್ತಪೋಧನಃ ।**
**ಸೋಽಪಶ್ಯದಾಶ್ರಮಂ ದಗ್ಧಮರ್ಜುನೇನ ಮಹಾಮುನಿಃ ॥೧೩॥**

---

೯. ಸೂತಮುನಿ ಹೇಳಿದನು.—ಬಳಿಕ ಮಾರ್ತಾಂಡನು ಅರ್ಜುನನಿಗೆ ಬಾಣಗಳನ್ನು ಕೊಟ್ಟನು. ಅವುಗಳಿಂದ ಅವನು ಸಿಕ್ಕಿದ ಮರ ಗಿಡ ಮುಂತಾದು ವನ್ನೆಲ್ಲ ಸುಡತೊಡಗಿದನು.

೧೦. ಗ್ರಾಮಗಳು, ಆಶ್ರಮಗಳು, ಗೊಲ್ಲರ ಹಳ್ಳಿಗಳು, ನಗರಗಳು, ತಪೋ ವನಗಳು, ಸುಂದರವಾದ ವನಗಳು ಮತ್ತು ಕೈದೋಟಗಳು ಇವೆಲ್ಲ ಸುಟ್ಟು ಹೋದವು.

೧೧. ಹೀಗೆ ಪೂರ್ವ, ದಕ್ಷಿಣ ಮುಂತಾದ ಎಲ್ಲದಿಕ್ಕುಗಳನ್ನೂ ಸುಟ್ಟನು. ಭೂಮಿಯಲ್ಲಿ ಮರಗಳಿಲ್ಲ ; ಹುಲ್ಲಿಲ್ಲ. ಆ ಘೋರವಾದ ತೇಜಸ್ಸಿನಿಂದ ಎಲ್ಲವೂ ಹಾಳಾಯಿತು.

೧೨. ಈ ಸಮಯದಲ್ಲೇ ಆಪವ ಮಹರ್ಷಿಯು ನೀರಿನಲ್ಲಿ ನಿಂತು ಹತ್ತು ಸಾವಿರ ವರ್ಷಗಳ ಕಾಲ ತಪೋನಿಯಮವನ್ನು ಕೈಗೊಂಡಿದ್ದನು.

೧೩. ವ್ರತವು ಪೂರ್ಣವಾಗಲು, ಮಹಾ ತೇಜಸ್ವಿಯಾದ ಆ ಮಹರ್ಷಿಯು ನೀರಿನಿಂದೆದ್ದು ಬಂದು ಅರ್ಜುನನಿಂದ ಆಶ್ರಮವು ಸುಟ್ಟುಹೋಗಿದ್ದುದನ್ನು ಕಂಡನು.

**ಕ್ರೋಧಾಚ್ಛಶಾಪ ರಾಜರ್ಷಿಂ ಕೀರ್ತಿತಂ ವೋ ಯಥಾ ಮಯಾ ।**
**ಕ್ರೋಷ್ಟೋಃ ಶೃಣುತ ರಾಜರ್ಷೇರ್ವಂಶಮುತ್ತಮಪೌರುಷಂ ॥೧೪॥**

**ಯಸ್ಯಾನ್ವವಾಯೇ ಸಂಭೂತೋ ವಿಷ್ಣುರ್ವೃಷ್ಣಿಕುಲೋದ್ವಹಃ ।**
**ಕ್ರೋಷ್ಟೋರೇವಾಭವತ್ಪುತ್ರೋ ವೃಜಿನೀವಾನ್ಮಹಾರಥಃ ॥೧೫॥**

**ವೃಜಿನೀವತಶ್ಚ ಪುತ್ರೋಽಭೂತ್ಸ್ವಾಹೋ ನಾಮ ಮಹಾಬಲಃ ।**
**ಸ್ವಾಹಪುತ್ರೋಽಭವದ್ರಾಜನ್ನುಷಂಗುರ್ವದತಾಂ ವರಃ ॥೧೬॥**

**ಸ ತು ಪ್ರಸೂತಿಮಿಚ್ಛನ್ವೈ ರುಷಂಗುಃ ಸೌಮ್ಯಮಾತ್ಮಜಂ ।**
**ಚಿತ್ರಶ್ಚಿತ್ರರಥಶ್ಚಾಸ್ಯ ಪುತ್ರಃ ಕರ್ಮಭಿರನ್ವಿತಃ ॥೧೭॥**

**ಅಥ ಚೈತ್ರರಥಿರ್ವೀರೋ ಜಜ್ಞೇ ವಿಪುಲದಕ್ಷಿಣಃ ।**
**ಶಶಬಿಂದುರಿತಿ ಖ್ಯಾತಶ್ಚಕ್ರವರ್ತೀ ಬಭೂವ ಹ ॥೧೮॥**

---

೧೪. ಹಿಂದೆ ನಾನು ಹೇಳಿದ ಹಾಗೆ ರಾಜರ್ಷಿಯಾದ ಕಾರ್ತವೀರ್ಯನನ್ನು ಕೋಪದಿಂದ ಅವನು ಶಪಿಸಿದನು.

೧೫. ಇನ್ನು ಕ್ರೋಷ್ಟುವೆಂಬ ರಾಜರ್ಷಿಯ ಪೌರುಷಯುಕ್ತವಾದ ವಂಶವನ್ನು ವಿವರಿಸುವೆನು. ಕೇಳಿರಿ. ಯಾವವವಂಶಕ್ಕೆ ಕೀರ್ತಿತಂದ ಕೃಷ್ಣರೂಪಿಯಾದ ವಿಷ್ಣುವು ಇದೇ ಸಂತತಿಯಲ್ಲಿ ಜನಿಸಿದನು. ಮಹಾರಥನಾದ ವೃಜನೀವಂತನು ಕ್ರೋಷ್ಟುಪುತ್ರನು.

೧೬. ವೃಜನೀವಂತನಿಗೆ ಮಹಾಬಲನಾದ ಸ್ವಾಹನುದಿಸಿದನು. ಅವನಿಗೆ ವಾಗ್ಮಿಗಳಲ್ಲುತ್ತಮನಾದ ರುಷಂಗುವು ಮಗನಾದನು.

೧೭. ವಂಶವರ್ಧಕನೂ ಸೌಮ್ಯಗುಣಯುಕ್ತನೂ ಆದ ಮಗನು ಹುಟ್ಟಬೇಕೆಂದು ಆ ರುಷಂಗು ಅಪೇಕ್ಷಿಸಿದನು. ಚಿತ್ರ, ಚಿತ್ರರಥರೆಂಬ ಇಬ್ಬರು ಪುತ್ರರು ಅವನಿಗೆ ಜನಿಸಿದರು. ಅವರು ಹೆಸರಿಗೆ ತಕ್ಕಂತಹ ಗುಣದಿಂದ ಕೂಡಿದ್ದರು.

೧೮. ಚಿತ್ರರಥನಿಗೆ ವೀರನೂ, ಅತ್ಯುದಾರಿಯೂ ಆದ ಶಶಬಿಂದು ಚಕ್ರವರ್ತಿಯು ಮಗನಾದನು.

ಅತ್ರಾನುವಂಶಶ್ಲೋಕೋಽಯಂ ಗೀತಸ್ತಸ್ಮಿನ್ ಪುರಾಽಭವತ್ ।
ಶಶಬಿಂದೋಸ್ತು ಪುತ್ರಾಣಾಂ ಶತಾನಾಮಭವಚ್ಛತಂ ॥೧೯॥

ಧೀಮತಾಂ ಚಾಭಿರೂಪಾಣಾಂ ಭೂರಿದ್ರವಿಣತೇಜಸಾಂ ।
ತೇಷಾಂ ಶತಪ್ರಧಾನಾನಾಂ ಪೃಥುಸಾಹ್ವಾ ಮಹಾಬಲಾಃ ॥೨೦॥

ಪೃಥುಶ್ರವಾಃ ಪೃಥುಯಶಾಃ ಪೃಥುಧರ್ಮಾ ಪೃಥುಂಜಯಃ ।
ಪೃಥುಕೀರ್ತಿಃ ಪೃಥುಮನಾ ರಾಜಾನಃ ಶಶಬಿಂದವಃ ॥೨೧॥

ಶಂಸಂತಿ ಚ ಪುರಾಣಜ್ಞಾಃ ಪೃಥುಶ್ರವಸಮುತ್ತಮಂ ।
ಅಂತರಸ್ಯ ಸುಯಜ್ಞಸ್ಯ ಸುಯಜ್ಞಸ್ತನಯೋಽಭವತ್ ॥೨೨॥

ಉಶನಾ ತು ಸುಯಜ್ಞಸ್ಯ ಯೋ ರಕ್ಷನ್ ಪೃಥಿವೀಮಿಮಾಂ ।
ಆಜಹಾರಾಶ್ವಮೇಧಾನಾಂ ಶತಮುತ್ತಮಧಾರ್ಮಿಕಃ ॥೨೩॥

ತಿತಿಕ್ಷುರಭವತ್ಪುತ್ರ ಔಶನಃ ಶತ್ರುತಾಪನಃ ।
ಮರುತ್ತಸ್ತಸ್ಯ ತನಯೋ ರಾಜರ್ಷೀಣಾಮನುತ್ತಮಃ ॥೨೪॥

---

೧೯. ಅವನ ವಂಶಪರಂಪರೆಯನ್ನು ವಿವರಿಸುವ ಈ ಶ್ಲೋಕವನ್ನು ಪೂರ್ವ ಕಾಲದಲ್ಲಿ ಹಾಡಿದರು. ಶಶಬಿಂದುವಿಗೆ ಹತ್ತುಸಾವಿರ ಜನ ಮಕ್ಕಳಿದ್ದರು.

೨೦. ಅವರೆಲ್ಲರೂ ಬುದ್ಧಿವಂತರು; ಸುಂದರರು; ಅಪಾರವಾದ ಐಶ್ವರ್ಯದಿಂದಲೂ, ತೇಜಸ್ಸಿನಿಂದಲೂ ಕೂಡಿದವರು. ಅವರಲ್ಲಿ ನೂರ್ವರು ಮುಖ್ಯರು. ಅವರಲ್ಲೂ ಪೃಥುವೆಂಬ ಹೆಸರಿನವರು ಮಹಾಬಲರು.

೨೧. ಪೃಥುಶ್ರವ, ಪೃಥುಯಶ, ಪೃಥುಧರ್ಮ, ಪೃಥುಂಜಯ, ಪೃಥುಕೀರ್ತಿ, ಪೃಥುಮನ ಈ ರಾಜರು ಶಶಬಿಂದುವಿನ ಮಕ್ಕಳು.

೨೨. ಇತಿಹಾಸವನ್ನು ತಿಳಿದವರು ಪೃಥುಶ್ರವಸನು ಇವರಲ್ಲಿ ಶ್ರೇಷ್ಠನೆನ್ನುವರು. ಶಶಬಿಂದುವಿನ ಮಕ್ಕಳಲ್ಲಿ ಮಧ್ಯದವನಾದ ಸುಯಜ್ಞನ ಮಗನಿಗೂ ಸುಯಜ್ಞನೆಂದೇ ಹೆಸರು.

೨೩. ಈ ಸುಯಜ್ಞನ ಮಗನು ಉಶನಸನು. ಇವನು ಬಹಳ ಧರ್ಮದಿಂದ ಭೂಮಿಯನ್ನು ಆಳುತ್ತ ಒಂದು ನೂರು ಅಶ್ವಮೇಧಯಾಗಗಳನ್ನು ಮಾಡಿದನು.

೨೪. ಶತ್ರು ಸಂತಾಪಕನಾದ ತಿತಿಕ್ಷುವು ಉಶನನಿಗೆ ಪುತ್ರನಾದನು. ಅವನ ಮಗನು ರಾಜರ್ಷಿಶ್ರೇಷ್ಠನಾದ ಮರುತ್ತನು.

ಆಸೀನ್ಮರುತ್ತತನಯೋ ವೀರಃ ಕಂಬಲಬರ್ಹಿಷಃ ।
ಪುತ್ರಸ್ತು ರುಕ್ಮಕವಚೋ ವಿದ್ವಾನ್ ಕಂಬಲಬರ್ಹಿಷಃ ॥೨೫॥

ನಿಹತ್ಯ ರುಕ್ಮಕವಚಃ ಪರಾನ್ ಕವಚಧಾರಿಣಃ ।
ಧನ್ವಿನೋ ವಿವಿಧೈರ್ಬಾಣೈರವಾಪ್ಯ ಪೃಥಿವೀಮಿಮಾಂ ॥೨೬॥

ಅಶ್ವಮೇಧೇ ದದೌ ರಾಜಾ ಬ್ರಾಹ್ಮಣೇಭ್ಯಸ್ತು ದಕ್ಷಿಣಾಂ ।
ಯಜ್ಞೇ ತು ರುಕ್ಮಕವಚಃ ಕದಾಚಿತ್ಪರವೀರಹಾ ॥೨೭॥

ಜಜ್ಞಿರೇ ಪಂಚ ಪುತ್ರಾಸ್ತು ಮಹಾವೀರ್ಯಾ ಧನುರ್ಭೃತಃ ।
ರುಕ್ಮೇಷುಃ ಪೃಥುರುಕ್ಮಶ್ಚ ಜ್ಯಾಮಘಃ ಪರಿಘೋ ಹರಿಃ ॥೨೮॥

ಪರಿಘಂ ಚ ಹರಿಂ ಚೈವ ವಿದೇಹೇಽಸ್ಥಾಪಯತ್ಪಿತಾ ।
ರುಕ್ಮೇಷುರಭವದ್ರಾಜಾ ಪೃಥುರುಕ್ಮಸ್ತದಾಶ್ರಯಃ ॥೨೯॥

---

೨೫. ವೀರನಾದ ಕಂಬಲಬರ್ಹಿಷನು ಮರುತ್ತನ ಪುತ್ರನು. ಇವನ ಮಗನೇ ಮೇಧಾವಿಯಾದ ರುಕ್ಮಕವಚನೆಂಬುವನು.

೨೬-೨೭. ವೀರನಾದ ರುಕ್ಮಕವಚನು ಧನುರ್ಧಾರಿಗಳಾದ ಶತ್ರುಗಳನ್ನು ವಿಧವಿಧವಾದ ಬಾಣಗಳಿಂದ ಸಂಹರಿಸಿ ಭೂಮಂಡಲವನ್ನು ಗೆದ್ದನು. ಒಂದಾನೊಂದು ಸಾರಿ ಅಶ್ವಮೇಧ ಯಾಗವನ್ನು ಮಾಡಿ ಬ್ರಾಹ್ಮಣರಿಗೆ ಅದನ್ನು ದಕ್ಷಿಣಾ ರೂಪವಾಗಿ ಕೊಟ್ಟನು.

೨೮. ರುಕ್ಮೇಷು, ಪೃಥುರುಕ್ಮ, ಜ್ಯಾಮಘ, ಪರಿಘ ಮತ್ತು ಹರಿ ಎಂಬ ಐವರು ಮಕ್ಕಳು ರುಕ್ಮಕವಚನಿಗೆ ಹುಟ್ಟಿದರು. ಅವರು ಮಹಾವೀರರು; ಧನುರ್ವಿದ್ಯಾನಿಪುಣರು.

೨೯. ಪರಿಘನನ್ನೂ ಹರಿಯನ್ನೂ ಅವರ ತಂದೆಯು ವಿದೇಹರಾಜ್ಯದಲ್ಲಿ ನೆಲೆಗೊಳಿಸಿದನು. ಬಳಿಕ ರುಕ್ಮೇಷು ದೊರೆಯಾದನು. ಪೃಥುರುಕ್ಮನು ಅವನಿಗೆ ಆಶ್ರಿತನಾಗಿ ನಿಂತನು.

ತೇಭ್ಯಃ ಪ್ರವ್ರಾಜಿತೋ ರಾಜ್ಯಾಜ್ಜ್ಯಾಮಘಸ್ತು ತದಾಶ್ರಮೇ ।
ಪ್ರಶಾಂತಶ್ಚಾಶ್ರಮಸ್ಥಶ್ಚ ಬ್ರಾಹ್ಮಣೇನಾವಬೋಧಿತಃ ॥೩೦॥

ಜಗಾಮ ಧನುರಾದಾಯ ದೇಶಮನ್ಯಂ ಧ್ವಜೀ ರಥೀ ।
ನರ್ಮದಾಂ ನೃಪ ಏಕಾಕೀ ಕೇವಲಂ ವೃತ್ತಿಕಾಮತಃ ॥೩೧॥

ಋಕ್ಷವಂತಂ ಗಿರಿಂ ಗತ್ವಾ ಭುಕ್ತಮನ್ಯೈರುಪಾವಿಶತ್ ।
ಜ್ಯಾಮಘಸ್ಯಾಭವದ್ಭಾರ್ಯಾ ಚೈತ್ರಾ ಪರಿಣತಾ ಸತೀ ॥೩೨॥

ಅಪುತ್ರೋ ನ್ಯವಸದ್ರಾಜಾ ಭಾರ್ಯಾಮನ್ಯಾಂ ನ ವಿಂದತ ।
ತಸ್ಯಾಸೀದ್ವಿಜಯೋ ಯುದ್ಧೇ ತತ್ರ ಕನ್ಯಾಮವಾಪ್ಯ ಸಃ ॥೩೩॥

ಭಾರ್ಯಾಮುವಾಚ ಸಂತ್ರಾಸಾತ್ಸ್ನುಷೇಯಂ ತೇ ಶುಚಿಸ್ಮಿತೇ ।
ಏವಮುಕ್ತಾಬ್ರವೀದೇನಂ ಕಸ್ಯ ಚೇಯಂ ಸ್ನುಷೇತಿ ಚ ॥೩೪॥

---

೩೦. ಜ್ಯಾಮಘನನ್ನು ಅವರು ರಾಜ್ಯದಿಂದ ಹೊರಡಿಸಲು, ಆ ರಾಜಪುತ್ರನು ಒಂದಾನೊಂದು ಆಶ್ರಮಕ್ಕೆ ಹೋಗಿ ಅಲ್ಲಿ ಒಬ್ಬ ಬ್ರಾಹ್ಮಣನ ಉಪದೇಶದಿಂದ ಪ್ರಶಾಂತಚಿತ್ತನಾಗಿ ನೆಲೆಸಿದನು.

೩೧. ಬಳಿಕ ಬಿಲ್ಲನ್ನು ಹಿಡಿದು, ರಥಾರೂಢನಾಗಿ ಜ್ಯಾಮಘನು ಜೀವನಸಂಪಾದನೆಗೋಸ್ಕರ ಬೇರೆ ದೇಶಕ್ಕೆ ಹೋದನು. ಅಲ್ಲಿ ಅವನು ಒಬ್ಬನೇ ನರ್ಮದಾ ನದಿಗೆ ಹೋಗುವನು. ಅದರ ತೀರದಲ್ಲಿದ್ದ ಋಕ್ಷವಂತವೆಂಬ ಪರ್ವತದಲ್ಲಿ ಇತರರು ಕುಳಿತಿರಲು ತಾನೂ ಕುಳಿತುಕೊಳ್ಳುವನು.

೩೨. ಜ್ಯಾಮಘನಿಗೆ ವಿದ್ಯಾವತಿಯೂ ಸಾಧ್ವಿಯೂ ಆದ ಚೈತ್ರೆಯೆಂಬುವಳು ಪತ್ನಿಯಾಗಿದ್ದಳು.

೩೩-೩೪. ಮಕ್ಕಳಿಲ್ಲದೆಯೆ ಆ ರಾಜನು ಕಾಲಕಳೆಯುತ್ತಿದ್ದನು. ಆದರೂ ಬೇರೆ ಯಾವಳನ್ನೂ ಮದುವೆಯಾಗಲಿಲ್ಲ. ಆತನು ಒಮ್ಮೆ ಯುದ್ಧದಲ್ಲಿ ಗೆದ್ದು ಬಂದನು. ಅಲ್ಲಿ ಅವನಿಗೆ ಕನ್ಯೆಯೊಬ್ಬಳು ದೊರಕಿದಳು. ಅವಳನ್ನು ತಂದು ಸಡಗರದಿಂದ "ಎಲೌ, ಚಾರುಹಾಸಿನಿ, ಇವಳು ನಿನ್ನ ಸೊಸೆ" ಎಂದು ಪತ್ನಿಗೆ ಹೇಳಿದನು. "ಯಾರ ಸೊಸೆ"? ಎಂದು ಅವಳು ಇವನನ್ನು ಕೇಳಿದಳು.

|| ರಾಜೋವಾಚ ||

ಯಸ್ತೇ ಜನಿಷ್ಯತೇ ಪುತ್ರಸ್ತಸ್ಯ ಭಾರ್ಯಾ ಭವಿಷ್ಯತಿ ।
ತಸ್ಮಾತ್ಸಾ ತಪಸೋಗ್ರೇಣ ಕನ್ಯಾಯಾಸ್ಸಂಪ್ರಸೂಯತ
ಪುತ್ರಂ ವಿದರ್ಭಂ ಸುಭಗಾ ಚೈತ್ರಾ ಪರಿಣತಾ ಸತೀ । ||೩೫||

ರಾಜಪುತ್ರ್ಯಾಂ ಚ ವಿದ್ವಾನ್ಸ ಸ್ನುಷಾಯಾಂ ಕ್ರಥಕೈಶಿಕೌ ।
ಲೋಮಪಾದಂ ತೃತೀಯಂ ತು ಪುತ್ರಂ ಪರಮಧಾರ್ಮಿಕಂ ||೩೬||

ತಸ್ಯಾಂ ವಿದರ್ಭೋಽಜನಯಚ್ಛೂರಾನ್ ರಣವಿಶಾರದಾನ್ ।
ಲೋಮಪಾದಾನ್ಮನುಃ ಪುತ್ರೋ ಜ್ಞಾತಿಸ್ತಸ್ಯ ತು ಚಾತ್ಮಜಃ ||೩೭||

ಕೈಶಿಕಸ್ಯ ಚಿದಿಃ ಪುತ್ರೋ ತಸ್ಮಾಚ್ಚೈದ್ಯಾ ನೃಪಾಃ ಸ್ಮೃತಾಃ ।
ಕ್ರಥೋ ವಿದರ್ಭಪುತ್ರಸ್ತು ಕುಂತಿಸ್ತಸ್ಯಾತ್ಮಜೋಽಭವತ್ ||೩೮||

ಕುಂತೇರ್ಧೃಷ್ಟಃ ಸುತೋ ಜಜ್ಞೇ ರಣಧೃಷ್ಟಃ ಪ್ರತಾಪವಾನ್ ।
ಧೃಷ್ಟಸ್ಯ ಪುತ್ರೋ ಧರ್ಮಾತ್ಮಾ ನಿರ್ವೃತಿಃ ಪರವೀರಹಾ ||೩೯||

---

೩೫. ರಾಜನು ಹೇಳಿದನು.—"ನಿನಗೆ ಮುಂದೆ ಹುಟ್ಟುವನಲ್ಲಾ! ಆ ಮಗನ ಹೆಂಡತಿಯಾಗುವಳು.'' ಸುಂದರಿಯೂ, ವಿದ್ಯಾವತಿಯೂ, ಸಾಧ್ವೀ ಮಣಿಯೂ ಆದ ಚೈತ್ರೆಯು ಘೋರವಾದ ತಪಸ್ಸನ್ನು ಮಾಡಿ, ಆ ಕನ್ಯೆಯನ್ನು ಮದುವೆಯಾಗುವುದಕ್ಕಾಗಿ ವಿದರ್ಭನೆಂಬ ಪುತ್ರನನ್ನು ಪಡೆದಳು.

೩೬-೩೭. ಪ್ರಾಜ್ಞನಾದ ವಿದರ್ಭನಿಗೆ "ಸ್ನುಷೆ" ಎಂಬ ಆ ರಾಜಪುತ್ರಿಯಲ್ಲಿ ಕ್ರಥ, ಕೈಶಿಕ, ಮತ್ತು ಪರಮಧಾರ್ಮಿಕನಾದ ಲೋಮಪಾದ ಎಂಬ ಮೂವರು ಪುತ್ರರು ಉದಿಸಿದರು. ಅವರೆಲ್ಲ ಶೂರರೂ ರಣಪಂಡಿತರೂ ಆಗಿದ್ದರು. ಲೋಮಪಾದನಿಗೆ ಮನುವೆಂಬ ಮಗನಾದನು. ಅವನ ಪುತ್ರನು ಜ್ಞಾತಿ.

೩೮. ಕೈಶಿಕನ ಸುತನು ಚಿದಿ. ಅವನಿಂದಲೇ ಆ ವಂಶದ ರಾಜರಿಗೆ ಚೈದ್ಯರೆಂದು ಹೆಸರಾಯಿತು. ಕ್ರಥನು ವಿದರ್ಭನ ಮತ್ತೊಬ್ಬ ಮಗನಷ್ಟೆ! ಅವನಿಗೆ ಕುಂತಿಯು ಮಗನಾದನು.

೩೯. ಯುದ್ಧದಲ್ಲಿ ಧೈರ್ಯಶಾಲಿಯೂ ಪ್ರತಾಪವಂತನೂ ಆದ ಧೃಷ್ಟನೆಂಬುವನು ಕುಂತಿಗೆ ಮಗನಾಗಿ ಜನಿಸಿದನು. ಅವನ ಮಗನು ಧರ್ಮಾತ್ಮನೂ ಶತ್ರುವೀರ ಸಂಹಾರಕನೂ ಆದ ನಿರ್ವೃತಿ.

**ತದೇಕೋ ನಿರ್ವೃತೇಃ ಪುತ್ರೋ ನಾಮ್ನಾ ಸ ತು ವಿದೂರಥಃ ।**
**ದಶಾರ್ಹಸ್ತಸ್ಯ ವೈ ಪುತ್ರೋ ವ್ಯೋಮಸ್ತಸ್ಯ ಚ ವೈ ಸ್ಮೃತಃ**
**ದಶಾರ್ಹಾಚ್ಚೈವ ವ್ಯೋಮಾತ್ತು ಪುತ್ರೋ ಜೀಮೂತ ಉಚ್ಯತೇ ॥೪೦॥**

**ಜೀಮೂತಪುತ್ರೋ ವಿಮಲಸ್ತಸ್ಯ ಭೀಮರಥಃ ಸುತಃ ।**
**ಸುತೋ ಭೀಮರಥಸ್ಯಾಸೀತ್ಸ್ಮೃತೋ ನವರಥಃ ಕಿಲ ॥೪೧॥**

**ತಸ್ಯ ಚಾಸೀದ್ದೃಢರಥಃ ಶಕುನಿಸ್ತಸ್ಯ ಚಾತ್ಮಜಃ ।**
**ತಸ್ಮಾತ್ಕರಂಭಃ ಕಾರಂಭಿರ್ದೇವರಾತೋ ಬಭೂವ ಹ ॥೪೨॥**

**ದೇವಕ್ಷತ್ರೋಽಭವದ್ರಾಜಾ ದೈವರಾತಿರ್ಮಹಾಯಶಾಃ ।**
**ದೇವಗರ್ಭಸಮೋ ಜಜ್ಞೇ ದೇವಕ್ಷತ್ರಸ್ಯ ನಂದನಃ ॥೪೩॥**

**ಮಧುರ್ನಾಮ ಮಹಾತೇಜಾ ಮಧೋಃ ಪುರವಸಸ್ತಥಾ ।**
**ಆಸೀತ್ಪುರವಸಃ ಪುತ್ರಃ ಪುರುದ್ವಾನ್ ಪುರುಷೋತ್ತಮಃ ॥೪೪॥**

---

೪೦. ನಿರ್ವೃತಿಗೆ ಒಬ್ಬನೇ ಮಗ. ಅವನ ಹೆಸರು ವಿದೂರಥ. ಅವನಿಗೆ ದಶಾರ್ಹನೆಂಬ ಮಗನು ಹುಟ್ಟಿದನು. ಅವನಿಗೂ ಸಹ ವ್ಯೋಮನೆಂಬ ಪುತ್ರನು ಜನಿಸಿದನು. ದಶಾರ್ಹನ ಮಗನಾದ ಈ ವ್ಯೋಮನ ಸುತನಿಗೆ ಜೀಮೂತನೆಂದು ಹೆಸರು.

೪೧. ಜೀಮೂತನ ಮಗ ವಿಮಲ. ಅವನ ಪುತ್ರ ಭೀಮರಥ. ಇವನಿಗೆ ನವರಥನೆಂಬ ಮಗನು ಹುಟ್ಟಿದನು.

೪೨. ಅವನಿಗೆ ಧೃಢರಥನೂ, ಧೃಢರಥನಿಗೆ ಶಕುನಿಯೂ ಜನಿಸಿದರು. ಅವನು ಕರಂಭನೆಂಬ ಪುತ್ರನನ್ನು ಪಡೆದನು. ದೇವರಾತನು ಕರಂಭನ ಪುತ್ರನು.

೪೩-೪೪. ವಿಶೇಷವಾದ ಕೀರ್ತಿಯನ್ನು ಗಳಿಸಿದ ದೇವಕ್ಷತ್ರನೆಂಬ ರಾಜನು ದೇವರಾತನ ಮಗನೆನಿಸಿದನು. ದೇವಕುಮಾರನಂತೆ ಮಹಾ ತೇಜಸ್ವಿಯಾದ ಮಧುವು ಇವನಿಗೆ ಮಗನಾದನು. ಮಧುವಿನಿಂದ ಪುರವಸನೂ, ಅವನಿಂದ ಪುರುಷ ಶ್ರೇಷ್ಠನಾದ ಪುರುದ್ವಂತನೂ ಜನಿಸಿದರು.

ಜಂತುರ್ಜಜ್ಞೇಽಥ ವೈದರ್ಭ್ಯಾಂ ಭದ್ರಸೇನ್ಯಾಂ ಪುರುದ್ವತಃ ।
ಐಕ್ಷ್ವಾಕೀ ಚಾಭವದ್ಭಾರ್ಯಾ ಜಂತೋಸ್ತಸ್ಯಾಮಜಾಯತ ॥೪೫॥

ಸಾತ್ವತಃ ಸತ್ವಸಂಯುಕ್ತಃ ಸಾತ್ವತಾಂ ಕೀರ್ತಿವರ್ಧನಃ ।
ಇಮಾಂ ವಿಸೃಷ್ಟಿಂ ವಿಜ್ಞಾಯ ಜ್ಯಾಮಘಸ್ಯ ಮಹಾತ್ಮನಃ ।
ಪ್ರಜಾವಾನೇತಿ ಸಾಯುಜ್ಯಂ ರಾಜ್ಞಃ ಸೋಮಸ್ಯ ಧೀಮತಃ ॥೪೬॥

ಸಾತ್ವತಾನ್ ಸತ್ವಸಂಪನ್ನಾನ್ ಕೌಶಲ್ಯಾ ಸುಷುವೇ ಸುತಾನ್ ।
ಭಜಿನಂ ಭಜಮಾನಂ ತು ದಿವ್ಯಂ ದೇವಾವೃಧಂ ನೃಪ ॥೪೭॥

ಅಂಧಕಂ ಚ ಮಹಾಭೋಜಂ ವೃಷ್ಣಿಂ ಚ ಯದುನಂದನಂ ।
ತೇಷಾಂ ತು ಸರ್ಗಾಶ್ಚತ್ವಾರೋ ವಿಸ್ತರೇಣೈವ ತಚ್ಛೃಣು ॥೪೮॥

ಭಜಮಾನಸ್ಯ ಸೃಂಜಯ್ಯಾಂ ವಾಹ್ಯಕಾಯಾಂ ಚ ವಾಹ್ಯಕಾಃ ।
ಸೃಂಜಯಸ್ಯ ಸುತೇ ದ್ವೇ ತು ವಾಹ್ಯಕಾಸ್ತು ತದಾಽಭವನ್ ॥೪೯॥

---

೪೫. ವಿದರ್ಭರಾಜನ ಮಗಳಾದ ಭದ್ರಸೇನಿಯೆಂಬುವಳು ಪುರುದ್ವಂತನ ಪತ್ನಿ. ಅವಳಲ್ಲಿ ಜಂತುವು ಹುಟ್ಟಿದನು. ಇವನು ಇಕ್ಷ್ವಾಕುವಿನ ಮಗಳನ್ನು ಮದುವೆಯಾದನು. ಸತ್ವಗುಣಭರಿತನಾಗಿ, ಸಾತ್ವತ ವಂಶಕ್ಕೆ ಕೀರ್ತಿಯನ್ನು ತಂದ ಸಾತ್ವತನೆಂಬವನು ಇವಳ ಜಠರದಲ್ಲಿ ಜನಿಸಿದನು.

೪೬. ಮಹಾತ್ಮನಾದ ಜ್ಯಾಮಘನ ಈ ವಂಶಪರಂಪರೆಯನ್ನು ತಿಳಿದವನು ಪುತ್ರವಂತನಾಗುವನು ; ಮತ್ತು ಜ್ಞಾನಾಶ್ರಯನೂ, ರಾಜನೂ ಆದ ಸೋಮನ ಸಾಯುಜ್ಯವನ್ನು ಪಡೆಯುವನು.

೪೭-೪೮. ಕೌಶಲ್ಯೆಯು ಸತ್ವಗುಣಭೂಯಿಷ್ಠರಾದ ಸಾತ್ವತರನ್ನು ಪಡೆದಳು. ಭಜಿ, ಭಜಮಾನ, ದಿವ್ಯ, ದೇವಾವೃಧ, ಅಂಧಕ, ಮಹಾಭೋಜ ಮತ್ತು ಯದುವಂಶೀಯರಿಗೆ ಆನಂದಕರನಾದ ವೃಷ್ಣಿ ಇವರೇ ಆ ಮಕ್ಕಳು. ಇವರ ಮನೆತನಗಳು ನಾಲ್ಕು. ಅವುಗಳನ್ನು ವಿಸ್ತಾರವಾಗಿ ಹೇಳುವೆನು ಕೇಳು.

೪೯. ಸೃಂಜಯನಿಗೆ ಹೆಣ್ಣುಮಕ್ಕಳಿಬ್ಬರು. ಅವರಲ್ಲಿ ವಾಹ್ಯಕೆಯೆಂಬುವಳು ಭಜಮಾನನ ಪತ್ನಿ. ಅವಳು ಹೆತ್ತ ಮಕ್ಕಳು ವಾಹ್ಯಕರೆಂಬ ಹೆಸರನ್ನು ಪಡೆದರು.

**ತಸ್ಯ ಭಾರ್ಯೇ ಭಗಿನ್ಯೌ ದ್ವೇ ಸುಷುವಾತೇ ಬಹೂನ್ ಸುತಾನ್ ।**
**ನಿಮಿಂ ಚ ಕೃಮಿಲಂ ಚೈವ ವೃಷ್ಣಿಂ ಪರಪುರಂಜಯಂ ।**
**ತೇ ವಾಹ್ಯಕಾಯಾಂ ಸೃಂಜಯ್ಯಾಂ ಭಜಮಾನಾದ್ವಿಜಜ್ಞಿರೇ ॥೫೦॥**

**ಯಜ್ಞೇ ದೇವಾವೃಧೋ ರಾಜಾ ಬಂಧೂನಾಂ ಮಿತ್ರವರ್ಧನಃ ।**
**ಅಪುತ್ರಸ್ತ್ವಭವದ್ರಾಜಾ ಚಚಾರ ಪರಮಂ ತಪಃ ।**
**ಪುತ್ರಃ ಸರ್ವಗುಣೋಪೇತಃ ಮಮ ಭೂಯಾದಿತಿ ಸ್ಪೃಹನ್ ॥೫೧॥**

**ಸಂಯೋಜ್ಯ ಮಂತ್ರಮೇವಾಥ ಪರ್ಣಾಶಾಜಲಮಸ್ಪೃಶತ್ ।**
**ತದೋಪಸ್ಪರ್ಶನಾತ್ತಸ್ಯ ಚಕಾರ ಪ್ರಿಯಮಾಪಗಾ ॥೫೨॥**

**ಕಲ್ಯಾಣತ್ವಾನ್ನರಪತೇಸ್ತಸ್ಮೈ ಸಾ ನಿಮ್ನಗೋತ್ತಮಾ ।**
**ಚಿಂತಯಾಥ ಪರೀತಾತ್ಮಾ ಜಗಾಮಾಥ ವಿನಿಶ್ಚಯಂ ॥೫೩॥**

---

೫೦. ಆ ಭಜಮಾನನಿಗೆ ಸೃಂಜಯನ ಹೆಣ್ಣುಮಕ್ಕಳಿಬ್ಬರೂ ಪತ್ನಿಯರಾಗಿದ್ದರು. ಅವರು ಹಲವರು ಮಕ್ಕಳನ್ನು ಪಡೆದರು. ನಿಮಿ, ಕೃಮಿಲ, ಶತ್ರುನಗರಗಳನ್ನು ಗೆದ್ದ ವೃಷ್ಣಿ ಇವರು ಸೃಂಜಯನ ಮಗಳಾದ ವಾಹ್ಯಕೆಯಲ್ಲಿ ಭಜಮಾನನಿಂದ ಜನಿಸಿದವರು.

೫೧. ದೇವಾವೃಧನೆಂಬ ರಾಜನು ಬಂಧುಗಳಿಗೂ ಮಿತ್ರರಿಗೂ ಹಿತೈಷಿಯಾಗಿದ್ದನು. ಅವನಿಗೆ ಮಕ್ಕಳಿರಲಿಲ್ಲ. ಅವನು ತೀವ್ರವಾದ ತಪಸ್ಸನ್ನು ಮಾಡಿದನು. ಮತ್ತು "ಸರ್ವಗುಣಸಂಪನ್ನನಾದ ಮಗನು ನನಗೆ ಹುಟ್ಟಲಿ" ಎಂದು ಬಯಸಿ ಯಜ್ಞವನ್ನು ಸಹ ಮಾಡಿದನು.

೫೨. ವ್ರತನಿಷ್ಠನಾದ ಆ ರಾಜನು ಒಮ್ಮೆ ಪರ್ಣಾಶಾ ನದಿಯಲ್ಲಿ ಮಿಂದು ಮಂತ್ರಪೂರ್ವಕವಾಗಿ ಆಚಮನವನ್ನು ಮಾಡಿದನು. ಆ ಮಹಾನದಿಯು ಮಂಗಳಕರವಾದ ಸ್ವಭಾವದವಳಾದ ಕಾರಣ ಅವನ ಇಷ್ಟಾರ್ಥವನ್ನು ಈಡೇರಿಸಲಿಚ್ಛಿಸಿ ಸ್ತ್ರೀರೂಪದಿಂದ ಬಂದಳು.

೫೩-೫೪. ನದಿಯು ಸ್ತ್ರೀರೂಪವನ್ನು ಧರಿಸಿ ಬಳಿಗೆ ಬರಲು, ರಾಜನು ಬಹಳ ಚಿಂತಿಸಿ, ಇಂತೆಂದು ನಿಶ್ಚಯಿಸಿದನು. "ನಾನು ಈ ಸ್ತ್ರೀಯೊಡನೆ ಕೂಡುವುದಿಲ್ಲ;

**ನಾಧಿಗಚ್ಛಾಮ್ಯಹಂ ನಾರೀಂ ಯಸ್ಯಾಮೇವಂವಿಧಃ ಸುತಃ ।**
**ಜಾಯೇತ ತಸ್ಮಾದದ್ಯಾಹಂ ಭವಾಮ್ಯಥ ಸಹಸ್ರಶಃ ॥೩೪॥**

**ಅಥ ಭೂತ್ವಾ ಕುಮಾರೀ ಸಾ ಬಿಭ್ರತೀ ಪರಮಂ ವಪುಃ ।**
**ಜ್ಞಾಪಯಾಮಾಸ ರಾಜಾನಂ ತಾಮಿಯೇಷ ಮಹಾವ್ರತಃ ॥೩೫॥**

**ಅಥ ಸಾ ನವಮೇ ಮಾಸಿ ಸುಷುವೇ ಸರಿತಾಂ ವರಾ ।**
**ಪುತ್ರಂ ಸರ್ವಗುಣೋಪೇತಂ ಬಭ್ರುಂ ದೇವಾವೃಧಾನ್ನೃಪಾತ್ ॥೩೬॥**

**ಅನುವಂಶೇ ಪುರಾಣಜ್ಞಾ ಗಾಯಂತೀತಿ ಪರಿಶ್ರುತಂ ।**
**ಗುಣಾನ್ ದೇವಾವೃಧಸ್ಯಾಪಿ ಕೀರ್ತಯಂತೋ ಮಹಾತ್ಮನಃ ॥೩೭॥**

**ಯಥೈವ ಶೃಣುಮೋ ದೂರಾದಪಶ್ಯಾಮಸ್ತಥಾಂತಿಕಾತ್ ।**
**ಬಭ್ರುಃ ಶ್ರೇಷ್ಠೋ ಮನುಷ್ಯಾಣಾಂ ದೇವೈರ್ದೇವಾವೃಧಸ್ಸಮಃ ॥೩೮॥**

---

ಏಕೆಂದರೆ ಇವಳಲ್ಲಿ ಈ ನದೀ ರೂಪದ ಮಗನೇ ಹುಟ್ಟಬಹುದು. ಅದರಿಂದ ನಾನು ಸಾವಿರಾರು ಭಾಗವಾದಂತೆ ಆಗುವೆನು.''

೩೫. ಬಳಿಕ ಅವಳು ಅತಿ ಸುಂದರವಾದ ರೂಪವನ್ನು ತಾಳಿ, ಯುವತಿಯಾಗಿ ಬಂದು ರಾಜನಿಗೆ ತನ್ನ ಉದ್ದೇಶವನ್ನು ತಿಳಿಸಿದಳು. ನಿಯಮವಂತನಾದ ಅವನು ಅವಳನ್ನು ಕಾಮಿಸಿದನು.

೩೬. ನದೀಶ್ರೇಷ್ಠಳಾದ ಆಕೆಯು ದೇವಾವೃಧರಾಜನಿಂದ ಗರ್ಭಧರಿಸಿ, ಒಂಬತ್ತನೆಯ ತಿಂಗಳಲ್ಲಿ ಸರ್ವಗುಣಭರಿತನಾದ ಬಭ್ರುವೆಂಬ ಪುತ್ರನನ್ನು ಪಡೆದಳು.

೩೭. ಇತಿಹಾಸವನ್ನು ಬಲ್ಲವರು, ವಂಶಪರಂಪರೆಯನ್ನು ಹೇಳುವ ಸಂದರ್ಭದಲ್ಲಿ ಮಹಾತ್ಮನಾದ ದೇವಾವೃಧನ ಗುಣಗಳನ್ನು ಹೇಳುತ್ತ, ಅವನ ಕೀರ್ತಿಯನ್ನು ಹಾಡುತ್ತಾರೆಂದು ಕೇಳಿದ್ದೇವೆ.

೩೮. ''ದೂರದಿಂದ ನಾವು ಕೇಳಿದ್ದಂತೆಯೇ ಸಮೀಪದಲ್ಲಿಯೂ ನೋಡುತ್ತಿದ್ದೇವೆ. ಬಭ್ರುವು ಮನುಷ್ಯರಲ್ಲೆಲ್ಲ ಶ್ರೇಷ್ಠನು; ದೇವಾವೃಧನು ದೇವತೆಗಳಿಗೆ ಸದೃಶನು.

**ಷಷ್ಟಿಶ್ಚ ಪೂರ್ವಪುರುಷಾಃ ಸಹಸ್ರಾಣಿ ಚ ಸಪ್ತತಿಃ ।**
**ಏತೇಽಮೃತತ್ವಂ ಸಂಪ್ರಾಪ್ತಾ ಬಭ್ರೋರ್ದೇವಾವೃಧಾನ್ನೃಪ ॥೫೯॥**

**ಯಜ್ವಾ ದಾನಪತಿರ್ವೀರೋ ಬ್ರಹ್ಮಣ್ಯಶ್ಚ ದೃಢವ್ರತಃ ।**
**ರೂಪವಾನ್ ಸುಮಹಾತೇಜಾಃ ಶ್ರುತವೀರ್ಯಧರಸ್ತಥಾ ॥೬೦॥**

**ಅಥ ಕಂಕಸ್ಯ ದುಹಿತಾ ಸುಷುವೇ ಚತುರಸ್ಸುತಾನ್ ।**
**ಕುಕುರಂ ಭಜಮಾನಂ ಚ ಶಶಿಂ ಕಂಬಲಬರ್ಹಿಷಂ ॥೬೧॥**

**ಕುಕುರಸ್ಯ ಸುತೋ ವೃಷ್ಣಿರ್ವೃಷ್ಣೇಸ್ತು ತನಯೋ ಧೃತಿಃ ।**
**ಕಪೋತರೋಮಾ ತಸ್ಯಾಥ ತೈತ್ತಿರಿಸ್ತಸ್ಯ ಚಾತ್ಮಜಃ ॥೬೨॥**

**ತಸ್ಯಾಸೀತ್ತನುಜಸ್ಸರ್ಪೋ ವಿದ್ವಾನ್ ಪುತ್ರೋ ನಲಃ ಕಿಲಃ ।**
**ಖ್ಯಾಯತೇ ತಸ್ಯ ನಾಮ್ನಾ ಸ ನಂದನೋದರದುಂದುಭಿಃ ॥೬೩॥**

---

೫೯. ರಾಜಾ, ದೇವಾವೃಧನ ಪುತ್ರನಾದ ಬಭ್ರುವಿನಿಂದ ಅವನ ಹಿಂದಿನ ಅರವತ್ತು ಸಾವಿರ ಜನ ಹಿರಿಯರೂ, ಮುಂದಿನ ಎಪ್ಪತ್ತು ಸಾವಿರ ಮಂದಿ ಜ್ಞಾತಿಗಳೂ ಮೋಕ್ಷವನ್ನು ಪಡೆದರು.

೬೦. ಅವನು ಶಾಸ್ತ್ರೋಕ್ತವಾಗಿ ಯಾಗಮಾಡಿದನು. ದಾನಿಗಳಲ್ಲಿ ಅಗ್ರೇಸರ, ವೀರ, ವೇದಾಧ್ಯಯನಸಂಪನ್ನ, ಧೃಢವ್ರತ, ರೂಪವಂತ, ಮಹಾತೇಜಸ್ವಿ, ಶಾಸ್ತ್ರಜ್ಞ ಮತ್ತು ಪರಾಕ್ರಮಿ ಎಂದು ಖ್ಯಾತನಾದನು.

೬೧. ಕಂಕನ ಮಗಳು ಕುಕುರ, ಭಜಮಾನ, ಶಶಿ, ಕಂಬಲಬರ್ಹಿಷ ಎಂಬ ನಾಲ್ವರು ಮಕ್ಕಳನ್ನು ಪಡೆದಳು.

೬೨. ಕುಕುರನ ಮಗ ವೃಷ್ಣಿ. ಅವನ ಪುತ್ರನು ಧೃತಿ. ಅವನಿಂದ ಕಪೋತರೋಮನೂ, ಕಪೋತರೋಮನಿಂದ ತೈತ್ತಿರಿಯೂ ಜನಿಸಿದರು.

೬೩. ಅವನಿಗೆ ಸರ್ಪ, ವಿದ್ಯಾವಂತನಾದ ನಲ ಮತ್ತು ಕಿಲರೆಂಬ ಮಕ್ಕಳಿದ್ದರು. ಈ ಕಿಲನ ಧ್ವನಿಯು ನಂದನವನದಲ್ಲಿನ ನಗಾರಿಯ ಸದ್ದಿನ ಹಾಗೆ ಇದ್ದಿತಂತೆ. ಅದಕ್ಕಾಗಿ ಅವನಿಗೆ ಈ ಹೆಸರು ಬಂದಿತು.

**ತಸ್ಮಿನ್ ಪ್ರವಿತತೇ ಯಜ್ಞೇ ಅಭಿಜಾತಃ ಪುನರ್ವಸುಃ ।**
**ಅಶ್ವಮೇಧಂ ಚ ಪುತ್ರಾರ್ಥಮಾಜಹಾರ ನರೋತ್ತಮಃ ॥೬೪॥**

**ತಸ್ಯ ಮಧ್ಯೇಽತಿರಾತ್ರಸ್ಯ ಸಭಾಮಧ್ಯಾತ್ಸಮುತ್ಥಿತಃ ।**
**ಅತಸ್ತು ವಿದ್ವಾನ್ ಕರ್ಮಜ್ಞೋ ಯಜ್ವಾ ದಾತಾ ಪುನರ್ವಸುಃ ॥೬೫॥**

**ತಸ್ಯಾಸೀತ್ಪುತ್ರಮಿಥುನಂ ಬಭೂವಾಽವಿಜಿತಂ ಕಿಲ ।**
**ಆಹುಕಶ್ಚಾಹುಕೀ ಚೈವ ಖ್ಯಾತಂ ಮತಿಮತಾಂ ವರ ॥೬೬॥**

**ಇಮಾಂಶ್ಚೋದಾಹರಂತ್ಯತ್ರ ಶ್ಲೋಕಾನ್ ಪ್ರತಿ ತಮಾಹುಕಂ ।**
**ಸೋಪಾಸಂಗಾನುಕರ್ಷಾಣಾಂ ಸಧ್ವಜಾನಾಂ ವರೂಥಿನಾಂ ॥೬೭॥**

**ರಥಾನಾಂ ಮೇಘಘೋಷಾಣಾಂ ಸಹಸ್ರಾಣಿ ದಶೈವ ತು ।**
**ನಾಽಸತ್ಯವಾದೀ ನಾಽತೇಜಾ ನಾಽಯಜ್ವಾ ನಾಽಸಹಸ್ರದಃ ॥೬೮॥**

**ನಾಽಶುಚಿರ್ನಾಽಪ್ಯವಿದ್ವಾನ್ ಹಿ ಯೋ ಭೋಜೇಷ್ವಭ್ಯಜಾಯತ ।**
**ಆಹುಕಸ್ಯ ಭೃತಿಂ ಪ್ರಾಪ್ತಾ ಇತ್ಯೇತದ್ವೈ ತದುಚ್ಯತೇ ॥೬೯॥**

---

೬೪. ಅವನು ಹಲವು ಯಾಗಗಳನ್ನು ಮಾಡಿದನು. ಅದರ ಫಲವಾಗಿ ಪುನರ್ವಸುವೆಂಬ ಪುತ್ರನು ಜನಿಸಿದನು. ಆ ರಾಜನು ಸಂತಾನಾರ್ಥವಾಗಿ ಅಶ್ವಮೇಧಯಜ್ಞವನ್ನೂ ಸಹ ನೆರವೇರಿಸಿದನು.

೬೫. ಕಿಲನು ನಡೆಸಿದ ಅತಿರಾತ್ರವೆಂಬ ಯಾಗವಲ್ಲಿ ಸಭಾಮಧ್ಯದಿಂದ ಪುನರ್ವಸುವು ಉತ್ಪನ್ನನಾಗಿ ಮೇಲಕ್ಕೆದ್ದು ಬಂದನು. ಆದುದರಿಂದ ಅವನು ವಿದ್ವಾಂಸನೂ, ಕರ್ಮಜ್ಞನೂ, ಯಜಮಾನನೂ, ದಾನಿಯೂ ಆದನು.

೬೬. ಎಲೈ ಪ್ರಾಜ್ಞನೇ, ಆತನಿಗೆ ಆಹುಕನೆಂಬ ಪುತ್ರನೂ, ಆಹುಕಿಯೆಂಬ ಪುತ್ರಿಯೂ ಇದ್ದರು. ಇವರು ಅಜೇಯರಾಗಿದ್ದರು.

೬೭-೬೯. ಆಹುಕನ ವಿಚಾರವಾಗಿ ಈ ಶ್ಲೋಕಗಳನ್ನು ಹೇಳುತ್ತಾರೆ. "ಬತ್ತಳಿಕೆ, ಮೂಕಿಮರ, ಧ್ವಜ, ಒಳಗೆ ಕುಳಿತು ಯುದ್ಧಮಾಡುವ ವೀರ, ಇವರಿಂದ ಸನ್ನದ್ಧವಾಗಿ ಮೇಘಗಳಂತೆ ಧ್ವನಿಮಾಡುವ ಹತ್ತುಸಾವಿರ ತೇರುಗಳು ಆತನಿಗೆ ಇದ್ದುವು. ಅವನು ಅಸತ್ಯವಂತನಲ್ಲ; ತೇಜಸ್ವಿಯಲ್ಲದಿಲ್ಲ; ಯಾಗಮಾಡದವನಲ್ಲ; ಸಾವಿರ ಹೊನ್ನುಗಳನ್ನು ಕೊಡದವನಲ್ಲ; ಅಶುಚಿಯಲ್ಲ; ಅವಿದ್ಯಾವಂತನಲ್ಲ; ಈ ಸದ್ಗುಣಗಳಿಂದ ತುಂಬಿದ ಆಹುಕನು ಭೋಜರ ಮನೆತನದಲ್ಲಿ ಹುಟ್ಟಿದನು. ಅವನ ಸೇವೆಯಿಂದ ಲೆಕ್ಕವಿಲ್ಲದಷ್ಟು ಜನರು ಜೀವಿಕೆಯನ್ನು ಸಂಪಾದಿಸಿಕೊಳ್ಳುತ್ತಿದ್ದರು."

**ಆಹುಕಶ್ಚಾಪ್ಯವಂತೀಷು ಸ್ವಸಾರಂ ಚಾಹುಕೀಂ ದದೌ ।**
**ಆಹುಕಾತ್ಕಾಶ್ಯದುಹಿತಾ ದ್ವೌ ಪುತ್ರೌ ಸಮಸೂಯತ ॥೭೦॥**

**ದೇವಕಶ್ಚೋಗ್ರಸೇನಶ್ಚ ದೇವಗರ್ಭಸಮಾವುಭೌ ।**
**ದೇವಕಸ್ಯ ಸುತಾ ವೀರಾ ಜಜ್ಞಿರೇ ತ್ರಿದಶೋಪಮಾಃ ॥೭೧॥**

**ದೇವವಾನುಪದೇವಶ್ಚ ಸುದೇವೋ ದೇವರಕ್ಷಿತಃ ।**
**ತೇಷಾಂ ಸ್ವಸಾರಃ ಸಪ್ತಾಸನ್ ವಸುದೇವಾಯ ತಾ ದದೌ ॥೭೨॥**

**ದೇವಕೀ ಶ್ರುತದೇವೀ ಚ ಮಿತ್ರದೇವೀ ಯಶೋಧರಾ ।**
**ಶ್ರೀದೇವೀ ಸತ್ಯದೇವೀ ಚ ಸುತಾಪೀ ಚೇತಿ ಸಪ್ತಮೀ ॥೭೩॥**

**ನವೋಗ್ರಸೇನಸ್ಯ ಸುತಾಃ ಕಂಸಸ್ತೇಷಾಂ ತು ಪೂರ್ವಜಃ ।**
**ನ್ಯಗ್ರೋಧಶ್ಚ ಸುನಾಮಾ ಚ ಕಂಕಃ ಶಂಕುಶ್ಚ ಭೂಯಸಃ । ॥೭೪॥**

---

೭೦. ಆಹುಕನು ತನ್ನ ಸೋದರಿಯನ್ನು ಅವಂತೀ ದೇಶದಲ್ಲಿ ಆಳುತ್ತಿದ್ದ ರಾಜನಿಗೆ ಕೊಟ್ಟನು. ಕಾಶ್ಯನ ಮಗಳು ಆಹುಕನ ಪತ್ನಿ. ಅವಳಿಗೆ ಇಬ್ಬರು ಮಕ್ಕಳು ಹುಟ್ಟಿದರು.

೭೧. ಅವರಿಗೆ ದೇವಕ ಮತ್ತು ಉಗ್ರಸೇನರೆಂದು ಹೆಸರು. ಇಬ್ಬರೂ ದೇವ ಕುಮಾರರಂತಿದ್ದರು. ದೇವಕನಿಗೆ ದೇವಸದೃಶರೂ, ವೀರರೂ ಆದ ಮಕ್ಕಳು ಹುಟ್ಟಿದರು.

೭೨. ದೇವವಂತ, ಉಪದೇವ, ಸುದೇವ, ದೇವರಕ್ಷಿತ ಇವರೇ ಗಂಡು ಮಕ್ಕಳು. ಇವರಿಗೆ ಸೋದರಿಯರು ಏಳುಮಂದಿಯಿದ್ದರು. ಅವರನ್ನು ವಸು ದೇವನು ಮದುವೆಯಾದನು.

೭೩. ದೇವಕಿ, ಶ್ರುತದೇವಿ, ಮಿತ್ರದೇವಿ, ಯಶೋಧರೆ, ಶ್ರೀದೇವಿ, ಸತ್ಯದೇವಿ ಮತ್ತು ಏಳನೆಯವಳಾದ ಸುತಾಪಿ ಇವರೇ ಆ ಕನ್ಯೆಯರು.

೭೪. ಉಗ್ರಸೇನನ ಮಕ್ಕಳು ಒಂಬತ್ತು ಮಂದಿ. ಅವರಲ್ಲಿ ಹಿರಿಯವನು ಕಂಸ. ನ್ಯಗ್ರೋಧ, ಸುನಾಮ, ಕಂಕ, ಶಂಕು, ಅಜಭು, ರಾಷ್ಟ್ರಪಾಲ, ಯುದ್ಧ ಮುಷ್ಟಿ ಮತ್ತು ಸುಮುಷ್ಟಿದ ಎಂಬವರು ಉಳಿದವರು.

**ಅಜಭೂ ರಾಷ್ಟ್ರಪಾಲಶ್ಚ ಯುದ್ಧಮುಷ್ಟಿಃ ಸುಮುಷ್ಟಿದಃ ।**
**ತೇಷಾಂ ಸ್ವಸಾರಃ ಪಂಚಾಸನ್ ಕಂಸಾ ಕಂಸವತೀ ತಥಾ ॥೭೫॥**

**ಸುತಂತೂ ರಾಷ್ಟ್ರಪಾಲೀ ಚ ಕಂಕಾ ಚೇತಿ ವರಾಂಗನಾಃ ।**
**ಉಗ್ರಸೇನಃ ಸಹಾಪತ್ಯೋ ವ್ಯಾಖ್ಯಾತಃ ಕುಕುರೋದ್ಭವಃ ॥೭೬॥**

**ಭಜಮಾನಸ್ಯ ಪುತ್ರೋऽಥ ರಥಿಮುಖ್ಯೋ ವಿದೂರಥಃ ।**
**ರಾಜಾಧಿದೇವಃ ಶೂರಶ್ಚ ವಿದೂರಥಸುತೋऽಭವತ್ ॥೭೭॥**

**ರಾಜಾಧಿದೇವಸ್ಯ ಸುತೌ ಜಜ್ಞಾತೇ ದೇವಸಮ್ಮಿತೌ ।**
**ನಿಯಮವ್ರತಪ್ರಧಾನೌ ಶೋಣಾಶ್ವಃ ಶ್ವೇತವಾಹನಃ ॥೭೮॥**

**ಶೋಣಾಶ್ವಸ್ಯ ಸುತಾಃ ಪಂಚ ಶೂರಾ ರಣವಿಶಾರದಾಃ ।**
**ಶಮೀ ಚ ದೇವಶರ್ಮಾ ಚ ನಿಕುಂತಃ ಶಕ್ರಶತ್ರುಜಿತ್ ॥೭೯॥**

**ಶಮಿಪುತ್ರಃ ಪ್ರತಿಕ್ಷತ್ರಃ ಪ್ರತಿಕ್ಷತ್ರಸ್ಯ ಚಾತ್ಮಜಃ ।**
**ಪ್ರತಿಕ್ಷೇತ್ರಃ ಸುತೋ ಭೋಜೋ ಹೃದೀಕಸ್ತಸ್ಯ ಚಾತ್ಮಜಃ ॥೮೦॥**

---

೭೫-೭೬. ಅವರ ಸಹೋದರಿಯರು ಐವರು. ಕಂಸೆ, ಕಂಸವತಿ, ಸುತಂತು, ರಾಷ್ಟ್ರಪಾಲಿ, ಕಂಕೆ ಎಂಬವರು. ಕುಕುರನ ಮಗನಾದ ಉಗ್ರಸೇನನನ್ನೂ ಅವನ ಮಕ್ಕಳನ್ನೂ ಹೀಗೆ ವಿವರಿಸಿದುದಾಯಿತು.

೭೭. ರಥಿಕರಲ್ಲಿ ಪ್ರಮುಖನೆನಿಸಿದ ವಿದೂರಥನು ಭಜಮಾನನ ಇನ್ನೊಬ್ಬ ಪತ್ನಿಯ ಮಗನು. ಇವನಿಗೆ ಶೂರನಾದ ರಾಜಾಧಿದೇವನು ಪುತ್ರನಾದನು.

೭೮. ರಾಜಾಧಿದೇವನಿಗೆ ದೇವಸದೃಶರಾದ ಶೋಣಾಶ್ವ ಮತ್ತು ಶ್ವೇತವಾಹನರೆಂಬ ಇಬ್ಬರು ಪುತ್ರರು ಹುಟ್ಟಿದರು. ಅವರು ನಿಯಮಗಳನ್ನೂ ವ್ರತಗಳನ್ನೂ ಸಾಧಿಸುವುದರಲ್ಲಿ ಪ್ರಸಿದ್ಧರಾಗಿದ್ದರು.

೭೯. ಶೂರರೂ ಯುದ್ಧನಿಪುಣರೂ ಆದ ಐವರು ಮಕ್ಕಳು ಶೋಣಾಶ್ವನಿಗೆ ಜನಿಸಿದರು. ಶಮಿ, ದೇವಶರ್ಮ, ನಿಕುಂತ, ಶಕ್ರ, ಶತ್ರುಜಿತ್ ಎಂಬುವು ಅವರ ಹೆಸರುಗಳು.

೮೦. ಶಮಿಯ ಮಗನು ಪ್ರತಿಕ್ಷತ್ರ. ಅವನ ಮಗನ ಹೆಸರು ಪ್ರತಿಕ್ಷೇತ್ರ. ಅವನ ಮಗ ಭೋಜ. ಅವನ ಸುತನು ಹೃದೀಕ.

ಹೃದೀಕಸ್ಯಾಭರ್ವ ಪುತ್ರಾ ದಶ ಭೀಮಪರಾಕ್ರಮಾಃ ।
ಕೃತವರ್ಮಾಗ್ರಜಸ್ತೇಷಾಂ ಶತಧನ್ವಾ ಚ ಮಧ್ಯಮಃ ॥೮೧॥

ದೇವಾರ್ಹಶ್ಚೈವ ನಾಭಶ್ಚ ಭೀಷಣಶ್ಚ ಮಹಾಬಲಃ ।
ಅಜಾತೋ ವನಜಾತಶ್ಚ ಕನೀಯಕಕರಂಭಕೌ ॥೮೨॥

ದೇವಾರ್ಹಸ್ಯ ಸುತೋ ವಿದ್ವಾಞ್ಜಜ್ಞೇ ಕಂಬಲಬರ್ಹಿಷಃ ।
ಅಸಾಮಂಜಾಸ್ಸುತಸ್ತಸ್ಯ ತಮೋಜಾಸ್ತಸ್ಯ ಚಾತ್ಮಜಃ ॥೮೩॥

ಅಜಾತಪುತ್ರಾ ವಿಕ್ರಾಂತಾಸ್ತ್ರಯಃ ಪರಮಕೀರ್ತಯಃ ।
ಸುದಂಷ್ಟ್ರಶ್ಚ ಸುನಾಭಶ್ಚ ಕೃಷ್ಣ ಇತ್ಯಂಧಕಾ ಮತಾಃ ॥೮೪॥

ಅಂಧಕಾನಾಮಿಮಂ ವಂಶಂ ಯಃ ಕೀರ್ತಯತಿ ನಿತ್ಯಶಃ ।
ಆತ್ಮನೋ ವಿಪುಲಂ ವಂಶಂ ಪ್ರಜಾವಾನಾಪ್ನುತೇ ನರಃ ॥೮೫॥

ಇತಿ ಶ್ರೀಮತ್ಸ್ಯೇ ಮಹಾಪುರಾಣೇ ಸೋಮವಂಶೇ
ಚತುಶ್ಚತ್ವಾರಿಂಶೋಽಧ್ಯಾಯಃ

---

೮೧. ಅದ್ಭುತ ಪರಾಕ್ರಮಶಾಲಿಗಳಾದ ಹತ್ತುಜನ ಮಕ್ಕಳು ಹೃದೀಕನಿಗೆ ಉದಿಸಿದರು. ಅವರಲ್ಲಿ ಹಿರಿಯವನು ಕೃತವರ್ಮ ; ನಡುಕಲವನು ಶತಧನ್ವ.

೮೨. ದೇವಾರ್ಹ, ನಾಭ, ಭೀಷಣ, ಮಹಾಬಲ, ಅಜಾತ, ವನಜಾತ, ಕನೀಯಕ, ಕರಂಭಕ ಇವರೇ ಉಳಿದ ಎಂಟು ಜನರು.

೮೩. ದೇವಾರ್ಹನಿಗೆ ವಿದ್ವಾಂಸನಾದ ಕಂಬಲಬರ್ಹಿಷನು ಮಗನಾದನು. ಅವನ ಮಗ ಅಸಾಮಂಜ. ಅವನ ಪುತ್ರನ ಹೆಸರು ತಮೋಜ.

೮೪. ಶೂರರೂ ವಿಶೇಷಕೀರ್ತಿವಂತರೂ ಆದ ಸುದಂಷ್ಟ್ರ, ಸುನಾಭ ಮತ್ತು ಕೃಷ್ಣರೆಂಬ ಮೂವರು ಅಜಾತನ ಮಕ್ಕಳು. ಈ ಮೇಲೆ ಹೇಳಿದವರಿಗೆಲ್ಲ ಅಂಧಕರೆಂದು ಹೆಸರು.

೮೫. ಅಂಧಕರ ಈ ವಂಶವನ್ನು ಪ್ರತಿದಿನವೂ ಕೀರ್ತನಮಾಡುವ ಮನುಜನು ಪುತ್ರವಂತನಾಗುವನು. ಅವನ ವಂಶವೂ ಬೆಳೆಯುವುದು.

ಅಧ್ಯಾಯ ೪೪

## ಅಧ್ಯಾಯದ ಸಾರಾಂಶ

ಸೂರ್ಯನು ಒಂದು ದಿನ ಬ್ರಾಹ್ಮಣ ವೇಷದಿಂದ ಕಾರ್ತವೀರ್ಯಾರ್ಜುನನ ಬಳಿಗೆ ಬಂದು ಆಹಾರವನ್ನು ಬೇಡಿದನು. ಅರ್ಜುನನು ಕೊಡಲೊಪ್ಪಿದನು. ಜಗತ್ತಿನಲ್ಲಿರುವ ಸಮಸ್ತ ಸ್ಥಾವರವಸ್ತುಗಳನ್ನು ಸುಡಬೇಕೆಂದೂ, ಅದರಿಂದಲೇ ತನಗೆ ತೃಪ್ತಿಯೆಂದೂ ಸೂರ್ಯನು ಹೇಳಿದನು. ರಾಜನು ನಿರ್ವಾಹವಿಲ್ಲದೆ ಸೂರ್ಯದತ್ತವಾದ ಅಮೋಘಾಸ್ತ್ರದಿಂದ ಎಲ್ಲವನ್ನೂ ಸುಡುತ್ತ ಬಂದನು. ಆಪವಮಹರ್ಷಿಯ ತಪೋವನವೂ ಸುಟ್ಟುಹೋಯಿತು. ಅರ್ಜುನನ ಮೇಲೆ ಸಿಟ್ಟಾಗಿ, ಅವನನ್ನು ಪರಶುರಾಮನು ಕೊಲ್ಲುವನೆಂದು ಆ ಮುನಿಯು ಶಪಿಸಿದನು.

ಕ್ರೋಷ್ಟು, ವಿದರ್ಭ, ಅಂಧಕ ಮುಂತಾದ ಮಹೀಪತಿಗಳ ವಂಶಗಳು ಪ್ರಸಿದ್ಧವಾದುವು. ಇವುಗಳಲ್ಲಿ ಶೂರರಾದ ಹಲವರು ರಾಜರು ಉದಿಸಿದರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಚಂದ್ರವಂಶದೊಳಗೆ ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು



## ಅಥ ಶ್ರೀಮತ್ಸ್ಯಮಹಾಪುರಾಣೇ ಪಂಚಚತ್ವಾರಿಂಶೋಽಧ್ಯಾಯಃ

॥ ಸೂತ ಉವಾಚ ॥

ಗಾಂಧಾರೀ ಚೈವ ಮಾದ್ರೀ ಚ ವೃಷ್ಣಿಭಾರ್ಯೇ ಬಭೂವತುಃ ।
ಗಾಂಧಾರೀ ಜನಯಾಮಾಸ ಸುಮಿತ್ರಂ ಮಿತ್ರನಂದನಂ ॥ ೧ ॥

ಮಾದ್ರೀ ಯುಧಾಜಿತಂ ಪುತ್ರಂ ತತೋ ವೈ ದೇವಮೀಢುಷಂ ।
ಅನಮಿತ್ರಂ ಶಿಬಿಂ ಚೈವ ಪಂಚಮಂ ಕೃತಲಕ್ಷಣಂ ॥ ೨ ॥

ಅನಮಿತ್ರಸುತೋ ನಿಘ್ನೋ ನಿಘ್ನಸ್ಯಾಪಿ ತು ದ್ವೌ ಸುತೌ ।
ಪ್ರಸೇನಶ್ಚ ಮಹಾವೀರ್ಯಃ ಶಕ್ತಿಸೇನಶ್ಚ ತಾವುಭೌ ॥ ೩ ॥

ಸ್ಯಮಂತಕಃ ಪ್ರಸೇನಸ್ಯ ಮಣಿಪ್ರವರಮುತ್ತಮಂ ।
ಪೃಥಿವ್ಯಾಂ ಸರ್ವರತ್ನಾನಾಂ ರಾಜಾ ವೈ ಸೋಽಭವನ್ಮಣಿಃ ॥ ೪ ॥

ಹೃದಿ ಕೃತ್ವಾ ತು ಬಹುಶೋ ಮಣಿಂ ತಮಭಿಯಾಚಿತಃ ।
ಗೋವಿಂದೋಽಪಿ ನ ತಂ ಲೇಭೇ ಶಕ್ತೋಽಪಿ ನ ಜಹಾರ ಸಃ ॥ ೫ ॥

---

೧. ಸೂತ ಪೌರಾಣಿಕನು ಹೇಳಿದನು.—ಗಾಂಧಾರಿ ಮತ್ತು ಮಾದ್ರಿಯರೆಂಬವರಿಬ್ಬರು ವೃಷ್ಣಿಯ ಪತ್ನಿಯರು. ಅವರಲ್ಲಿ ಗಾಂಧಾರಿಯು ಮಿತ್ರರಿಗೆ ಆನಂದಕರನಾದ ಸುಮಿತ್ರನೆಂಬ ಮಗನನ್ನು ಹೆತ್ತಳು.

೨. ಯುಧಾಜಿತ, ದೇವಮೀಢುಷ, ಅನಮಿತ್ರ, ಶಿಬಿ ಮತ್ತು ಕೃತಲಕ್ಷಣರೆಂಬ ಐದು ಜನರೂ ಮಾದ್ರಿಯ ಮಕ್ಕಳು.

೩. ಅನಮಿತ್ರನ ಮಗನು ನಿಘ್ನ. ಅವನಿಗೆ ಮಹಾವೀರನಾದ ಪ್ರಸೇನನೂ, ಶಕ್ತಿಸೇನನೂ ಪುತ್ರರಾದರು.

೪. ಪ್ರಸೇನನಲ್ಲಿ ಸ್ಯಮಂತಕವೆಂಬ ಅತ್ಯುತ್ತಮವಾದ ರತ್ನವಿತ್ತು. ಅದು ಭೂಮಿಯಲ್ಲಿರುವ ಎಲ್ಲರತ್ನಗಳಿಗೂ ಅಧಿಪತಿಯೆನಿಸಿತ್ತು.

೫. ಅವನು ಆ ರತ್ನವನ್ನು ಸಾಮಾನ್ಯವಾಗಿ ತನ್ನ ಎದೆಯಲ್ಲೇ ಧರಿಸಿಕೊಂಡಿದ್ದನು. ಅದನ್ನು ಕೊಡುವಂತೆ ಕೃಷ್ಣನು ಕೇಳಿದನು. ಆದರೂ ಅವನು ಕೊಡಲಿಲ್ಲ. ಶಕ್ತಿಯಿದ್ದರೂ ಗೋವಿಂದನು ಬಲಾತ್ಕಾರದಿಂದ ಅದನ್ನು ಅವನಿಂದ ಕಿತ್ತುಕೊಳ್ಳಲಿಲ್ಲ.

**ಕದಾಚಿನ್ಮೃಗಯಾಂ ಯಾತಃ ಪ್ರಸೇನಸ್ತೇನ ಭೂಪತಿಃ ।**
**ಯಥಾಶಬ್ದಂ ಸ ಶುಶ್ರಾವ ಬಿಲೇ ಸತ್ವೇನ ಪೂರಿತೇ ॥ ೬ ॥**

**ತತಃ ಪ್ರವಿಶ್ಯ ಸ ಬಿಲಂ ಪ್ರಸೇನೋ ಹ್ಯೃಕ್ಷಮೈಕ್ಷತ ।**
**ಋಕ್ಷಃ ಪ್ರಸೇನಂ ಚ ತಥಾ ಋಕ್ಷಂ ಚೈವ ಪ್ರಸೇನಜಿತ್ ॥ ೭ ॥**

**ಹತ್ವಾ ಋಕ್ಷಃ ಪ್ರಸೇನಂ ತು ತತಸ್ತಂ ಮಣಿಮಾದದಾತ್ ।**
**ಅದೃಷ್ಟಸ್ತು ಹತಸ್ತೇನ ಅಂತರ್ಬಿಲಗತಸ್ತದಾ ॥ ೮ ॥**

**ಪ್ರಸೇನಂ ತು ಹತಂ ಜ್ಞಾತ್ವಾ ಗೋವಿಂದಃ ಪರಿಶಂಕಿತಃ ।**
**ಗೋವಿಂದೇನ ಹತೋ ವ್ಯಕ್ತಂ ಪ್ರಸೇನೋ ಮಣಿಕಾರಣಾತ್ ॥ ೯ ॥**

**ಪ್ರಸೇನಸ್ತು ಗತೋಽರಣ್ಯಂ ಮಣಿರತ್ನೇನ ಭೂಷಿತಃ ।**
**ತಂ ದೃಷ್ಟ್ವಾ ಸ ಹತಸ್ತೇನ ಗೋವಿಂದಃ ಪ್ರತ್ಯುವಾಚ ಹ**
**ಹನ್ಮಿ ಚೈನಂ ದುರಾಚಾರಂ ಶತ್ರುಭೂತಂ ಹಿ ವೃಷ್ಣಿಷು ॥೧೦॥**

---

೬. ಒಂದಾನೊಂದು ದಿನ ಪ್ರಸೇನಭೂಪತಿಯು ಆ ರತ್ನವನ್ನು ಧರಿಸಿಕೊಂಡು ಬೇಟೆಗೆ ಹೋದನು. ಯಾವುದೋ ಜಂತುವು ವಾಸವಾಗಿದ್ದ ಒಂದು ಗುಹೆಯಲ್ಲಿ ಶಬ್ದವಾದಂತೆ ಅವನಿಗೆ ಕೇಳಿಸಿತು.

೭. ಬಳಿಕ ಪ್ರಸೇನನು ಬಿಲವನ್ನು ಹೊಕ್ಕು ಅಲ್ಲಿ ಒಂದು ಕರಡಿಯನ್ನು ಕಂಡನು. ಕರಡಿಯು ಅವನನ್ನು ನೋಡಿತು. ಅವನೂ ಅದನ್ನು ನೋಡಿದನು.

೮. ಕರಡಿಯು ಪ್ರಸೇನನನ್ನು ಕೊಂದು ಆ ರತ್ನವನ್ನು ತೆಗೆದುಕೊಂಡಿತು. ಹೀಗೆ ಅವನು ಬಿಲದೊಳಕ್ಕೆ ಹೋಗಿ ಯಾರಿಗೂ ಗೊತ್ತಾಗದಂತೆ ಹತನಾದನು.

೯. ಪ್ರಸೇನನು ಸತ್ತದ್ದು ತಿಳಿಯಿತು. "ಸ್ಯಮಂತಕ ರತ್ನಕ್ಕೋಸ್ಕರ ಗೋವಿಂದನು ಪ್ರಸೇನನನ್ನು ಕೊಂದನು" ಎಂದು ಎಲ್ಲರೂ ಕೃಷ್ಣನ ಮೇಲೆ ಸಂದೇಹಪಟ್ಟರು.

೧೦. "ಪ್ರಸೇನನು ಸ್ಯಮಂತಕ ರತ್ನದಿಂದ ಸಿಂಗರಿಸಿಕೊಂಡು ಕಾಡಿಗೆ ಹೋದನು ; ಅದನ್ನು ಕಂಡು ರತ್ನಕ್ಕೋಸ್ಕರವಾಗಿ ಯಾರೋ ಅವನನ್ನು ಕೊಂದಿದ್ದಾರೆ. ಇಂತಹ ಅಕಾರ್ಯವನ್ನು ಮಾಡಿ ಯಾದವರ ವೈರವನ್ನು ಕಟ್ಟಿಕೊಂಡ ಪಾಪಿಯನ್ನು ನಾನು ಕೊಲ್ಲುವೆನು" ಎಂದು ಕೃಷ್ಣನು ಉತ್ತರವಿತ್ತನು.

**ಅಥ ದೀರ್ಘೇಣ ಕಾಲೇನ ಮೃಗಯಾಂ ನಿರ್ಗತಃ ಪುನಃ ।**
**ಯದೃಚ್ಛಯಾ ಚ ಗೋವಿಂದೋ ಬಿಲಸ್ಯಾಭ್ಯಾಶಮಾಗಮತ್ ॥೧೧॥**

**ತಂ ದೃಷ್ಟ್ವಾ ತು ಮಹಾಶಬ್ದಂ ಸ ಚಕ್ರೇ ಋಕ್ಷರಾಡ್ಬಲೀ ।**
**ಶಬ್ದಂ ಶ್ರುತ್ವಾ ತು ಗೋವಿಂದಃ ಖಡ್ಗಪಾಣಿಃ ಪ್ರವಿಶ್ಯ ಸಃ ।**
**ಅಪಶ್ಯಜ್ಜಾಂಬವಂತಂ ತಮೃಕ್ಷರಾಜಂ ಮಹಾಬಲಂ ॥೧೨॥**

**ತತಸ್ತೂರ್ಣಂ ಹೃಷೀಕೇಶಸ್ತಮೃಕ್ಷಪತಿಮಂಜಸಾ ।**
**ಜಾಂಬವಂತಂ ಸ ಜಗ್ರಾಹ ಕ್ರೋಧಸಂರಕ್ತಲೋಚನಃ ॥೧೩॥**

**ತುಷ್ಟಾವೈನಂ ತದಾ ಋಕ್ಷಃ ಕರ್ಮಭಿರ್ವೈಷ್ಣವೈಃ ಪ್ರಭುಂ ।**
**ತತಸ್ತುಷ್ಟಸ್ತು ಭಗವಾನ್ ವರೇಣೈನಮರೋಚಯತ್ ॥೧೪॥**

**॥ ಜಾಂಬವಾನುವಾಚ ॥**

**ಇಚ್ಛೇ ಚಕ್ರಪ್ರಹಾರೇಣ ತ್ವತ್ತೋಽಹಂ ಮರಣಂ ಪ್ರಭೋ ।**
**ಕನ್ಯಾ ಚೇಯಂ ಮಮ ಶುಭಾ ಭರ್ತಾರಂ ತ್ವಾಮವಾಪ್ನುಯಾತ್ ।**
**ಯೋಽಯಂ ಮಣಿಃ ಪ್ರಸೇನಂ ತು ಹತ್ವಾ ಪ್ರಾಪ್ತೋ ಮಯಾ ಪ್ರಭೋ ॥**

---

೧೧. ಬಹುಕಾಲ ಕಳೆದ ಮೇಲೆ ಗೋವಿಂದನು ಬೇಟೆಗಾಗಿ ಹೊರಟು, ಅಕಸ್ಮಾತ್ತಾಗಿ ಆ ಬಿಲದ ಬಳಿಗೆ ಬಂದನು.

೧೨. ಅವನನ್ನು ನೋಡಿ ಬಲಿಷ್ಠನಾದ ಜಾಂಬವನು ಗಟ್ಟಿಯಾಗಿ ಕೂಗಿದನು. ಆ ಸದ್ದನ್ನು ಕೇಳಿ, ಕೃಷ್ಣನು ಕೈಯ್ಯಲ್ಲಿ ಕತ್ತಿಯನ್ನು ಹಿಡಿದು, ಒಳಗೆ ನುಗ್ಗಿ ಅತಿ ಬಲಶಾಲಿಯಾದ ಆ ಜಾಂಬವಂತನನ್ನು ಕಂಡನು.

೧೩. ಬಳಿಕ ಕೃಷ್ಣನಿಗೆ ಕೋಪ ಬಂದಿತು; ಕಣ್ಣುಗಳು ಕೆಂಪೇರಿದುವು. ಅವನು ಬೇಗನೆ ಕರಡಿಗಳ ಅರಸನಾದ ಜಾಂಬವಂತನನ್ನು ಹಿಡಿದುಕೊಂಡನು.

೧೪. ಆಗ ಜಾಂಬವನು ಸರ್ವೇಶ್ವರನಾದ ಕೃಷ್ಣನನ್ನು ವೈಷ್ಣವಾಗಮದಲ್ಲಿ ಹೇಳಿರುವಂತೆ ಉಪಚಾರಾದಿ ಕೈಂಕರ್ಯಗಳಿಂದ ಸತ್ಕರಿಸಿ ಸ್ತುತಿಸಿದನು. ಭಗವಂತನು ತುಷ್ಟನಾಗಿ ಅವನಿಗೆ ಇಷ್ಟವಾದ ವರವನ್ನು ಕರುಣಿಸುವುದಾಗಿ ಹೇಳಿದನು.

೧೫. ಜಾಂಬವಂತನು ಹೇಳಿದನು.—ಸ್ವಾಮೀ, ನಿನ್ನ ಚಕ್ರದ ಪ್ರಹಾರದಿಂದ ನಾನು ಮರಣವನ್ನು ಬಯಸುತ್ತೇನೆ. ಮಂಗಳರೂಪಿಣಿಯಾದ ಈ ನನ್ನ ಕನ್ಯೆಗೆ ನೀನು ಪತಿಯಾಗಬೇಕು. ಪ್ರಭೂ, ಪ್ರಸೇನನನ್ನು ಕೊಂದು ನಾನು ತೆಗೆದುಕೊಂಡ ಈ ರತ್ನವೂ ಸಹ ನಿನ್ನದೇ ಆಗಿರುವುದು.

**ತತಃ ಸ ಜಾಂಬವಂತಂ ತಂ ಹತ್ವಾ ಚಕ್ರೇಣ ವೈ ಪ್ರಭುಃ ।**
**ಕೃತಕರ್ಮಾ ಮಹಾಬಾಹುಃ ಸಕನ್ಯಂ ಮಣಿಮಾಹರತ್ ॥೧೬॥**

**ದದೌ ಸತ್ರಾಜಿತಾಯೈನಂ ಸರ್ವಸಾತ್ವತಸಂಸದಿ ।**
**ತೇನ ಮಿಥ್ಯಾಪವಾದೇನ ಸಂತಪ್ತೋऽಯಂ ಜನಾರ್ದನಃ ॥೧೭॥**

**ತತಸ್ತೇ ಯಾದವಾಸ್ಸರ್ವೇ ವಾಸುದೇವಮಥಾಬ್ರುವನ್ ।**
**ಅಸ್ಮಾಕಂ ತು ಮತಿರ್ಹ್ಯಾಸೀತ್ಪ್ರಸೇನಸ್ತು ತ್ವಯಾ ಹತಃ ॥೧೮॥**

**ಕೇಕಯಸ್ಯ ಸುತಾ ಭಾರ್ಯಾ ದಶ ಸತ್ರಾಜಿತಃ ಶುಭಾಃ ।**
**ತಾಸೂತ್ಪನ್ನಾಃ ಸುತಾಸ್ತಸ್ಯ ಶತಮೇಕಂ ತು ವಿಶ್ರುತಾಃ ।**
**ಖ್ಯಾತಿಮಂತೋ ಮಹಾವೀರ್ಯಾ ಭಂಗಕಾರಸ್ತು ಪೂರ್ವಜಃ ॥೧೯॥**

**ಅಥ ವ್ರತವತೀ ತಸ್ಮಾದ್ಭಂಗಕಾರಾತ್ತು ಪೂರ್ವಜಾತ್ ।**
**ಸುಷುವೇ ಸುಕುಮಾರೀಸ್ತು ತಿಸ್ರಃ ಕಮಲಲೋಚನಾಃ ॥೨೦॥**

---

೧೬. ಆ ಮೇಲೆ ಶ್ರೀಕೃಷ್ಣ ಪರಮಾತ್ಮನು ತನ್ನ ಚಕ್ರದಿಂದ ಜಾಂಬವಂತನನ್ನು ಸಂಹರಿಸಿ, ಅವನಿಗೆ ಸಂಸ್ಕಾರಾದಿಗಳನ್ನು ನೆರವೇರಿಸಿ, ಜಾಂಬವತಿಯನ್ನೂ, ಸ್ಯಮಂತಕ ಮಣಿಯನ್ನೂ ಸ್ವೀಕರಿಸಿದನು.

೧೭. ತನ್ನ ಮೇಲೆ ಬಂದಿದ್ದ ಅಸತ್ಯವಾದ ಅಪವಾದದಿಂದ ಬಹಳ ನೊಂದಿದ್ದ ಜನಾರ್ದನನು, ಯಾದವರೆಲ್ಲರೂ ಸೇರಿದ್ದ ದೊಡ್ಡ ಸಭೆಯಲ್ಲಿ ಆ ರತ್ನವನ್ನು ಸತ್ರಾಜಿತನಿಗೆ ಕೊಟ್ಟನು.

೧೮. ಆಗ "ಪ್ರಸೇನನನ್ನು ನೀನೇ ಕೊಂದೆಯೆಂದು ನಾವೆಲ್ಲರೂ ನಂಬಿದ್ದೆವು" ಎಂದು ಯಾದವರು ಕೃಷ್ಣನಿಗೆ ಹೇಳಿದರು.

೧೯. ಕೇಕಯ ರಾಜನ ಹತ್ತು ಜನ ಕನ್ಯೆಯರನ್ನು ಸತ್ರಾಜಿತನು ಪತ್ನಿಯರನ್ನಾಗಿ ಪರಿಗ್ರಹಿಸಿದ್ದನು. ಅವರಲ್ಲಿ ಅವನಿಗೆ ಸುಪ್ರಸಿದ್ಧರಾದ ಒಂದುನೂರು ಜನ ಮಕ್ಕಳು ಜನಿಸಿದರು. ಅವರೆಲ್ಲರೂ ಕೀರ್ತಿವಂತರು; ಮಹಾ ಶೂರರು. ಭಂಗಕಾರನೆಂಬವನು ಅವರಲ್ಲಿ ಹಿರಿಯವನು.

೨೦. ಒಳಿಕ ಜ್ಯೇಷ್ಠನಾದ ಭಂಗಕಾರನ ಪತ್ನಿಯಾದ ವ್ರತವತಿಯು ತಾವರೆಯಂತೆ ಕಣ್ಣುಗಳಿರುವ ಮೂವರು ಹೆಣ್ಣುಮಕ್ಕಳನ್ನು ಪಡೆದಳು.

**ಸತ್ಯಭಾಮಾ ವರಾ ಸ್ತ್ರೀಣಾಂ ವ್ರತಿನೀ ಚ ದೃಢವ್ರತಾ।**
**ತಥಾ ಪದ್ಮಾವತೀ ಚೈವ ತಾಶ್ಚ ಕೃಷ್ಣಾಯ ಸೋಽದದಾತ್ ॥೨೧॥**

**ಅನಮಿತ್ರಾಚ್ಛಿನಿರ್ಜಜ್ಞೇ ಕನಿಷ್ಠಾದ್ವೃಷ್ಣಿನಂದನಾತ್।**
**ಸತ್ಯಕಸ್ತಸ್ಯ ಪುತ್ರಸ್ತು ಸಾತ್ಯಕಿಸ್ತಸ್ಯ ಚಾತ್ಮಜಃ ॥೨೨॥**

**ಸತ್ಯವಾನ್ ಯುಯುಧಾನಸ್ತು ಶಿನೇರ್ನಪ್ತಾ ಪ್ರತಾಪವಾನ್।**
**ಅಸಂಗೋ ಯುಯುಧಾನಸ್ಯ ದ್ಯುಮ್ನಿಸ್ತಸ್ಯಾತ್ಮಜೋಽಭವತ್ ॥೨೩॥**

**ದ್ಯುಮ್ನೇರ್ಯುಗಂಧರಃ ಪುತ್ರ ಇತಿ ಶೈನಾಃ ಪ್ರಕೀರ್ತಿತಾಃ।**
**ಅನಮಿತ್ರಾನ್ವಯೋ ಹ್ಯೇಷ ವ್ಯಾಖ್ಯಾತೋ ವೃಷ್ಣಿವಂಶಜಃ ॥೨೪॥**

**ಅನಮಿತ್ರಸ್ಯ ಸಂಜಜ್ಞೇ ಪೃಥ್ವ್ಯಾಂ ವೀರೋ ಯುಧಾಜಿತಃ।**
**ಅನ್ಯೌ ತು ತನಯೌ ವೀರೌ ವೃಷಭಃ ಕ್ಷತ್ರ ಏವ ಚ ॥೨೫॥**

---

೨೧. ನಾರೀಮಣಿಯಾದ ಸತ್ಯಭಾಮೆ, ದೃಢನಿಯಮಗಳಿಂದ ಕೂಡಿದ ವ್ರತಿನಿ ಮತ್ತು ಪದ್ಮಾವತಿಯೆಂಬ ಮೂವರನ್ನೂ ಭಂಗಕಾರನು ಶ್ರೀ ಕೃಷ್ಣನಿಗೆ ಪಾಣಿಗ್ರಹಣ ಮಾಡಿಕೊಟ್ಟನು.

೨೨. ವೃಷ್ಣಿಯ ಕಿರಿಯ ಮಗನಾದ ಅನಮಿತ್ರನಿಗೆ ಶಿನಿಯೆಂಬ ಮಗನು ಜನಿಸಿದನು. ಅವನ ಪುತ್ರ ಸತ್ಯಕ. ಸತ್ಯಕನ ಮಗನಿಗೆ ಸಾತ್ಯಕಿಯೆಂದು ಹೆಸರಾಯಿತು.

೨೩. ಸತ್ಯವಂತನೂ ಪ್ರತಾಪಶಾಲಿಯೂ ಆದ ಯುಯುಧಾನನೆಂಬುವನು ಶಿನಿಯ ಮೊಮ್ಮಗನ ಮಗನು. ಈ ಯುಯುಧಾನನಿಗೆ ಅಸಂಗನೂ, ಅವನಿಗೆ ದ್ಯುಮ್ನಿಯೂ ಪುತ್ರರಾದರು.

೨೪. ದ್ಯುಮ್ನಿಗೆ ಯುಗಂಧರನೆಂಬ ಸುತನು ಉದಿಸಿದನು. ಹೀಗೆ ಶಿನಿಯ ವಂಶದಲ್ಲಿ ಹುಟ್ಟಿದ ರಾಜರನ್ನು ಹೇಳಿದಂತಾಯಿತು. ವೃಷ್ಣಿಕುಲೋತ್ಪನ್ನನಾದ ಅನಮಿತ್ರನ ಈ ವಂಶಪರಂಪರೆಯು ವಿಸ್ತಾರವಾಗಿ ವರ್ಣಿತವಾಯಿತು.

೨೫. ಅನಮಿತ್ರನಿಗೆ ಪೃಥುವೆಂಬ ಪತ್ನಿಯ ಗರ್ಭದಲ್ಲಿ ವೀರನಾದ ಯುಧಾಜಿತನೂ, ಮತ್ತೊಬ್ಬಳಲ್ಲಿ ವೃಷಭ ಮತ್ತು ಕ್ಷತ್ರರೆಂಬ ಇನ್ನಿಬ್ಬರು ಮಕ್ಕಳೂ ಹುಟ್ಟಿದರು.

ವೃಷಭಃ ಕಾಶಿರಾಜಸ್ಯ ಸುತಾಂ ಭಾರ್ಯಾಮವಿಂದತ ।
ಜಯಂತಸ್ತು ಜಯಂತ್ಯಾಂ ತಂ ಪುತ್ರಃ ಸಮಭವಚ್ಛುಭಃ ॥೨೬॥

ಸದಾಯಜ್ಞೋಽತಿವೀರಶ್ಚ ಶ್ರುತವಾನತಿಥಿಪ್ರಿಯಃ ।
ಅಕ್ರೂರಃ ಸುಷುವೇ ತಸ್ಮಾತ್ಸದಾಯಜ್ಞೋಽತಿದಕ್ಷಿಣಃ ॥೨೭॥

ರತ್ನಾ ಕನ್ಯಾ ಚ ಶೈಬ್ಯಸ್ಯ ಅಕ್ರೂರಸ್ತಾಮವಾಪ್ತವಾನ್ ।
ಪುತ್ರಾನುತ್ಪಾದಯಾಮಾಸ ತ್ವೇಕಾದಶ ಮಹಾಬಲಾನ್ ॥೨೮॥

ಉಪಲಂಭಸ್ಸದಾಲಂಭೋ ವೃಕಲೋ ವೀರ್ಯ ಏವ ಚ ।
ಸವೀತರಃ ಸದಾಪಕ್ಷಃ ಶತ್ರುಘ್ನೋ ವಾರಿಮೇಜಯಃ ॥೨೯॥

ಧರ್ಮಭೃದ್ಧರ್ಮವರ್ಮಾಣೌ ಧೃಷ್ಟಮಾನಸ್ತಥೈವ ಚ ।
ಸರ್ವೇ ಚ ಪ್ರತಿಹೋತಾರೋ ರತ್ನಾಯಾಂ ಜಜ್ಞಿರೇ ಚ ತೇ ॥೩೦॥

---

೨೬. ವೃಷಭನು ಕಾಶಿರಾಜನ ಮಗಳಾದ ಜಯಂತಿಯೆಂಬವಳನ್ನು ವಿವಾಹವಾದನು. ಅವಳಲ್ಲಿ ಶುಭಲಕ್ಷಣಸಂಪನ್ನನಾದ ಜಯಂತನೆಂಬ ಮಗನು ಜನಿಸಿದನು.

೨೭. ಅವನು ಅನವರತವೂ ಯಾಗಗಳನ್ನು ನಡೆಸುತ್ತಿದ್ದನು. ಮಹಾ ವೀರನೂ ಶಾಸ್ತ್ರಜ್ಞಾನಸಂಪನ್ನನೂ ಆಗಿದ್ದನು. ಅತಿಥಿಗಳಲ್ಲಿ ಅವನಿಗೆ ಬಹಳ ಪ್ರೀತಿ. ಅವನಿಂದ ದಾನಿಶ್ರೇಷ್ಠನಾದ ಅಕ್ರೂರನೆಂಬ ಮಗನು ಹುಟ್ಟಿದನು. ತಂದೆಯಂತೆಯೇ ಅವನೂ ಸಹ ನಿತ್ಯವೂ ಯಜ್ಞಗಳನ್ನು ಮಾಡುತ್ತಿದ್ದನು.

೨೮. ಶೈಬ್ಯನಿಗೆ ರತ್ನೆಯೆಂಬ ಕನ್ಯೆಯಿದ್ದಳು. ಅಕ್ರೂರನು ಅವಳನ್ನು ಮದುವೆಯಾದನು. ಮಹಾ ಬಲಶಾಲಿಗಳಾದ ಹನ್ನೊಂದು ಜನ ಗಂಡುಮಕ್ಕಳು ಅವಳಲ್ಲಿ ಹುಟ್ಟಿದರು.

೨೯-೩೦. ಉಪಲಂಭ, ಸದಾಲಂಭ, ವೃಕಲ, ವೀರ್ಯ, ಸವೀತರ, ಸದಾ ಪಕ್ಷ, ಶತ್ರುಘ್ನ, ವಾರಿಮೇಜಯ, ಧರ್ಮಭೃತ್, ಧರ್ಮವರ್ಮ, ಧೃಷ್ಟಮಾನ ಇವರೆಲ್ಲರೂ ಯಾಗ ಕರ್ತೃಗಳೇ ಆಗಿದ್ದರು. ಇವರು ರತ್ನೆಯಲ್ಲಿ ಜನಿಸಿದವರು.

**ಅಕ್ರೂರಾದುಗ್ರಸೇನಾಯಾಂ ಸುತೌ ದ್ವೌ ಕುಲವರ್ಧನೌ ।**
**ದೇವವಾನುಪದೇವಶ್ಚ ಜಜ್ಞಾತೇ ದೇವಸನ್ನಿಭೌ ॥೩೦॥**

**ಅಶ್ವಿನ್ಯಾಂ ಚ ತತಃ ಪುತ್ರಾಃ ಪೃಥುರ್ವಿಪೃಥುರೇವ ಚ ।**
**ಅಶ್ವತ್ಥಾಮಾ ಸುಬಾಹುಶ್ಚ ಸುಪಾರ್ಶ್ವಕಗವೇಷಣೌ ॥೩೨॥**

**ವೃಷ್ಟಿನೇಮಿಸ್ಸುಧರ್ಮಾ ಚ ತಥಾ ಶರ್ಯಾತಿರೇವ ಚ ।**
**ಅಭೂಮಿರ್ವಜ್ರಭೂಮಿಶ್ಚ ಶ್ರಮಿಷ್ಠಃ ಶ್ರವಣಸ್ತಥಾ ॥೩೩॥**

**ಇಮಾಂ ಮಿಥ್ಯಾಭಿಶಸ್ತಿಂ ಯೋ ವೇದ ಕೃಷ್ಣಾದಪೋಹಿತಾಂ ।**
**ನ ಸ ಮಿಥ್ಯಾಭಿಶಾಪೇನ ಅಭಿಶಾಪ್ಯೋ ನ ಕೇನಚಿತ್ ॥೩೪॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸೋಮವಂಶೇ**
**ಪಂಚಚತ್ವಾರಿಂಶೋಽಧ್ಯಾಯಃ**

---

೩೧. ಅಕ್ರೂರನ ಧರ್ಮಪತ್ನಿಯಾದ ಉಗ್ರಸೇನೆಯಲ್ಲಿ ವಂಶವರ್ಧಕರಾದ ದೇವವಂತ ಮತ್ತು ಉಪದೇವರೆಂಬ ತನಯರಿಬ್ಬರು ಹುಟ್ಟಿದರು. ಅವರು ದೇವತೆಗಳಂತೆ ಕಾಂತಿಯುಕ್ತರಾಗಿದ್ದರು.

೩೨-೩೩. ಅಶ್ವಿನಿಯಲ್ಲಿಯೂ ಸಹ ಪೃಥು, ವಿಪೃಥು, ಅಶ್ವತ್ಥಾಮ, ಸುಬಾಹು, ಸುಪಾರ್ಶ್ವಕ, ಗವೇಷಣ, ವೃಷ್ಟಿನೇಮಿ, ಸುಧರ್ಮ, ಶರ್ಯಾತಿ, ಅಭೂಮಿ, ವಜ್ರಭೂಮಿ, ಶ್ರಮಿಷ್ಠ ಮತ್ತು ಶ್ರವಣರೆಂಬ ಪುತ್ರರು ಜನಿಸಿದರು.

೩೪. ಶ್ರೀಕೃಷ್ಣನ ಮೇಲೆ ಬಂದ ಮಿಥ್ಯಾಪವಾದವನ್ನೂ, ಅದನ್ನವನು ಪರಿಹರಿಸಿಕೊಂಡ ಬಗೆಯನ್ನೂ ಬಲ್ಲವರ ಮೇಲೆ ಯಾರೂ ಅಸತ್ಯದ ಅಪವಾದವನ್ನು ಹೊರಿಸಲಾರರು.

## ಅಧ್ಯಾಯದ ಸಾರಾಂಶ

ವೃಷ್ಣಿಯ ವಂಶದಲ್ಲಿ ಪ್ರಸೇನನು ಜನಿಸಿದನು. ಅವನಲ್ಲಿ ಸ್ಯಮಂತಕವೆಂಬ ದಿವ್ಯರತ್ನವಿತ್ತು. ಅದನ್ನವನು ಕೊರಳಿನಲ್ಲಿ ಹಾಕಿಕೊಂಡು ಕಾಡಿಗೆ ಬೇಟೆಗಾಗಿ ಹೋದನು. ಅಲ್ಲಿದ್ದ ಜಾಂಬವಂತನು ಅವನನ್ನು ಕೊಂದು ಆ ರತ್ನವನ್ನು ಅಪಹರಿಸಿದನು. "ಪ್ರಸೇನನನ್ನು ಕೃಷ್ಣನೇ ಕೊಂದು ಸ್ಯಮಂತಕ ಮಣಿಯನ್ನು ತೆಗೆದು

ಕೊಂಡಿರುವನು'' ಎಂದು ಯಾದವರೆಲ್ಲರೂ ಸಂಶಯಪಟ್ಟರು. ಅದಕ್ಕಾಗಿ ಅವನು ಸಂತಾಪಗೊಂಡನು. ಕೆಲವು ಕಾಲಾನಂತರ ಶ್ರೀಕೃಷ್ಣನು ಬೇಟೆಗೆಂದು ಕಾಡಿಗೆ ಹೋಗಿ ಜಾಂಬವಂತನಿದ್ದ ಬಿಲಕ್ಕೆ ಅಕಸ್ಮಾತ್ತಾಗಿ ನುಗ್ಗಿದನು. ಇಬ್ಬರಿಗೂ ದೊಡ್ಡ ಯುದ್ಧವಾಯಿತು. ಜಾಂಬವಂತನು ಪರಾಜಿತನಾಗಿ, ಕೃಷ್ಣನಿಗೆ ತನ್ನ ಮಗಳಾದ ಜಾಂಬವತಿಯನ್ನೂ, ತನ್ನಲ್ಲಿದ್ದ ಸ್ಯಮಂತಕ ರತ್ನವನ್ನೂ ಒಪ್ಪಿಸಿದನು. ಬಳಿಕ ಕೃಷ್ಣನು ಯಾದವರೆಲ್ಲರನ್ನೂ ಸಭೆ ಸೇರಿಸಿ, ಸತ್ರಾಜಿತನಿಗೆ ಆ ರತ್ನವನ್ನು ಕೊಟ್ಟು, ತನ್ನ ಮೇಲೆ ಬಂದಿದ್ದ ಮಿಥ್ಯಾಪವಾದವನ್ನು ಕಳೆದುಕೊಂಡನು. ಸತ್ರಾಜಿತನು ತನ್ನ ಪುತ್ರಿಯಾದ ಸತ್ಯಭಾಮೆಯನ್ನು ಅವನಿಗೆ ಕೊಟ್ಟು ಮದುವೆಮಾಡಿದನು. ಈ ಸ್ಯಮಂತಕ ವೃತ್ತಾಂತವು ಬಹಳ ಪುಣ್ಯಕರವಾದುದು. ಇದರ ಪಠನದಿಂದ ಮಿಥ್ಯಾಪವಾದವು ತಪ್ಪುವುದು.

ಯಾದವವಂಶದಲ್ಲಿ ಅಕ್ರೂರನೇ ಮುಂತಾದ ಇನ್ನೂ ಎಷ್ಟೋ ಪ್ರಸಿದ್ಧ ಪುರುಷರು ಜನಿಸಿದರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಚಂದ್ರವಂಶ ವರ್ಣನದೊಳಗೆ
ನಲವತ್ತೈದನೆಯ ಅಧ್ಯಾಯವು ಮುಗಿದುದು



## ಅಥ ಶ್ರೀಮತ್ಸ್ಯಮಹಾಪುರಾಣೇ ಷಟ್ಚತ್ವಾರಿಂಶೋಽಧ್ಯಾಯಃ

॥ ಸೂತ ಉವಾಚ ॥

ಐಕ್ಷ್ವಾಕೀ ಸುಷುವೇ ಶೂರಂ ಖ್ಯಾತಮದ್ಭುತಮೀಢುಷಂ ।
ಪೌರುಷಾಜ್ಜಜ್ಞಿರೇ ಶೂರಾದ್ಭೋಜಾಯಾಂ ಪುತ್ರಕಾ ದಶ ॥ ೧ ॥

ವಸುದೇವೋ ಮಹಾಬಾಹುಃ ಪೂರ್ವಮಾನಕದುಂದುಭಿಃ ।
ದೇವಮಾರ್ಗಸ್ತತೋ ಜಜ್ಞೇ ತತೋ ದೇವಶ್ರವಾಃ ಪುನಃ ॥ ೨ ॥

ಅನಾಧೃಷ್ಟಿಶ್ಶಿನಿಶ್ಚೈವ ನಂದಶ್ಚೈವ ಸಸೃಂಜಯಃ ।
ಶ್ಯಾಮಃ ಶಮೀಕಃ ಸಂಯೂಪಃ ಪಂಚ ಚಾಸ್ಯ ವರಾಂಗನಾಃ ॥ ೩ ॥

ಶ್ರುತಕೀರ್ತಿಃ ಪೃಥಾ ಚೈವ ಶ್ರುತಾದೇವೀ ಶ್ರುತಶ್ರವಾಃ ।
ರಾಜಾಧಿದೇವೀ ಚ ತಥಾ ಪಂಚೈತಾ ವೀರಮಾತರಃ ॥ ೪ ॥

---

೧. ಸೂತ ಪೌರಾಣಿಕನು ಹೇಳಿದನು.—ಐಕ್ಷ್ವಾಕಿಯು ಪೌರುಷನೆಂಬ ತನ್ನ ಪತಿಯಿಂದ ಕೀರ್ತಿವಂತನೂ, ಅದ್ಭುತಪರಾಕ್ರಮಿಯೂ ಆದ ಶೂರನೆಂಬ ಮಗನನ್ನು ಹೆತ್ತಳು. ಶೂರನಿಗೆ ಭೋಜೆಯೆಂಬ ಪತ್ನಿಯಲ್ಲಿ ಹತ್ತು ಜನ ಪುತ್ರರು ಹುಟ್ಟಿದರು.

೨. ಮಹಾ ಶೂರನಾದ ವಸುದೇವನು ಮೊದಲನೆಯವನು. ಇವನಿಗೆ ಆನಕದುಂದುಭಿ ಎಂದು ಹೆಸರು. ಬಳಿಕ ದೇವಮಾರ್ಗನೂ ದೇವಶ್ರವಸ್ಸೂ ಜನಿಸಿದರು.

೩. ಅನಾಧೃಷ್ಟಿ, ಶಿನಿ, ನಂದ, ಸಸೃಂಜಯ, ಶ್ಯಾಮ, ಶಮೀಕ, ಸಂಯೂಪ ಇವರು ಉಳಿದ ಮಕ್ಕಳು. ಶೂರನಿಗೆ ಐವರು ಕನ್ಯೆಯರು ಸಹ ಇದ್ದರು.

೪. ಶ್ರುತಕೀರ್ತಿ, ಪೃಥೆ, ಶ್ರುತಾದೇವಿ, ಶ್ರುತಶ್ರವಸ್ಸು ಮತ್ತು ರಾಜಾಧಿದೇವಿಯರೆಂದು ಇವರ ಹೆಸರು. ಇವರೈವರೂ ವೀರಮಾತೆಯರು.

ಕೃತಸ್ಯ ತು ಶ್ರುತಾದೇವೀ ಸುಗ್ರೀವಂ ಸುಷುವೇ ಸುತಂ ।
ಕೈಕೇಯ್ಯಾಂ ಶ್ರುತಕೀರ್ತ್ಯಾಂ ತು ಜಜ್ಞೇ ಸೋಽನುವ್ರತೋ ನೃಪಃ ॥ ೫ ॥

ಶ್ರುತಶ್ರವಸಿ ಚೈದ್ಯಸ್ಯ ಸುನೀಥಸ್ಸಮುಪದ್ಯತ ।
ಬಹುಶೋ ಧರ್ಮಚಾರೀ ಸ ಸಂಬಭೂವಾರಿಮರ್ದನಃ ॥ ೬ ॥

ಅಥ ಸಖ್ಯೇನ ವೃದ್ಧೋಽಸೌ ಕುಂತಿಭೋಜೇ ಸುತಾಂ ದದೌ ।
ಏವಂ ಕುಂತೀ ಸಮಾಖ್ಯಾತಾ ವಸುದೇವಸ್ವಸಾ ಪೃಥಾ ॥ ೭ ॥

ವಸುದೇವೇನ ಸಾ ದತ್ತಾ ಪಾಂಡೋರ್ಭಾರ್ಯಾ ಹ್ಯನಿಂದತಾ ।
ಪಾಂಡೋರರ್ಥೇನ ಸಾ ಜಜ್ಞೇ ದೇವಪುತ್ರಾನ್ ಮಹಾರಥಾನ್ ॥ ೮ ॥

ಧರ್ಮಾದ್ಯುಧಿಷ್ಠಿರೋ ಜಜ್ಞೇ ವಾಯೋರ್ಜಜ್ಞೇ ವೃಕೋದರಃ ।
ಇಂದ್ರಾದ್ಧನಂಜಯಶ್ಚೈವ ಶಕ್ರತುಲ್ಯಪರಾಕ್ರಮಃ ॥ ೯ ॥

---

೫. ಶ್ರುತಾದೇವಿಯು ಕೃತನನ್ನು ವರಿಸಿ ಸುಗ್ರೀವನೆಂಬ ಸುತನನ್ನು ಪಡೆದಳು. ಕೇಕಯ ರಾಜನ ಪುತ್ರಿಯಾದ ಶ್ರುತಕೀರ್ತಿಯಲ್ಲಿ ಅನುವ್ರತ ರಾಜನು ಜನಿಸಿದನು.

೬. ಶ್ರುತಶ್ರವಸ್ಸೆಂಬವಳು ಚೈದ್ಯಭೂಪಾಲನ ಪತ್ನಿ. ಅವಳಲ್ಲಿ ಸುನೀಥನು ಹುಟ್ಟಿದನು. ಅವನು ಬಹಳ ಧರ್ಮರತನು; ಶತ್ರುಸಂಹಾರಕನು.

೭. ವೃದ್ಧನಾದ ಈ ಶೂರ ನೃಪನು ತನ್ನ ಮಗಳನ್ನು ಸ್ನೇಹಿತನಾದ ಕುಂತಿಭೋಜ ರಾಜನಿಗೆ ಸಾಕುವುದಕ್ಕಾಗಿ ಕೊಟ್ಟನು. ಆದುದರಿಂದ ವಸುದೇವನ ತಂಗಿಯಾದ ಪೃಥೆಗೆ ಕುಂತಿಯೆಂದೂ ಹೆಸರು ಬಂದಿತು.

೮. ದೋಷದ ಸಂಬಂಧವೇ ಇಲ್ಲದ ಆ ಕುಂತಿಯನ್ನು ವಸುದೇವನು ಪಾಂಡುರಾಜನಿಗೆ ಕೊಟ್ಟು ಲಗ್ನಮಾಡಿದನು. ಅವಳು ಮಂತ್ರಬಲದಿಂದ ದೇವತಾಂಶರೂ, ಮಹಾಶೂರರೂ ಆದ ಮಕ್ಕಳನ್ನು ಪ್ರಸವಿಸಿದಳು. ಅವರೇ ಪಾಂಡುರಾಜನ ಪುತ್ರರು.

೯. ಯಮಧರ್ಮರಾಯನಿಂದ ಧರ್ಮರಾಜನೂ, ವಾಯುವಿನಿಂದ ಭೀಮಸೇನನೂ, ಇಂದ್ರನಿಂದ ಅವನಷ್ಟೇ ವೀರನಾದ ಅರ್ಜುನನೂ ಹುಟ್ಟಿದರು.

**ಮಾದ್ರವತ್ಯಾಂ ತು ಜನಿತಾವಶ್ವಿಭ್ಯಾಮಿತಿ ಶುಶ್ರುಮಃ ।**
**ನಕುಲಃ ಸಹದೇವಶ್ಚ ರೂಪಶೀಲಗುಣಾನ್ವಿತೌ ॥೧೦॥**

**ರೋಹಿಣೀ ಪೌರವೀ ಸಾ ತು ಖ್ಯಾತಮಾನಕದುಂದುಭೇಃ ।**
**ಲೇಭೇ ಜ್ಯೇಷ್ಠಂ ಸುತಂ ರಾಮಂ ಸಾರಣಂ ಚ ಸುತಂ ಪ್ರಿಯಂ ॥೧೧॥**

**ದುರ್ದಮಂ ದಮನಂ ಸುಭ್ರುಂ ಪಿಂಡಾರಕಮಹಾಹನೂ ।**
**ಚಿತ್ರಾಕ್ಷ್ಯೌ ದ್ವೇ ಕುಮಾರ್ಯೌ ತು ರೋಹಿಣ್ಯಾಂ ಜಜ್ಞಿರೇ ತದಾ ॥೧೨॥**

**ದೇವಕ್ಯಾಂ ಜಜ್ಞಿರೇ ಶೌರೇಃ ಸುಷೇಣಃ ಕೀರ್ತಿಮಾನಪಿ ।**
**ಉದಾಸೀ ಭದ್ರಸೇನಶ್ಚ ಋಷಿವಾಸಸ್ತಥೈವ ಚ ।**
**ಷಷ್ಠೋ ಭದ್ರವಿದೇಹಶ್ಚ ಕಂಸಸ್ಸರ್ವಾನಘಾತಯತ್ ॥೧೩॥**

---

೧೦. ಮದ್ರರಾಜನ ಮಗಳಾದ ಮಾದ್ರಿಯಲ್ಲಿ ಅಶ್ವಿನೀದೇವತೆಗಳಿಂದ ಒಳ್ಳೆಯ ರೂಪ, ನಡತೆ, ಗುಣ ಇವುಗಳಿಂದ ಕೂಡಿದ ನಕುಲನೂ, ಸಹದೇವನೂ ಹುಟ್ಟಿದರು.

೧೧. ಪೂರುವಿನ ಮಗಳಾದ ರೋಹಿಣಿಯು ವಸುದೇವನ ಪತ್ನಿ. ಅವಳು ಜ್ಯೇಷ್ಠನಾದ ಬಲರಾಮನನ್ನೂ, ತರುವಾಯ ಪ್ರಿಯಪುತ್ರನೆನಿಸಿದ ಸಾರಣನನ್ನೂ ಹೆತ್ತಳು.

೧೨. ದುರ್ದಮ, ದಮನ, ಸುಭ್ರು, ಪಿಂಡಾರಕ, ಮಹಾಹನು ಇವರು ರೋಹಿಣಿಯ ಉಳಿದ ಗಂಡು ಮಕ್ಕಳು. ಇವರಲ್ಲದೆ ಇಬ್ಬರು ಕನ್ಯೆಯರೂ ಅವಳಲ್ಲಿ ಹುಟ್ಟಿದರು. ಅವರ ಕಣ್ಣುಗಳು ಚೆಲುವನ್ನು ಸೂಸುತ್ತಿದ್ದುವು.

೧೩. ವಸುದೇವನ ಮತ್ತೊಬ್ಬ ಪತ್ನಿಯಾದ ದೇವಕಿಯಲ್ಲಿ ಸುಷೇಣ, ಕೀರ್ತಿಮಂತ, ಉದಾಸಿ, ಭದ್ರಸೇನ, ಋಷಿವಾಸ, ಆರನೆಯವನಾದ ಭದ್ರವಿದೇಹ ಎಂಬ ಮಕ್ಕಳು ಜನಿಸಿದರು. ಇವರೆಲ್ಲರನ್ನೂ ಕಂಸನು ಕೊಂದನು.

**ಪ್ರಥಮಾ ಯಾ ಅಮಾವಾಸ್ಯಾ ವಾರ್ಷಿಕೀ ತು ಭವಿಷ್ಯತಿ ।**
**ತಸ್ಯಾಂ ಜಜ್ಞೇ ಮಹಾಬಾಹುಃ ಪೂರ್ವಂ ಕೃಷ್ಣಃ ಪ್ರಜಾಪತಿಃ ॥೧೪॥**

**ಅನುಜಾ ತ್ವಭವತ್ಕೃಷ್ಣಾತ್ಸುಭದ್ರಾ ಭದ್ರಭಾಷಿಣೀ ।**
**ದೇವಕ್ಯಾಂ ತು ಮಹಾತೇಜಾ ಜಜ್ಞೇ ಶೂರೀ ಮಹಾಯಶಾಃ ॥೧೫॥**

**ಸಹದೇವಸ್ತು ತಾಮ್ರ್ಯಾಯಾಂ ಜಜ್ಞೇ ಶೌರಿಕುಲೋದ್ವಹಃ ।**
**ಉಪಾಸಂಗಧರಂ ಲೇಭೇ ತನಯಂ ದೇವರಕ್ಷಿತಾ ।**
**ಏಕಾಂ ಕನ್ಯಾಂ ಚ ಸುಭಗಾಂ ಕಂಸಸ್ತಾಮಭ್ಯಘಾತಯತ್ ॥೧೬॥**

**ವಿಜಯಂ ರೋಚಮಾನಂ ಚ ವರ್ಧಮಾನಂ ತು ದೇವಲಂ ।**
**ಏತೇ ಸರ್ವೇ ಮಹಾತ್ಮಾನೋ ಹ್ಯುಪದೇವ್ಯಾಂ ಪ್ರಜಜ್ಞಿರೇ ॥೧೭॥**

---

೧೪. ವರ್ಷರ್ತುವಿನಲ್ಲಿ ಬರುವ ಮೊದಲನೆಯ ಕೃಷ್ಣಪಕ್ಷದಲ್ಲಿ ಮಹಾ ಶೂರನೂ ಸರ್ವಜನರಕ್ಷಕನೂ ಆದ ಕೃಷ್ಣನು ದೇವಕಿಯ ಗರ್ಭದಲ್ಲಿ ಜನಿಸಿದನು.*

೧೫. ಕೃಷ್ಣನ ತರುವಾಯ ಇಂಪಾಗಿ ಮಾತನಾಡುವ ಅವನ ತಂಗಿ ಸುಭದ್ರೆಯು ಹುಟ್ಟಿದಳು. ಕೀರ್ತಿವಂತನೂ, ಅಧಿಕ ತೇಜಸ್ವಿಯೂ ಆದ ಶೂರಿಯು ಅನಂತರ ದೇವಕಿಯ ಜಠರದಲ್ಲಿ ಉದಿಸಿದನು.

೧೬. ತಾಮ್ರ್ಯೆಯಲ್ಲಿ ಸಹದೇವನೆಂಬುವನು ಉತ್ಪನ್ನನಾದನು. ಅವನು ವಸುದೇವನ ವಂಶಕ್ಕೆ ಕೀರ್ತಿಯನ್ನು ತಂದನು. ದೇವರಕ್ಷಿತೆಯು ಉಪಾಸಂಗಧರ ನೆಂಬ ಪುತ್ರನನ್ನೂ, ಸುಂದರಿಯಾದ ಒಬ್ಬ ಮಗಳನ್ನೂ ಪಡೆದಳು. ಕಂಸನು ಈ ಕನ್ಯೆಯನ್ನು ಕೊಂದುಹಾಕಿದನು.

೧೭. ವಿಜಯ, ರೋಚಮಾನ, ವರ್ಧಮಾನ, ದೇವಲ ಎಂಬ ಮಹಾ ಮಹಿಮಶಾಲಿಗಳಾದ ಪುತ್ರರು ಉಪದೇವಿಯಲ್ಲಿ ಜನಿಸಿದರು.

**ವರ್ಷರ್ತುವಿನ ಮೊದಲನೆಯ ಕೃಷ್ಣಪಕ್ಷವೆಂದರೆ ಶ್ರಾವಣ ಮಾಸದ ಕೃಷ್ಣಪಕ್ಷ. ಇಲ್ಲಿ ಅಮಾವಾಸ್ಯೆಯೆಂಬ ಪದವನ್ನು ತತ್ಸಹಿತವಾದ ಕೃಷ್ಣಪಕ್ಷವೆಂಬ ಅರ್ಥದಲ್ಲಿ ಪ್ರಯೋಗಿ ಸಿದೆ. ಏಕೆಂದರೆ ಕೃಷ್ಣನ ಜನ್ಮದಿನವು ಶ್ರಾವಣ ಬಹುಳ ಅಷ್ಟಮಿಯೆಂದು ಪ್ರಸಿದ್ಧವಾಗಿದೆ.**

**ಅವಗಾಹೋ ಮಹಾತ್ಮಾ ಚ ವೃಕದೇವ್ಯಾಮಜಾಯತ ।**
**ವೃಕದೇವ್ಯಾಂ ಸ್ವಯಂ ಜಜ್ಞೇ ನಂದಕೋ ನಾಮ ನಾಮತಃ ॥೧೮॥**

**ಸಪ್ತಮಂ ದೇವಕೀ ಪುತ್ರಂ ಮದನಂ ಸುಷುವೇ ನೃಪ ।**
**ಗವೇಷಣಂ ಮಹಾಭಾಗಂ ಸಂಗ್ರಾಮೇಷ್ವಪರಾಜಿತಂ ॥೧೯॥**

**ಶ್ರದ್ಧಾದೇವ್ಯಾ ವಿಹಾರೇ ತು ವನೇ ಹಿ ವಿಚರನ್ ಪುರಾ ।**
**ವೈಶ್ಯಾಯಾಮದಧಾಚ್ಛೌರಿಃ ಪುತ್ರಂ ಕೌಶಿಕಮಗ್ರಜಂ ॥೨೦॥**

**ಸುತನೂ ರಥರಾಜೀ ಚ ಶೌರೇರಾಸ್ತಾಂ ಪರಿಗ್ರಹೌ ।**
**ಪುಂಡ್ರಶ್ಚ ಕಪಿಲಶ್ಚೈವ ವಸುದೇವಾತ್ಮಜೌ ಬಲೌ ॥೨೧॥**

**ಜರೋ ನಾಮ ನಿಷಾದೋಽಭೂತ್ಪ್ರಥಮಃ ಸ ಧನುರ್ಧರಃ ।**
**ಸೌಭದ್ರಶ್ಚ ಭವಶ್ಚೈವ ಮಹಾಸತ್ವೌ ಬಭೂವತುಃ ॥೨೨॥**

---

೧೮. ಮಹಾತ್ಮನಾದ ಅವಗಾಹನು ವೃಕದೇವಿಯಲ್ಲಿ ಉದಿಸಿದನು. ಅವಳಲ್ಲಿ ಪ್ರಸಿದ್ಧನಾದ ನಂದಕನೂ ಸಹ ಜನಿಸಿದನು.

೧೯. ಓ ರಾಜಾ, ದೇವಕಿಯು ಏಳನೆಯ ಮಗನಾದ ಮದನನನ್ನು ಹೆತ್ತಳು. ಬಳಿಕ ಅದೃಷ್ಟಶಾಲಿಯೂ, ರಣಶೂರನೂ ಆದ ಗವೇಷಣನು ಜನಿಸಿದನು.

೨೦. ಹಿಂದೆ ವಸುದೇವನು ಶ್ರದ್ಧಾದೇವಿಯ ವಿಹಾರವನದಲ್ಲಿ ಸಂಚರಿಸುತ್ತ ವೈಶ್ಯ ಸ್ತ್ರೀಯೊಬ್ಬಳಲ್ಲಿ ಹಿರಿಯ ಮಗನಾದ ಕೌಶಿಕನನ್ನು ಉತ್ಪಾದನ ಮಾಡಿದನು.

೨೧. ವಸುದೇವನಿಗೆ ಸುತನು ಮತ್ತು ರಥರಾಜಿಯೆಂಬ ಇನ್ನಿಬ್ಬರು ಪತ್ನಿಯರಿದ್ದರು. ಇವರಲ್ಲಿ ಪುಂಡ್ರ ಮತ್ತು ಕಪಿಲರೆಂಬ ಮಕ್ಕಳಿಬ್ಬರು ಜನಿಸಿದರು. ಇವರು ಬಲಶಾಲಿಗಳು.

೨೨. ಮೇಲಿನವರಲ್ಲದೆ ವಸುದೇವನಿಗೆ ಜರನೆಂಬ ಬೇಡರವನೂ ಮಗನಾದನು. ಇವನು ಬಿಲ್ಗಾರರಲ್ಲಿ ಮೊದಲನೆಯವನಾಗಿದ್ದನು. ಸೌಭದ್ರ, ಭವ ಎಂಬವರಿಬ್ಬರೂ ಮಹಾ ಪರಾಕ್ರಮಶಾಲಿಗಳಾಗಿದ್ದರು.

**ದೇವಭಾಗಸುತಶ್ಚಾಪಿ ನಾಮ್ನಾಽಸಾವುದ್ಧತಃ ಸ್ಮೃತಃ ।**
**ಪಂಡಿತಂ ಪ್ರಥಮಂ ಪ್ರಾಹುರ್ದೇವಶ್ರವಸಮುತ್ತಮಂ ॥೨೩॥**

**ಐಕ್ಷ್ವಾಕ್ಯಲಭತಾಪತ್ಯ ಮನಾಧೃಷ್ಟೇರ್ಯಶಸ್ವಿನೀ ।**
**ನಿಧೂತಸತ್ವಂ ಶತ್ರುಘ್ನಂ ಶ್ರಾದ್ಧಸ್ತಸ್ಮಾದಜಾಯತ ॥೨೪॥**

**ಕರೂಷಾಯಾನಪತ್ಯಾಯ ಕೃಷ್ಣಸ್ತುಷ್ಟಃ ಸುತಂ ದದೌ ।**
**ಸುಚಂದ್ರಂ ತು ಮಹಾಭಾಗಂ ವೀರ್ಯವಂತಂ ಮಹಾಬಲಂ ॥೨೫॥**

**ಜಾಂಬವತ್ಯಾಃ ಸುತಾವೇತೌ ದ್ವೌ ಚ ಸತ್ಕೃತಲಕ್ಷಣೌ ।**
**ಚಾರುದೇಷ್ಣಶ್ಚ ಸಾಂಬಶ್ಚ ವೀರ್ಯವಂತೌ ಮಹಾಬಲೌ ॥೨೬॥**

**ತಂತಿಪಾಲಶ್ಚ ತಂತಿಶ್ಚ ನಂದನಸ್ಯ ಸುತಾವುಭೌ ।**
**ಶಮೀಕಪುತ್ರಾಶ್ಚತ್ವಾರೋ ವಿಕ್ರಾಂತಾಃ ಸುಮಹಾಬಲಾಃ ।**
**ವಿರಾಜಶ್ಚ ಧನುಶ್ಚೈವ ಶ್ಯಾಮಶ್ಚ ಸೃಂಜಯಸ್ತಥಾ ॥೨೭॥**

---

೨೩. ದೇವಭಾಗನ ಮಗನಿಗೆ ಉದ್ಧವನೆಂದು ಹೆಸರು. ದೇವಶ್ರವಸ್ಸನ್ನು ಅತಿಶ್ರೇಷ್ಠನಾದ ಪಂಡಿತನೆಂದು ಹೇಳುತ್ತಾರೆ.

೨೪. ಕೀರ್ತಿಶಾಲಿನಿಯಾದ ಐಕ್ಷ್ವಾಕಿಯು ಅನಾಧೃಷ್ಟಿಯಿಂದ ಶತ್ರುಸಂಹಾರಕನಾದ ನಿಧೂತಸತ್ವನನ್ನು ಪಡೆದಳು. ಇವನ ಮಗನೇ ಶ್ರಾದ್ಧನೆಂಬುವನು.

೨೫. ಕರೂಷನು ಅಪುತ್ರಕನಾಗಿರಲು ಅವನ ಸೇವೆಯಿಂದ ಮೆಚ್ಚಿದ ಕೃಷ್ಣನು ಅವನಿಗೆ ಸುಚಂದ್ರನೆಂಬ ಮಗನನ್ನು ಕರುಣಿಸಿದನು. ಅವನು ಅದೃಷ್ಟವಂತ, ವೀರ ಮತ್ತು ಬಲಿಷ್ಠ.

೨೬. ಶುಭಲಕ್ಷಣಗಳಿಂದ ಕೂಡಿದ ಚಾರುದೇಷ್ಣನೂ, ಸಾಂಬನೂ ಜಾಂಬವತಿಯ ಮಕ್ಕಳು. ಇವರು ವೀರ್ಯದಲ್ಲೂ ಬಲದಲ್ಲೂ ಅಧಿಕರೆನಿಸಿದ್ದರು.

೨೭. ನಂದನನಿಗೆ ತಂತಿಪಾಲ, ತಂತಿ ಎಂಬ ಇಬ್ಬರು ಮಕ್ಕಳಿದ್ದರು. ಪರಾಕ್ರಮಶಾಲಿಗಳೂ ಶಕ್ತಿವಂತರೂ ಆದ ನಾಲ್ವರು ಮಕ್ಕಳು ಶಮೀಕನಿಗೆ ಹುಟ್ಟಿದರು. ವಿರಾಜ, ಧನು, ಶ್ಯಾಮ, ಸೃಂಜಯ ಎಂದು ಅವರ ಹೆಸರು.

**ಅನಪತ್ಯೋಽಭವಚ್ಛ್ಯಾಮಃ ಶಮೀಕಸ್ತು ವನಂ ಯಯೌ ।**
**ಜುಗುಪ್ಸಮಾನೋ ಭೋಜತ್ವಂ ರಾಜರ್ಷಿತ್ವಮವಾಪ್ತವಾನ್ ॥೨೮॥**

**ಕೃಷ್ಣಸ್ಯ ಜನ್ಮಾಭ್ಯುದಯಂ ಯಃ ಕೀರ್ತಯತಿ ನಿತ್ಯಶಃ ।**
**ಶೃಣೋತಿ ಮಾನವೋ ನಿತ್ಯಂ ಸರ್ವಪಾಪೈಃ ಪ್ರಮುಚ್ಯತೇ ॥೨೯॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸೋಮವಂಶೇ**
**ವೃಷ್ಣಿವಂಶಾನುಕೀರ್ತನಂ ನಾಮ ಷಟ್ಚತ್ವಾರಿಂಶೋಽಧ್ಯಾಯಃ**

---

೨೮. ಶ್ಯಾಮನಿಗೆ ಮಕ್ಕಳಾಗಲಿಲ್ಲ; ಶಮೀಕನಾದರೋ ಭೋಜವಂಶದವರ ರಾಜನಾಗಿರಲು ಬೇಸರಪಟ್ಟು, ಕಾಡಿಗೆ ಹೋಗಿ ರಾಜರ್ಷಿಯಾದನು.

೨೯. ಕೃಷ್ಣನ ಜನ್ಮವನ್ನೂ ಅಭಿವೃದ್ಧಿಯನ್ನೂ ಯಾವನು ಪ್ರತಿದಿನವೂ ಹೇಳುವನೋ ಅಥವಾ ಕೇಳುವನೋ ಆ ಮನುಷ್ಯನ ಪಾಪಗಳೆಲ್ಲವೂ ತೊಲಗುವುವು.

**ಅಧ್ಯಾಯದ ಸಾರಾಂಶ**

ವೃಷ್ಣಿವಂಶದಲ್ಲಿ ಐಕ್ಷ್ವಾಕಿಯ ಜಠರದಲ್ಲಿ ಶೂರನು ಜನಿಸಿದನು. ಇವನ ಮಗ ವಸುದೇವ. ಇವನಿಗೆ ದೇವಕಿ, ರೋಹಿಣಿ ಮುಂತಾದ ಹಲವರು ಪತ್ನಿಯರಿದ್ದರು. ದೇವಕಿಯಲ್ಲಿ ಕೃಷ್ಣ, ಸುಭದ್ರೆ ಮುಂತಾದವರೂ, ರೋಹಿಣಿಯಲ್ಲಿ ಬಲರಾಮಾದಿಗಳೂ ಜನಿಸಿದರು. ವಸುದೇವನ ತಂಗಿ ಪೃಥೆ. ಇವಳಿಗೆ ಕುಂತಿಯೆಂದೂ ಹೆಸರುಂಟು. ಇವಳು ಪಾಂಡುರಾಜನ ಪತ್ನಿ. ಧರ್ಮರಾಜ ಮೊದಲಾದವರನ್ನು ಯಮನೇ ಮುಂತಾದ ದೇವತೆಗಳ ಅನುಗ್ರಹದಿಂದ ಪಡೆದಳು. ವೃಷ್ಣಿವಂಶದಲ್ಲಿ ಇನ್ನೂ ಎಷ್ಟೋ ಜನ ರಾಜರು ಉದಿಸಿ ಪ್ರಖ್ಯಾತರಾದರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಸೋಮವಂಶದೊಳಗೆ ವೃಷ್ಣಿವಂಶ ವರ್ಣನವೆಂಬ ನಲವತ್ತಾರನೆಯ ಅಧ್ಯಾಯವು ಮುಗಿದುದು

## ಅಥ ಶ್ರೀಮತ್ಸ್ಯಮಹಾಪುರಾಣೇ ಸಪ್ತಚತ್ವಾರಿಂಶೋಽಧ್ಯಾಯಃ

॥ ಸೂತ ಉವಾಚ ॥

ಅಥ ದೇವೋ ಮಹಾದೇವಃ ಪೂರ್ವಂ ಕೃಷ್ಣಃ ಪ್ರಜಾಪತಿಃ ।
ವಿಹಾರಾರ್ಥಂ ಸ ದೇವೇಶೋ ಮಾನುಷೇಷ್ವಪಿ ಜಾಯತೇ ॥ ೧ ॥

ದೇವಕ್ಯಾಂ ವಸುದೇವಸ್ಯ ತಪಸಾ ಪುಷ್ಕರೇಕ್ಷಣಃ ।
ಚತುರ್ಬಾಹುಸ್ತದಾ ಜಾತೋ ದಿವ್ಯರೂಪೋ ಜ್ವಲಞ್ಛ್ರಿಯಾ ॥ ೨ ॥

ಶ್ರೀವತ್ಸಲಕ್ಷಣಂ ದೇವಂ ದೃಷ್ಟ್ವಾ ದಿವ್ಯೈಶ್ಚ ಲಕ್ಷಣೈಃ ।
ಉವಾಚ ವಸುದೇವಸ್ತಂ ರೂಪಂ ಸಂಹರ ವೈ ಪ್ರಭೋ ॥ ೩ ॥

ಭೀತೋಽಹಂ ದೇವ ಕಂಸಸ್ಯ ತತಸ್ತ್ವೇತದ್ಬ್ರವೀಮಿ ತೇ ।
ಮಮ ಪುತ್ರಾ ಹತಾಸ್ತೇನ ಜ್ಯೇಷ್ಠಾಸ್ತೇ ಭೀಮವಿಕ್ರಮಾಃ ॥ ೪ ॥

---

೧. ಸೂತಪೌರಾಣಿಕನು ಹೇಳಿದನು.—ದೇವಾಧಿದೇವನೂ ಸರ್ವಲೋಕೇಶ್ವರನೂ ಆದ ಶ್ರೀಕೃಷ್ಣನು ಲೀಲಾರ್ಥವಾಗಿ ಮನುಷ್ಯರಲ್ಲಿ ಸಹ ಜನ್ಮವನ್ನು ತಾಳುವನು.

೨. ವಸುದೇವನ ತಪಸ್ಸಿನಿಂದ ದೇವಕಿಯ ಗರ್ಭದಲ್ಲಿ ಪುಂಡರೀಕಾಕ್ಷನು ದಿವ್ಯರೂಪದಿಂದ ಚತುರ್ಬಾಹುಧಾರಿಯಾಗಿ ಕಾಂತಿಯಿಂದ ಪ್ರಕಾಶಿಸುತ್ತ ಹುಟ್ಟಿದನು.

೩-೪. ಶ್ರೀವತ್ಸವೆಂಬ ಮಚ್ಚೆಯೂ, ದಿವ್ಯಲಕ್ಷಣಗಳೂ ಮೆರೆಯುತ್ತಿರಲು, ಶ್ರೀಕೃಷ್ಣಸ್ವಾಮಿಯನ್ನು ವಸುದೇವನು ನೋಡಿ ಇಂತು ಬೇಡಿದನು. "ದೇವಾ, ನಿನ್ನ ಈ ದಿವ್ಯ ಸ್ವರೂಪವನ್ನು ಮರೆಮಾಡಿಕೊ; ಕಂಸನಿಂದ ನನಗೆ ಭಯವಾಗುತ್ತಿದೆ. ಆದುದರಿಂದ ನಿನಗಿಂತು ಹೇಳುತ್ತೇನೆ. ಅತ್ಯದ್ಭುತ ಸಾಹಸಿಗಳೂ, ನಿನ್ನ ಅಣ್ಣಂದಿರೂ ಆದ ನನ್ನ ಮಕ್ಕಳನ್ನು ಅವನು ಕೊಂದನು."

ವಸುದೇವವಚಃ ಶ್ರುತ್ವಾ ರೂಪಂ ಸಂಹರತೇಽಚ್ಯುತಃ ।
ಅನುಜ್ಞಾಪ್ಯ ತತಃ ಶೌರಿಂ ನಂದಗೋಪಗೃಹೇಽನಯತ್ ॥ ೫ ॥
ದತ್ತ್ವೈನಂ ನಂದಗೋಪಸ್ಯ ರಕ್ಷ್ಯತಾಮಿತಿ ಚಾಬ್ರವೀತ್ ।
ಅತಸ್ತು ಸರ್ವಕಲ್ಯಾಣಂ ಯಾದವಾನಾಂ ಭವಿಷ್ಯತಿ
ಅಯಂ ತು ಗರ್ಭೋ ದೇವಕ್ಯಾಂ ಜಾತಃ ಕಂಸಂ ಹನಿಷ್ಯತಿ । ॥ ೬ ॥

॥ ಋಷಯ ಊಚುಃ ॥

ಕ ಏಷ ವಸುದೇವಸ್ತು ದೇವಕೀ ಚ ಯಶಸ್ವಿನೀ ।
ನಂದಗೋಪಶ್ಚ ಕಸ್ತ್ವೇಷ ಯಶೋದಾ ಚ ಮಹಾವ್ರತಾ ॥ ೭ ॥
ಯೋ ವಿಷ್ಣುಂ ಜನಯಾಮಾಸ ಯಂ ಚ ತಾತೇತ್ಯಭಾಷತ ।
ಯಾ ಗರ್ಭಂ ಜನಯಾಮಾಸ ಯಾ ಚೈನಂ ತ್ವಭ್ಯವರ್ಧಯತ್ ॥ ೮ ॥

॥ ಸೂತ ಉವಾಚ ॥

ಪುರುಷಃ ಕಶ್ಯಪಸ್ತ್ವಾಸೀದದಿತಿಸ್ತು ಪ್ರಿಯಾ ಸ್ಮೃತಾ ।
ಬ್ರಹ್ಮಣಃ ಕಶ್ಯಪಸ್ತ್ವಂಶಃ ಪೃಥಿವ್ಯಾಸ್ತ್ವದಿತಿಸ್ತಥಾ ॥ ೯ ॥

---

೫-೬. ವಸುದೇವನ ಮಾತನ್ನು ಕೇಳಿ ಕೃಷ್ಣನು ತನ್ನ ಅಮಾನುಷರೂಪವನ್ನು ಮರೆಮಾಡಿಕೊಂಡನು. ನಂದಗೋಪನ ಮನೆಗೆ ತನ್ನನ್ನು ತೆಗೆದುಕೊಂಡು ಹೋಗಿ ಬಿಡಬೇಕೆಂದೂ, ಆ ಮೂಲಕ ಕಂಸನಿಂದ ತನಗೆ ಅಪಾಯವಾಗದಂತೆ ರಕ್ಷಿಸಬೇಕೆಂದೂ, ಅದರಿಂದ ಯಾದವರಿಗೆ ಮಂಗಳವೆಲ್ಲ ಆಗುವುದೆಂದೂ ಹೇಳಿದನು. ದೇವಕಿಯ ಗರ್ಭದಲ್ಲಿ ಹುಟ್ಟಿದ ಆ ಮಗುವು ಕಂಸನನ್ನು ಕೊಲ್ಲುವುದು ಖಂಡಿತವೆಂದು ಜ್ಞಾನಿಗಳು ಅರಿತರು.

೭-೮. ಋಷಿಗಳು ಹೇಳಿದರು.—ವಿಷ್ಣುವು ಮನುಷ್ಯಜನ್ಮವನ್ನು ತಾಳುವಂತೆ ಯಾವನು ಮಾಡಿದನೋ ಆ ವಸುದೇವನೂ, ಯಾರನ್ನು ವಿಷ್ಣುವು ಅಪ್ಪಾ ಎಂದು ಕರೆದನೋ ಆ ನಂದಗೋಪನೂ ಯಾರು? ಕೃಷ್ಣನನ್ನು ಗರ್ಭದಲ್ಲಿ ಧರಿಸಿ ಹೆತ್ತ ದೇವಕಿಯೂ, ಅವನನ್ನು ಸಲಹಿದ ಕೀರ್ತಿವಂತಳಾದ ಯಶೋದೆಯೂ ಯಾರು?

೯. ಸೂತ ಮುನಿ ಹೇಳಿದನು.—ಪುರುಷನು ಕಶ್ಯಪನೆಂದೂ ಅವನ ಪ್ರಿಯೆ ಅದಿತಿಯೆಂದೂ ಹೇಳುವರು. ಕಶ್ಯಪನಲ್ಲಿ ಬ್ರಹ್ಮನ ಅಂಶವೂ, ಅದಿತಿಯಲ್ಲಿ ಭೂಮಿಯ ಅಂಶವೂ ನೆಲೆಸಿವೆ.

**ಅಥ ಕಾಮಾನ್ ಮಹಾಬಾಹುಃ ದೇವಕ್ಯಾಃ ಸಮಪೂರಯತ್ ।**
**ಯೇ ತಯಾ ಕಾಂಕ್ಷಿತಾ ನಿತ್ಯಮಜಾತಸ್ಯ ಮಹಾತ್ಮನಃ ॥೧೦॥**

**ಸೋಽವತೀರ್ಣೋ ಮಹೀಂ ದೇವಃ ಪ್ರವಿಷ್ಟೋ ಮಾನುಷೀಂ ತನುಂ ।**
**ಮೋಹಯನ್ ಸರ್ವಭೂತಾನಿ ಯೋಗಾತ್ಮಾ ಯೋಗಮಾಯಯಾ ॥೧೧॥**

**ನಷ್ಟೇ ಧರ್ಮೇ ತಥಾ ಜಜ್ಞೇ ವಿಷ್ಣುರ್ವೃಷ್ಣಿಕುಲೇ ಪ್ರಭುಃ ।**
**ಕರ್ತುಂ ಧರ್ಮಸ್ಯ ಸಂಸ್ಥಾನಮಸುರಾಣಾಂ ಪ್ರಣಾಶನಂ ॥೧೨॥**

**ರುಕ್ಮಿಣೀ ಸತ್ಯಭಾಮಾ ಚ ಸತ್ಯಾ ನಾಗ್ನಜಿತೀ ತಥಾ ।**
**ಸುಭಾಮಾ ಚ ತಥಾ ಶೈಬ್ಯಾ ಗಾಂಧಾರೀ ಲಕ್ಷ್ಮಣಾ ತಥಾ ॥೧೩॥**

**ಮಿತ್ರವಿಂದಾ ಚ ಕಾಲಿಂದೀ ದೇವೀ ಜಾಂಬವತೀ ತಥಾ ।**
**ಸುಶೀಲಾ ಚ ತಥಾ ಮಾದ್ರೀ ಕೌಶಲ್ಯಾ ವಿಜಯಾ ತಥಾ ।**
**ಏವಮಾದೀನಿ ದೇವೀನಾಂ ಸಹಸ್ರಾಣಿ ಚ ಷೋಡಶ ॥೧೪॥**

---

೧೦. ಮಹಾತ್ಮನಾದ ಪರಮಪುರುಷನು ಜನಿಸದೆ ಇನ್ನೂ ಗರ್ಭದಲ್ಲೇ ಇರುವಾಗ, ದೇವಕಿಯು ಇಷ್ಟಪಟ್ಟ ಬಯಕೆಗಳೆಲ್ಲವನ್ನೂ ಮಹಾಶೂರನಾದ ವಸುದೇವನು ಸಲ್ಲಿಸಿದನು.

೧೧. ಭಗವಂತನು ಭೂಮಿಯಲ್ಲಿ ಅವತಾರಮಾಡಿ ಮನುಷ್ಯ ಶರೀರವನ್ನು ಧರಿಸಿದನು. ಯೋಗೇಶ್ವರನಾದ ಅವನು ತನ್ನ ಯೋಗಮಾಯೆಯಿಂದ ಸರ್ವ ಜಂತುಗಳನ್ನೂ ಮೋಹಗೊಳಿಸಿದನು.

೧೨. ಧರ್ಮವು ನಷ್ಟವಾಗಿರಲು, ಅದನ್ನು ಸ್ಥಾಪನೆಮಾಡಿ ಧರ್ಮ ದ್ರೋಹಿಗಳಾದ ಅಸುರರನ್ನು ಅಡಗಿಸುವುದಕ್ಕಾಗಿ ಸರ್ವೇಶ್ವರನಾದ ವಿಷ್ಣುವು ಯಾದವವಂಶದಲ್ಲಿ ಜನಿಸಿದನು.

೧೩-೧೪. ರುಕ್ಮಿಣಿ, ಸತ್ಯಭಾಮೆ, ನಾಗ್ನಜಿತಿ, ಸುಭಾಮೆ, ಶೈಬ್ಯೆ, ಗಾಂಧಾರಿ, ಲಕ್ಷ್ಮಣೆ, ಮಿತ್ರವಿಂದೆ, ಕಾಲಿಂದಿ, ಜಾಂಬವತಿ, ಸುಶೀಲೆ, ಮಾದ್ರಿ, ಕೌಶಲ್ಯೆ, ವಿಜಯೆ ಮುಂತಾದ ಹದಿನಾರು ಸಾವಿರ ಜನ ದೇವಿಯರು ಕೃಷ್ಣನ ಪತ್ನಿಯರು.

**ರುಕ್ಮಿಣೀ ಜನಯಾಮಾಸ ಪುತ್ರಾನ್ರಣವಿಶಾರದಾನ್ ।**
**ಚಾರುದೇಷ್ಣಂ ರಣೇ ಶೂರಂ ಪ್ರದ್ಯುಮ್ನಂ ಚ ಮಹಾಬಲಂ ॥೧೫॥**

**ಸುಚಾರುಂ ಚಾರುಭದ್ರಂ ಚ ಸುದೇಷ್ಣಂ ಭದ್ರಮೇವ ಚ ।**
**ಪರಶುಂ ಚಾರುಗುಪ್ತಂ ಚ ಚಾರುಭದ್ರಂ ಸುಚಾರುಕಂ ।**
**ಚಾರುಹಾಸಂ ಕನಿಷ್ಠಂ ಚ ಕನ್ಯಾಂ ಚಾರುಮತೀಂ ತಥಾ ॥೧೬॥**

**ಜಜ್ಞಿರೇ ಸತ್ಯಭಾಮಾಯಾಂ ಭಾನುರ್ಭ್ರಮರವೀಕ್ಷಣಃ ।**
**ರೋಹಿತೋ ದೀಪ್ತಿಮಾಂಶ್ಚೈವ ತಾಮ್ರಶ್ಚಕ್ರೋ ಜಲಂಧಮಃ ॥೧೭॥**

**ಚತಸ್ರೋ ಜಜ್ಞಿರೇ ತೇಷಾಂ ಸ್ವಸಾರಸ್ತು ಯವೀಯಸೀಃ ।**
**ಜಾಂಬವತ್ಯಾಃ ಸುತೋ ಜಜ್ಞೇ ಸಾಂಬಃ ಸಮಿತಿಶೋಭನಃ ॥೧೮॥**

**ಮಿತ್ರವಾನ್ ಮಿತ್ರವಿಂದಶ್ಚ ಮಿತ್ರವಿಂದಾ ವರಾಂಗನಾ ।**
**ಮಿತ್ರಬಾಹುಃ ಸುನೀಥಶ್ಚ ನಾಗ್ನಜಿತ್ಯಾಃ ಪ್ರಜಾ ಹಿ ಸಾ ॥೧೯॥**

---

೧೫-೧೬. ರುಕ್ಮಿಣಿಯು ರಣಶೂರರಾದ ಮಕ್ಕಳನ್ನು ಪಡೆದಳು. ಸಮರ ಪಂಡಿತನಾದ ಚಾರುದೇಷ್ಣ, ಮಹಾಬಲನಾದ ಪ್ರದ್ಯುಮ್ನ, ಸುಚಾರು, ಚಾರು ಭದ್ರ, ಸುದೇಷ್ಣ, ಭದ್ರ, ಪರಶು, ಚಾರುಗುಪ್ತ, ಚಾರುಭದ್ರ, ಸುಚಾರಕ ಮತ್ತು ಕಿರಿಯವನಾದ ಚಾರುಹಾಸ ಇವರೆಲ್ಲರೂ ಗಂಡು ಮಕ್ಕಳು. ಚಾರುಮತಿ ಯೆಂಬುವಳು ಮಗಳು.

೧೭. ಸತ್ಯಭಾಮೆಯಲ್ಲಿ ದುಂಬಿಯಂತೆ ಥಳಥಳಿಸುವ ಕಣ್ಣುಗಳಿಂದ ಕೂಡಿದ ಭಾನು, ರೋಹಿತ, ದೀಪ್ತಮಂತ, ತಾಮ್ರ, ಚಕ್ರ, ಜಲಂಧಮ ಎಂಬ ಮಕ್ಕಳು ಹುಟ್ಟಿದರು.

೧೮. ಇವರಿಗೆ ನಾಲ್ವರು ತಂಗಿಯರು ಜನಿಸಿದರು. ಸಭೆಗಳಿಗೆ ಅಲಂಕಾರ ಪ್ರಾಯನಾದ ಸಾಂಬನನ್ನು ಜಾಂಬವತಿ ಪಡೆದಳು.

೧೯. ನಾರೀಮಣಿಯಾದ ಮಿತ್ರವಿಂದೆಯು ಮಿತ್ರವಂತ, ಮಿತ್ರವಿಂದ ಎಂಬ ಇಬ್ಬರು ಪುತ್ರರನ್ನು ಪಡೆದಳು. ಮಿತ್ರಬಾಹು, ಸುನೀಥ ಇವರಿಬ್ಬರೂ ನಾಗ್ನಜಿತಿಯ ಮಕ್ಕಳು

**ಏವಮಾದೀನಿ ಪುತ್ರಾಣಾಂ ಸಹಸ್ರಾಣಿ ನಿಬೋಧತ।**
**ಶತಂ ಶತಸಹಸ್ರಾಣಾಂ ಪುತ್ರಾಣಾಂ ತಸ್ಯ ಧೀಮತಃ ॥೨೦॥**

**ಅಶೀತಿಶ್ಚ ಸಹಸ್ರಾಣಿ ವಾಸುದೇವಸುತಾಸ್ತಥಾ।**
**ಲಕ್ಷಮೇಕಂ ತಥಾ ಪ್ರೋಕ್ತಂ ಪುತ್ರಾಣಾಂ ಚ ದ್ವಿಜೋತ್ತಮಾಃ ॥೨೧॥**

**ಉಪಾಸಂಗಸ್ಯ ತು ಸುತೌ ವಜ್ರಃ ಸಂಕ್ಷಿಪ್ತ ಏವ ಚ।**
**ಭೂರೀಂದ್ರಸೇನೋ ಭೂರಿಶ್ಚ ಗವೇಷಣಸುತಾವುಭೌ ॥೨೨॥**

**ಪ್ರದ್ಯುಮ್ನಸ್ಯ ತು ದಾಯಾದೋ ವೈದರ್ಭ್ಯಾಂ ಬುದ್ಧಿಸತ್ತಮಃ।**
**ಅನಿರುದ್ಧೋ ರಣೇಽರುದ್ಧೋ ಜಜ್ಞೇಽಸ್ಯ ಮೃಗಕೇತನಃ ॥೨೩॥**

**ಕಾಶ್ಯಾ ಸುಪಾರ್ಶ್ವತನಯಾ ಸಾಂಬಾಲ್ಲೇಭೇ ತರಸ್ವಿನಃ।**
**ಸತ್ಯಪ್ರಕೃತಯೋ ದೇವಾಃ ಪಂಚ ವೀರಾಃ ಪ್ರಕೀರ್ತಿತಾಃ ॥೨೪॥**

**ತಿಸ್ರಃ ಕೋಟ್ಯಃ ಪ್ರವೀರಾಣಾಂ ಯಾದವಾನಾಂ ಮಹಾತ್ಮನಾಂ।**
**ಷಷ್ಟಿಃ ಶತಸಹಸ್ರಾಣಿ ವೀರ್ಯವಂತೋ ಮಹಾಬಲಾಃ ॥೨೫॥**

---

೨೦-೨೧. ಮಹಾಜ್ಞಾನಿಯಾದ ಆ ಭಗವಂತನ ಮಕ್ಕಳ ಲೆಕ್ಕವನ್ನು ಹೇಳಲಾದೀತೆ? ಓ ಬ್ರಾಹ್ಮಣ ಶ್ರೇಷ್ಠರೇ, ಅವರು ನೂರು ಲಕ್ಷ ಮಂದಿ; ಎಂಬತ್ತು ಸಾವಿರ ಲಕ್ಷ ಮಂದಿ! ಲಕ್ಷ ಲಕ್ಷ ಮಂದಿ!

೨೨. ವಜ್ರನೂ ಸಂಕ್ಷಿಪ್ತನೂ ಉಪಾಸಂಗನ ಸುತರು. ಭೂರೀಂದ್ರಸೇನ, ಭೂರಿ ಇವರಿಬ್ಬರೂ ಗವೇಷಣನ ಮಕ್ಕಳು.

೨೩. ಪ್ರದ್ಯುಮ್ನನ ಭಾರ್ಯೆಯಾದ ವೈದರ್ಭಿಯಲ್ಲಿ ಸೂಕ್ಷ್ಮಬುದ್ಧಿಯುಳ್ಳವನೂ, ಯುದ್ಧದಲ್ಲಿ ತಡೆಯಿಲ್ಲದವನೂ ಆದ ಅನಿರುದ್ಧನು ಹುಟ್ಟಿದನು. ಇವನಿಗೆ ಮೃಗಧ್ವಜನೆಂಬವನು ಜನಿಸಿದನು.

೨೪. ಸುಪಾರ್ಶ್ವನ ಪುತ್ರಿಯಾದ ಕಾಶ್ಯೆಯು ಸಾಂಬನಿಂದ ವೇಗಶಾಲಿಗಳಾದ ಐವರು ಮಕ್ಕಳನ್ನು ಪಡೆದಳು. ಅವರು ಸತ್ಯಸ್ವಭಾವದವರು; ದೇವಾಂಶರೆಂಮೂ ವೀರರೆಂಮೂ ಪ್ರಖ್ಯಾತರಾದವರು.

೨೫. ಮಹಾತ್ಮರಾದ ಯಾದವ ವೀರಶ್ರೇಷ್ಠರ ಸಂಖ್ಯೆ ಮೂರು ಕೋಟಿ. ಇದಲ್ಲದೆ ಮಹಾವೀರರೂ, ಬಲಿಷ್ಠರೂ ಆದವರು ಇನ್ನೂ ಅರವತ್ತು ಲಕ್ಷ ಜನರಿದ್ದರು. ಇವರೆಲ್ಲರೂ ದೇವಾಂಶದಿಂದಲೇ ಈ ಲೋಕದಲ್ಲಿ ಅತಿ ತೇಜಸ್ವಿಗಳಾಗಿ ಜನಿಸಿದರು.

ದೇವಾಂಶಾಃ ಸರ್ವ ಏವೇಹ ಹ್ಯುತ್ಪನ್ನಾಸ್ತೇ ಮಹೌಜಸಃ ।
ದೇವಾಸುರೇ ಹತಾ ಯೇ ಚ ತ್ವಸುರಾ ಯೇ ಮಹಾಬಲಾಃ ॥೨೬॥

ಇಹೋತ್ಪನ್ನಾ ಮನುಷ್ಯೇಷು ಬಾಧಂತೇ ಸರ್ವಮಾನವಾನ್ ।
ತೇಷಾಮುತ್ಸಾದನಾರ್ಥಾಯ ಉತ್ಪನ್ನೋ ಯಾದವೇ ಕುಲೇ ॥೨೭॥

ಕುಲಾನಾಂ ಶತಮೇಕಂ ಚ ಯಾದವಾನಾಂ ಮಹಾತ್ಮನಾಂ ।
ಸರ್ವಮೇತತ್ಕುಲಂ ಯಾವದ್ವರ್ತತೇ ವೈಷ್ಣವೇ ಕುಲೇ ॥೨೮॥

ವಿಷ್ಣುಸ್ತೇಷಾಂ ಪ್ರಣೇತಾ ಚ ಪ್ರಭುತ್ವೇ ಚ ವ್ಯವಸ್ಥಿತಃ ।
ನಿದೇಶಸ್ಥಾಯಿನಸ್ತಸ್ಯ ಕಥ್ಯಂತೇ ಸರ್ವಯಾದವಾಃ ॥೨೯॥

॥ ಋಷಯ ಊಚುಃ ॥

ಸಪ್ತರ್ಷಯಃ ಕುಬೇರಶ್ಚ ಯಕ್ಷೋ ಮಾಣಿಚರಸ್ತಥಾ ।
ಶಾಲಕಿರ್ನಾರದಶ್ಚೈವ ಸಿದ್ಧೋ ಧನ್ವಂತರಿಸ್ತಥಾ ॥೩೦॥

ಆದಿದೇವಸ್ತಥಾ ವಿಷ್ಣುರೇಭಿಸ್ತು ಸಹ ದೈವತೈಃ ।
ಕಿಮರ್ಥಂ ಸಂಘಶೋ ಭೂತಾಃ ಸ್ಮೃತಾಃ ಸಂಭೂತಯಃ ಕತಿ ॥೩೧॥

---

೨೬-೨೭. ಹಿಂದೆ ದೇವಾಸುರ ಯುದ್ಧದಲ್ಲಿ ಸಂಹೃತರಾದ ಮಹಾಸುರರು ಮನುಷ್ಯಲೋಕದಲ್ಲಿ ಜನಿಸಿ ಜನರೆಲ್ಲರನ್ನೂ ಹಿಂಸಿಸುತ್ತಿರುವರು. ಅವರ ನಾಶಕ್ಕಾಗಿ ಯಾದವ ಕುಲದಲ್ಲಿ ಕೃಷ್ಣರೂಪಿಯಾದ ವಿಷ್ಣುವು ಹುಟ್ಟಿದನು.

೨೮. ಮಹಾತ್ಮರಾದ ಯಾದವರ ಮನೆತನಗಳು ಒಂದು ನೂರು. ಇವೆಲ್ಲವೂ ವೈಷ್ಣವ ಕುಲಕ್ಕೆ ಸೇರಿದುವು.

೨೯. ಕೃಷ್ಣನು ಅವರ ಮುಖಂಡನು. ಅವರ ಆಳ್ವಿಕೆ, ರಕ್ಷಣೆಗಳು ಅವನಿಗೇ ಸೇರಿದುವು. ಯಾದವರೆಲ್ಲರೂ ಆತನ ಆಜ್ಞಾಪಾಲಕರು.

೩೦-೩೧. ಋಷಿಗಳು ಹೇಳಿದರು.—ಸಪ್ತರ್ಷಿಗಳು, ಕುಬೇರ, ಯಕ್ಷಕುಲದ ಮಾಣಿಚರ, ಶಾಲಕಿ, ನಾರದ, ಆಯುರ್ವೇದದಲ್ಲಿ ಸಿದ್ಧಿಪಡೆದ ಧನ್ವಂತರಿ, ಈ ದೇವತೆಗಳೊಡಗೂಡಿದ ಆದಿದೇವನೆನಿಸಿದ ವಿಷ್ಣು ಇವರೆಲ್ಲರೂ ಏತಕ್ಕಾಗಿ ಒಟ್ಟೊಟ್ಟಿಗೆ ಅವತರಿಸುತ್ತಾರೆ? ವಿಷ್ಣುವು ತಾನಾಗಿ ತಾಳಿದ ಅವತಾರಗಳೆಷ್ಟು?

ಭವಿಷ್ಯಾಃ ಕತಿ ಚೈವಾನ್ಯೇ ಪ್ರಾದುರ್ಭಾವಾ ಮಹಾತ್ಮನಃ ।
ಬ್ರಹ್ಮಕ್ಷತ್ರೇಷು ಶಾಂತೇಷು ಕಿಮರ್ಥಮಿಹ ಜಾಯತೇ ॥೩೨॥

ಯದರ್ಥಮಿಹ ಸಂಭೂತೋ ವಿಷ್ಣುರ್ವೃಷ್ಣ್ಯಂಧಕೋತ್ತಮಃ ।
ಪುನಃ ಪುನರ್ಮನುಷ್ಯೇಷು ತನ್ನಃ ಪ್ರಬ್ರೂಹಿ ಪೃಚ್ಛತಾಂ ॥೩೩॥

॥ ಸೂತ ಉವಾಚ ॥

ತ್ಯಕ್ತ್ವಾ ದಿವ್ಯಾಂ ತನುಂ ವಿಷ್ಣುರ್ಮಾನುಷೇಷ್ವಿಹ ಜಾಯತೇ ।
ಯುಗೇಷ್ವಥ ಪರಾವೃತ್ತೇ ಕಾಲೇ ಪ್ರಶಿಥಿಲೇ ಪ್ರಭುಃ ॥೩೪॥

ದೇವಾಸುರವಿಮರ್ದೇಷು ಜಾಯತೇ ಹರಿರೀಶ್ವರಃ ।
ಹಿರಣ್ಯಕಶಿಪೌ ದೈತ್ಯೇ ತ್ರೈಲೋಕ್ಯಂ ಪ್ರಾಕ್ಪ್ರಶಾಸತಿ ॥೩೫॥

ಬಲಿನಾಧಿಷ್ಠಿತೇ ಚೈವ ಪುರಾ ಲೋಕತ್ರಯೇ ಕ್ರಮಾತ್ ।
ಸಂಖ್ಯಮಾಸೀತ್ಸುಮಹತ್ ದೇವಾನಾಮಸುರೈಃ ಸಹ ॥೩೬॥

---

೩೨. ಆ ಮಹಾಪುರುಷನು ಮುಂದೆ ತಾಳುವ ಮಿಕ್ಕ ಅವತಾರಗಳ ಸಂಖ್ಯೆಯೆಷ್ಟು? ಬ್ರಹ್ಮವರ್ಣದಲ್ಲೂ, ಕ್ಷತ್ರವರ್ಣದಲ್ಲೂ, ತಪಸ್ವಿಗಳಲ್ಲೂ ಆತನು ಜನಿಸುವುದೇತಕ್ಕೆ ?

೩೩. ವೃಷ್ಣಿಗಳು, ಅಂಧಕರು ಇವರಲ್ಲಿ ಉತ್ತಮನೆನಿಸಿದ ವಿಷ್ಣುವು ಮತ್ತೆ ಮತ್ತೆ ಮನುಷ್ಯರಲ್ಲಿ ಹುಟ್ಟುವುದೇಕೆ? ಇದನ್ನು ತಿಳಿಯಬೇಕೆಂದು ನಾವು ಕೇಳುತ್ತಿದ್ದೇವೆ. ದಯವಿಟ್ಟು ಹೇಳು.

೩೪. ಸೂತಪೌರಾಣಿಕನು ಹೇಳಿದನು.—ಒಂದು ಯುಗವು ಕಳೆದು ಮತ್ತೊಂದು ಯುಗವು ಬರಲು, ಧರ್ಮವು ಶಿಥಿಲವಾಗಲು, ಅಂತಹ ಸಮಯದಲ್ಲಿ ಲೋಕೇಶ್ವರನಾದ ವಿಷ್ಣುವು ತನ್ನ ದಿವ್ಯ ದೇಹವನ್ನು ಉಳಿದು ಮನುಷ್ಯರಲ್ಲಿ ಹುಟ್ಟುವನು.

೩೫-೩೬. ದೇವತೆಗಳಿಗೂ, ಅಸುರರಿಗೂ ಯುದ್ಧಗಳು ನಡೆದಾಗ ಸರ್ವೇಶ್ವರನಾದ ಹರಿಯು ಅವತರಿಸುವನು. ಹಿಂದೆ ದೈತ್ಯರಾಜನಾದ ಹಿರಣ್ಯಕಶಿಪು ಮೂರು ಲೋಕವನ್ನೂ ಗೆದ್ದು ಆಳುತ್ತಿದ್ದನು. ಬಲಿ ಚಕ್ರವರ್ತಿಯೂ ಸಹ ಲೋಕತ್ರಯವನ್ನು ಕ್ರಮವಾಗಿ ಜಯಿಸಿ ಅದರ ಒಡೆಯನಾಗಿದ್ದನು. ಇವೆರಡು ಸಮಯಗಳಲ್ಲೂ ದೇವತೆಗಳಿಗೂ ಅಸುರರಿಗೂ ದೊಡ್ಡ ಯುದ್ಧವು ನಡೆಯಿತು.

**ಯುಗಾಖ್ಯಾಸುರಸಂಪೂರ್ಣಂ ಹ್ಯಾಸೀದತ್ಯಾಕುಲಂ ಜಗತ್ ।**
**ನಿದೇಶಸ್ಥಾಯಿನಶ್ಚಾಪಿ ತಯೋರ್ದೇವಾಸುರಾಃ ಸಮಂ ॥೩೭॥**
**ಮೃಧೋ ಬಲಿವಿಮರ್ದಾಯ ಸಂಪ್ರವೃದ್ಧಸ್ಸುದಾರುಣಃ ।**
**ದೇವಾನಾಮಸುರಾಣಾಂ ಚ ಘೋರಃ ಕ್ಷಯಕರೋ ಮಹಾನ್ ॥೩೮॥**
**ಕರ್ತುಂ ಧರ್ಮವ್ಯವಸ್ಥಾನಂ ಜಾಯತೇ ಮಾನುಷೇಷ್ವಿಹ ।**
**ಭೃಗೋಃ ಶಾಪನಿಮಿತ್ತಂ ತು ದೇವಾಸುರಕೃತೇ ತದಾ ॥೩೯॥**

---

೩೭. ಆಯಾ ಯುಗದಲ್ಲಿ ಪ್ರಸಿದ್ಧರಾಗಿದ್ದ ದೈತ್ಯರು ಲೋಕದಲ್ಲೆಲ್ಲಾ ತುಂಬಿದ್ದರು. ಅವರಿಂದ ಜಗತ್ತಿಗೆ ಉಪದ್ರವವಾಗುತ್ತಿತ್ತು. ಮೇಲೆ ಹೇಳಿದ ಇಬ್ಬರು ದೈತ್ಯರಾಜರ ಅಪ್ಪಣೆಯಂತೆ ದೇವತೆಗಳೂ ರಾಕ್ಷಸರೂ ಸಮವಾಗಿ ನಡೆದು ಕೊಳ್ಳುತ್ತಿದ್ದರು.

೩೮. ಬಲಿಚಕ್ರವರ್ತಿಯನ್ನು ಅಡಗಿಸುವುದಕ್ಕಾಗಿ ಅತಿ ಭಯಂಕರವಾದ ಯುದ್ಧವನ್ನು ದೇವತೆಗಳು ರಾಕ್ಷಸರೊಡನೆ ನಡೆಸಿದರು. ಅದು ಎರಡು ಕಡೆಯವರಿಗೂ ವಿಶೇಷ ಹಾನಿಯನ್ನು ಹುಟ್ಟಿಸಿತು. ಮತ್ತು ಬಹಳ ಪ್ರಬಲವಾದ ಘೋರ ಸಂಗ್ರಾಮವಾಗಿತ್ತು.

೩೯. ಆಗ ಧರ್ಮವನ್ನು ನೆಲೆಗೊಳಿಸಲು ವಿಷ್ಣುವು ಮನುಷ್ಯರೂಪದಿಂದ ಹುಟ್ಟಿದನು. ದೇವತೆಗಳ ಮತ್ತು ಅಸುರರ ಯುದ್ಧಕ್ಕಾಗಿ ಆತನು ಜನ್ಮಧಾರಣೆ ಮಾಡಿದುದು ಭೃಗು ಮಹರ್ಷಿಗಳ ಶಾಪದಿಂದ.*

---

* ದೇವಾಸುರ ಯುದ್ಧವು ನಡೆದಾಗ ದೈತ್ಯರು ಸೋತು ಶರಣಾಗತರಾದರು. ದೇವತೆಗಳು ಅವರಿಗೆ ಅಭಯವಿತ್ತರು. ಆದರೂ ಅಸುರರನ್ನು ಅಡಗಿಸಬೇಕೆಂದು ಅವರ ಮೇಲೆ ಮತ್ತೆ ಬಿದ್ದರು. ದಿಕ್ಕುತೋಚದೆ ದೈತ್ಯರು ಭೃಗುಪತ್ನಿಯನ್ನು ಮರೆಹೊಕ್ಕರು. ದೇವತೆಗಳು ಆಗಲೂ ಬಿಡದೆ ದೇವಿಯ ಎದುರಿಗೇ ಅಸುರರನ್ನು ಸಂಹರಿಸತೊಡಗಿದರು. ಅವಳಿಗೆ ಕೋಪ ಬರಿದಿತು. ತನ್ನ ತಪಸ್ಸಿನ ಮಹಿಮೆಯಿಂದ ಇಂದ್ರನನ್ನು ಸ್ತಬ್ಧನನ್ನಾಗಿ ಮಾಡಿದಳು. ಆಗ ದೇವತೆಗಳು ವಿಷ್ಣುವನ್ನು ಮರೆಹೊಗಲು ಅವನು ಬಂದು ಅವಳನ್ನು ಸಂಹರಿಸಿದನು. ಭೃಗುಮುನಿಗೆ ಕ್ರೋಧ ಬಂದಿತು. "ಧರ್ಮವನ್ನರಿತೂ ಕೂಡ ನೀನು ಸ್ತ್ರೀ ಹತ್ಯವನ್ನು ಮಾಡಿದೆ. ಆದುದರಿಂದ ನೀನು ಮನುಷ್ಯಜನ್ಮವನ್ನು ಏಳು ಸಾರಿ ಎತ್ತು" ಎಂದು ವಿಷ್ಣುವಿಗೆ ಅವನು ಶಾಪವಿತ್ತನು.

॥ ಮುನಯ ಊಚುಃ ॥

ಕಥಂ ದೇವಾಸುರಕೃತೇ ವ್ಯಾಪಾರಂ ಪ್ರಾಪ್ತವಾನ್ ಸ್ವತಃ ।
ದೇವಾಸುರಂ ಯಥಾವೃತ್ತಂ ತನ್ನಃ ಪ್ರಬ್ರೂಹಿ ಪೃಚ್ಛತಾಂ ॥೪೦॥

॥ ಸೂತ ಉವಾಚ ॥

ತೇಷಾಂ ದಾಯನಿಮಿತ್ತಂ ತು ಸಂಗ್ರಾಮಾಸ್ತು ಸುದಾರುಣಾಃ ।
ವರಾಹಾದ್ಯಾ ದಶ ದ್ವೌ ಚ ಶಂಡಾಮರ್ಕಾಂತರೇ ಸ್ಮೃತಾಃ ॥೪೧॥

ನಾಮತಸ್ತು ಸಮಾಸೇನ ಶೃಣುತೈಷಾಂ ವಿವಕ್ಷತಃ ।
ಪ್ರಥಮೋ ನಾರಸಿಹ್ಮಸ್ತು ದ್ವಿತೀಯಶ್ಚಾಪಿ ವಾಮನಃ ॥೪೨॥

ತೃತೀಯಸ್ತು ವರಾಹಶ್ಚ ಚತುರ್ಥೋಽಮೃತಮಂಥನಃ ।
ಸಂಗ್ರಾಮಃ ಪಂಚಮಶ್ಚೈವ ಸಂಜಾತಸ್ತಾರಕಾಮಯಃ ॥೪೩॥

ಷಷ್ಠೋ ಹ್ಯಾಡೀಬಕಾಖ್ಯಸ್ತು ಸಪ್ತಮಸ್ತ್ರೈಪುರಸ್ತಥಾ ।
ಅಂಧಕಾಖ್ಯೋಽಷ್ಟಮಸ್ತೇಷಾಂ ನವಮೋ ವೃತ್ರಘಾತಕಃ ॥೪೪॥

---

೪೦. ಮುನಿಗಳು ಹೇಳಿದರು.—ದೇವಾಸುರ ಯುದ್ಧಕ್ಕಾಗಿ ವಿಷ್ಣುವು ತಾನೇ ಏಕೆ ಯತ್ನವನ್ನು ಕೈಗೊಂಡನು? ಆ ಯುದ್ಧವು ನಡೆದ ವಿವರವನು ನಮಗೆ ತಿಳಿಸು.

೪೧. ಸೂತಮುನಿ ಹೇಳಿದನು.—ಅವರಿಗೆ ದಾಯಭಾಗಕ್ಕಾಗಿ ಅತಿ ಭಯಂಕರವಾದ ಯುದ್ಧಗಳು ನಡೆದುವು. ಶಂಡ ಮತ್ತು ಅಮರ್ಕರೆಂಬ ಶುಕ್ರಾಚಾರ್ಯರ ಶಿಷ್ಯರಿಬ್ಬರು ದೈತ್ಯರ ಪಕ್ಷವನ್ನು ಬಿಟ್ಟು ದೇವತೆಗಳ ಕಡೆಗೆ ಹೋದರು. ಆ ಸಂಧಿಯಲ್ಲೇ ಇವು ಆದುವು. ಇವು ವರಾಹ, ನಾರಸಿಹ್ಮ ಮುಂತಾದ ಹನ್ನೆರಡು.

೪೨. ಸಂಗ್ರಹವಾಗಿ ಇವುಗಳ ಹೆಸರನ್ನು ಹೇಳುವೆನು ಕೇಳಿರಿ. ಮೊದಲನೆಯದು ನಾರಸಿಹ್ಮ. ಎರಡನೆಯದು ವಾಮನ.

೪೩-೪೫. ಮೂರನೆಯದು ವರಾಹ; ಅಮೃತಮಂಥನವು ನಾಲ್ಕನೆಯದು. ತಾರಕಾಮಯವೆಂಬ ಕಾಳಗವು ಐದನೆಯ ಸಾರಿ ನಡೆಯಿತು. ಆರನೆಯದು ಆಡೀಬಕವೆಂದು ಪ್ರಸಿದ್ಧವಾದುದು. ಏಳನೆಯದು ತ್ರೈಪುರವು. ಎಂಟ

**ಧಾತ್ರಶ್ಚ ದಶಮಶ್ಚೈವ ತತೋ ಹಾಲಾಹಲಃ ಸ್ಮೃತಃ ।**
**ಪ್ರಥಿತೋ ದ್ವಾದಶಸ್ತೇಷಾಂ ಘೋರಃ ಕೋಲಾಹಲಸ್ತಥಾ ॥೪೫॥**

**ಹಿರಣ್ಯಕಶಿಪುರ್ದೈತ್ಯೋ ನಾರಸಿಹ್ಮೇನ ಪಾತಿತಃ ।**
**ವಾಮನೇನ ಬಲಿರ್ಬದ್ಧಸ್ತ್ರೈಲೋಕ್ಯಾಕ್ರಮಣೇ ಪುರಾ ॥೪೬॥**

**ಹಿರಣ್ಯಾಕ್ಷೋ ಹತೋ ದ್ವಂದ್ವೇ ಪ್ರತಿಘಾತೇ ತು ದೈವತೈಃ ।**
**ದಂಷ್ಟ್ರಯಾ ತು ವರಾಹೇಣ ಸಮುದ್ರಸ್ತು ದ್ವಿಧಾ ಕೃತಃ ॥೪೭॥**

**ಪ್ರಹ್ಲಾದೋ ನಿರ್ಜಿತೋ ಯುದ್ಧೇ ಇಂದ್ರೇಣಾಮೃತಮಂಥನೇ ।**
**ವಿರೋಚನಸ್ತು ಪ್ರಹ್ಲಾದಿರ್ನಿತ್ಯಮಿಂದ್ರವಧೋದ್ಯತಃ ॥೪೮॥**

**ಇಂದ್ರೇಣೈವ ತು ವಿಕ್ರಮ್ಯ ನಿಹತಸ್ತಾರಕಾಮಯೇ ।**
**ಅಶಕ್ನುವರ್ನ್ ಸ ದೇವಾನಾಂ ಸರ್ವಂ ಸೋಢುಂ ಸದೈವತಂ ॥೪೯॥**

---

ನೆಯದಕ್ಕೆ ಅಂಧಕವೆಂದು ಹೆಸರು. ಒಂಬತ್ತನೆಯದು ವೃತ್ರಘಾತಕ. ಹತ್ತನೆಯದು ಧಾತ್ರ. ಅನಂತರ ನಡೆದದ್ದು ಹಾಲಾಹಲ. ಹನ್ನೆರಡನೆಯದು ಕೋಲಾಹಲ ವೆಂದು ಪ್ರಸಿದ್ಧವಾದ ಘೋರ ಸಂಗ್ರಾಮವು.

೪೬. ನರಸಿಹ್ಮ ರೂಪವನ್ನು ತಾಳಿದ ವಿಷ್ಣುವು ದೈತ್ಯನಾದ ಹಿರಣ್ಯ ಕಶಿಪುವನ್ನು ಸಂಹರಿಸಿದನು. ಹಿಂದೆ ಮೂರು ಲೋಕಗಳನ್ನೂ ಆಳಿದು ಆಕ್ರಮಣ ಮಾಡುವಾಗ ವಾಮನನು ಬಲಿಚಕ್ರವರ್ತಿಯನ್ನು ಬಂಧಿಸಿದನು.

೪೭. ಹಿರಣ್ಯಾಕ್ಷನಿಗೂ ದೇವತೆಗಳಿಗೂ ದ್ವಂದ್ವ ಯುದ್ಧವು ನಡೆಯಿತು. ದೇವತೆಗಳು ಎದುರಿಸಿ ಮೇಲೆ ಬಿದ್ದು ಆ ರಾಕ್ಷಸನನ್ನು ಕೊಂದರು. ವರಾಹ ರೂಪಿಯಾದ ವಿಷ್ಣುವು ತನ್ನ ಕೋರೆ ದಾಡೆಯಿಂದ ಸಮುದ್ರದಲ್ಲಿ ಮುಳುಗಿದ್ದ ಭೂಮಿಯನ್ನು ಎತ್ತಿದನು. ಆಗ ಸಮುದ್ರವು ಎರಡು ಭಾಗವಾಯಿತು.

೪೮-೪೯. ಅಮೃತಮಂಥನವೆಂಬ ಸಂಗ್ರಾಮದಲ್ಲಿ ಇಂದ್ರನು ಪ್ರಹ್ಲಾದನನ್ನು ಗೆದ್ದನು. ಪ್ರಹ್ಲಾದನ ಮಗನಾದ ವಿರೋಚನನು ಇಂದ್ರನನ್ನು ಕೊಲ್ಲಬೇಕೆಂದು ಸದಾ ಯತ್ನಿಸುತ್ತಿದ್ದನು. ತಾರಕಾಮಯವೆಂಬ ಯುದ್ಧವು ನಡೆಯಿತು. ದೇವ ಸೈನ್ಯದ ಪೌರುಷವನ್ನು ಸಹಿಸಲು ಆಗದೆ ವಿರೋಚನನು ಇಂದ್ರನಿಂದಲೇ ಹತನಾದನು.

ನಿಹತಾ ದಾನವಾಃ ಸರ್ವೇ ತ್ರೈಲೋಕ್ಯೇ ತ್ರ್ಯಂಬಕೇಣ ತು ।
ಅಸುರಾಶ್ಚ ಪಿಶಾಚಾಶ್ಚ ದಾನವಾಶ್ಚಾಂಧಕಾಹವೇ ॥೫೦॥

ಹತಾ ದೇವಮನುಷ್ಯೇ ಸ್ವೇ ಪಿತೃಭಿಶ್ಚೈವ ಸರ್ವಶಃ ।
ಸಂಪೃಕ್ತೋ ದಾನವೈರ್ವೃತ್ರೋ ಘೋರೋ ಹಾಲಾಹಲೇ ಹತಃ ॥೫೧॥

ತದಾ ವಿಷ್ಣುಸಹಾಯೇನ ಮಹೇಂದ್ರೇಣ ನಿವರ್ತಿತಃ ।
ಹತೋ ಧ್ವಜೇ ಮಹೇಂದ್ರೇಣ ಮಾಯಾಚ್ಛನ್ನಸ್ತು ಯೋಗವಿತ್ ।
ಧ್ವಜಲಕ್ಷಣಮಾವಿಶ್ಯ ವಿಪ್ರಚಿತ್ತಿಃ ಸಹಾನುಜಃ ॥೫೨॥

ದೈತ್ಯಾಂಶ್ಚ ದಾನವಾಂಶ್ಚೈವ ಸಂಯುತಾನ್ ಕಿಲ ಸಂಯುತಾನ್ ।
ಜಘ್ನುಃ ಕೋಲಾಹಲೇ ಸರ್ವಾನ್ ದೇವೈಃ ಪರಿವೃತೋ ವೃಷಾ ॥೫೩॥

---

೫೦. ಅಂಧಕಾಸುರನೊಡನೆ ನಡೆದ ಕಾಳಗದಲ್ಲಿ ಈಶ್ವರನು ಮೂರು ಲೋಕದಲ್ಲೂ ಇದ್ದ ದಾನವರು, ಅಸುರರು, ಪಿಶಾಚರು ಇವರೆಲ್ಲರನ್ನೂ ಕೊಂದನು.

೫೧. ದಾನವರೊಡನೆ ಕೂಡಿಕೊಂಡು ವೃತ್ರನು ದೇವತೆಗಳನ್ನೂ, ಮನುಷ್ಯರನ್ನೂ, ಪಿತೃಗಳನ್ನೂ ಎಲ್ಲ ಕಡೆಯಲ್ಲೂ ಸಂಹರಿಸುತ್ತಿರಲು, ಹಾಲಾಹಲವೆಂಬ ಹನ್ನೊಂದನೆಯ ಸಮರದಲ್ಲಿ ದೇವೇಂದ್ರನು ಆ ಘೋರದೈತ್ಯನನ್ನು ಕೊಂದನು.

೫೨. ಬಳಿಕ ವಿಪ್ರಚಿತ್ತಿಯು ತನ್ನ ಸೋದರನೊಡನೆ ಕೂಡಿ ಯುದ್ಧಕ್ಕೆ ಬಂದನು. ದೇವೇಂದ್ರನು ವಿಷ್ಣುವಿನ ಸಹಾಯದಿಂದ ಅವನನ್ನು ಹಿಂದಕ್ಕೆ ಓಡಿಸಿದನು. ಆಗ ಯೋಗವಿದ್ಯೆಯನ್ನು ಬಲ್ಲ ಅಸುರನು ಮಾಯೆಯಿಂದ ಧ್ವಜದಲ್ಲಿ ಅವಿತುಕೊಂಡನು. ಇಂದ್ರನೂ ಸಹ ಅದೇ ಧ್ವಜದಲ್ಲಿ ಪ್ರವೇಶಿಸಿ ಅವನನ್ನು ಸಂಹರಿಸಿದನು.

೫೩. ಕೊನೆಯದಾದ ಕೋಲಾಹಲವೆಂಬ ಸಮರದಲ್ಲಿ ಇಂದ್ರನು ದೇವತೆಗಳೊಡಗೂಡಿ, ದೈತ್ಯದಾನವರು ಒಂದಾಗಿ ಮೇಲೆ ಏರಿ ಬರಲು ಅವರೆಲ್ಲರನ್ನೂ ಬಂಧಿಸಿ ಗೆಲುವನ್ನು ಪಡೆದನು.

**ಯಜ್ಞಸ್ಯಾವಭೃಥೇ ದೃಶ್ಯೌ ಶಂಡಾಮರ್ಕೌ ತು ದೈವತೈಃ ।**
**ಏತೇ ದೇವಾಸುರೇ ವೃತ್ತಾಃ ಸಂಗ್ರಾಮಾ ದ್ವಾದಶೈವ ತು** ॥೫೪॥

**ದೇವಾಸುರಕ್ಷಯಕರಾಃ ಪ್ರಜಾನಾಂ ತು ಹಿತಾಯ ವೈ ।**
**ಹಿರಣ್ಯಕಶಿಪೂ ರಾಜಾ ವರ್ಷಾಣಾಮರ್ಬುದಂ ಬಭೌ** ॥೫೫॥

**ದ್ವಿಸಪ್ತತಿ ತಥಾನ್ಯಾನಿ ನಿಯುತಾನ್ಯಧಿಕಾನಿ ಚ ।**
**ಅಶೀತಿಂ ಚ ಸಹಸ್ರಾಣಿ ತ್ರೈಲೋಕ್ಯೈಶ್ವರ್ಯತಾಂ ಗತಃ** ॥೫೬॥

**ಪರ್ಯಾಯೇಣ ತು ರಾಜಾಭೂದ್ಬಲಿರ್ವರ್ಷಾಯುತಂ ಪುನಃ ।**
**ಷಷ್ಟಿರ್ವರ್ಷಸಹಸ್ರಾಣಿ ನಿಯುತಾನಿ ಚ ವಿಂಶತಿಃ** ॥೫೭॥

**ಬಲೇ ರಾಜ್ಯಾಧಿಕಾರಸ್ತು ಯಾವತ್ಕಾಲಂ ಬಭೂವ ಹ ।**
**ತಾವತ್ಕಾಲಂ ತು ಪ್ರಹ್ಲಾದೋ ನಿವೃತ್ತೋ ಹ್ಯಸುರೈಸ್ಸಹ** ॥೫೮॥

---

೫೪. ದೇವತೆಗಳು ನಡೆಸಿದ ಯಜ್ಞದ ಪರಿಸಮಾಪ್ತಿಯ ವೇಳೆಯಲ್ಲಿ ಅವರ ಕೋರಿಕೆಯಂತೆ ಶಂಡಾಮರ್ಕರು—(ಶಂಡ, ಅಮರ್ಕ ಎಂಬ ಶುಕ್ರಾಚಾರ್ಯರ ಶಿಷ್ಯರಿಬ್ಬರು). ದೈತ್ಯರನ್ನು ತೊರೆದು ದೇವತೆಗಳನ್ನು ಸೇರಿಕೊಂಡರು.

ಈ ಮೇಲೆ ಹೇಳಿದ ಹನ್ನೆರಡು ಕಾಳಗಗಳು ದೇವಾಸುರ ಯುದ್ಧದಲ್ಲಿ ನಡೆದುವು. ಇವು ಅವರಿಬ್ಬರಿಗೂ ಹಾನಿಯನ್ನುಂಟುಮಾಡಿದುವು. ಆದರೆ ಪ್ರಜೆಗಳಿಗೆ ಹಿತವಾಯಿತು.

೫೫-೫೬. ಹಿರಣ್ಯಕಶಿಪುವು ಹತ್ತುಕೋಟಿ ಎಪ್ಪತ್ತೆರಡು ಲಕ್ಷದ ಎಂಬತ್ತು ಸಾವಿರ ವರ್ಷಗಳ ಕಾಲ ಮೂರು ಲೋಕದ ಐಶ್ವರ್ಯಕ್ಕೂ ಒಡೆಯನಾಗಿ ಆಳಿದನು.

೫೭. ತರುವಾಯ ಕ್ರಮ ಪ್ರಾಪ್ತವಾಗಿ ಬರಲು ಬಲಿಯು ಇಪ್ಪತ್ತು ಲಕ್ಷದ ಎಪ್ಪತ್ತು ಸಾವಿರ ವರ್ಷಗಳ ಕಾಲ ದೊರೆಯಾಗಿದ್ದನು.

೫೮. ಬಲಿಯು ರಾಜ್ಯಾಧಿಕಾರದಲ್ಲಿದ್ದಷ್ಟು ಕಾಲವೂ, ಪ್ರಹ್ಲಾದನು ಅಸುರ ಮುಖ್ಯರೊಡನೆ ರಾಜ್ಯದಿಂದ ಹೊರಟು ಹೋಗಿದ್ದನು.

ಇಂದ್ರಾಸ್ತ್ರಯಸ್ತೇ ವಿಜ್ಞೇಯಾ ಅಸುರಾಣಾಂ ಮಹೌಜಸಃ ।
ದೈತ್ಯಸಂಸ್ಥಮಿದಂ ಸರ್ವಮಾಸೀದ್ದಶಯುಗಂ ಪುನಃ ॥೫೯॥
ತ್ರೈಲೋಕ್ಯಮಿದಮವ್ಯಗ್ರಂ ಮಹೇಂದ್ರೇಣಾನುಪಾಲ್ಯತೇ ।
ಅಸಪತ್ನಮಿದಂ ಸರ್ವಮಾಸೀದ್ದಶಯುಗಂ ಪುನಃ ॥೬೦॥
ಪ್ರಹ್ಲಾದಸ್ಯ ಹತೇ ತಸ್ಮಿಂಸ್ತ್ರೈಲೋಕ್ಯೇ ಕಾಲಪರ್ಯಯಾತ್ ।
ಪರ್ಯಾಯೇಣ ತು ಸಂಪ್ರಾಪ್ತೇ ತ್ರೈಲೋಕ್ಯಂ ಪಾಕಶಾಸನೇ ।
ತತೋಽಸುರಾನ್ ಪರಿತ್ಯಜ್ಯ ಶುಕ್ರೋ ದೇವಾನಗಚ್ಛತ ॥೬೧॥
ಯಜ್ಞೇ ದೇವಾನಥ ಗತಂ ದಿತಿಜಾಃ ಕಾವ್ಯಮಾಹ್ವಯನ್ ।
ಕಿಂ ತ್ವಂ ನೋ ಮಿಷತಾಂ ರಾಜ್ಯಂ ತ್ಯಕ್ತ್ವಾ ಯಜ್ಞಂ ಪುನರ್ಗತಃ ॥೬೨॥
ಸ್ಥಾತುಂ ನ ಶಕ್ನುಮೋ ಹ್ಯತ್ರ ಪ್ರವಿಶಾಮೋ ರಸಾತಲಂ ।
ಏವಮುಕ್ತೋಽಬ್ರವೀದ್ದೈತ್ಯಾನ್ ವಿಷಣ್ಣಾನ್ ಸಾಂತ್ವಯನ್ ಗಿರಾ ॥೬೩॥

---

೫೯. ಮಹಾ ಪರಾಕ್ರಮಶಾಲಿಗಳಾದ ಹಿರಣ್ಯಕಶಿಪು, ಬಲಿ, ಪ್ರಹ್ಲಾದ ಈ ಮೂವರು ಅಸುರರಲ್ಲಿ ಅಧಿಪತಿಗಳಾಗಿದ್ದರು. ಈ ಸಕಲ ಜಗತ್ತೂ ಹತ್ತು ಯುಗಗಳ ಕಾಲ ದೈತ್ಯರ ವಶದಲ್ಲಿತ್ತು.

೬೦. ತರುವಾಯ ಸ್ವರ್ಗ, ಮರ್ತ್ಯ, ಪಾತಾಳಾದಿ ಲೋಕಗಳನ್ನು ಪುನಃ ಇಂದ್ರನು ಸ್ವಾಧೀನಪಡಿಸಿಕೊಂಡು ಜಿತಮನಸ್ಸಿನಿಂದ ಆಳಿದನು. ಹತ್ತು ಯುಗಗಳ ಕಾಲ ಶತ್ರುಗಳ ಕಾಟವು ಜಗತ್ತಿಗೆ ತಪ್ಪಿತ್ತು.

೬೧. ಹೀಗೆ ಪ್ರಹ್ಲಾದನ ಆಡಳಿತಕ್ಕೆ ಸೇರಿದ್ದ ಮೂರು ಲೋಕವೂ ಕಾಲವ್ಯತ್ಯಾಸದಿಂದ ಕೈತಪ್ಪಿ, ಇಂದ್ರನ ಆಧಿಪತ್ಯಕ್ಕೆ ಸೇರಿತು. ಬಳಿಕ ದೈತ್ಯಗುರುವಾದ ಶುಕ್ರಾಚಾರ್ಯನು ಅಸುರರನ್ನು ಬಿಟ್ಟು ದೇವತೆಗಳ ಬಳಿಗೆ ಹೋದನು.

೬೨-೬೩. ದೇವತೆಗಳು ನಡೆಸಿದ ಯಜ್ಞಕ್ಕೆ ಶುಕ್ರಾಚಾರ್ಯನು ಸೇರಿರಲು, ದೈತ್ಯರು ಅವನನ್ನು ತಮ್ಮ ಕಡೆಗೆ ಕರೆದರು. "ಇದೇನು? ನಾವೆಲ್ಲರೂ ನೋಡುತ್ತಿದ್ದ ಹಾಗೆಯೇ ನಮ್ಮ ರಾಜ್ಯವನ್ನಳಿದು, ಮರಳಿ ದೇವತೆಗಳ ಯಾಗಕ್ಕೆ ಹೋದೆಯಲ್ಲಾ! ಇನ್ನು ನಾವು ಇಲ್ಲಿ ನೆಲೆಸಲು ಸಾಧ್ಯವಿಲ್ಲ; ಪಾತಾಳಕ್ಕೆ ಹೊರಟು ಹೋಗುವೆವು.'' ಎಂದು ಗೋಳಿಟ್ಟರು. ವಿಷಣ್ಣರಾದ ಅಸುರರನ್ನು ಆಚಾರ್ಯನು ಮೃದುವಚನಗಳಿಂದ ಸಂತೈಸಿದನು.

**ಮಾ ಭೈಷ್ಟ ಧಾರಯಿಷ್ಯಾಮಿ ತೇಜಸಾ ಸ್ವೇನ ವೋಽಸುರಾಃ ।**
**ಮಂತ್ರಾಶ್ಚೌಷಧಯಶ್ಚೈವ ರಸಾ ವಸು ಚ ಯತ್ಪರಂ ॥೬೪॥**

**ಕೃತ್ಸ್ನಾನಿ ಮಯಿ ತಿಷ್ಠಂತಿ ಪಾದಸ್ತೇಷಾಂ ಸುರೇಷು ವೈ ।**
**ತತ್ಸರ್ವಂ ವಃ ಪ್ರದಾಸ್ಯಾಮಿ ಯುಷ್ಮದರ್ಥೇ ಧೃತಾ ಮಯಾ ॥೬೫॥**

**ತತೋ ದೇವಾಸ್ತು ತಾನ್ ದೃಷ್ಟ್ವಾ ವೃತಾನ್ ಕಾವ್ಯೇನ ಧೀಮತಾ ।**
**ಸಂಮಂತ್ರಯಂತಿ ದೇವಾ ವೈ ಸಂವಿಜ್ಞಾಸ್ತು ಜಿಘೃಕ್ಷಯಾ ॥೬೬॥**

**ಕಾವ್ಯೋ ಹ್ಯೇಹ ಇದಂ ಸರ್ವಂ ವ್ಯಾವರ್ತಯತಿ ನೋ ಬಲಾತ್ ।**
**ಸಾಧು ಗಚ್ಛಾಮಹೇ ತೂರ್ಣಂ ಯಾವನ್ನಾಧ್ಯಾಪಯಿಷ್ಯತಿ ॥೬೭॥**

**ಪ್ರಸಹ್ಯ ಹತ್ವಾ ಶಿಷ್ಟಾಂಸ್ತು ಪಾತಾಲಂ ಪ್ರಾಪಯಾಮಹೇ ।**
**ತತೋ ದೇವಾಸ್ತು ಸಂರಬ್ಧಾ ದಾನವಾನುಪಸೃತ್ಯ ಹ ॥೬೮॥**

---

೬೪-೬೫. "ಹೆದರಬೇಡಿರಿ; ಓ ಅಸುರರೇ, ನನ್ನ ತೇಜಸ್ಸಿನಿಂದ ನಿಮ್ಮನ್ನು ಉದ್ಧಾರಮಾಡುವೆನು. ಮಂತ್ರಗಳು, ಮೂಲಿಕೆಗಳು, ರಸದ್ರವ್ಯಗಳು, ಸಂಪತ್ತು, ಇವಲ್ಲದೆ ಇನ್ನೂ ಮಿಕ್ಕ ಉತ್ತಮ ವಸ್ತುಗಳು ಇವೆಲ್ಲವೂ ನನ್ನಲ್ಲಿವೆ. ದೇವತೆಗಳಲ್ಲಾದರೋ ಇವರ ಕಾಲು ಪಾಲು ಮಾತ್ರ ಉಂಟು. ಇವೆಲ್ಲವನ್ನೂ ನಿಮಗೆ ಕೊಡುವೆನು. ಇವುಗಳನ್ನು ನಾನು ಸಂಗ್ರಹಿಸಿರುವುದು ನಿಮ ಗೋಸ್ಕರವಾಗಿಯೇ."

೬೬. ಬಳಿಕ ದೇವತೆಗಳು ಮೇಧಾವಿಯಾದ ಶುಕ್ರಾಚಾರ್ಯನು ಮೇಲೆ ಹೇಳಿದ ಶ್ರೇಷ್ಠವಸ್ತುಗಳೆಲ್ಲವನ್ನೂ ವಶಪಡಿಸಿಕೊಂಡಿರುವುದನ್ನು ತಿಳಿದು, ಅವುಗಳ ವಶೀಕರಣ ಜ್ಞಾನವನ್ನು ಅವನಿಂದ ಅಪಹರಿಸಬೇಕೆಂದು ಆಲೋಚನೆ ಮಾಡಿದರು.

೬೭-೬೮. "ಈ ಶುಕ್ರಾಚಾರ್ಯನು ತನ್ನ ಬಲದಿಂದ ಇವೆಲ್ಲವನ್ನೂ ನಮಗೆ ದೊರಕದಂತೆ ಮಾಡಿದ್ದಾನೆ. ಸರಿ! ಇವನು ದೈತ್ಯರಿಗೆ ಹೇಳಿಕೊಡುವುದಕ್ಕೆ ಮೊದಲೇ ಬೇಗ ಹೋಗೋಣ. ಅವರನ್ನು ಬಲವಾಗಿ ಹೊಡೆದು, ಕೊಂದು, ಮಿಕ್ಕ ವರನ್ನು ಪಾತಾಲಕ್ಕೆ ಓಡಿಸಿ ಬಿಡೋಣ" ಹೀಗೆ ಯೋಚಿಸಿ ದೇವತೆಗಳು ರೇಗಿ ದಾನವರ ಒಳಗೆ ಹೋದರು.

**ತತಸ್ತೇ ವಧ್ಯಮಾನಾಸ್ತು ಕಾವ್ಯಮೇವಾಭಿದುದ್ರುವುಃ ।**
**ತತಃ ಕಾವ್ಯಸ್ತು ತಾನ್ ದೃಷ್ಟ್ವಾ ತೂರ್ಣಂ ದೇವೈರಭಿದ್ರುತಾನ್ ॥೬೯॥**

**ರಕ್ಷಾಂ ಕಾವ್ಯೇನ ಸಂಹೃತ್ಯ ದೇವಾಸ್ತೇಽಪ್ಯಸುರಾರ್ದಿತಾಃ ।**
**ಕಾವ್ಯಂ ದೃಷ್ಟ್ವಾ ಸ್ಥಿತಂ ದೇವಾ ನಿಶ್ಶಂಕಮಸುರಾಞ್ಜಹುಃ ॥೭೦॥**

**ತತಃ ಕಾವ್ಯೋಽನುಚಿಂತ್ಯಾಥ ಬ್ರಾಹ್ಮಣೋ ವಚನಂ ಹಿತಂ ।**
**ತಾನುವಾಚ ತತಃ ಕಾವ್ಯಃ ಪೂರ್ವಂ ವೃತ್ತಮನುಸ್ಮರನ್ ॥೭೧॥**

**ತ್ರೈಲೋಕ್ಯಂ ವೋ ಹೃತಂ ಸರ್ವಂ ವಾಮನೇನ ತ್ರಿಭಿಃ ಕ್ರಮೈಃ ।**
**ಬಲಿರ್ಬದ್ಧೋ ಹತೋ ಜಂಭೋ ನಿಹತಶ್ಚ ವಿರೋಚನಃ ॥೭೨॥**

**ಮಹಾಸುರಾ ದ್ವಾದಶಸು ಸಂಗ್ರಾಮೇಷು ಸುರೈರ್ಹತಾಃ ।**
**ತೈಸ್ತೈರುಪಾಯೈರ್ಭೂಯಿಷ್ಠಂ ನಿಹತಾ ವಃ ಪ್ರಧಾನತಃ ॥೭೩॥**

---

೬೯. ಬಳಿಕ ಕೊಲೆಗೆ ತುತ್ತಾದ ಅಸುರರು ಶುಕ್ರಾಚಾರ್ಯನ ಹತ್ತಿರಕ್ಕೆ ಓಡಿದರು. ದೇವತೆಗಳು ಬೆನ್ನಟ್ಟಿ ಬರುತ್ತಿರುವ ಆ ದೈತ್ಯರನ್ನು ಆಚಾರ್ಯನು ನೋಡಿದನು.

೭೦. ಅಸುರರು ತಮ್ಮ ಗುರುವಾದ ಶುಕ್ರಾಚಾರ್ಯನಿಂದ ರಕ್ಷಣೆಯನ್ನು ಪಡೆದು ದೇವತೆಗಳನ್ನು ಕೋಟಲೆಗೊಳಿಸಿದರು. ಅವರ ರಕ್ಷಕನಾಗಿ ಧೈರ್ಯದಿಂದ ಅವರ ಆಚಾರ್ಯನು ನಿಂತಿರುವುದನ್ನು ನೋಡಿ ದೇವತೆಗಳು ಅವರನ್ನು ಬಿಟ್ಟು ಬಿಟ್ಟರು.

೭೧. ಅನಂತರ ದ್ವಿಜೋತ್ತಮನಾದ ಶುಕ್ರಾಚಾರ್ಯನು ಹಿಂದಿನ ವೃತ್ತಾಂತ ವನ್ನು ಸ್ಮರಿಸಿಕೊಂಡು, ಅವರಿಗೆ ಹಿತವಾದ ಮಾತುಗಳನ್ನು ಆಡಿದನು.

೭೨. "ಓ ದೈತ್ಯರೇ, ವಾಮನನು ಮೂರು ಹೆಜ್ಜೆಗಳಿಂದ ನಿಮ್ಮ ತ್ರಿಲೋಕ ರಾಜ್ಯವನ್ನೆಲ್ಲ ಕಿತ್ತುಕೊಂಡನು; ಬಲಿಯು ಸೆರೆಯಾದನು; ಜಂಭನೂ, ವಿರೋಚನನೂ ಕೊಲೆಗೀಡಾದರು.

೭೩. ನಿಮಗೂ ಸುರರಿಗೂ ನಡೆದ ಹನ್ನೆರಡು ಯುದ್ಧಗಳಲ್ಲಿ ನಿಮ್ಮ ಕಡೆ ಮುಂದಾಳುಗಳೆನಿಸಿದ್ದ ಮಹಾಸುರರನ್ನು ಬೇರೆ ಬೇರೆ ಯುಕ್ತಿಗಳಿಂದ ಲೆಕ್ಕವಿಲ್ಲ ದಂತೆ ಅವರು ಕೊಂದು ಹಾಕಿದರು.

**ಕಿಂಚಿಚ್ಛಿಷ್ಟಾಸ್ತು ಯೂಯಂ ವೈ ಯುದ್ಧಂ ನಾಸ್ತೀತಿ ನೋ ಮತಂ ।**
**ನೀತಿಂ ಯಾಂ ವೋಽಭಿಧಾಸ್ಯಾಮಿ ತಿಷ್ಠಧ್ವಂ ಕಾಲಪರ್ಯಯಾತ್ ॥೭೪॥**

**ಯಾಸ್ಯಾಮ್ಯಹಂ ಮಹಾದೇವಂ ಮಂತ್ರಾರ್ಥಂ ವಿಜಯಾವಹಂ ।**
**ಅಪ್ರತೀಪಾಂಸ್ತತೋ ಮಂತ್ರಾನ್ ದೇವಾತ್ಪ್ರಾಪ್ಯ ಮಹೇಶ್ವರಾತ್ ।**
**ಯುಧ್ಯಾಮಹೇ ಪುನರ್ದೇವಾಂಸ್ತತಃ ಪ್ರಾಪ್ಸ್ಯಥ ವೈ ಜಯಂ ॥೭೫॥**

**ತತಸ್ತೇ ಕೃತಸಂವಾದಾ ದೇವಾನೂಚುಸ್ತದಾಽಸುರಾಃ ।**
**ನ್ಯಸ್ತಶಸ್ತ್ರಾ ವಯಂ ಸರ್ವೇ ನಿಸ್ಸನ್ನಾಹಾ ರಥೈರ್ವಿನಾ ॥೭೬॥**

**ವಯಂ ತಪಶ್ಚರಿಷ್ಯಾಮಃ ಸಂವೃತಾ ವಲ್ಕಲೈರ್ವನೇ ।**
**ಪ್ರಹ್ಲಾದಸ್ಯ ವಚಃ ಶ್ರುತ್ವಾ ಸತ್ಯಾಭಿವ್ಯಾಹೃತಂ ತು ತತ್ ॥೭೭॥**

**ತತೋ ದೇವಾ ನ್ಯವರ್ತಂತ ವಿಜ್ವರಾ ಮುದಿತಾಶ್ಚ ತೇ ।**
**ನ್ಯಸ್ತಶಸ್ತ್ರೇಷು ದೈತ್ಯೇಷು ವಿನಿವೃತ್ತಾಸ್ತದಾ ಸುರಾಃ ॥೭೮॥**

---

೭೪. ನೀವಾದರೋ ಈಗ ಉಳಿದವರು ಎಲ್ಲೋ ಕೆಲವು ಮಂದಿ ಮಾತ್ರ. ಆದುದರಿಂದ ಯುದ್ಧವು ಬೇಡವೆಂದು ನನ್ನ ಅಭಿಪ್ರಾಯ. ನಿಮಗೆ ನೀತಿಯನ್ನು ಹೇಳುವೆನು. ಅದನ್ನು ಗಮನಿಸಿ ಕಾಲವು ವ್ಯತ್ಯಾಸವಾಗಿರುವುದರಿಂದ ಈಗ ತಡೆಯಿರಿ.

೭೫. ಗೆಲುವನ್ನು ತರುವಂತಹ ಮಂತ್ರ ಸಂಪಾದನೆಗಾಗಿ ನಾನು ಮಹೇಶ್ವರ ನಲ್ಲಿಗೆ ಹೋಗುವೆನು. ಆ ಮಹಾದೇವನಿಂದ ಅನುಕೂಲವಾದ ಮಂತ್ರಗಳನ್ನು ತಿಳಿದು ಮತ್ತೆ ದೇವತೆಗಳೊಡನೆ ಯುದ್ಧ ಮಾಡೋಣ. ಆಗ ನೀವು ಜಯವನ್ನು ಪಡೆಯುವಿರಿ."

೭೬. ಹೀಗೆ ಶುಕ್ರಾಚಾರ್ಯನು ಹೇಳಿದ ಬಳಿಕ ಅಸುರರು ದೇವತೆಗಳಿಗಿಂತೆಂದರು "ನಾವೆಲ್ಲರೂ ಆಯುಧವನ್ನು ಕೆಳಗಿರಿಸಿದ್ದೇವೆ; ನಮ್ಮಲ್ಲಿ ಸಾಮಗ್ರಿಗಳಿಲ್ಲ; ತೇರುಗಳಿಲ್ಲ. ನಾವು ನಾರುಬಟ್ಟೆಯನ್ನುಟ್ಟು ವನದಲ್ಲಿ ತಪಸ್ಸನ್ನು ಮಾಡುವೆವು."

೭೭-೭೮. ಪ್ರಹ್ಲಾದನು ಆಡಿದ ಸತ್ಯವಚನವನ್ನು ಕೇಳಿ ದೇವತೆಗಳು ನಿಶ್ಚಿಂತರಾಗಿ ಸಂತೋಷಗೊಂಡರು. ದೈತ್ಯರು ತಮ್ಮ ಆಯುಧಗಳನ್ನು ತೊರೆದರು. ಬಳಿಕ ಸುರರು ಹಿಂದಿರುಗಿದರು.

ತತಸ್ತಾನಬ್ರವೀತ್ಕಾವ್ಯಃ ಕಂಚಿತ್ಕಾಲಮುಪಾಸ್ಯಥ ।
ನಿರುತ್ಸಿಕ್ತಾಸ್ತಪೋಯುಕ್ತಾಃ ಕಾಲಂ ಕಾರ್ಯಾರ್ಥಸಾಧಕಂ ॥೭೯॥
ಪಿತುರ್ಮಮಾಶ್ರಮಸ್ಥಾ ವೈ ಮಾಂ ಪ್ರತೀಕ್ಷಥ ದಾನವಾಃ ।
ತತ್ಸಂದಿಶ್ಯಾಸುರಾನ್ ಕಾವ್ಯೋ ಮಹಾದೇವಂ ಪ್ರಪದ್ಯತ ॥೮೦॥

॥ ಶುಕ್ರ ಉವಾಚ ॥

ಮಂತ್ರಾನಿಚ್ಛಾಮ್ಯಹಂ ದೇವ ಯೇ ನ ಸಂತಿ ಬೃಹಸ್ಪತೌ ।
ಪರಾಭವಾಯ ದೇವಾನಾಮಸುರಾಣಾಂ ಜಯಾಯ ಚ ॥೮೧॥

ಏವಮುಕ್ತೋಽಬ್ರವೀದ್ದೇವೋ ವ್ರತಂ ತ್ವಂ ಚರ ಭಾರ್ಗವ ।
ಪೂರ್ಣಂ ವರ್ಷಸಹಸ್ರಂ ತು ಕಣಧೂಮಮವಾಕ್ಶಿರಾಃ ।
ಯದಿ ಪಾಸ್ಯಸಿ ಭದ್ರಂ ತೇ ತತೋ ಮಂತ್ರಾನವಾಪ್ಸ್ಯಸಿ ॥೮೨॥

ತಥೇತಿ ಸಮನುಜ್ಞಾಪ್ಯ ಶುಕ್ರಸ್ತು ಭೃಗುನಂದನಃ ।
ಪಾದೌ ಸಂಸ್ಪೃಶ್ಯ ದೇವಸ್ಯ ಬಾಢಮಿತ್ಯಬ್ರವೀದ್ವಚಃ ।
ವ್ರತಂ ಚರಾಮ್ಯಹಂ ದೇವ ತ್ವಯಾದಿಷ್ಟೋಽದ್ಯ ವೈ ಪ್ರಭೋ ॥೮೩॥

---

೭೯-೮೦. ಬಳಿಕ ಶುಕ್ರಾಚಾರ್ಯನು ಅಸುರರಿಗೆ ಹೇಳಿದನು "ಎಲೈ ದಾನವರೇ, ನೀವು ಸ್ವಲ್ಪಕಾಲ ಗರ್ವವನ್ನು ತೊರೆದು, ತಪಸ್ವಿಗಳಾಗಿ ಮಹಾದೇವನನ್ನು ಧ್ಯಾನಿಸಿರಿ. ಇದು ನಿಮ್ಮ ಕಾರ್ಯಸಾಧನೆಗೆ ಸಹಕಾರಿಯಾಗುವುದು. ನಮ್ಮ ತಂದೆಯ ಆಶ್ರಮದಲ್ಲಿದ್ದುಕೊಂಡು ನನ್ನನ್ನು ಎದುರುನೋಡುತ್ತಿರಿ." ಹೀಗೆ ಹೇಳಿ ತರುವಾಯ ಅವನು ಪರಮೇಶ್ವರನನ್ನು ಮರೆಹೊಕ್ಕನು.

೮೧. ಶುಕ್ರಾಚಾರ್ಯನು ಹೇಳಿದನು.—"ದೇವಾ, ಬೃಹಸ್ಪತಿಗೆ ಗೊತ್ತಿಲ್ಲದಂತಹ ಮಂತ್ರಗಳನ್ನು ನನಗೆ ಅನುಗ್ರಹಿಸಬೇಕೆಂದು ಬೇಡುತ್ತೇನೆ. ಅದರಿಂದ ದೇವತೆಗಳು ಸೋಲಬೇಕು. ಅಸುರರು ಗೆಲ್ಲಬೇಕು."

೮೨. ಶುಕ್ರಾಚಾರ್ಯನು ಇಂತೆನಲು ಮಹಾದೇವನು ಉತ್ತರವಿತ್ತನು, "ಓ ಭಾರ್ಗವಾ, ನೀನು ತಲೆಕೆಳಗಾಗಿ ನಿಂತು, ಒಂದು ಸಾವಿರ ವರ್ಷಗಳು ಪೂರ್ತಿಯಾಗಿ ಹಿಪ್ಪಲಿಯ ಹೊಗೆಯನ್ನು ಕುಡಿಯುತ್ತ ತಪಸ್ಸನ್ನು ಮಾಡು. ಹಾಂಗವಾಗಿ ವ್ರತವನ್ನು ಪಾಲಿಸುವುದಾದರೆ ಮಂತ್ರಗಳನ್ನು ಪಡೆಯುವೆ."

೮೩. ಭೃಗುಪುತ್ರನಾದ ಶುಕ್ರಾಚಾರ್ಯನು ಹಾಗೆಯೇ ಆಗಲೆಂದು ಒಪ್ಪಿ, ಪರಮೇಶ್ವರನ ಅಪ್ಪಣೆಯನ್ನು ಪಡೆದು, ಅವನ ಪಾದಗಳನ್ನು ಮುಟ್ಟಿ "ದೇವಾ, ನೀನು ಅಪ್ಪಣೆಕೊಟ್ಟಂತೆ ವ್ರತವನ್ನು ಆಚರಿಸುವೆನು" ಎಂದು ಹೇಳಿದನು.

ತತೋಽನುಸೃಷ್ಟೋ ದೇವೇನ ಕುಂಡಧಾರೋಽಸ್ಯ ಧೂಮಕೃತ್ ।
ತದಾ ತಸ್ಮಿನ್ ಗತೇ ಶುಕ್ರೇ ಹ್ಯಸುರಾಣಾಂ ಹಿತಾಯ ವೈ ॥
ಮಂತ್ರಾರ್ಥಂ ತತ್ರ ವಸತಿ ಬ್ರಹ್ಮಚರ್ಯಂ ಮಹೇಶ್ವರೇ ॥೮೪॥

ತದ್ಬುದ್ಧ್ವಾ ನೀತಿಪೂರ್ವಂ ತು ರಾಜ್ಯೇ ನ್ಯಸ್ತೇ ತದಾಽಸುರೈಃ ।
ಅಸ್ಮಿನ್ನಿಮಿದ್ರೇ ತದಾಮರ್ಷಾದ್ದೇವಾಸ್ತಾನ್ಸಮುಪಾದ್ರವನ್ ॥೮೫॥
ದಂಶಿತಾಸ್ಸಾಯುಧಾಸ್ಸರ್ವೇ ಬೃಹಸ್ಪತಿಪುರಸ್ಸರಾಃ ॥೮೬॥

ದೃಷ್ಟ್ವಾಽಸುರಗಣಾ ದೇವಾನ್ ಪ್ರಗೃಹೀತಾಯುಧಾನ್ ಪುನಃ ।
ಉತ್ಪೇತುಃ ಸಹಸಾ ತೇ ವೈ ಸಂತ್ರಸ್ತಾಸ್ತಾನ್ವಚೋಽಬ್ರುವನ್ ॥೮೭॥

ನ್ಯಸ್ತೇ ಶಸ್ತ್ರೇಽಭಯೇ ದತ್ತೇ ಆಚಾರ್ಯೇ ವ್ರತಮಾಸ್ಥಿತೇ ।
ದತ್ತ್ವಾ ಭವಂತೋ ಹ್ಯಭಯಂ ಸಂಪ್ರಾಪ್ತಾ ನೋ ಜಿಘಾಂಸಯಾ ॥೮೮॥

---

೮೪. ಬಳಿಕ ಪರಮೇಶ್ವರನು, ಇವನು ತಪಸ್ಸನ್ನು ಮಾಡುವಾಗ ಹೊಗೆಯನ್ನು ಹಾಕುವುದಕ್ಕಾಗಿ ಕುಂಡಧಾರನೆಂಬ ಯಕ್ಷನೊಬ್ಬನನ್ನು ಕಳುಹಿಸಿಕೊಟ್ಟನು. ಶುಕ್ರಾಚಾರ್ಯನು ಅಸುರರ ಹಿತಕ್ಕೋಸ್ಕರ ಮಹೇಶ್ವರನಿಂದ ಮಂತ್ರಗಳನ್ನು ಪಡೆಯುವುದಕ್ಕಾಗಿ ಬ್ರಹ್ಮಚರ್ಯವ್ರತವನ್ನು ಆಚರಿಸುತ್ತ ಅಲ್ಲಿದ್ದನು.

೮೫. ರಾಜನೀತಿಯನ್ನನುಸರಿಸಿ ಅಸುರರು ತಮ್ಮ ರಾಜ್ಯವನ್ನು ತೊರೆದರೆಂದೂ, ಶುಕ್ರಾಚಾರ್ಯನು ತಪಸ್ಸಿಗೆ ಹೋಗಿರುವನೆಂದೂ ತಿಳಿದು, ದೇವತೆಗಳು ಸಿಟ್ಟುಗೊಂಡು ಅದೇ ತಕ್ಕ ಸಮಯವೆಂದು ದೈತ್ಯರ ಮೇಲೆ ಬಿದ್ದರು.

೮೬. ಬೃಹಸ್ಪತಿಯೇ ಮೊದಲಾದವರೆಲ್ಲರೂ ಕವಚಧಾರಿಗಳಾಗಿ ಆಯುಧಗಳನ್ನು ಹಿಡಿದು ಹೊರಟರು.

೮೭. ಅಸುರ ವರ್ಗದವರು ಮತ್ತೆ ಆಯುಧಧಾರಿಗಳಾಗಿ ಬಂದಿರುವ ದೇವತೆಗಳನ್ನು ನೋಡಿ, ಥಟ್ಟನೆ ನೆಗೆದು ನಿಂತು ಗಾಬರಿಯಿಂದ ಹೀಗೆ ಹೇಳಿದರು.

೮೮. "ನಾವು ಶಸ್ತ್ರವನ್ನು ಬಿಸುಟೆವು; ನೀವೂ ಅಭಯವನ್ನು ಕೊಟ್ಟಿರಿ; ನಮ್ಮ ಆಚಾರ್ಯನಾದರೋ ವ್ರತವನ್ನು ಹಿಡಿದಿರುವನು. ಮೊದಲು ನೀವೇ ಅಭಯವನ್ನು ಕೊಟ್ಟು ಈಗ ನಮ್ಮನ್ನು ಕೊಲ್ಲಬೇಕೆಂದು ಬಂದಿರುವಿರಿ.

**ಅನಾಚಾರ್ಯಾ ವಯಂ ದೇವಾಸ್ತ್ಯಕ್ತಶಸ್ತ್ರಾಸ್ತ್ವವಸ್ಥಿತಾಃ ।**
**ಚೀರಕೃಷ್ಣಾಜಿನಧರಾ ನಿಷ್ಕ್ರಿಯಾ ನಿಷ್ಪರಿಗ್ರಹಾಃ ॥೮೯॥**
**ರಣೇ ವಿಜೇತುಂ ದೇವಾಂಶ್ಚ ನ ಶಕ್ತಾಸ್ಸ್ಮಃ ಕಥಂಚನ ।**
**ಅಯುದ್ಧೇನ ಪ್ರಪತ್ಸ್ಯಾಮಃ ಶರಣಂ ಕಾವ್ಯಮಾತರಂ ॥೯೦॥**
**ಯಾಪಯಾಮಃ ಕೃಚ್ಛ್ರಮಿದಂ ಯಾವದಭ್ಯೇತಿ ನೋ ಗುರುಃ ।**
**ನಿವೃತ್ತೇ ಚ ತಥಾ ಶುಕ್ರೇ ಯೋತ್ಸ್ಯಾಮೋ ದಂಶಿತಾಯುಧಾಃ ॥೯೧॥**
**ಏವಮುಕ್ತ್ವಾಽಸುರಾನ್ಯೋನ್ಯಂ ಶರಣಂ ಕಾವ್ಯಮಾತರಂ ।**
**ಪ್ರಾಪದ್ಯಂತ ತತೋ ಭೀತಾಸ್ತೇಭ್ಯೋಽದಾದಭಯಂ ತು ಸಾ ॥೯೨॥**
**ನ ಭೇತವ್ಯಂ ನ ಭೇತವ್ಯಂ ಭಯಂ ತ್ಯಜತ ದಾನವಾಃ ।**
**ಮತ್ಸನ್ನಿಧೌ ವರ್ತತಾಂ ವೋ ನ ಭೀರ್ಭವಿತುಮರ್ಹತಿ ॥೯೩॥**

---

೮೯. ಎಲೈ ದೇವತೆಗಳಿರಾ, ನಮಗೆ ಈಗ ಆಚಾರ್ಯನಿಲ್ಲ; ನಾವು ಆಯುಧಗಳನ್ನು ತೊರೆದು ಕುಳಿತಿದ್ದೇವೆ. ನಾರುಮಡಿಯನ್ನೂ ಕೃಷ್ಣಾಜಿನವನ್ನೂ ಧರಿಸಿ ಬೇರೆ ಕಾರ್ಯವೇನನ್ನೂ ಮಾಡದೆ ಇದ್ದೇವೆ. ನಮಗೆ ಸಹಾಯಮಾಡುವ ಪರಿವಾರದವರು ಯಾರೂ ಇಲ್ಲ.''

೯೦. ದೇವತೆಗಳಿಗೆ ಹೀಗೆ ಹೇಳಿ ಬಳಿಕ ತಮ್ಮತಮ್ಮಲ್ಲೇ ಆಲೋಚಿಸಿದರು. ''ದೇವತೆಗಳನ್ನು ಸಮರದಲ್ಲಿ ಗೆಲ್ಲಲು ನಮ್ಮಿಂದ ಹೇಗೂ ಸಾಧ್ಯವಿಲ್ಲ; ಆದುದರಿಂದ ಯುದ್ಧದ ತಂಟೆಗೇ ಹೋಗದೆ ಶುಕ್ರಾಚಾರ್ಯನ ತಾಯಿಯನ್ನು ಮರೆಹೋಗೋಣ.

೯೧. ನಮ್ಮ ಗುರುವಾದ ಶುಕ್ರಾಚಾರ್ಯನು ಬರುವವರೆಗೂ ಈ ಕಷ್ಟಕಾಲವನ್ನು ಹೇಗೋ ಕಳೆಯೋಣ. ಅವನು ಹಿಂದಿರುಗಿ ಬಂದ ಮೇಲೆ ಆಯುಧವನ್ನೂ ಕವಚವನ್ನೂ ಧರಿಸಿ ಯುದ್ಧ ಮಾಡೋಣ.''

೯೨. ಅಸುರರು ಹೀಗೆ ತಮ್ಮತಮ್ಮಲ್ಲಿ ಹೇಳಿಕೊಂಡು, ಭೀತರಾಗಿ ಶುಕ್ರಾಚಾರ್ಯನ ತಾಯಿಯನ್ನು ಶರಣುಹೋದರು. ಅವಳೂ ಅವರಿಗೆ ಅಭಯದಾನವನ್ನು ಮಾಡಿದಳು.

೯೩. ''ಎಲೈ ದಾನವರೇ, ಹೆದರಬೇಡಿ ಹೆದರಬೇಡಿ; ಭಯಪಡಬೇಡಿ. ನನ್ನ ಬಳಿಯಲ್ಲಿರುವಾಗ ನಿಮಗೆ ಭೀತಿಯುಂಟಾಗದು.''

**ತಥಾ ಚಾಭ್ಯುಪಪನ್ನಾಂಸ್ತಾನ್ ದೃಷ್ಟ್ವಾ ದೇವಾಸ್ತತೋಽಸುರಾನ್ ।**
**ಅಭಿಜಗ್ಮುಃ ಪ್ರಸಹ್ಯೈತಾನವಿಚಾರ್ಯ ಬಲಾಬಲಂ ॥೯೪॥**

**ತತಸ್ತಾನ್ ಬಾಧ್ಯಮಾನಾಂಸ್ತು ದೇವೈರ್ದೃಷ್ಟ್ವಾಽಸುರಾಂಸ್ತದಾ ।**
**ದೇವೀ ಕ್ರುದ್ಧಾಽಬ್ರವೀದ್ದೇವಾನನಿಂದ್ರಾನ್ ವಃ ಕರೋಮ್ಯಹಂ ॥೯೫॥**

**ಸಂಭೃತ್ಯ ಸರ್ವಸಂಭಾರಾನಿಂದ್ರಂ ಸಾಭ್ಯಚರತ್ತದಾ ।**
**ತಸ್ತಂಭ ದೇವೀ ಬಲವದ್ಯೋಗಯುಕ್ತಾ ತಪೋಧನಾ ॥೯೬॥**

**ತತಸ್ತಂ ಸ್ತಂಭಿತಂ ದೃಷ್ಟ್ವಾ ಇಂದ್ರಂ ದೇವಾಶ್ಚ ಮೂಕವತ್ ।**
**ಪ್ರಾದ್ರವಂತ ತತೋ ಭೀತಾ ಇಂದ್ರಂ ದೃಷ್ಟ್ವಾ ವಶೀಕೃತಂ ॥೯೭॥**

**ಗತೇಷು ಸುರಸಂಘೇಷು ಶಕ್ರಂ ವಿಷ್ಣುರಭಾಷತ ।**
**ಮಾಂ ತ್ವಂ ಪ್ರವಿಶ ಭದ್ರಂ ತೇ ನಯಿಷ್ಯೇ ತ್ವಾಂ ಸುರೋತ್ತಮ ॥೯೮॥**

---

೯೪. ಅಸುರರು ಅಂತೆಯೇ ಆಗಲೆಂದು ಒಪ್ಪಿದರು. ಅವರನ್ನು ಕಂಡು ದೇವತೆಗಳು ಬಲಾಬಲಗಳ ವಿಚಾರವನ್ನು ವಿಮರ್ಶೆಮಾಡವೆ ಬಲಾತ್ಕಾರದಿಂದ ಅವರ ಮೇಲೆ ಬಿದ್ದರು.

೯೫. ಅಸುರರನ್ನು ಸುರರು ಹೀಗೆ ಪೀಡಿಸುವುದನ್ನು ದೇವಿಯು ನೋಡಿದಳು. ಅವಳಿಗೆ ಕೋಪ ಬಂದಿತು. "ಎಲೈ ದೇವತೆಗಳಿರಾ, ಇಗೋ! ಈಗ ಇಂದ್ರನೇ ಇಲ್ಲದಂತೆ ಮಾಡುವೆನು" ಎಂದಳು.

೯೬. ಬಳಿಕ ಅವಳು ಸಕಲ ಸಾಮಗ್ರಿಗಳನ್ನೂ ಸಿದ್ಧಗೊಳಿಸಿ ಇಂದ್ರನಿಗೆ ಮಾಟಮಾಡಿದಳು. ಯೋಗವಿದ್ಯೆಯನ್ನರಿತು ತಾಪಸಿಯಾಗಿದ್ದ ಆಕೆಯು ಅವನನ್ನು ಬಲವಾಗಿ ತಡೆಗಟ್ಟಿ ಚಲಿಸದಂತೆ ಮಾಡಿದಳು.

೯೭. ಇಂದ್ರನು ಸ್ತಬ್ಧನಾಗಿ ಸ್ವಾಧೀನ ತಪ್ಪಿದುದನ್ನು ದೇವತೆಗಳು ನೋಡಿದರು. ಅವರು ಹೆದರಿ ಮೂಗರಂತೆ ಓಡಿದರು!

೯೮. ದೇವಗಣಗಳು ವಿಷ್ಣುವಿನ ಬಳಿಗೆ ಹೋದುವು. "ಓ ದೇವೇಂದ್ರಾ, ನೀನು ನನ್ನ ದೇಹದಲ್ಲಿ ಪ್ರವೇಶಿಸು; ನಿನಗೊಳ್ಳೆಯದಾಗುವುದು. ನಿನ್ನನ್ನು ನಾನು ಕರೆದೊಯ್ಯುವೆನು" ಎಂದು ಅವನು ಹೇಳಿದನು.

ಏವಮುಕ್ತಸ್ತತೋ ವಿಷ್ಣುಂ ಪ್ರವಿವೇಶ ಪುರಂದರಃ ।
ವಿಷ್ಣುನಾ ರಕ್ಷಿತಂ ದೃಷ್ಟ್ವಾ ದೇವೀ ಕ್ರುದ್ಧಾ ವಚೋಽಬ್ರವಿತ್ ॥೯೯॥

ಏಷಾ ತ್ವಾಂ ವಿಷ್ಣುನಾ ಸಾರ್ಧಂ ದಹಾಮಿ ಮಘವನ್ ಬಲಾತ್ ।
ಮಿಷತಾಂ ಸರ್ವಭೂತಾನಾಂ ದೃಶ್ಯತಾಂ ಮೇ ತಪೋಬಲಂ ॥೧೦೦॥

ಭಯಾಭಿಭೂತೌ ತೌ ದೇವಾವಿಂದ್ರಾವಿಷ್ಣೂ ಬಭೂವತುಃ ।
ಕಥಂ ಮುಚ್ಯೇವ ಸಹಿತೌ ವಿಷ್ಣುರಿಂದ್ರಮುಭಾಷತ ॥೧೦೧॥

ಇಂದ್ರೋಽಬ್ರವೀಜ್ಜಹಿ ಹ್ಯೇನಾಂ ಯಾವನ್ನೌ ನ ದಹೇತ್ಪ್ರಭೋ ।
ವಿಶೇಷೇಣಾಭಿಭೂತೋಽಸ್ಮಿ ತ್ವತ್ತೋಽಹಂ ಜಹಿ ಮಾ ಚಿರಂ ॥೧೦೨॥

ತತಃ ಸಮೀಕ್ಷ್ಯ ವಿಷ್ಣುಸ್ತಾಂ ಸ್ತ್ರೀವಧೇ ಕೃಚ್ಛ್ರಮಾಸ್ಥಿತಃ ।
ಅಭಿಧ್ಯಾಯ ತತಶ್ಚಕ್ರಮಾಪದುದ್ಧರಣೇ ತು ತತ್ ॥೧೦೩॥

---

೯೯. ವಿಷ್ಣುವು ಹೀಗೆನಲು ಇಂದ್ರನು ಅವನ ದೇಹವನ್ನು ಸುರಕ್ಷಿತವಾಗಿ ವಾಗಿ ಹೊಕ್ಕನು. ಇದನ್ನು ಕಂಡು ಶುಕ್ರಾಚಾರ್ಯನ ತಾಯಿಗೆ ಸಿಟ್ಟು ಬಂದಿತು. ಅವಳು ಹೇಳಿದಳು.

೧೦೦. "ಓ ಇಂದ್ರಾ, ಇಗೋ! ಈ ವಿಷ್ಣು ಸಮೇತನಾಗಿ ನಿನ್ನನ್ನು ನನ್ನ ಸಾಮರ್ಥ್ಯದಿಂದ ಸುಡುವೆನು. ಸಮಸ್ತ ಪ್ರಾಣಿಗಳೂ ಕಣ್ತೆರೆದು ನೋಡುತ್ತಲೇ ಇರಲಿ. ನನ್ನ ತಪೋಬಲವನ್ನು ನೋಡಿರಿ."

೧೦೧. ಇಂದ್ರವಿಷ್ಣುಗಳಿಬ್ಬರೂ ಬಹಳ ಹೆದರಿದರು. "ನಾವಿಬ್ಬರೂ ಕೂಡಿ ಹೇಗೆ ಪಾರಾದೇವು?" ಎಂದು ವಿಷ್ಣುವು ಇಂದ್ರನನ್ನು ಕೇಳಿದನು.

೧೦೨. "ದೇವಾ, ಇವಳು ನಮ್ಮನ್ನು ಸುಡುವುದಕ್ಕೆ ಮೊದಲೇ ಇವಳನ್ನು ಕೊಂದು ಹಾಕು. ನಿನಗಿಂತಲೂ ನನಗೆ ಭಯ ಹೆಚ್ಚಾಗಿದೆ. ಕೊಲ್ಲು; ತಡಮಾಡ ಬೇಡ" ಎಂದು ಇಂದ್ರನು ಉತ್ತರವಿತ್ತನು.

೧೦೩. ತರುವಾಯ ವಿಷ್ಣುವು ಅವಳನ್ನು ನೋಡಿ, ಸ್ತ್ರೀವಧವು ಅಕಾರ್ಯ ವೆಂದರಿತು ಸುಮ್ಮನಾದನು. ಆದರೆ ಮತ್ತೂ ಚಿಂತಿಸಿ, ಕಷ್ಟಪರಿಹಾರಕ್ಕೋಸ್ಕರ ವಾಗಿ ತನ್ನ ಸುದರ್ಶನ ಚಕ್ರವನ್ನು ಎತ್ತಿಕೊಂಡನು.

ತತಸ್ತು ತ್ವರಯಾ ಯುಕ್ತಃ ಶೀಘ್ರಕಾರೀ ಭಯಾನ್ವಿತಃ ।
ಜ್ಞಾತ್ವಾ ವಿಷ್ಣುಸ್ತತಸ್ತಸ್ಯಾಃ ಕ್ರೂರಂ ದೇವ್ಯಾಶ್ಚಿಕೀರ್ಷಿತಂ ।
ಕ್ರುದ್ಧಃ ಸ್ವಮಸ್ತ್ರಮಾದಾಯ ಶಿರಶ್ಚಿಚ್ಛೇದ ವೈ ಭಿಯಾ ॥೧೦೪॥

ತಂ ದೃಷ್ಟ್ವಾ ಸ್ತ್ರೀವಧಂ ಘೋರಂ ಚುಕ್ರೋಧ ಭೃಗುರೀಶ್ವರಃ ।
ತತೋಽಭಿಶಪ್ತೋ ಭೃಗುಣಾ ವಿಷ್ಣುರ್ಭಾರ್ಯಾವಧೇ ತದಾ ॥೧೦೫॥

ಯಸ್ಮಾತ್ತೇ ಜಾನತೋ ಧರ್ಮಮವಧ್ಯಾ ಸ್ತ್ರೀ ನಿಷೂದಿತಾ ।
ತಸ್ಮಾತ್ತ್ವಂ ಸಪ್ತಕೃತ್ವೇಹ ಮಾನುಷೇಷೂಪಪತ್ಸ್ಯಸಿ ॥೧೦೬॥

ತತಸ್ತೇನಾಭಿಶಾಪೇನ ನಷ್ಟೇ ಧರ್ಮೇ ಪುನಃ ಪುನಃ ।
ಲೋಕಸ್ಯ ಚ ಹಿತಾರ್ಥಾಯ ಜಾಯತೇ ಮಾನುಷೇಷ್ವಿಹ ॥೧೦೭॥

---

೧೦೪. ಬಳಿಕ ಹೆದರಿಕೆಯಿಂದಲೂ, ಆತುರದಿಂದಲೂ ಕೂಡಿ, ವಿಷ್ಣುವು ಕೆಲಸವನ್ನು ಬೇಗನೆ ಮುಗಿಸಬೇಕೆಂದು ಯೋಚಿಸಿದನು. ದೇವಿಯು ಮಾಡಬೇಕೆಂದಿದ್ದ ಕ್ರೂರಕರ್ಮವು ಮನಸ್ಸಿಗೆ ಬಂದ ಕೂಡಲೆ ಅವನಿಗೆ ಕೋಪವು ಹುಟ್ಟಿತು. ಮುಂದೇನಾಗುವುದೋ ಎಂದು ಹೆದರಿ ತನ್ನ ಅಸ್ತ್ರದಿಂದ ಅವಳ ತಲೆಯನ್ನು ಕತ್ತರಿಸಿದನು.

೧೦೫. ತಪೋಬಲದಿಂದ ಬೇಕಾದುದನ್ನು ಮಾಡಲು ಸಮರ್ಥನಾದ ಭೃಗುಮಹರ್ಷಿಯು ಆ ಕ್ರೂರವಾದ ಸ್ತ್ರೀಹತ್ಯೆಯನ್ನು ನೋಡಿ ಸಿಟ್ಟಾದನು. - ತನ್ನ ಪತ್ನಿಯನ್ನು ಕೊಂದುದಕ್ಕಾಗಿ ವಿಷ್ಣುವಿಗೆ ಶಾಪವಿತ್ತನು.

೧೦೬. "ಹೆಂಗಸನ್ನು ಕೊಲ್ಲಬಾರದೆಂಬ ಧರ್ಮವು ನಿನಗೆ ಗೊತ್ತು. ಆದರೂ ಅವಳನ್ನು ವಧಿಸಿದೆ. ಆದುದರಿಂದ ನೀನು ಮನುಷ್ಯರಲ್ಲಿ ಏಳುಸಾರಿ ಹುಟ್ಟುವೆ."

೧೦೭. ಧರ್ಮವು ನಷ್ಟವಾದಾಗ ಅದನ್ನು ನೆಲೆಗೊಳಿಸಿ, ಜಗತ್ತಿಗೆ ಹಿತವನ್ನು ಮಾಡುವುದಕ್ಕಾಗಿ, ಆ ಶಾಪವನ್ನೇ ಕಾರಣವಾಗಿ ಇಟ್ಟುಕೊಂಡು ಅಲ್ಲಿಂದೀಚೆಗೆ ಹರಿಯು ಮನುಷ್ಯ ಜನ್ಮವನ್ನು ಮೇಲೆ ಮೇಲೆ ಎತ್ತುತ್ತಿರುವನು.

**ಅನುವ್ಯಾಹೃತ್ಯ ವಿಷ್ಣುಂ ಸ ತದಾದಾಯ ಶಿರಸ್ತ್ವರನ್ ।**
**ಸಮಾನೀಯ ತತಃ ಕಾಯಮಸೌ ಗೃಹ್ಯೇದಮಬ್ರವೀತ್ ॥೧೦೮॥**

**ಏಷಾ ತ್ವಂ ವಿಷ್ಣುನಾ ದೇವಿ ಹತಾ ಸಂಜೀವಯಾಮ್ಯಹಂ ।**
**ತತಸ್ತಾಂ ಯೋಜ್ಯ ಶಿರಸಾ ಅಭಿಜೀವೇತಿ ಸೋಽಬ್ರವೀತ್ ॥೧೦೯॥**

**ಯದಿ ಕೃತ್ಸ್ನೋ ಮಯಾ ಧರ್ಮೋ ಜ್ಞಾಯತೇ ಚರಿತೋಽಪಿ ವಾ ।**
**ತೇನ ಸತ್ಯೇನ ಜೀವಸ್ವ ಯದಿ ಸತ್ಯಂ ವದಾಮ್ಯಹಂ ॥೧೧೦॥**

**ತತಸ್ತಾಂ ಪ್ರೇಕ್ಷ್ಯ ಶೀತಾಭಿರದ್ಭಿರ್ಜೀವೇತಿ ಸೋಽಬ್ರವೀತ್ ।**
**ತತೋಽಭಿವ್ಯಾಹೃತೇ ತಸ್ಯ ದೇವೀ ಸಂಜೀವಿತಾ ತದಾ ॥೧೧೧॥**

**ತತಸ್ತಾಂ ಸರ್ವಭೂತಾನಿ ದೃಷ್ಟ್ವಾ ಸುಪ್ತೋತ್ಥಿತಾಮಿವ ।**
**ಸಾಧು ಸಾಧ್ವಿತಿ ಚಕ್ರುಸ್ತೇ ವಚಸಾ ಸರ್ವತೋದಿಶಂ ॥೧೧೨॥**

---

೧೦೮. ವಿಷ್ಣುವಿಗೆ ಹೀಗೆ ಮತ್ತೊಂದು ಸಾರಿ ಹೇಳಿ, ಭೃಗುಮುನಿಯು ಬೇಗನೆ ತನ್ನ ಪತ್ನಿಯ ತಲೆಯನ್ನೂ ದೇಹವನ್ನೂ ತಂದು ಸ್ಪರ್ಶಿಸುತ್ತ ಇಂತೆಂದನು.

೧೦೯. "ದೇವೀ, ನಿನ್ನನ್ನು ವಿಷ್ಣುವು ಕೊಂದನು. ಇಗೋ! ನಾನು ನಿನ್ನನ್ನು ಬದುಕಿಸುವೆನು" ಎಂದು ಹೇಳಿ ಬಳಿಕ ತಲೆಯನ್ನು ದೇಹಕ್ಕೆ ಸೇರಿಸಿ "ಬದುಕು" ಎಂದನು.

೧೧೦-೧೧೧. "ನನಗೆ ಧರ್ಮರಹಸ್ಯವೆಲ್ಲವೂ ಗೊತ್ತಿದ್ದರೆ, ಅದನ್ನು ನಾನು ಆಚರಿಸುತ್ತಿದ್ದರೆ, ಮತ್ತು ನಾನು ಸತ್ಯವನ್ನೇ ನುಡಿಯುತ್ತಿದ್ದರೆ ಆ ಸತ್ಯದ ಬಲದಿಂದ ಬದುಕು" ಎಂದು ಹೇಳಿ, ಅವಳನ್ನು ದಿಟ್ಟಿಸಿ ನೋಡುತ್ತ ತಣ್ಣೀರಿನಿಂದ ಪ್ರೋಕ್ಷಿಸಿ "ಜೀವಿಸು" ಎಂದನು. ಹೇಳಿದ ಕೂಡಲೇ ದೇವಿಗೆ ಪ್ರಾಣ ಬಂದಿತು.

೧೧೨. ನಿದ್ದೆಯಿಂದೆದ್ದವಳಂತೆ ತೋರುತ್ತಿದ್ದ ಆಕೆಯನ್ನು ಎಲ್ಲ ಪ್ರಾಣಿಗಳೂ ನೋಡಿದುವು; ಸರಿ ಸರಿ! ಎಂದು ಕೂಗಿದುವು. ಆ ಧ್ವನಿಯು ಎಲ್ಲ ದಿಕ್ಕುಗಳಲ್ಲಿಯೂ ತುಂಬಿತು.

**ಏವಂ ಪ್ರತ್ಯಾಹೃತಾ ತೇನ ದೇವೀ ಸಾ ಭೃಗುಣಾ ತದಾ ।**
**ಮಿಷತಾಂ ದೇವತಾನಾಂ ಹಿ ತದದ್ಭುತಮಿವಾಭವತ್ ॥೧೧೩॥**

**ಅಸಂಭ್ರಾಂತೇನ ಭೃಗುಣಾ ಪತ್ನೀಂ ಸಂಜೀವಿತಾಂ ಪುನಃ ।**
**ದೃಷ್ಟ್ವಾ ಚೇಂದ್ರೋ ನಾಲಭತ ಶರ್ಮ ಕಾವ್ಯಭಯಾತ್ಪುನಃ ।**
**ಪ್ರಜಾಗರೇ ತತಶ್ಚೇಂದ್ರೋ ಜಯಂತೀಮಿದಮಬ್ರವೀತ್ ॥೧೧೪॥**

**ಸಂಚಿಂತ್ಯ ಮತಿಮಾನ್ವಾಕ್ಯಂ ಸ್ವಾಂ ಕನ್ಯಾಂ ಪಾಕಶಾಸನಃ ।**
**ಏಷ ಕಾವ್ಯೋ ಹ್ಯಮಿತ್ರಾಯ ವ್ರತಂ ಚರತಿ ದಾರುಣಂ ।**
**ತೇನಾಹಂ ವ್ಯಾಕುಲಃ ಪುತ್ರಿ ಕೃತೋ ಮತಿಮತಾ ಭೃಶಂ ॥೧೧೫॥**

**ಗಚ್ಛ ಸಂಸಾಧಯಸ್ವೈನಂ ಶ್ರಮಾಪನಯನೈಃ ಶುಭೈಃ ।**
**ತೈಸ್ತೈರ್ಮನೋಽನುಕೂಲೈಶ್ಚ ಹ್ಯುಪಚಾರೈರತಂದ್ರಿತಾ ॥೧೧೬॥**

**ಕಾವ್ಯಮಾರಾಧಯಸ್ವೈನಂ ಯಥಾ ತುಷ್ಯೇತ ಸ ದ್ವಿಜಃ ।**
**ಗಚ್ಛ ತ್ವಂ ತಸ್ಯ ದತ್ತಾಸಿ ಪ್ರಯತ್ನಂ ಕುರು ಮತ್ಕೃತೇ ॥೧೧೭॥**

---

೧೧೩. ಹೀಗೆ ಭೃಗುಮುನಿಯು ತನ್ನ ಪತ್ನಿಯನ್ನು ಮರಳಿ ಬದುಕಿಸಿದನು. ಬಿಟ್ಟ ಕಣ್ಣುಗಳಿಂದ ನೋಡುತ್ತಿದ್ದ ದೇವತೆಗಳಿಗೆ ಇದು ಅತ್ಯಾಶ್ಚರ್ಯಕರವಾಗಿತ್ತು.

೧೧೪. ಗಾಬರಿಗೊಳ್ಳದೆ ಭೃಗುಮಹರ್ಷಿಯು ತನ್ನ ಪತ್ನಿಯನ್ನು ಮರಳಿ ಬದುಕಿಸಿಕೊಂಡುದನ್ನು ನೋಡಿ ಇಂದ್ರನಿಗೆ ನೆಮ್ಮದಿ ಹುಟ್ಟಲಿಲ್ಲ. ಶುಕ್ರಾಚಾರ್ಯನಿಂದ ಅವನಿಗೆ ಮತ್ತೆ ಭೀತಿ ಹುಟ್ಟಿತು. ರಾತ್ರಿಯಲ್ಲಿ ಅವನಿಗೆ ನಿದ್ರೆ ಹತ್ತಲಿಲ್ಲ. ಆಗ ಅವನು ತನ್ನ ಮಗಳಾದ ಜಯಂತಿಯೊಡನೆ ಹೀಗೆ ಹೇಳಿದನು.

೧೧೫. ಬುದ್ಧಿಶಾಲಿಯಾದ ಇಂದ್ರನು ಚೆನ್ನಾಗಿ ಆಲೋಚಿಸಿದನು. "ಮಗಳೇ, ಈ ಶುಕ್ರಾಚಾರ್ಯನು ನನ್ನ ಶತ್ರುವಿನ ಹಿತಕ್ಕಾಗಿ ತೀವ್ರವಾದ ವ್ರತವನ್ನು ಕೈಗೊಂಡಿದ್ದಾನೆ. ಅವನದು ಸೂಕ್ಷ್ಮಬುದ್ಧಿ; ಅದರಿಂದ ನಾನು ಅಶಾಂತನಾಗಿದ್ದೇನೆ.

೧೧೬–೧೧೭. ಆಯಾಸವನ್ನು ಕಳೆಯುವ, ಮನಸ್ಸಿಗೆ ಹಿತವೆಂದು ತೋರುವ ಆಯಾ ಉಪಚಾರಗಳಿಂದ ಅವನನ್ನು ಸೇವಿಸು. ಆ ಬ್ರಾಹ್ಮಣನಿಗೆ ಮೆಚ್ಚಿಕೆಯಾಗುವಂತೆ ಜಾಗರೂಕಳಾಗಿ ಅವನನ್ನು ಸತ್ಕರಿಸು. ಅವನಿಗಾಗಿ ನಿನ್ನನ್ನು ಬಿಟ್ಟಿರುವೆನು. ನನ್ನ ಹಿತಕ್ಕಾಗಿ ಪ್ರಯತ್ನಿಸು. ಎಲೌ, ಜಯಂತೀ, ನಡೆ" ಎಂದು ಇಂದ್ರನು ತನ್ನ ಮಗಳಿಗೆ ಹೇಳಿದನು.

ಏವಮುಕ್ತ್ವಾ ಜಯಂತೀ ಸಾ ವಚಃ ಸಂಗೃಹ್ಯ ವೈ ಪಿತುಃ ।
ಅಗಚ್ಛದ್ಯತ್ರ ಘೋರಂ ಸ ತಪ ಆರಭ್ಯ ತಿಷ್ಠತಿ ॥೧೧೮॥

ತಂ ದೃಷ್ಟ್ವಾ ತು ಪಿಬಂತಂ ಸಾ ಕಣಧೂಮಮವಾಙ್ಮುಖಂ ।
ಯಕ್ಷೇಣ ಪಾತ್ಯಮಾನಂ ಚ ಕುಂಡಧಾರೇಣ ಪಾತಿತಂ ॥೧೧೯॥

ದೃಷ್ಟ್ವಾ ಚ ತಂ ಪಾತ್ಯಮಾನಂ ದೇವೀ ಕಾವ್ಯಮವಸ್ಥಿತಂ ।
ಸ್ವರೂಪಧ್ಯಾನಶಾಮ್ಯಂತಂ ದುರ್ಬಲಂ ಭೂತಿಮಾಸ್ಥಿತಂ ।
ಪಿತ್ರಾ ಯಥೋಕ್ತಂ ವಾಕ್ಯಂ ಸಾ ಕಾವ್ಯೇ ಕೃತವತೀ ತದಾ ॥೧೨೦॥

ಗೀರ್ಭಿಶ್ಚೈವಾನುಕೂಲಾಭಿಃ ಸ್ತುವತೀ ವಲ್ಗುಭಾಷಿಣೀ ।
ಗಾತ್ರಸಂವಾಹನೈಃ ಕಾಲೇ ಸೇವಮಾನಾ ತ್ವಚಃ ಸುಖೈಃ ।
ವ್ರತಚರ್ಯಾನುಕೂಲಾಭಿರುವಾಸ ಬಹುಲಾಃ ಸಮಾಃ ॥೧೨೧॥

---

೧೧೮. ಇಂದ್ರನು ಇಂತೆನಲು, ಜಯಂತಿಯು ತನ್ನ ತಂದೆಯ ಮಾತನ್ನು ಕೈಗೊಂಡು, ಶುಕ್ರಾಚಾರ್ಯನು ಘೋರವಾದ ತಪಸ್ಸಿಗೆ ತೊಡಗಿದ್ದ ಸ್ಥಳಕ್ಕೆ ಹೋದಳು.

೧೧೯. ಅಲ್ಲಿ ಶುಕ್ರಾಚಾರ್ಯನನ್ನು ಅವಳು ನೋಡಿದಳು. ಅವನು ತಲೆಕೆಳಗಾಗಿ ನಿಂತು ಹಿಪ್ಪಲಿಯ ಹೊಗೆಯನ್ನು ಕುಡಿಯುತ್ತಿದ್ದನು. ಕುಂಡಧಾರನೆಂಬ ಯಕ್ಷನು ಅವನನ್ನು ಧೂಮಕುಂಡದಲ್ಲಿ ನೂಕಿ ಬೀಳಿಸುತ್ತಿದ್ದನು.

೧೨೦. ಕುಂಡದಲ್ಲಿ ಬೀಳುತ್ತಿದ್ದರೂ ಅವನು ಏಕಾಗ್ರಚಿತ್ತನಾಗಿ ಆತ್ಮ ಸ್ವರೂಪಧ್ಯಾನದಲ್ಲಿ ಮಗ್ನನಾಗಿದ್ದನು. ಅವನ ಮುಖದಲ್ಲಿ ಶಾಂತಿಯು ನೆಲೆಸಿತ್ತು. ಅವನು ದುರ್ಬಲನಾಗಿದ್ದನು. ಮೈಗೆಲ್ಲ ಬೂದಿಯು ಹತ್ತಿಕೊಂಡಿತ್ತು. ಆಗ ಜಯಂತಿಯು ತನ್ನ ತಂದೆಯ ಮಾತಿನಂತೆ ಶುಕ್ರಾಚಾರ್ಯನನ್ನು ಸೇವಿಸಿದಳು.

೧೨೧. ಆ ಮಧುರಭಾಷಿಣಿಯು ಶ್ರುತಿಮಧುರವಾದ ವಾಕ್ಯಗಳಿಂದ ಸ್ತುತಿಸಿದಳು. ಕಾಲವನ್ನು ತಿಳಿದು ಸುಖಸ್ಪರ್ಶವಾಗಿ ಮೈಯೊತ್ತಿದಳು. ವ್ರತಾಚರಣೆಗೆ ಅನುಕೂಲವಾದ ಹಲವು ವಿಧಗಳಿಂದ ಸೇವಿಸುತ್ತ ಎಷ್ಟೋ ವರ್ಷಗಳ ಕಾಲ ಅಲ್ಲಿ ನೆಲೆಸಿದಳು.

**ಪೂರ್ಣೇ ಧೂಮವ್ರತೇ ತಸ್ಮಿನ್ ಘೋರೇ ವರ್ಷಸಹಸ್ರಕೇ ।**
**ವರೇಣ ಚ್ಛಂದಯಾಮಾಸ ಕಾವ್ಯಂ ಪ್ರೀತೋ ಭವಸ್ತದಾ ॥೧೨೨॥**

**॥ ಮಹಾದೇವ ಉವಾಚ ॥**

**ಏತದ್ವ್ರತಂ ತ್ವಯೈಕೇನ ಚೀರ್ಣಂ ನಾನ್ಯೇನ ಕೇನಚಿತ್ ।**
**ತಸ್ಮಾದ್ವೈ ತಪಸಾ ಬುಧ್ಯಾ ಶ್ರುತೇನ ಚ ಬಲೇನ ಚ ॥೧೨೩॥**

**ತೇಜಸಾ ಚ ಸುರಾನ್ ಸರ್ವಾಂಸ್ತ್ವಮೇಕೋಽಭಿಭವಿಷ್ಯಸಿ ।**
**ಯಚ್ಚಾಭಿಲಷಿತಂ ಬ್ರಹ್ಮನ್ ವಿದ್ಯತೇ ಭೃಗುನಂದನ ॥೧೨೪॥**

**ಪ್ರಪತ್ಸ್ಯಸೇ ತು ತತ್ಸರ್ವಂ ನಾನುವಾಚ್ಯಂ ತು ಕಸ್ಯಚಿತ್ ।**
**ಸರ್ವಾಭಿಭಾವೀ ತೇನ ತ್ವಂ ಭವಿಷ್ಯಸಿ ದ್ವಿಜೋತ್ತಮ ॥೧೨೫॥**

**ಏತಾನ್ ದತ್ವಾ ವರಾಂಸ್ತಸ್ಮೈ ಭಾರ್ಗವಾಯ ಭವಃ ಪುನಃ ।**
**ಪ್ರಜೇಶತ್ವಂ ಧನೇಶತ್ವಮವಧ್ಯತ್ವಂ ಚ ವೈ ದದೌ ॥೧೨೬॥**

---

೧೨೨. ಒಂದು ಸಾವಿರ ವರ್ಷಗಳ ತರುವಾಯ ಆ ಭಯಂಕರವಾದ ಧೂಮವ್ರತವು ಮುಗಿಯಿತು. ಪ್ರೀತನಾದ ಪರಮೇಶ್ವರನು ಶುಕ್ರಾಚಾರ್ಯನಿಗೆ ಇಷ್ಟವಾದ ವರವನ್ನು ಕರುಣಿಸಲು ಮೈದೋರಿದನು.

೧೨೩-೧೨೫. ಮಹಾದೇವನು ಹೇಳಿದನು.—“ಈ ವ್ರತವನ್ನು ಸಾಂಗವಾಗಿ ನೆರವೇರಿಸಿದವನು ನೀನೊಬ್ಬನೇ. ಇನ್ನಾರಿಂದಲೂ ಇದು ಸಾಧ್ಯವಿಲ್ಲ. ಆದುದರಿಂದ ತಪಸ್ಸು, ಬುದ್ಧಿ, ಶಾಸ್ತ್ರಪಾಂಡಿತ್ಯ, ಬಲ, ತೇಜಸ್ಸು ಇವುಗಳಲ್ಲಿ ನೀನೊಬ್ಬನೇ ದೇವತೆಗಳೆಲ್ಲರನ್ನೂ ಮೀರಿಸಬಲ್ಲೆ. ಎಲೈ ಬ್ರಹ್ಮಜ್ಞಾನಿಯೇ, ನಿನಗೆ ಬೇಕಾದುದೆಲ್ಲ ವನ್ನೂ ಪಡೆಯುವೆ. ಆದರೆ ಮಾತ್ರ ಇದನ್ನು ಮತ್ತಾರಿಗೂ ಹೇಳಬೇಡ. ಓ ದ್ವಿಜೋತ್ತಮಾ, ನೀನು ಎಲ್ಲರನ್ನೂ ಮೀರಿಸಿದವನಾಗುವೆ.”

೧೨೬. ಪರಮೇಶ್ವರನು ಭೃಗುಪುತ್ರನಾದ ಶುಕ್ರಾಚಾರ್ಯನಿಗೆ ಈ ವರಗಳನ್ನು ಕರುಣಿಸಿದನು ; ಅಲ್ಲದೆ ಪ್ರಜಾಧಿಪತ್ಯವನ್ನೂ ಧನಾಧಿಪತ್ಯವನ್ನೂ ಅನುಗ್ರಹಿಸಿದನು. ಅವನಿಗೆ ಯಾರಿಂದಲೂ ವಧವಾಗದಂತೆ ಕೃಪೆಮಾಡಿದನು.

ಏತಾನ್ಲಬ್ಧ್ವಾ ವರಾನ್ ಕಾವ್ಯಃ ಸಂಪ್ರಹೃಷ್ಟತನೂರುಹಃ ।
ಹರ್ಷಾತ್ಪ್ರಾದುರ್ಬಭೌ ತಸ್ಯ ದಿವ್ಯಸ್ತೋತ್ರಂ ಮಹೇಶ್ವರೇ ।
ತಥಾ ತಿರ್ಯಕ್ಸ್ಥಿತಶ್ಚೈವ ತುಷ್ಟುವೇ ನೀಲಲೋಹಿತಂ ॥೧೨೭॥

॥ ಶುಕ್ರ ಉವಾಚ ॥

ನಮೋಽಸ್ತು ಶಿತಿಕಂಠಾಯ ಕನಿಷ್ಠಾಯ ಸುವರ್ಚಸೇ ।
ಲೇಲಿಹಾನಾಯ ಕಾವ್ಯಾಯ ವತ್ಸರಾಯಾಂಧಸಃ ಪತೇ ॥೧೨೮॥

ಕಪರ್ದಿನೇ ಕರಾಲಾಯ ಹರ್ಯಕ್ಷ್ಣೇ ವರದಾಯ ಚ
ಸಂಸ್ತುತಾಯ ಸುತೀರ್ಥಾಯ ದೇವದೇವಾಯ ರಂಹಸೇ ॥೧೨೯॥

ಉಷ್ಣೀಷಿಣೇ ಸುವಕ್ತ್ರಾಯ ಬಹುರೂಪಾಯ ವೇಧಸೇ ।
ವಸುರೇತಾಯ ರುದ್ರಾಯ ತಪಸೇ ಚಿತ್ರವಾಸಸೇ ॥೧೩೦॥

---

೧೨೭. ಈ ವರಗಳೆಲ್ಲವೂ ದೊರೆತ ಸಂತೋಷಾತಿಶಯದಿಂದ ಶುಕ್ರಾಚಾರ್ಯನ ಮೈಮೇಲೆ ರೋಮಾಂಚಗಳೆದ್ದುವು. ಈಶ್ವರನನ್ನು ಕುರಿತ ದಿವ್ಯಸ್ತೋತ್ರವು ಅವನ ಮುಖದಿಂದ ತಾನಾಗಿಯೇ ಹೊರಟಿತು. ಹಾಗೆ ಕೆಳಮುಖದಿಂದಲೇ ನಿಂತು ಅವನು ಮಹಾದೇವನನ್ನು ಸ್ತುತಿಸಿದನು.

೧೨೮. ಶುಕ್ರಾಚಾರ್ಯನು ಹೇಳಿದನು.—ನೀಲಕಂಠನೂ, ತ್ರಿಮೂರ್ತಿಗಳಲ್ಲಿ ಕೊನೆಯವನೂ, ಕಾಂತಿಮಂತನೂ, ಪ್ರಳಯದಲ್ಲಿ ಜಗತ್ತುಗಳನ್ನು ಸಂಹರಿಸಿ ನೆಕ್ಕುವಾತನೂ, ತಪೋಗುಣ ಭರಿತನೂ, ಸಂವತ್ಸರಸ್ವರೂಪನೂ, ಸಕಲಜೀವರಾಶಿಗಳಿಗೆ ಬೇಕಾದ ಆಹಾರದ ಅಧಿಪತಿಯೂ ಆದ ಪರಮೇಶ್ವರನಿಗೆ ನಮಸ್ಕಾರ.

೧೨೯. ಜಟಾಧಾರಿ, ಭಯಂಕರಸ್ವರೂಪನು, ಸೂರ್ಯಚಂದ್ರರೇ ಕಣ್ಣಾಗಿರತಕ್ಕವನು, ವರಪ್ರದನು, ಸಕಲಲೋಕಗಳ ಸ್ತುತಿಗೆ ಪಾತ್ರನಾದವನು, ಜ್ಞಾನೋಪದೇಶಕನು, ದೇವಾಧಿದೇವನು, ವೇಗಶಾಲಿಯು ಎನಿಸಿಕೊಂಡಿರುವ ಮಹಾದೇವನಿಗೆ ನಮಸ್ಕಾರ.

೧೩೦. ಕಿರೀಟಧಾರಿಯೂ, ಮಂಗಳಮುಖನೂ, ಬಹುರೂಪನೂ, ಜಗತ್ಕರ್ತನೂ, ಸಕಲೈಶ್ವರ್ಯಕಾರಣನೂ, ತಪೋಗಮ್ಯನೂ, ಚಿತ್ರಾಂಬರಧಾರಿಯೂ ಆದ ರುದ್ರನಿಗೆ ನಮಸ್ಕಾರ.

**ಹ್ರಸ್ವಾಯ ಮುಕ್ತಕೇಶಾಯ ಸೇನಾನ್ಯೇ ರೋಹಿತಾಯ ಚ ।**
**ಕವಯೇ ರಾಜವೃಕ್ಷಾಯ ತಕ್ಷಕಕ್ರೀಡನಾಯ ಚ ॥೧೩೧॥**

**ಸಹಸ್ರಶಿರಸೇ ಚೈವ ಸಹಸ್ರಾಕ್ಷಾಯ ಮೀಢುಷೇ ।**
**ವರಾಯ ಭವ್ಯರೂಪಾಯ ಶ್ವೇತಾಯ ಪುರುಷಾಯ ಚ ॥೧೩೨॥**

**ಗಿರಿಶಾಯ ನಮೋಽರ್ಕಾಯ ಬಲಿನೇ ಆಜ್ಯಪಾಯ ಚ ।**
**ಸುತೃಪ್ತಾಯ ಸುವಸ್ತ್ರಾಯ ಧನ್ವಿನೇ ಭಾರ್ಗವಾಯ ಚ ॥೧೩೩॥**

**ನಿಷಂಗಿಣೇ ಚ ತಾರಾಯ ಸ್ವಕ್ಷಾಯ ಕ್ಷಪಣಾಯ ಚ ।**
**ತಾಮ್ರಾಯ ಚೈವ ಭೀಮಾಯ ಉಗ್ರಾಯ ಚ ಶಿವಾಯ ಚ ॥೧೩೪॥**

---

೧೩೧. ಸ್ವೇಚ್ಛೆಯಿಂದ ಹ್ರಸ್ವರೂಪನಾಗಿ, ತಲೆ ಕೆದರಿರಲು, ದೈತ್ಯರ ಮೇಲೆ ದೇವಸೇನೆಯನ್ನು ನಡೆಸಿ, ಕೋಪದಿಂದ ಮುಖವು ಕೆಂಪೇರಿರಲು, ತಕ್ಷಕ ನೆಂಬ ಮಹಾಸರ್ಪವನ್ನು ಲೀಲೆಯಿಂದ ಧರಿಸಿರುವ, ನಿರುಪದ್ರವವಾದ ಆಶ್ರಯ ವನ್ನು ಕೊಡುವ ಸರ್ವಜ್ಞನಿಗೆ ನಮಸ್ಕಾರ.

೧೩೨. ಸಾವಿರ ತಲೆಗಳೂ, ಸಾವಿರ ಕಣ್ಣುಗಳೂ ಪ್ರಕಾಶಿಸುತ್ತಿರಲು, ದಾನಿಯೂ, ಶ್ರೇಷ್ಠನೂ, ಮಂಗಳಸ್ವರೂಪನೂ, ಶುಭ್ರವರ್ಣನೂ ಆಗಿ ವಿರಾಜಿಸುವ ಪುರುಷಶಬ್ದ ವಾಚ್ಯನಾದ ಮಹಾದೇವನಿಗೆ ನಮಸ್ಕಾರ.

೧೩೩. ಕೈಲಾಸವಾಸಿಯೂ, ಪೂಜಾರ್ಹನೂ, ಬಲಶಾಲಿಯೂ, ಯಜ್ಞದಲ್ಲಿ ಆಜ್ಯಭಾಗವನ್ನು ಪಡೆಯತಕ್ಕವನೂ, ನಿತ್ಯತೃಪ್ತನೂ, ಶುಭವಸ್ತ್ರಧರನೂ, ಪಿನಾಕ ವೆಂಬ ದಿವ್ಯಧನುಸ್ಸನ್ನು ಧರಿಸಿದವನೂ ಆದ ಪರಮೇಶ್ವರನಿಗೆ ನಮಸ್ಕಾರ.

೧೩೪. ಬತ್ತಳಿಕೆಯು ಬೆನ್ನಿನಲ್ಲಿ ಶೋಭಿಸುತ್ತಿರಲು, ಸಂಸಾರದಿಂದ ಭಕ್ತ ರನ್ನು ಪಾರುಮಾಡುತ್ತ, ಮಂಗಳನೇತ್ರನೂ ಪಾಪಹರನೂ ಎನಿಸಿ, ಪ್ರಳಯ ಕಾಲದಲ್ಲಿ ಕೆಂಪು ಮುಖವೂ, ಭಯಂಕರಾಕೃತಿಯೂ, ಉಗ್ರರೂಪವೂ ಆಗಿ ವಿರಾ ಜಿಸುವ ಶಿವನಿಗೆ ನಮಸ್ಕಾರ.

ಮಹಾದೇವಾಯ ಶರ್ವಾಯ ವಿಶ್ವರೂಪಶಿವಾಯ ಚ ।
ಹಿರಣ್ಯಾಯ ವರಿಷ್ಠಾಯ ಜ್ಯೇಷ್ಠಾಯ ಮಧ್ಯಮಾಯ ಚ ||೧೩೫||

ವಾಸ್ತೋಷ್ಪತೇ ಪಿನಾಕಾಯ ಮುಕ್ತಯೇ ಕೇವಲಾಯ ಚ ।
ಮೃಗವ್ಯಾಧಾಯ ದಕ್ಷಾಯ ಸ್ಥಾಣವೇ ಭೀಷಣಾಯ ಚ ||೧೩೬||

ಬಹುನೇತ್ರಾಯ ಧುರ್ಯಾಯ ತ್ರಿನೇತ್ರಾಯೇಶ್ವರಾಯ ಚ ।
ಕಪಾಲಿನೇ ಚ ವೀರಾಯ ಮೃತ್ಯವೇ ತ್ರ್ಯಂಬಕಾಯ ಚ ||೧೩೭||

ಬಭ್ರವೇ ಚ ಪಿಶಂಗಾಯ ಪಿಂಗಲಾಯಾರುಣಾಯ ಚ ।
ಪಿನಾಕಿನೇ ಚೇಷುಮತೇ ಚಿತ್ರಾಯ ರೋಹಿತಾಯ ಚ ||೧೩೮||

---

೧೩೫. ದೇವೋತ್ತಮನೂ, ದುಷ್ಟದಮನನೂ, ವಿಶ್ವರೂಪನೂ, ಸುಖಪ್ರದನೂ, ಸರ್ವರಿಂದಲೂ ಆಶ್ರಯಿಸಲ್ಪಡುವವನೂ, ಶ್ರೇಷ್ಠನೂ, ಜ್ಯೇಷ್ಠನೂ, ತ್ರಿಮೂರ್ತಿಗಳಲ್ಲೊಬ್ಬನೂ ಆದ ಶಂಕರನಿಗೆ ನಮಸ್ಕಾರ.

೧೩೬. ಸಕಲ ಜಗತ್ತುಗಳ ಅಧಿಪತಿಯೂ, ಪಿನಾಕಧಾರಿಯೂ, ಬಂಧನರಹಿತನೂ, ಸ್ವತಂತ್ರನೂ, ಮೃಗಗಳಂತೆ ಯುಕ್ತಾಯುಕ್ತವನ್ನರಿಯದ ದೈತ್ಯರನ್ನು ಸಂಹರಿಸುವವನೂ, ಸರ್ವಸಮರ್ಥನೂ, ಸ್ಥಿರನೂ, ಉಗ್ರಸ್ವರೂಪನೂ ಆದ ಪರಮೇಶ್ವರನಿಗೆ ನಮಸ್ಕಾರ.

೧೩೭. ಅನೇಕ ನೇತ್ರಗಳಿಂದ ಶೋಭಿಸುತ್ತ, ಆಶ್ರಿತರಕ್ಷಣದ ಹೊರೆಯನ್ನು ಹೊತ್ತು, ಸಂಹಾರಕಾರ್ಯದಲ್ಲಿ ಸಮರ್ಥವೆನಿಸಿದ ಮೂರನೆಯ ಕಣ್ಣು ಜ್ವಲಿಸುತ್ತಿರಲು, ಎಲ್ಲಕ್ಕೂ ಅಧಿಪತಿಯೆನಿಸಿ, ಬ್ರಹ್ಮಕಪಾಲವನ್ನು ಕೈಯಲ್ಲಿ ಹಿಡಿದ ವೀರನೂ, ಮೃತ್ಯುವಿಗೆ ಸಹ ಮೃತ್ಯುಸ್ವರೂಪನೂ ಆದ ತ್ರಿಯಂಬಕನಿಗೆ ನಮಸ್ಕಾರ.

೧೩೮. ಮುಖಭೇದದಿಂದ ಮಾಸಲುಕೆಂಪು, ಕಿತ್ತಳೆ, ಅರಸಿನ ಮತ್ತು ಕೆಂಪು ಬಣ್ಣಗಳಿಂದ ಪ್ರಕಾಶಿಸುತ್ತ, ಪಿನಾಕವೆಂಬ ಬಿಲ್ಲನ್ನೂ ದಿವ್ಯಶರಗಳನ್ನೂ ಧರಿಸಿ, ವಿಚಿತ್ರ ಕಾರ್ಯಗಳನ್ನೆಸಗಬಲ್ಲ ಕೆಂಜೆಡೆಯ ಮಹಾದೇವನಿಗೆ ನಮಸ್ಕಾರ.

**ದುಂದುಭಾಯ್ಯೈಕಪಾದಾಯ ಅಜಾಯ ಬುದ್ಧಿದಾಯ ಚ।**
**ಆರಣ್ಯಾಯ ಗೃಹಸ್ಥಾಯ ಯತಯೇ ಬ್ರಹ್ಮಚಾರಿಣೇ ॥೧೩೯॥**

**ಸಾಂಖ್ಯಾಯ ಚೈವ ಯೋಗಾಯ ವ್ಯಾಪಿನೇ ದೀಕ್ಷಿತಾಯ ಚ।**
**ಅನಾಹತಾಯ ಶರ್ವಾಯ ಭವ್ಯೇಶಾಯ ಯಮಾಯ ಚ ॥೧೪೦॥**

**ರೋಧಸೇ ಚೇಕಿತಾನಾಯ ಬ್ರಹ್ಮಿಷ್ಠಾಯ ಮಹರ್ಷಯೇ।**
**ಚತುಷ್ಪದಾಯ ಮೇಧ್ಯಾಯ ರಕ್ಷಿಣೇ ಶ್ರೀಘ್ರಗಾಯ ಚ ॥೧೪೧॥**

**ಶಿಖಂಡಿನೇ ಕಲಾಪಾಯ ದಂಷ್ಟ್ರಿಣೇ ವಿಶ್ವವೇಧಸೇ।**
**ಭಾಸ್ವರಾಯ ಪ್ರತೀತಾಯ ಸುದೀಪ್ತಾಯ ಸುಮೇಧಸೇ ॥೧೪೨॥**

---

೧೩೯. ಭೇರಿಯಂತೆ ಮಹಾಧ್ವನಿಮಾಡುತ್ತ, ಒಂದೇ ಕಾಲಿನಲ್ಲಿ ನಿಂತು ತಾಂಡವನರ್ತನವನ್ನೆಸಗುತ್ತ, ಜನ್ಮರಹಿತನೂ, ಭಕ್ತರಿಗೆ ಸದ್ಬುದ್ಧಿದಾತನೂ ಆಗಿ, ವಾನಪ್ರಸ್ಥ, ಗೃಹಸ್ಥ, ಬ್ರಹ್ಮಚರ್ಯ ಮತ್ತು ಸನ್ಯಾಸಗಳೆಂಬ ನಾಲ್ಕು ಆಶ್ರಮ ಧರ್ಮಗಳಿಂದ ಉಪಾಸ್ಯನಾಗಿರುವ ಪರಮೇಶ್ವರನಿಗೆ ನಮಸ್ಕಾರ.

೧೪೦. ಸಾಂಖ್ಯ ಮತ್ತು ಯೋಗದರ್ಶನಗಳಿಂದ ಗಮ್ಯನಾಗಿ, ಎಲ್ಲೆಡೆಗಳಲ್ಲಿ ವ್ಯಾಪಿಸಿರುವವನೂ, ತಪೋದೀಕ್ಷೆಯನ್ನು ತಳೆದವನೂ, ಕಾಮಾದ್ಯರಿಷಡ್ವರ್ಗಗಳಿಗೆ ತುತ್ತಾಗದೆ ಅವುಗಳನ್ನು ಅಡಗಿಸುವವನೂ, ಸಕಲ ಮಂಗಳಗಳಿಗೆ ಅಧಿಪತಿಯೂ ಎನಿಸಿದ ಸರ್ವನಿಯಾಮಕನಿಗೆ ನಮಸ್ಕಾರ.

೧೪೧. ಜಗತ್ತನ್ನು ವ್ಯವಸ್ಥೆಗೊಳಪಡಿಸಿ, ಏಕಾಗ್ರಚಿತ್ತನಾಗಿ, ಪೂಜ್ಯರಿಗೆ ಸಹ ಪೂಜ್ಯನೂ ಮಹರ್ಷಿಯೂ ಎನಿಸಿ, ಧರ್ಮ, ಜ್ಞಾನ, ಐಶ್ವರ್ಯ ಮತ್ತು ವೈರಾಗ್ಯಗಳೆಂಬ ನಾಲ್ಕೂ ಪಾದ ಪೀಠಗಳಾಗಿರಲು, ಪವಿತ್ರನೂ, ರಕ್ಷಕನೂ, ಭಕ್ತಪರಿಪಾಲನದಲ್ಲಿ ತ್ವರಾತಿಶಯವುಳ್ಳವನೂ ಆದ ಪ್ರಭುವಿಗೆ ನಮಸ್ಕಾರ.

೧೪೨. ಶಿಖಾವಂತನೂ, ಉಗ್ರರೂಪನೂ ಕೋರೆ ಹಲ್ಲಿನವನೂ, ಜಗತ್ಕಾರಣನೂ, ಪ್ರಕಾಶವಂತನೂ, ಆಗಮಪ್ರಸಿದ್ಧನೂ, ಮಹಾಪ್ರಾಜ್ಞನೂ ಆದ ತೇಜೋನಿಧಿಗೆ ನಮಸ್ಕಾರ.

**ಕ್ರೂರಾಯಾವಿಕೃತಾಯೈವ ಭೀಷಣಾಯ ಶಿವಾಯ ಚ ।**
**ಸೌಮ್ಯಾಯ ಚೈವ ಮುಖ್ಯಾಯ ಧಾರ್ಮಿಕಾಯ ಶುಭಾಯ ಚ ॥೧೪೩॥**

**ಅವಧ್ಯಾಯಾಮೃತಾಯೈವ ನಿತ್ಯಾಯ ಶಾಶ್ವತಾಯ ಚ**
**ವ್ಯಾಪೃತಾಯ ವಿಶಿಷ್ಟಾಯ ಭರತಾಯ ಚ ಸಾಕ್ಷಿಣೇ ॥೧೪೪॥**

**ಕ್ಷೇಮಾಯ ಸಹಮಾನಾಯ ಸತ್ಯಾಯ ಚಾಮೃತಾಯ ಚ ।**
**ಕರ್ತ್ರೇ ಪರಶವೇ ಚೈವ ಶೂಲಿನೇ ದಿವ್ಯಚಕ್ಷುಷೇ ॥೧೪೫॥**

**ಸೋಮಪಾಯಾಜ್ಯಪಾಯೈವ ಧೂಮಪಾಯೋಷ್ಮಪಾಯ ಚ ।**
**ಶುಚಯೇ ಪರಿಧಾನಾಯ ಸದ್ಯೋಜಾತಾಯ ಮೃತ್ಯವೇ ॥೧೪೬॥**

---

೧೪೩. ಲೋಕಕಂಟಕರಾದ ದೈತ್ಯದಾನವರ ವಿಷಯದಲ್ಲಿ ಕ್ರೂರನೂ, ಜ್ಞಾನಾನಂದಾದಿ ಕಲ್ಯಾಣಗುಣಗಳನ್ನು ಬಿಡದವನೂ, ಪ್ರಳಯದಲ್ಲಿ ಜಗತ್ಸಂಹಾರ ನೆನಿಸಿ ಭಯಂಕರನೂ, ಸಹಜವಾಗಿ ಮಂಗಳಸ್ವರೂಪನೂ, ಸೌಮ್ಯಾಕಾರನೂ, ದೇವತೆಗಳಲ್ಲಿ ಅಗ್ರಗಣ್ಯನೂ ಧರ್ಮನಿರತನೂ, ಶುಭಕರನೂ ಆದ ಮಹೇಶ್ವರನಿಗೆ ನಮಸ್ಕಾರ.

೧೪೪. ಅವಧ್ಯನೂ, ಅಮೃತನೂ, ನಿತ್ಯನೂ, ಶಾಶ್ವತನೂ, ಸರ್ವ ವ್ಯಾಪಕನೂ, ಅತಿಶಯಗುಣಯುಕ್ತನೂ, ವಿಶ್ವಪೋಷಕನೂ ಆದ ಸರ್ವಸಾಕ್ಷಿಗೆ ನಮಸ್ಕಾರ.

೧೪೫. ಮಂಗಳದಾತನು, ಕ್ಷಮಾಶೀಲನು, ಸತ್ಯಾತ್ಮನು, ಪ್ರಕೃತಿಸಂಬಂಧ ರಹಿತನು, ಜಗತ್ಕರ್ತನು, ಕರ್ಮಾನುಸಾರವಾಗಿ ಫಲಕೊಡುವವನು, ಭೂತಭವಿಷ್ಯ ದ್ವರ್ತಮಾನಗಳನ್ನು ಬಲ್ಲವನು ಎನಿಸಿಕೊಂಡಿರುವ ತ್ರಿಶೂಲಧರನಿಗೆ ನಮಸ್ಕಾರ.

೧೪೬. ಯಜ್ಞಭಾಗದಿಂದ ಬಂದ ಸೋಮರಸವನ್ನೂ ತುಪ್ಪವನ್ನೂ ಪಾನ ಮಾಡತಕ್ಕವನು, ತಾನು ತೀವ್ರವಾದ ತಪಸ್ಸನ್ನೆಸಗಿದಾಗ ಹೊಗೆಯನ್ನೂ ಹಬೆ ಯನ್ನೂ ಕುಡಿದವನು, ಎನಿಸಿಕೊಂಡು ನಿರ್ಮಲನೂ, ಸರ್ವವ್ಯಾಪಿಯೂ, ಸಂಹಾರ ಮೂರ್ತಿಯೂ ಆಗಿ ಸದ್ಯೋಜಾತನೆಂದು ಪ್ರಸಿದ್ಧನಾದ ಪರಮೇಶ್ವರನಿಗೆ ನಮಸ್ಕಾರ.

**ಪಿಶಿತಾಶಾಯ ಸರ್ವಾಯ ಮೇಘಾಯ ವಿದ್ಯುತಾಯ ಚ ।**
**ವ್ಯಾವೃತ್ತಾಯ ವರಿಷ್ಠಾಯ ಭರಿತಾಯ ತರಕ್ಷವೇ ॥೧೪೭॥**
**ತ್ರಿಪುರಘ್ನಾಯ ತೀರ್ಥಾಯಾವಕ್ರಾಯ ರೋಮಶಾಯ ಚ ।**
**ತಿಗ್ಮಾಯುಧಾಯ ವ್ಯಾಖ್ಯಾಯ ಸುಸ್ಥಿತಾಯ ಪುಲಸ್ತಯೇ ॥೧೪೮॥**
**ರೋಚಮಾನಾಯ ಚಂಡಾಯ ಸ್ಫೀತಾಯ ಋಷಭಾಯ ಚ ।**
**ವ್ರತಿನೇ ಯುಂಜಮಾನಾಯ ಶುಚಯೇ ಚೋರ್ಧ್ವರೇತಸೇ ॥೧೪೯॥**
**ಅಸುರಘ್ನಾಯ ಸ್ವಾಘ್ನಾಯ ಮೃತ್ಯುಘ್ನೇ ಯಜ್ಞಿಯಾಯ ಚ ।**
**ಕೃಶಾನವೇ ಪ್ರಚೇತಾಯ ವಹ್ನಯೇ ನಿರ್ಮಲಾಯ ಚ ॥೧೫೦॥**

---

೧೪೭. ಅಂಧಕಾದಿ ರಾಕ್ಷಸರನ್ನು ಸಂಹರಿಸುವಾಗ ಅಸುರಾಂಶವನ್ನು ತೋರುತ್ತ, ಮೋಡ ಮಿಂಚು ಮೊದಲಾದ ಸರ್ವವಸ್ತು ಸ್ವರೂಪನಾಗಿ, ಸಕಲ ಲೋಕ ವಿಲಕ್ಷಣನಾಗಿ, ಎಲ್ಲಕ್ಕಿಂತಲೂ ಶ್ರೇಷ್ಠನೆನಿಸಿ, ನಿಖಿಲವಿಶ್ವಗಳನ್ನೂ ತನ್ನೊಳಗೆ ತುಂಬಿ ಕೊಂಡು, ಆಶ್ರಿತರನ್ನು ದುರ್ಮಾರ್ಗಕ್ಕೆ ಬೀಳದಂತೆ ತಡೆಯುವ ಮಹಾನುಭಾವನಿಗೆ ನಮಸ್ಕಾರ.

೧೪೮. ತ್ರಿಪುರಾಸುರರನ್ನು ಸಂಹರಿಸಿದವನು, ಭಕ್ತರ ಪಾಪವನ್ನು ಕಳೆಯುವವನು, ಋಜುಸ್ವಭಾವದವನು, ಮುನಿವೇಷಧರನು, ತ್ರಿಶೂಲವನ್ನು ಹಿಡಿದವನು, ಎಲ್ಲರಿಂದಲೂ ಹೊಗಳಿಸಿಕೊಳ್ಳುವವನು ಮತ್ತು ಶಾಶ್ವತನು ಎನಿಸಿದ ಪುಲಸ್ತಿನಾಮಕನಾದ ಮಹಾದೇವನಿಗೆ ನಮಸ್ಕಾರ.

೧೪೯. ಎಲ್ಲರಿಗೂ ಪ್ರಿಯನಾದವನು, ದೈತ್ಯರ ವಿಷಯದಲ್ಲಿ ಅತಿಕೋಪಿಷ್ಠನು, ಸಕಲ ಸದ್ಗುಣಗಳಿಂದ ತುಂಬಿದವನು, ಶ್ರೇಷ್ಠನು, ವ್ರತಶೀಲನು, ಭಕ್ತರಿಗೆ ಶುಭ ಫಲವನ್ನುಂಟುಮಾಡುವವನು, ನಿರ್ಮಲನು ಮತ್ತು ಜಿತೇಂದ್ರಿಯನು ಎನಿಸಿದ ಉಮಾಪತಿಗೆ ನಮಸ್ಕಾರ.

೧೫೦. ಅಸುರರನ್ನು ಸಂಹರಿಸುವವನು, ತನ್ನವರನ್ನು ಪೊರೆವವನು, ಮೃತ್ಯುವನ್ನು ಜಯಿಸಿದವನು, ಯಜ್ಞಭಾಗಕ್ಕೆ ಅರ್ಹನು, ಅನುಗ್ರಹಾರ್ಥವಾಗಿ ಭಕ್ತರನ್ನು ತಪಸ್ಸಿನ ಮೂಲಕ ಸವೆಯಿಸುವವನು, ಉತ್ಕೃಷ್ಟವಾದ ಮನಸ್ಸಿನವನು, ಅಗ್ನಿಯಂತೆ ದೋಷಗಳನ್ನು ದಹಿಸುವವನು, ನಿರ್ಮಲನು ಎಂದು ಪ್ರಖ್ಯಾತನಾಗಿರುವ ಪರಶಿವನಿಗೆ ನಮಸ್ಕಾರ.

**ರಕ್ಷೋಘ್ನಾಯ ಪಶುಘ್ನಾಯಾವಿಘ್ನಾಯ ಶ್ವಸಿತಾಯ ಚ ।**
**ವಿಭ್ರಾಂತಾಯ ಮಹಾಂತಾಯ ಅತ್ಯಂತಂ ದುರ್ಗಮಾಯ ಚ** ||೧೫೧||

**ಕೃಷ್ಣಾಯ ಚ ಜಯಂತಾಯ ಲೋಕಾನಾಮೀಶ್ವರಾಯ ಚ ।**
**ಅನಾಶ್ರಿತಾಯ ವೇಧ್ಯಾಯ ಸಮತ್ವಾಧಿಷ್ಠಿತಾಯ ಚ** ||೧೫೨||

**ಹಿರಣ್ಯಬಾಹವೇ ಚೈವ ವ್ಯಾಪ್ತಾಯ ಚ ಮಹಾಯ ಚ ।**
**ಸುಕರ್ಮಣೇ ಪ್ರಸಹ್ಯಾಯ ಚೇಶಾನಾಯ ಸುಚಕ್ಷುಷೇ** ||೧೫೩||

**ಕ್ಷಿಪ್ರೇಷವೇ ಸದಶ್ವಾಯ ಶಿವಾಯ ಮೋಕ್ಷದಾಯ ಚ ।**
**ಕಪಿಲಾಯ ಪಿಶಂಗಾಯ ಮಹಾದೇವಾಯ ಧೀಮತೇ** ||೧೫೪||

---

೧೫೧. ರಾಕ್ಷಸರನ್ನು ಸಂಹರಿಸುವವನು, ಉತ್ತಮಗತಿಯನ್ನು ಕೊಡುವುದಕ್ಕಾಗಿ ಜೀವರ ಪಶುಜನ್ಮವನ್ನು ಕಳೆಯುವವನು, ಅಡ್ಡಿಯಿಲ್ಲದವನು, ಸಕಲ ಜೀವರಾಶಿಗಳಿಗೂ ಪ್ರಾಣದಂತಿರುವವನು, ಭ್ರಾಂತಿರಹಿತನು, ವೃಥಸಿಷ್ಟಯನು, ಬಹುಪ್ರಯಾಸಗಮ್ಯನು ಎಂದೆನಿಸಿದ ಮಹಾ ಪುರುಷನಿಗೆ ನಮಸ್ಕಾರ.

೧೫೨. ಇಹಪರಸುಖಗಳನ್ನು ಕೊಡುವವನೂ, ಜಯಶಾಲಿಯೂ, ಲೋಕೇಶ್ವರನೂ, ಪಾಪಿಗಳಿಂದ ಆಶ್ರಯಿಸಲ್ಪಡದವನೂ, ಇಷ್ಟಾರ್ಥದಾನಕ್ಕಾಗಿ ಭಕ್ತರಿಂದ ಪೀಡಿತನಾದವನೂ, ಸರ್ವಸಮಾನನೂ ಆದ ಪರಮೇಶ್ವರನಿಗೆ ನಮಸ್ಕಾರ.

೧೫೩. ಅಂತರ್ಯಾಮಿಯೂ, ತೇಜೋಮಯನೂ, ಮಂಗಳಕಾರಿಯೂ, ಬಲಿಷ್ಠನೂ ಲೋಕೇಶ್ವರನೂ, ದಿವ್ಯಜ್ಞಾನಿಯೂ ಆದ ಹಿರಣ್ಯಬಾಹುವಿಗೆ ನಮಸ್ಕಾರ.

೧೫೪. ವೇಗವಾಗಿ ಚಲಿಸುವ ಬಾಣಗಳಿಂದಲೂ, ದಿವ್ಯಾಶ್ವಗಳಿಂದಲೂ ಕೂಡಿದವನಾಗಿ, ಮಂಗಳರೂಪನೂ ಮೋಕ್ಷಪ್ರದನೂ ಆಗಿ, ಜೆಡೆಯೂ ಅದರಿಂದ ದೇಹವೂ ಹೊಂಬಣ್ಣವಾಗಿ ಪ್ರಕಾಶಿಸುತ್ತಿರಲು, ಸರ್ವಜ್ಞನೆನಿಸಿದ ಮಹಾದೇವನಿಗೆ ನಮಸ್ಕಾರ.

**ಮಹಾಕಾಯಾಯ ದೀಪ್ತಾಯ ರೋದನಾಯ ಸಹಾಯ ಚ ।**
**ದೃಢಧನ್ವಿನೇ ಕವಚಿನೇ ರಥಿನೇ ಚ ವರೂಥಿನೇ ॥೧೫೫॥**

**ಭೃಗುನಾಥಾಯ ಶುಕ್ರಾಯ ಗಹ್ವರೇಷ್ಠಾಯ ವೇಧಸೇ ।**
**ಅಮೋಘಾಯ ಪ್ರಶಾಂತಾಯ ಸುಮೇಧಾಯ ವೃಷಾಯ ಚ ॥೧೫೬॥**

**ನಮೋಽಸ್ತು ತುಭ್ಯಂ ಭಗವನ್ ವಿಶ್ವಾಯ ಕೃತ್ತಿವಾಸಸೇ ।**
**ಪಶೂನಾಂ ಪತಯೇ ತುಭ್ಯಂ ಭೂತಾನಾಂ ಪತಯೇ ನಮಃ ॥೧೫೭॥**

**ಪ್ರಣವೇ ಋಗ್ಯಜುಸ್ಸಾಮ್ನೇ ಸ್ವಾಹಾಯ ಚ ಸ್ವಧಾಯ ಚ ।**
**ವಷಟ್ಕಾರಾತ್ಮನೇ ಚೈವ ತುಭ್ಯಂ ಮಂತ್ರಾತ್ಮನೇ ನಮಃ ॥೧೫೮॥**

---

೧೫೫. ದೊಡ್ಡ ದೇಹದಿಂದ ಬೆಳಗುತ್ತ, ಬಲವಾದ ಬಿಲ್ಲನ್ನು ಹಿಡಿದು, ಕವಚವನ್ನು ತೊಟ್ಟು, ಶತ್ರುಗಳ ಪ್ರಹಾರವು ತಗಲದಂತೆ ತೆರೆಹಾಕಿರುವ ದಿವ್ಯ ರಥವಲ್ಲಿ ಕುಳಿತು, ದೇವತೆಗಳಿಗೆ ಸಹಾಯನಾಗಿ ಅಸುರರನ್ನು ಗೋಳಿಡಿಸಿದ ರುದ್ರನಿಗೆ ನಮಸ್ಕಾರ.

೧೫೬. ಭೃಗುಮಹರ್ಷಿಗೆ ಸ್ವಾಮಿಯೂ, ತತ್ಪುತ್ರನಾದ ಶುಕ್ರಾಚಾರ್ಯನ ಮನಸ್ಸಿನಲ್ಲಿ ನೆಲೆಸಿದವನೂ, ಯೋಗಿಗಳ ಹೃದಯಾಂತರಾಳದಲ್ಲಿ ವಾಸಿಸುವವನೂ, ಜಗನ್ನಿರ್ಮಾಣಕನೂ, ಭಕ್ತರ ಕೋರಿಕೆಗಳನ್ನು ಸಫಲಗೊಳಿಸುವವನೂ, ಪ್ರಶಾಂತನೂ ಅತಿಶಯ ಪ್ರಜ್ಞಾಶಾಲಿಯೂ ಆದ ಧರ್ಮಪುರುಷನಿಗೆ ನಮಸ್ಕಾರ.

೧೫೭. ಓ ಭಗವಂತಾ, ವಿಶ್ವರೂಪಿಯೂ, ಗಜಚರ್ಮಧಾರಿಯೂ, ಆದ ನಿನಗೆ ನಮಸ್ಕಾರ. ಪಶುಗಳಿಗೆ ಪತಿಯೂ ಭೂತಗಳ ಪ್ರಭುವೂ ಎನಿಸಿದ ನಿನಗೆ ನಮಸ್ಕಾರ.

೧೫೮. ದೇವಾ, ಪ್ರಣವ ಪ್ರತಿಪಾದ್ಯನು ನೀನು. ಋಗ್ಯಜುಸ್ಸಾಮಗಳೆಂಬ ವೇದತ್ರಯಗಳಿಗೆ ಗೋಚರನಾದವನು ನೀನು. ಹವ್ಯಕವ್ಯ ಕರ್ಮಗಳಿಂದ ಆರಾಧ್ಯನಾದವನು ನೀನು. ವಷಟ್ಕಾರಸ್ವರೂಪನು ನೀನು. ಮಂತ್ರರೂಪಿಯು ನೀನು. ಇಂತಹ ನಿನಗೆ ನಮಸ್ಕಾರ.

ತ್ವಷ್ಟ್ರೇ ಧಾತ್ರೇ ತಥಾ ಕರ್ತ್ರೇ ಚಕ್ಷುಃಶ್ರೋತ್ರಮಯಾಯ ಚ ।
ಭೂತಭವ್ಯಭವೇಶಾಯ ತುಭ್ಯಂ ಕರ್ಮಾತ್ಮನೇ ನಮಃ ॥೧೫೯॥

ವಸವೇ ಚೈವ ಸಾಧ್ಯಾಯ ರುದ್ರಾದಿತ್ಯಸುರಾಯ ಚ ।
ವಿಷಾಯ ಮಾರುತಾಯೈವ ತುಭ್ಯಂ ದೇವಾತ್ಮನೇ ನಮಃ ॥೧೬೦॥

ಅಗ್ನೀಷೋಮವಿಧಿಜ್ಞಾಯ ಪಶುಮಂತ್ರೌಷಧಾಯ ಚ ।
ಸ್ವಯಂಭುವೇ ಹ್ಯಜಾಯೈವ ಅಪೂರ್ವಪ್ರಥಮಾಯ ಚ ।
ಪ್ರಜಾನಾಂ ಪತಯೇ ಚೈವ ತುಭ್ಯಂ ಬ್ರಹ್ಮಾತ್ಮನೇ ನಮಃ ॥೧೬೧॥

ಆತ್ಮೇಶಾಯಾತ್ಮವಶ್ಯಾಯ ಸರ್ವೇಶಾತಿಶಯಾಯ ಚ ।
ಸರ್ವಭೂತಾಂಗಭೂತಾಯ ತುಭ್ಯಂ ಭೂತಾತ್ಮನೇ ನಮಃ ॥೧೬೨॥

---

೧೫೯. ವಿಶ್ವಕರ್ಮ, ಬ್ರಹ್ಮ ಇವರಿಗೆ ಪ್ರೇರಕನಾಗಿ ನೀನು ತನ್ಮೂಲಕ ಕರ್ತನೆನಿಸಿಕೊಳ್ಳುವೆ. ಕಣ್ಣು, ಕಿವಿ ಮೊದಲಾದ ಇಂದ್ರಿಯಗಳಿಗೆ ಅಧಿದೇವತೆಯಾಗಿರುವೆ. ಕಳೆದುಹೋದುದು, ಮುಂದೆ ಬರತಕ್ಕುದು ಮತ್ತು ಈಗ ಇರುವುದು ಈ ಮೂರಕ್ಕೂ ಅಧಿಪತಿಯೆನಿಸಿರುವೆ. ಸರ್ವಕರ್ಮಸ್ವರೂಪನಾಗಿರುವೆ. ನಿನಗೆ ನಮಸ್ಕಾರ.

೧೬೦. ವಸುಗಳು, ಸಾಧ್ಯರು, ಏಕಾದಶರುದ್ರರು, ದ್ವಾದಶಾದಿತ್ಯರು ಸಕಲ ದೇವತೆಗಳು ಇವರೆಲ್ಲರ ಸ್ವರೂಪನೂ ನೀನೇ. ವಿಷವೂ ವಾಯುವೂ ನೀನೇ. ಹೀಗೆ ಸರ್ವದೇವಸ್ವರೂಪನಾದ ನಿನಗೆ ನಮಸ್ಕಾರ.

೧೬೧. ಅಗ್ನೀಷೋಮವೆಂಬ ಕರ್ಮವಿಧಿಯನ್ನು ಬಲ್ಲವನು, ಸರ್ವಪ್ರಾಣಿಗಳಿಗೂ ಹಿತಕರವಾದ ಮಂತ್ರೌಷಧಿಗಳಿಗೆ ಶಕ್ತಿದಾತನು, ಸ್ವೇಚ್ಛೆಯಿಂದ ಜನ್ಮವನ್ನೆತ್ತುವವನು, ಕರ್ಮವಶವಾದ ಜನ್ಮವಿಲ್ಲದವನು, ಆದಿಪುರುಷನು ಎನಿಸಿರುವ ನಿನಗೆ ನಮಸ್ಕಾರ.

೧೬೨. ನಿನಗೆ ನೀನೇ ಅಧಿಪತಿಯು; ನಿನ್ನಿಂದಲೇ ನಿನ್ನನ್ನು ವಶಪಡಿಸಿಕೊಳ್ಳಬೇಕು. ನೀನು ಸರ್ವೇಶ್ವರನು; ಅತಿಶಯಗುಣಾನ್ವಿತನು. ಸಕಲ ಭೂತಗಳೂ ನಿನಗೆ ಅಂಗಭೂತವಾದುವು. ಸರ್ವಭೂತಸ್ವರೂಪನಾದ ನಿನಗೆ ನಮಸ್ಕಾರ.

**ನಿರ್ಗುಣಾಯ ಗುಣಜ್ಞಾಯ ವ್ಯಾಕೃತಾಯಾವ್ಯೃತಾಯ ಚ ।**
**ನಿರುಪಾಖ್ಯಾಯ ಮಿತ್ರಾಯ 'ತುಭ್ಯಂ ಸಾಂಖ್ಯಾತ್ಮನೇ ನಮಃ ॥೧೬೩॥**

**ಪೃಥಿವ್ಯೈ ಚಾಂತರಿಕ್ಷಾಯ ದಿವ್ಯಾಯ ಚ ಮಹಾಯ ಚ ।**
**ಜನಸ್ತಪಾಯ ಸತ್ಯಾಯ ತುಭ್ಯಂ ಲೋಕಾತ್ಮನೇ ನಮಃ ॥೧೬೪॥**

**ಅವ್ಯಕ್ತಾಯ ಚ ಮಹತೇ ಭೂತಾದೇರಿಂದ್ರಿಯಾಯ ಚ ।**
**ಆತ್ಮಜ್ಞಾಯ ವಿಶೇಷಾಯ ತುಭ್ಯಂ ಸರ್ವಾತ್ಮನೇ ನಮಃ ॥೧೬೫॥**

**ನಿತ್ಯಾಯ ಚಾತ್ಮಲಿಂಗಾಯ ಸೂಕ್ಷ್ಮಾಯೈವೇತರಾಯ ಚ ।**
**ಬದ್ಧಾಯ ವಿಭವೇ ಚೈವ ತುಭ್ಯಂ ಮೋಕ್ಷಾತ್ಮನೇ ನಮಃ ॥೧೬೬॥**

---

೧೬೩. ದೇವಾ, ನೀನು ತ್ರಿಗುಣಾತೀತನು. ಸತ್ವಾದಿಗುಣಜ್ಞನು. ನಾಮ ರೂಪ ವಿಭಾಗಸಹಿತವಾದ ಈ ಜಗದ್ರೂಪನು. ಮೋಕ್ಷಪ್ರದನು. ಅನಿರ್ವಚನೀಯನು. ಎಲ್ಲರ ಹಿತಕಾಂಕ್ಷಿಯಾದವನು. ಸಾಂಖ್ಯದರ್ಶನ ಪ್ರತಿಪಾದ್ಯನು. ಇಂತಹ ನಿನಗೆ ನಮಸ್ಕಾರ.

೧೬೪. ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹೋಲೋಕ, ಜನೋಲೋಕ, ತಪೋಲೋಕ ಮತ್ತು ಸತ್ಯಲೋಕಗಳಲ್ಲಿ ಅವಿಚ್ಛಿನ್ನವಾಗಿ ವ್ಯಾಪಿಸಿ, ಅವುಗಳ ಅಧೀಶ್ವರನಾಗಿ ಸಕಲಲೋಕಾತ್ಮಕನೆನಿಸಿದ ನಿನಗೆ ನಮಸ್ಕಾರ.

೧೬೫. ಪ್ರಕೃತಿ, ಮಹತ್ತು, ಅಹಂಕಾರ ಮತ್ತು ಇಂದ್ರಿಯಗಳೆಲ್ಲವೂ ನೀನೇ. ಆತ್ಮಜ್ಞಾನಿಯೂ ನೀನೇ. ಕಾಲಕೃತವಾದ ಯೌವನಾದಿವಿಕಾರವೂ ನೀನೇ. ಹೀಗೆ ಸರ್ವಾತ್ಮಕನೆನಿಸಿದ ನಿನಗೆ ನಮಸ್ಕಾರ.

೧೬೬. ದೇವಾ, ನೀನು ನಿತ್ಯನು. ಆತ್ಮಲಕ್ಷಣ ಪರಿಪೂರ್ಣನು. ಪ್ರಳಯದಲ್ಲಿ ಅವ್ಯಕ್ತಪ್ರಕೃತಿಸಂಬದ್ಧನೂ, ಸೃಷ್ಟಿಯಲ್ಲಿ ವ್ಯಕ್ತಪ್ರಕೃತಿಸಂಬದ್ಧನೂ ಆಗಿರುವೆ. ಸಕಲ ಶರೀರಿಯಾದುದರಿಂದ ಬದ್ಧಾತ್ಮನೂ ಮುಕ್ತಾತ್ಮನೂ ಸಹ ನೀನೇ. ಮೋಕ್ಷಸ್ವರೂಪನೂ ಸಹ ನೀನೇ. ಇಂತಹ ಸರ್ವವ್ಯಾಪಕನಾದ ನಿನಗೆ ನಮಸ್ಕಾರ.

**ನಮಸ್ತೇ ತ್ರಿಷು ಲೋಕೇಷು ನಮಸ್ತೇ ಪರತಸ್ತ್ರಿಷು ।**
**ಸತ್ಯಾಂತೇಷು ಮಹಾದ್ಯೇಷು ಚತುರ್ಷು ಚ ನಮೋಽಸ್ತು ತೇ ॥೧೬೭॥**

**ನಮಃಸ್ತೋತ್ರೇ ಮಯಾ ಹ್ಯಸ್ಮಿನ್ ಯದಿ ನ ವ್ಯಾಹೃತಂ ಭವೇತ್ ।**
**ಮದ್ಭಕ್ತ ಇತಿ ಬ್ರಹ್ಮಣ್ಯ ತತ್ಸರ್ವಂ ಕ್ಷಂತುಮರ್ಹಸಿ ॥೧೬೮॥**

**॥ ಸೂತ ಉವಾಚ ॥**

**ಏವಮಾಭಾಷ್ಯ ದೇವೇಶಮೀಶ್ವರಂ ನೀಲಲೋಹಿತಂ ।**
**ಪ್ರಹ್ವೋಽಭಿಪ್ರಣತಸ್ತಸ್ಮೈ ಪ್ರಾಂಜಲಿರ್ವಾಗ್ಯತೋಽಭವತ್ ॥೧೬೯॥**

**ಕಾವ್ಯಸ್ಯ ಗಾತ್ರಂ ಸಂಸ್ಪೃಶ್ಯ ಹಸ್ತೇನ ಪ್ರೀತಿಮಾನ್ ಭವಃ ।**
**ನಿಕಾಮಂ ದರ್ಶನಂ ದತ್ವಾ ತತ್ರೈವಾಂತರಧೀಯತ ॥೧೭೦॥**

---

೧೬೭. ಸ್ವರ್ಗಮರ್ತ್ಯಪಾತಾಳಗಳೆಂಬ ಮೂರು ಲೋಕಗಳಲ್ಲಿ ನಿನಗೆ ನಮಸ್ಕಾರ. ಭೂಲೋಕ ಭುವರ್ಲೋಕ ಸುವರ್ಲೋಕಗಳೆಂಬ ಮುಂದಣ ಮೂರು ಲೋಕಗಳಲ್ಲೂ ನಿನಗೆ ನಮಸ್ಕಾರ. ಮಹೋಲೋಕದಿಂದ ಹಿಡಿದು ಸತ್ಯ ಲೋಕದ ವರೆಗಿರುವ ಮಹೋಲೋಕ, ಜನೋಲೋಕ, ತಪೋಲೋಕ, ಸತ್ಯಲೋಕಗಳೆಂಬ ನಾಲ್ಕರಲ್ಲೂ ನಿನಗೆ ನಮಸ್ಕಾರ.

೧೬೮. ಪ್ರಭೂ, ಈಗ ನಾನು ಮಾಡಿದ ನಮಸ್ಕಾರ ಪೂರ್ವಕವಾದ ಈ ಸ್ತೋತ್ರದಲ್ಲಿ ಎಷ್ಟೋ ಸ್ತುತಿ ವಿಷಯವು ಬಿಟ್ಟು ಹೋಗಿರಬಹುದು. ಬ್ರಾಹ್ಮಣ ಪ್ರಿಯನಾದ ನೀನು ಅದೆಲ್ಲವನ್ನೂ ಕ್ಷಮಿಸಬೇಕು.

೧೬೯. ಸೂತಪೌರಾಣಿಕನು ಹೇಳಿದನು.—ಕುತ್ತಿಗೆಯಲ್ಲಿ ಕಪ್ಪು, ಜಡೆಯಲ್ಲಿ ಕೆಂಪೂ ಆಗಿ ಪ್ರಕಾಶಿಸುವ ದೇವಾಧಿಪನಾದ ಪರಮೇಶ್ವರನನ್ನು ಹಿಂದೆ ಹೇಳಿದಂತೆ ಸ್ತೋತ್ರಮಾಡಿ, ಶುಕ್ರಾಚಾರ್ಯನು ವಿನಯದಿಂದ ನಮಸ್ಕರಿಸಿ, ಕೈಮುಗಿದುಕೊಂಡು ಮೌನದಿಂದ ನಿಂತನು.

೧೭೦. ಸಂತುಷ್ಟನಾದ ಮಹೇಶ್ವರನು ಭಾರ್ಗವನ ದೇಹವನ್ನು ತನ್ನ ಕೈಯಿಂದ ಸವರಿ, ಅವನ ಇಷ್ಟವು ಪೂರ್ಣವಾಗುವಂತೆ ದರ್ಶನವನ್ನಿತ್ತು ಅಲ್ಲೇ ಅದೃಶ್ಯನಾದನು.

**ತತಃ ಸೋಽಂತರ್ಹಿತೇ ತಸ್ಮಿನ್ ದೇವೇಶೇಽನುಚರೀಂ ತದಾ ।**
**ತಿಷ್ಠಂತೀಂ ಪಾರ್ಶ್ವತೋ ದೃಷ್ಟ್ವಾ ಜಯಂತೀಮಿದಮಬ್ರವೀತ್ ॥೧೭೧॥**

**ಕಸ್ಯ ತ್ವಂ ಸುಭಗೇ ಕಾ ವಾ ದುಃಖಿತೇ ಮಯಿ ದುಃಖಿತಾ ।**
**ಮಹತಾ ತಪಸಾ ಯುಕ್ತಾ ಕಿಮರ್ಥಂ ಮಾಂ ನಿಷೇವಸೇ ॥೧೭೨॥**

**ಅನಯಾ ಸಂಸ್ತುತೋ ಭಕ್ತ್ಯಾ ಪ್ರಶ್ರಯೇಣ ದಮೇನ ಚ ।**
**ಸ್ನೇಹೇನ ಚೈವ ಸುಶ್ರೋಣಿ ಪ್ರೀತೋಽಸ್ಮಿ ವರವರ್ಣಿನಿ ॥೧೭೩॥**

**ಕಿಮಿಚ್ಛಸಿ ವರಾರೋಹೇ ಕಸ್ತೇ ಕಾಮಸ್ಸಮೃಧ್ಯತಾಂ ।**
**ತತ್ತೇ ಸಂಪಾದಯಾಮ್ಯದ್ಯ ಯದ್ಯಪಿ ಸ್ಯಾತ್ಸುದುಷ್ಕರಃ ॥೧೭೪॥**

**ಏವಮುಕ್ತಾಽಬ್ರವೀದೇನಂ ತಪಸಾ ಜ್ಞಾತುಮರ್ಹಸಿ ।**
**ಚಿಕೀರ್ಷಿತಂ ಹಿ ಮೇ ಬ್ರಹ್ಮಂಸ್ತ್ವಂ ಹಿ ವೇತ್ಥ ಯಥಾತಥಂ । ॥೧೭೫॥**

---

೧೭೧. ಮಹೇಶ್ವರನು ಅದೃಶ್ಯನಾದ ಬಳಿಕ ಶುಕ್ರಾಚಾರ್ಯನು ತನ್ನ ಸೇವಾ ಸಕ್ತಳಾಗಿ ಮಗ್ಗುಲಲ್ಲಿ ನಿಂತಿರುವ ಜಯಂತಿಯನ್ನು ನೋಡಿ ಇಂತೆಂದನು.

೧೭೨. "ಎಲೌ ಸುಂದರೀ, ನೀನು ಯಾರು? ಯಾರ ಮಗಳು? ನಾನು ಕಷ್ಟಪಡುತ್ತಿದ್ದರೆ ನೀನೂ ಕಷ್ಟಪಡುತ್ತಿದ್ದೆ. ಇಷ್ಟೊಂದು ಕಾಯಕ್ಲೇಶದ ವ್ರತ ವಹಿಸಿಕೊಂಡು ನನ್ನನ್ನೇಕೆ ಸೇವೆಮಾಡುತ್ತಿರುವೆ?

೧೭೩. ಶೋಭನಾಂಗೀ, ನಿನ್ನ ಈ ಭಕ್ತಿ, ವಿನಯ, ಇಂದ್ರಿಯನಿಗ್ರಹ, ಸ್ನೇಹ ಇವುಗಳಿಂದ ನನ್ನನ್ನು ಗೌರವಿಸಿದ್ದೀಯೆ. ಓ ಸುಂದರೀ, ನಾನು ಪ್ರೀತನಾಗಿದ್ದೇನೆ.

೧೭೪. ನಾರೀಮಣಿಯೇ, ನೀನೇನು ಬಯಸುವೆ? ನಿನ್ನ ಯಾವ ಕೋರಿಕೆಯನ್ನು ಪೂರೈಸಬೇಕು? ಎಷ್ಟೇ ಕಷ್ಟಸಾಧ್ಯವಾಗಿರಲಿ ಅದನ್ನೀಗ ನಡೆಸಿ ಕೊಡುವೆನು."

೧೭೫. ಶುಕ್ರಾಚಾರ್ಯನು ಹೀಗೆ ಹೇಳಲು ಅವಳು ಉತ್ತರವಿತ್ತಳು. "ಬ್ರಾಹ್ಮಣೋತ್ತಮಾ, ನಿನ್ನ ತಪೋಬಲದಿಂದ ಅದನ್ನು ತಿಳಿದುಕೋ. ನನಗಿಷ್ಟವಾದ ಕಾರ್ಯವಾವುದೆಂಬುದು ನಿನಗೇ ಚೆನ್ನಾಗಿ ಗೊತ್ತು."

ಏವಮುಕ್ತೋಽಬ್ರವೀದೇನಾಂ ದೃಷ್ಟ್ವಾ ದಿವ್ಯೇನ ಚಕ್ಷುಷಾ ।
ಮಯಾ ಸಹ ತ್ವಂ ಸುಶ್ರೋಣಿ ದಶ ವರ್ಷಾಣಿ ಭಾಮಿನಿ ॥೧೭೬॥

ಸರ್ವಭೂತೈರದೃಶ್ಯಾ ಚ ಸಂಪ್ರಯೋಗಮಿಹೇಚ್ಛಸಿ ।
ದೇವಿ ಚೇಂದೀವರಶ್ಯಾಮೇ ವರಾರ್ಹೇ ವಾಮಲೋಚನೇ ।
ಏವಂ ವೃಣೋಷಿ ಕಾಮಂ ತ್ವಂ ಮತ್ತೋ ವೈ ವಲ್ಗುಭಾಷಿಣಿ ॥೧೭೭॥

ಏವಂ ಭವತು ಗಚ್ಛಾವೋ ಗೃಹಾನ್ನೋ ಮತ್ತಕಾಶಿನಿ ।
ತತಃ ಸ್ವಗೃಹಮಾಗತ್ಯ ಜಯಂತ್ಯಾಃ ಪಾಣಿಮುದ್ವಹನ್ ॥೧೭೮॥

ತಯಾ ಸಹಾವಸದ್ದೇವ್ಯಾ ದಶ ವರ್ಷಾಣಿ ಭಾರ್ಗವಃ ।
ಅದೃಶ್ಯಃ ಸರ್ವಭೂತಾನಾಂ ಮಾಯಯಾ ಸಂವೃತಃ ಪ್ರಭುಃ ॥೧೭೯॥

ಕೃತಾರ್ಥಮಾಗತಂ ದೃಷ್ಟ್ವಾ ಕಾವ್ಯಂ ಸರ್ವೇ ದಿತೇಃಸುತಾಃ ।
ಅಭಿಜಗ್ಮುರ್ಗೃಹಂ ತಸ್ಯ ಮುದಿತಾಸ್ತೇ ದಿದೃಕ್ಷವಃ ॥೧೮೦॥

---

೧೭೬-೧೭೭. ಶುಕ್ರಮುನಿಯು ದಿವ್ಯಜ್ಞಾನದಿಂದ ನೋಡಿ ಜಯಂತಿಗಿಂತೆಂದನು. "ಸುಂದರೀ, ಯಾವ ಪ್ರಾಣಿಗೂ ಕಾಣದಂತೆ ಅದೃಶ್ಯಳಾಗಿ ಹತ್ತು ವರ್ಷಗಳ ಕಾಲ ನನ್ನೊಡನೆ ನೀನು ಸಮಾಗಮವನ್ನು ಬಯಸುತ್ತೀಯೆ. ನೈದಿಲೆಯಂತೆ ಶ್ಯಾಮವರ್ಣದವಳೇ, ಚಂಚಲಾಕ್ಷೀ, ಓ ದೇವಿ, ವರವನ್ನು ಪಡೆಯಲು ನೀನು ಅರ್ಹಳಾಗಿರುವೆ. ಎಲೌ ಮಧುರವಾಣೀ, ನನ್ನಿಂದ ನೀನು ಬಯಸುವ ಕೋರಿಕೆಯು ಇದೇ ಅಲ್ಲವೇ !

೧೭೮-೧೭೯. ಎಲೌ ಯುವತಿ, ಹೀಗೆಯೇ ಆಗಲಿ; ನಮ್ಮ ಮನೆಗೆ ಹೋಗೋಣ ನಡೆ" ಎಂದು ಹೇಳಿ ತನ್ನ ಮನೆಗೆ ಬಂದು, ಜಯಂತಿಯನ್ನು ವರಿಸಿ ಭೃಗುಮುನಿಯ ಪುತ್ರನಾದ ಶುಕ್ರಾಚಾರ್ಯನು ಅವಳೊಡನೆ ಹತ್ತು ವರ್ಷಗಳ ಕಾಲ ವಾಸಮಾಡಿದನು. ಸರ್ವಸಮರ್ಥನಾದ ಆತನು ಯಾವ ಪ್ರಾಣಿಯೂ ಕಾಣದಂತೆ ತಮ್ಮಿಬ್ಬರನ್ನೂ ಮಾಯೆಯಿಂದ ಮರೆಮಾಡಿಕೊಂಡನು.

೧೮೦. ಕಾರ್ಯವನ್ನು ನೆರವೇರಿಸಿಕೊಂಡು ಬಂದನೆಂದು ತಿಳಿದು, ದೈತ್ಯರೆಲ್ಲರೂ ಸಂತೋಷದಿಂದ ಶುಕ್ರಾಚಾರ್ಯನನ್ನು ಕಾಣಬೇಕೆಂದು ಅವನ ಮನೆಗೆ ಹೋದರು.

**ಯದಾ ಗತಾ ನ ಪಶ್ಯಂತಿ ಮಾಯಯಾ ಸಂವೃತಂ ಗುರುಂ ।**
**ಲಕ್ಷಣಂ ತಸ್ಯ ತದ್ಬುದ್ಧ್ವಾ ಪ್ರತಿಜಗ್ಮುರ್ಯಥಾತಥಂ ॥೧೮೧॥**

**ಬೃಹಸ್ಪತಿಸ್ತು ಸಂರುದ್ಧಂ ಕಾವ್ಯಂ ಜ್ಞಾತ್ವಾ ವರೇಣ ತು ।**
**ತುಷ್ಟ್ಯರ್ಥಂ ದಶ ವರ್ಷಾಣಿ ಜಯಂತ್ಯಾ ಹಿತಕಾಮ್ಯಯಾ ॥೧೮೨॥**

**ಬುದ್ಧ್ವಾ ತದಂತರಂ ಸೋಽಪಿ ದೈತ್ಯಾನಾಮಿಂದ್ರನೋದಿತಃ ।**
**ಕಾವ್ಯಸ್ಯ ರೂಪಮಾಸ್ಥಾಯ ಅಸುರಾನ್ ಸಮುಪಾಹ್ವಯತ್ ॥೧೮೩॥**

**ತತಸ್ತಾನಾಗತಾನ್ ದೃಷ್ಟ್ವಾ ಬೃಹಸ್ಪತಿರುವಾಚ ಹ ।**
**ಸ್ವಾಗತಂ ಮಮ ಯಾಜ್ಯಾನಾಂ ಪ್ರಾಪ್ತೋಽಹಂ ವೋ ಹಿತಾಯ ಚ ॥**

**ಅಹಂ ವೋಽಧ್ಯಾಪಯಿಷ್ಯಾಮಿ ವಿದ್ಯಾಃ ಪ್ರಾಪ್ತಾಸ್ತು ಯಾ ಮಯಾ ।**
**ತತಸ್ತೇ ಹೃಷ್ಟಮನಸೋ ವಿದ್ಯಾರ್ಥಮುಪಪೇದಿರೇ ॥೧೮೫॥**

---

೧೮೧. ಅವರು ಹೋದಾಗ ಗುರುವು ಮಾಯೆಯಿಂದ ಆವೃತನಾಗಿದ್ದುದರಿಂದ ಅವರಿಗೆ ಕಾಣಿಸಲಿಲ್ಲ. ಆ ಲಕ್ಷಣವನ್ನರಿತು ಅವರು ತಮ್ಮಿಷ್ಟ ಬಂದಂತೆ ತೆರಳಿದರು.

೧೮೨-೧೮೩. ಜಯಂತಿಯ ಕೋರಿಕೆಯನ್ನು ಸಲ್ಲಿಸಬೇಕೆಂದು, ಅವಳ ಸಂತೋಷಕ್ಕಾಗಿ ವರವನ್ನು ಕೊಟ್ಟು, ಆ ಮೂಲಕ ಶುಕ್ರಾಚಾರ್ಯನು ಹತ್ತು ವರ್ಷಗಳ ಕಾಲ ಮಾಯೆಯಿಂದ ಅದೃಶ್ಯನಾದ ವಿಚಾರವನ್ನು ಬೃಹಸ್ಪತಿಯು ಅರಿತನು. ದೈತ್ಯರ ಆ ಸಮಯವನ್ನು ತಿಳಿದು, ಇಂದ್ರನ ಪ್ರೇರಣೆಯಿಂದ ಆ ಸುರಗುರುವು ಶುಕ್ರಾಚಾರ್ಯನ ರೂಪವನ್ನು ತಾಳಿ ದೈತ್ಯರನ್ನು ತನ್ನ ಬಳಿಗೆ ಕರೆದನು.

೧೮೪. ಅವರೆಲ್ಲರೂ ಬಂದರು. ಬೃಹಸ್ಪತಿ ಅವರಿಗೆ ಹೇಳಿದನು. "ನಾನು ಯಾರಿಗೋಸ್ಕರ ಇದುವರೆಗೆ ಯಜ್ಞಯಾಗಾದಿ ಕರ್ಮಗಳನ್ನು ಮಾಡಿದೆನೋ, ಆ ನಿಮಗೆ ಸುಖಾಗಮನವಾಗಲಿ. ನಿಮ್ಮ ಹಿತಕ್ಕಾಗಿ ನಾನು ಬಂದಿರುವೆನು.

೧೮೫. ನಾನು ಕಲಿತುಕೊಂಡು ಬಂದ ವಿದ್ಯೆಗಳನ್ನು ನಿಮಗೆ ಹೇಳಿಕೊಡುವೆನು" ಎನಲು, ಅವರು ಹೃಷ್ಟಚಿತ್ತರಾಗಿ ಅದಕ್ಕೋಸ್ಕರ ಅವನ ಬಳಿಗೆ ಹೋದರು.

**ಪೂರ್ಣೇ ಕಾವ್ಯಸ್ತದಾ ತಸ್ಮಿನ್ ಸಮಯೇ ದಶವಾರ್ಷಿಕೇ ।**
**ಸಮಯಾಂತೇ ದೇವಯಾನೀ ತದೋತ್ಪನ್ನಾ ಇತಿ ಶ್ರುತಿಃ ।**
**ಬುದ್ಧಿಂ ಚಕ್ರೇ ತತಃ ಸೋಽಥ ಯಾಜ್ಯಾನಾಂ ಪ್ರತ್ಯವೇಕ್ಷಣೇ ॥೧೮೬॥**

**ದೇವಿ ಗಚ್ಛಾಮ್ಯಹಂ ದ್ರಷ್ಟುಂ ಮಮ ಯಾಜ್ಯಾಞ್ಛುಚಿಸ್ಮಿತೇ ।**
**ವಿಭ್ರಾಂತವೀಕ್ಷಿತೇ ಸಾಧ್ವಿ ವಿವರ್ಣಾಯತಲೋಚನೇ ॥೧೮೭॥**

**ಏವಮುಕ್ತ್ವಾಽಬ್ರವೀದೇನಂ ಭಜ ಭಕ್ತಾನ್ಮಹಾವ್ರತ ।**
**ಏಷ ಧರ್ಮಸ್ಸತಾಂ ಬ್ರಹ್ಮನ್ನ ಧರ್ಮಂ ಲೋಪಯಾಮಿ ತೇ ॥೧೮೮॥**

**ತತೋ ಗತ್ವಾಽಸುರಾನ್ ದೃಷ್ಟ್ವಾ ದೇವಾಚಾರ್ಯೇಣ ಧೀಮತಾ ।**
**ವಂಚಿತಾನ್ ಕಾವ್ಯರೂಪೇಣ ತತಃ ಕಾವ್ಯೋಽಬ್ರವೀತ್ತು ತಾನ್ ॥೧೮೯॥**

**ಕಾವ್ಯಂ ಮಾಂ ವೋ ವಿಜಾನೀಧ್ವಂ ತೋಷಿತೋ ಗಿರಿಶೋ ವಿಭುಃ ।**
**ವಂಚಿತಾ ಬತ ಯೂಯಂ ವೈ ಸರ್ವೇ ಶೃಣುತ ದಾನವಾಃ ॥೧೯೦॥**

---

೧೮೬. ಆ ಹತ್ತು ವರ್ಷಗಳ ಒಪ್ಪಂದದ ಅವಧಿ ಮುಗಿಯಿತು. ಆ ಕೊನೆಯಲ್ಲಿ ದೇವಯಾನಿಯು ಜನಿಸಿದಳೆಂದು ಹೇಳುತ್ತಾರೆ. ಶುಕ್ರಾಚಾರ್ಯನು ಬಳಿಕ ಯಾಗೋದ್ದೇಶ್ಯರಾದ ದೈತ್ಯರನ್ನು ನೋಡಬೇಕೆಂದು ಮನಸ್ಸುಮಾಡಿದನು.

೧೮೭. ವಿಶಾಲವಾದ ಆಕೆಯ ನೇತ್ರಗಳು ಕಾಂತಿಹೀನವಾದುವು. ಗಾಬರಿಯಿಂದ ಅವಳು ನೋಡಿದಳು. "ಎಲೌ ಸಾಧ್ವೀ, ದೇವೀ, ಮಂದಹಾಸಿನೀ, ನಾನು ಯಾರ ಪೌರೋಹಿತ್ಯವನ್ನು ವಹಿಸಿರುವೆನೋ ಆ ನನ್ನ ಪಕ್ಷೀಯರಾದ ದೈತ್ಯರನ್ನು ನೋಡಲು ಹೋಗುತ್ತೇನೆ" ಎಂದು ಆಚಾರ್ಯನು ನುಡಿದನು.

೧೮೮. ಶುಕ್ರಾಚಾರ್ಯನು ಹೀಗೆ ಹೇಳಲು ಅವಳಿಂತೆಂದಳು. ಶ್ರೇಷ್ಠವಾದ ವ್ರತವನ್ನೆಸಗಿದ ಎಲೈ ಬ್ರಾಹ್ಮಣೋತ್ತಮನೇ, ನಿನ್ನ ಭಕ್ತರಲ್ಲಿಗೆ ಹೋಗು. ಇದು ಸತ್ಪುರುಷರ ಧರ್ಮ. ನಿನ್ನ ಧರ್ಮಕ್ಕೆ ನಾನು ಲೋಪವನ್ನು ತರುವುದಿಲ್ಲ.

೧೮೯. ಯುಕ್ತಿವಂತನಾದ ಬೃಹಸ್ಪತಿಯು ತನ್ನ (ಶುಕ್ರಾಚಾರ್ಯನ) ರೂಪದಿಂದ ಅಸುರರನ್ನು ಮೋಸಗೊಳಿಸಿರುವುದನ್ನು ನೋಡಿ ಶುಕ್ರಾಚಾರ್ಯನಿಂತೆಂದನು.

೧೯೦. "ಓ ದಾನವರೇ, ನಿಮ್ಮ ಗುರುವಾದ ಶುಕ್ರಾಚಾರ್ಯನು ನಾನು. ನನ್ನ ವ್ರತದಿಂದ ಪ್ರಭುವಾದ ಮಹೇಶ್ವರನು ತುಷ್ಟನಾದನು. ಅಯ್ಯೋ! ನೀವೆಲ್ಲರೂ ಮೋಸಹೋದಿರಲ್ಲಾ!"

**ಶ್ರುತ್ವಾ ತಥಾ ಬ್ರುವಾಣಂ ತಂ ಸಂಭ್ರಾಂತಾಸ್ತೇ ತದಾಭವನ್ ।**
**ಪ್ರೇಕ್ಷಂತಸ್ತಾವುಭೌ ತತ್ರ ಸ್ಥಿತಾಸೀನೌ ಸುವಿಸ್ಮಿತಾಃ ॥೧೯೧॥**

**ಸಂಪ್ರಮೂಢಾಸ್ತತಃ ಸರ್ವೇ ನ ಪ್ರಾಬುಧ್ಯಂತ ಕಿಂಚನ ।**
**ಅಬ್ರವೀತ್ಸಂಪ್ರಮೂಢೇಷು ಕಾವ್ಯಸ್ತಾನಸುರಾಂಸ್ತದಾ ॥೧೯೨॥**

**ಆಚಾರ್ಯೋ ವೋ ಹ್ಯಹಂ ಕಾವ್ಯೋ ದೇವಾಚಾರ್ಯೋಽಯಮಂಗಿರಾಃ ।**
**ಅನುಗಚ್ಛತ ಮಾಂ ದೈತ್ಯಾಸ್ತ್ಯಜತೈನಂ ಬೃಹಸ್ಪತಿಂ ॥೧೯೩॥**

**ಇತ್ಯುಕ್ತಾ ಹ್ಯಸುರಾಸ್ತೇನ ತಾವುಭೌ ಸಮವೇಕ್ಷ್ಯ ಚ ।**
**ಯದಾಽಸುರಾ ವಿಶೇಷಂ ತು ನ ಜಾನಂತ್ಯುಭಯೋಸ್ತಯೋಃ ॥೧೯೪॥**

**ಬೃಹಸ್ಪತಿರುವಾಚೈನಾನಸಂಭ್ರಾಂತಸ್ತಪೋಧನಃ ।**
**ಕಾವ್ಯೋ ವೋಽಹಂ ಗುರುರ್ದೈತ್ಯಾ ಮದ್ರೂಪೋಽಯಂ ಬೃಹಸ್ಪತಿಃ ॥**

---

೧೯೧. ಅವನು ಹೇಳಿದುದನ್ನು ಕೇಳಿ ಆಗ ಅವರು ಗಾಬರಿಗೊಂಡರು. ಮುಂದೆ ಕುಳಿತಿದ್ದ ಅವರಿಬ್ಬರನ್ನೂ ನೋಡುತ್ತ ಆಶ್ಚರ್ಯಪಟ್ಟರು.

೧೯೨. ಅವರೆಲ್ಲರೂ ಮೂಢರಾದರು. ಅವರಿಗೆ ಏನೂ ಗೊತ್ತಾಗಲಿಲ್ಲ. ಆಗ ಶುಕ್ರಾಚಾರ್ಯನು ದಿಕ್ಕು ತೋಚದೆ ನಿಂತಿದ್ದ ಅವರಿಗೆ ಹೇಳಿದನು.

೧೯೩. "ಎಲೈ ದೈತ್ಯರೇ, ನಾನು ನಿಮ್ಮ ಆಚಾರ್ಯನಾದ ಶುಕ್ರಾಚಾರ್ಯನು; ಇವನು ದೇವಾಚಾರ್ಯನಾದ ಬೃಹಸ್ಪತಿ. ನನ್ನೊಡನೆ ಬನ್ನಿ; ಈ ಬೃಹಸ್ಪತಿಯನ್ನು ತೊರೆಯಿರಿ."

೧೯೪. ಭಾರ್ಗವನು ಇಂತೆನಲು ಅಸುರರು ಅವರಿಬ್ಬರನ್ನೂ ಚೆನ್ನಾಗಿ ನೋಡಿದರು. ಒಬ್ಬನಿಗಿಂತ ಮತ್ತೊಬ್ಬನಲ್ಲಿ ಯಾವ ವಿಶೇಷಲಕ್ಷಣವೂ ತೋರಿ ಬರಲೇ ಇಲ್ಲ.

೧೯೫. ತಪೋಧನನಾದ ಬೃಹಸ್ಪತಿಯು ಸ್ವಲ್ಪವೂ ಗಾಬರಿಗೊಳ್ಳದೆ ಅವರಿಗೆಂದನು " ಓ ದೈತ್ಯರೇ, ನಿಮ್ಮ ಗುರುವಾದ ಶುಕ್ರಾಚಾರ್ಯನು ನಾನು; ಇವನು ನನ್ನ ರೂಪವನ್ನು ಧರಿಸಿದ ಬೃಹಸ್ಪತಿ.

ಸಂಮೋಹಯತಿ ರೂಪೇಣ ಮಾಮಕೇನೈಷ ಮೋಽಸುರಾಃ ।
ಶ್ರುತ್ವಾ ತಸ್ಯ ತತಸ್ತೇ ವೈ ಸಮೇತ್ಯ ತು ತತೋಽಬ್ರುವನ್ ॥೧೯೬॥

ಅಯಂ ನೋ ದಶ ವರ್ಷಾಣಿ ಸತತಂ ಶಾಸ್ತಿ ವೈ ಪ್ರಭುಃ ।
ಏಷ ವೈ ಗುರುರಸ್ಮಾಕಮಂತರೇಪ್ಸುರಯಂ ದ್ವಿಜಃ ॥೧೯೭॥

ತತಸ್ತೇ ದಾನವಾಸ್ಸರ್ವೇ ಪ್ರಣಿಪತ್ಯಾಭಿನಂದ್ಯ ಚ ।
ವಚನಂ ಜಗೃಹುಸ್ತಸ್ಯ ಚಿರಾಭ್ಯಾಸೇನ ಮೋಹಿತಾಃ ॥೧೯೮॥

ಊಚುಸ್ತಮಸುರಾಸ್ಸರ್ವೇ ಕ್ರೋಧಸಂರಕ್ತಲೋಚನಾಃ ।
ಅಯಂ ಗುರುರ್ಹಿತೋಽಸ್ಮಾಕಂ ಗಚ್ಛ ತ್ವಂ ನಾಸಿ ನೋ ಗುರುಃ ॥೧೯೯॥

ಭಾರ್ಗವೋ ವಾಽಂಗಿರಾ ವಾಽಪಿ ಭಗವಾನೇಷ ನೋ ಗುರುಃ ।
ಸ್ಥಿತಾ ವಯಂ ನಿದೇಶೇಽಸ್ಯ ಸಾಧು ತ್ವಂ ಗಚ್ಛ ಮಾ ಚಿರಂ ॥೨೦೦॥

---

೧೯೬. ಎಲೈ ಅಸುರರೇ, ಇವನು ನನ್ನ ವೇಷದಿಂದ ನಿಮ್ಮನ್ನು ಮೋಸಗೊಳಿಸುತ್ತಿರುವನು.” ಅವನ ಮಾತನ್ನು ಕೇಳಿ ಅವರೆಲ್ಲರೂ ಒಟ್ಟಾಗಿ ಹೀಗೆಂದರು.

೧೯೭. “ಈ ಪ್ರಭುವು ಹತ್ತು ವರ್ಷಗಳಿಂದ ಎಡೆಬಿಡದೆ ಧರ್ಮೋಪದೇಶದ ಮೂಲಕ ನಮ್ಮನ್ನು ರಕ್ಷಿಸುತ್ತಿರುವನು. ಇವನೇ ನಮ್ಮ ಗುರು. ಈ ಬ್ರಾಹ್ಮಣನಾದರೋ ಸಮಯವನ್ನು ಸಾಧಿಸಿ ನಮ್ಮಲ್ಲಿ ಒಡಕು ಹುಟ್ಟಿಸಬೇಕೆಂದು ಬಂದವನು.”

೧೯೮. ಬಹುಕಾಲದ ಅಭ್ಯಾಸದಿಂದ ಮೋಹಗೊಂಡಿದ್ದ ಆ ದಾನವರೆಲ್ಲರೂ ಬಳಿಕ ಬೃಹಸ್ಪತಿಗೆ ನಮಸ್ಕರಿಸಿ, ಅವನನ್ನು ಶ್ಲಾಘಿಸಿ, ಅವನ ಆಜ್ಞಾಪಾಲಕರಾಗಿ ನಿಂತರು.

೧೯೯–೨೦೦. ಶುಕ್ರಾಚಾರ್ಯನನ್ನು ನೋಡಿ, ಕೋಪದಿಂದ ಕಣ್ಣು ಕೆಂಪೇರಿರಲು ಅವರಿಂತೆಂದರು “ಇಗೋ! ಇವನೇ ನಮ್ಮ ಗುರು; ಆಪ್ತ ; ನೀನು ಹೋಗು; ನಮ್ಮ ಗುರುವಲ್ಲ. ಶುಕ್ರಾಚಾರ್ಯನಾಗಿರಲಿ, ಬೃಹಸ್ಪತಿಯಾಗಿರಲಿ ಈ ಪೂಜ್ಯನೇ ನಮ್ಮ ಆಚಾರ್ಯನು. ಇವನ ಆಜ್ಞೆಯಂತೆ ನಾವು ನಡೆಯುತ್ತೇವೆ. ಸರಿ! ನೀನಿನ್ನು ಹೋಗು ; ತಡಮಾಡಬೇಡ.”

**ಏವಮುಕ್ತ್ವಾಽಸುರಾಸ್ಸರ್ವೇ ಪ್ರಾಪದ್ಯಂತ ಬೃಹಸ್ಪತಿಂ ।**
**ಯದಾ ನ ಪ್ರತ್ಯಪದ್ಯಂತ ಕಾವ್ಯೇನೋಕ್ತಂ ಮಹದ್ಧಿತಂ ॥೨೦೧॥**

**ಚುಕೋಪ ಭಾರ್ಗವಸ್ತೇಷಾಮವಲೇಪೇನ ತೇನ ತು ।**
**ಬೋಧಿತಾ ಹಿ ಮಯಾ ಯಸ್ಮಾನ್ನ ಮಾಂ ಭಜಥ ದಾನವಾಃ ॥೨೦೨॥**

**ತಸ್ಮಾತ್ಪ್ರನಷ್ಟಸಂಜ್ಞಾ ವೈ ಪರಾಭವಮವಾಪ್ಸ್ಯಥ ।**
**ಇತಿ ವ್ಯಾಹೃತ್ಯ ತಾನ್ ಕಾವ್ಯೋ ಜಗಾಮಾಥ ಯಥಾಗತಂ ॥೨೦೩॥**

**ಶಪ್ತಾಂಸ್ತಾನಸುರಾನ್ ಜ್ಞಾತ್ವಾ ಕಾವ್ಯೇನ ಸ ಬೃಹಸ್ಪತಿಃ ।**
**ಕೃತಾರ್ಥಃ ಸ ತದಾ ಹೃಷ್ಟಃ ಸ್ವರೂಪಂ ಪ್ರತ್ಯಪದ್ಯತ ॥೨೦೪॥**

**ಬುದ್ಧ್ವಾಽಸುರಾನ್ ಹತಾಞ್ಜ್ಞಾತ್ವಾ ಕೃತಾರ್ಥೋಽಂತರಧೀಯತ ।**
**ತತಃ ಪ್ರನಷ್ಟೇ ತಸ್ಮಿಂಸ್ತು ವಿಭ್ರಾಂತಾ ದಾನವಾಭವನ್ ॥೨೦೫॥**

---

೨೦೧. ಅಸುರರು ಹೀಗೆ ಹೇಳಿ ಬೃಹಸ್ಪತಿಯನ್ನು ಆಶ್ರಯಿಸಿದರು. ಹಿತೋಕ್ತಿಯನ್ನಾಡಿದರೂ ಅವರು ಒಪ್ಪದಿರಲು, ಅವರ ಗರ್ವಕ್ಕಾಗಿ ಭಾರ್ಗವನಿಗೆ ಬಹಳ ಸಿಟ್ಟು ಬಂದಿತು.

೨೦೨-೨೦೩. "ಎಲೈ ದಾನವರೇ, ನಾನು ತಿಳಿವಳಿಕೆ ಕೊಟ್ಟರೂ ನೀವು ನನ್ನನ್ನು ಆಶ್ರಯಿಸಲಿಲ್ಲ. ಆದುದರಿಂದ ಬುದ್ಧಿಹೀನರಾಗಿ ನೀವು ಅಪಜಯವನ್ನು ಪಡೆಯುವಿರಿ" ಎಂದು ಹೇಳಿ ಶುಕ್ರಾಚಾರ್ಯನು ತಾನು ಬಂದಂತೆ ಹೋದನು.

೨೦೪. ಭಾರ್ಗವನು ಅಸುರರಿಗೆ ಶಾಪಕೊಟ್ಟುದನ್ನು ತಿಳಿದು, ತನ್ನ ಕಾರ್ಯವು ನೆರವೇರಿತೆಂದು ಸಂತೋಷಗೊಂಡು ಬೃಹಸ್ಪತಿಯು ಆಗ ತನ್ನ ಸಹಜ ರೂಪವನ್ನು ತಾಳಿದನು.

೨೦೫. "ಅಸುರರು ಇನ್ನು ಹಾಳಾದಂತೆಯೇ ಸರಿ" ಎಂದು ನಿಶ್ಚಯಿಸಿ ಕೊಂಡು ಕೃತಾರ್ಥನಾಗಿ ಅವನು ಕಣ್ಮರೆಯಾದನು. ಆ ಬಳಿಕ ದಾನವರು ಮುಂದು ತೋರದೆ ಬೆಪ್ಪಾದರು.

**ಅಹೋ ವಿವಂಚಿತಾಃ ಸ್ಮೇತಿ ಪರಸ್ಪರಮಥಾಬ್ರುವನ್ ।**
**ಪೃಷ್ಠತೋಽಭಿಮುಖಾಶ್ಚೈವ ತಾಡಿತಾಂಗಿರಸೇನ ತು ॥೨೦೬॥**

**ವಂಚಿತಾಃ ಸೋಪಧಾನೇನ ಸ್ವೇ ಸ್ವೇ ವಸ್ತುನಿ ಮಾಯಯಾ ।**
**ತತಸ್ತ್ವಪರಿತುಷ್ಟಾಸ್ತೇ ತಮೇವ ತ್ವರಿತಾ ಯಯುಃ ।**
**ಪ್ರಹ್ಲಾದಮಗ್ರತಃ ಕೃತ್ವಾ ಕಾವ್ಯಸ್ಯಾನುಪದಂ ಪುನಃ ॥೨೦೭॥**

**ತತಃ ಕಾವ್ಯಂ ಸಮಾಸಾದ್ಯ ಉಪತಸ್ಥುರವಾಙ್ಮುಖಾಃ ।**
**ಸಮಾಗತಾನ್ ಪುನರ್ದೃಷ್ಟ್ವಾ ಕಾವ್ಯೋ ಯಾಜ್ಯಾನುವಾಚ ಹ ॥೨೦೮॥**

**ಮಯಾ ಸಂಬೋಧಿತಾಸ್ಸರ್ವೇ ಯಸ್ಮಾನ್ಮಾ ನಾಭಿನಂದಥ ।**
**ತತಸ್ತೇನಾವಮಾನೇನ ಗತಾ ಯೂಯಂ ಪರಾಭವಂ ॥೨೦೯॥**

**ಏವಂ ಬ್ರುವಾಣಂ ಶುಕ್ರಂ ತು ಬಾಷ್ಪಸಂದಿಗ್ಧಯಾ ಗಿರಾ ।**
**ಪ್ರಹ್ಲಾದಸ್ತಂ ತದೋವಾಚ ಮಾ ನಸ್ತ್ವಂ ತ್ಯಜ ಭಾರ್ಗವ ॥೨೧೦॥**

---

೨೦೬. "ಓಹೋ! ಮೋಸಕ್ಕೊಳಗಾದೆವು" ಎಂದು ಅವರು ಒಬ್ಬರಿಗೊಬ್ಬರು ಹೇಳಿಕೊಂಡರು. "ಬೃಹಸ್ಪತಿಯಾದರೋ ನಮ್ಮನ್ನು ಹಿಂದೆಯೂ ಮುಂದೆಯೂ ಪ್ರಹರಿಸಿದನು.

೨೦೭. ಮಾಯೆಯನ್ನವಲಂಬಿಸಿ ಕಪಟದಿಂದ ನಮ್ಮ ನಮ್ಮ ವಿಷಯದಲ್ಲೇ ನಮ್ಮನ್ನು ಮೋಸಗೊಳಿಸಿದನು" ಹೀಗೆ ಹೇಳಿ, ಅವರು ಬಳಿಕ ಪ್ರಹ್ಲಾದನನ್ನು ಮುಂದೆ ಬಿಟ್ಟುಕೊಂಡು ಮನಸ್ಸಿನಲ್ಲಿ ಹರ್ಷವಿಲ್ಲದ ಶುಕ್ರಾಚಾರ್ಯನ ಹಿಂದೆಯೇ ಬೇಗನೆ ಹೋದರು.

೨೦೮. ಅನಂತರ ಭಾರ್ಗವನ ಬಳಿಗೆ ಹೋಗಿ ತಲೆತಗ್ಗಿಸಿಕೊಂಡು ನಿಂತರು. ಮರಳಿ ತನ್ನಲ್ಲಿಗೆ ಬಂದ ಶಿಷ್ಯರನ್ನು ನೋಡಿ ಅವನಿಂತೆದನು.

೨೦೯. "ನಿಮ್ಮೆಲ್ಲರನ್ನೂ ನಾನು ಕರೆದೆನು; ಆದರೂ ನೀವು ನನ್ನನ್ನು ಗೌರವಿಸಲಿಲ್ಲ. ನನಗೆ ಮಾಡಿದ ಆ ಅವಮಾನದಿಂದ ನಿಮಗೆ ಈಗ ಪರಾಭವವಾಯಿತು."

೨೧೦. ಶುಕ್ರಾಚಾರ್ಯನು ಹೀಗೆ ಹೇಳಲು ಪ್ರಹ್ಲಾದನು ಕಣ್ಣೀರು ಬಿಟ್ಟು ಅಸ್ಪಷ್ಟವಾದ ನುಡಿಯಿಂದ ಉತ್ತರವಿತ್ತನು. "ಭಾರ್ಗವಾ, ನೀನು ನಮ್ಮನ್ನು ಕೈಬಿಡಬೇಡ.

ಸ್ತ್ವಾಶ್ರಯಾರ್ ಭಜಮಾನಾಂಶ್ಚ ಭಕ್ತಾಂಸ್ತ್ವಂ ಭಜ ಭಾರ್ಗವ ।
ತ್ವಯ್ಯದೃಷ್ಟೇ ವಯಂ ತೇನ ದೇವಾಚಾರ್ಯೇಣ ಮೋಹಿತಾಃ ।
ಭಕ್ತಾನರ್ಹಸಿ ವೈ ಜ್ಞಾತುಂ ತಪೋದೀರ್ಘೇಣ ಚಕ್ಷುಷಾ ॥೨೧೧॥

ಯದಿ ನಸ್ತ್ವಂ ನ ಕುರುಷೇ ಪ್ರಸಾದಂ ಭೃಗುನಂದನ ।
ಅಪಧ್ಯಾತಾಸ್ತ್ವಯಾ ಹ್ಯದ್ಯ ಪ್ರವಿಶಾಮೋ ರಸಾತಲಂ ॥೨೧೨॥

ಜ್ಞಾತ್ವಾ ಕಾವ್ಯೋ ಯಥಾತತ್ತ್ವಂ ಕಾರುಣ್ಯಾದನುಕಂಪಯಾ ।
ಏವಂ ಪ್ರತ್ಯನುನೀತೋ ವೈ ತತಃ ಕೋಪಂ ನಿಯಮ್ಯ ಸಃ ।
ಉವಾಚೈತಾನ್ನ ಭೇತವ್ಯಂ ನ ಗಂತವ್ಯಂ ರಸಾತಲಂ ॥೨೧೩॥

ಅವಶ್ಯಂ ಭಾವಿನೋ ಹ್ಯರ್ಥಾಃ ಪ್ರಾಪ್ತವ್ಯಾ ಮಯಿ ಜಾಗ್ರತಿ ।
ನ ಶಕ್ಯಮನ್ಯಥಾ ಕರ್ತುಂ ದಿಷ್ಟಂ ಹಿ ಬಲವತ್ತರಂ ॥೨೧೪॥

---

೨೧೧. ಆಚಾರ್ಯಾ, ನೀನೇ ನಮಗೆ ಆಶ್ರಯ; ನಾವು ನಿನ್ನ ಸೇವಕರು; ಭಕ್ತರು. ನಮ್ಮನ್ನು ಸ್ವೀಕರಿಸು. ನೀನು ನಮಗೆ ಕಾಣಿಸದೆ ಹೋದೆ. ಆದುದರಿಂದ ನಾವು ಆ ದೇವ ಗುರುವಿನ ಮೋಸಕ್ಕೆ ಗುರಿಯಾದೆವು. ನಾವು ನಿನ್ನ ಭಕ್ತರೆಂಬುದು ನಿನ್ನ ಧೀರ್ಘತಪಸ್ಸಿನ ದಿವ್ಯ ಜ್ಞಾನದಿಂದ ನಿನಗೇ ಗೊತ್ತಾಗಿರುವುದು.

೨೧೨. ನೀನು ನಮ್ಮ ವಿಷಯದಲ್ಲಿ ಅನುಗ್ರಹವನ್ನು ಮಾಡದಿದ್ದರೆ, ಎಲೈ ಭೃಗುಪುತ್ರನೇ, ನಿನ್ನ ತಿರಸ್ಕಾರಕ್ಕೆ ಗುರಿಯಾದ ನಾವು ಪಾತಾಲಕ್ಕಿಳಿಯುವೆವು."

೨೧೩. ಅಸುರರು ವಿನಯದಿಂದ ಸಂತೈಸಲು ಶುಕ್ರಾಚಾರ್ಯನು ವಾಸ್ತವಾಂಶವನ್ನು ಅರಿತನು. ಅವನಿಗೆ ದಯೆಯೂ, ಸಹಾನುಭೂತಿಯೂ ಹುಟ್ಟಿದುವು. ಕೋಪವನ್ನು ತಡೆದುಕೊಂಡು ಅವನು ಅವರಿಗೆ ಹೀಗೆ ಹೇಳಿದನು. "ಹೆದರಬೇಡಿ. ಪಾತಾಲಕ್ಕಿಳಿಯಬೇಡಿ.

೨೧೪. ನಾನು ನಿಮ್ಮ ರಕ್ಷಣೆಯಲ್ಲಿ ಆಸಕ್ತನಾಗಿ ಎಚ್ಚರಿಕೆಯಿಂದಿದ್ದರೂ, ತಪ್ಪದೆ ಒದಗಿಯೇ ತೀರಬೇಕಾದ ಕಷ್ಟಸುಖಾದಿಗಳನ್ನು ನೀವು ಅನುಭವಿಸಲೇ ಬೇಕು. ವಿಧಿಯನ್ನು ವ್ಯತ್ಯಾಸಪಡಿಸಲು ಸಾಧ್ಯವಿಲ್ಲ; ಏಕೆಂದರೆ ಅದು ಬಹು ಬಲವಾದುದು.

**ಸಂಜ್ಞಾ ಪ್ರನಷ್ಟಾ ಯಾ ವೋऽದ್ಯ ತಾಮೇತಾಂ ಪ್ರತಿಪತ್ಸ್ಯಥ ।**
**ದೇವಾಞ್ಜಿತ್ವಾ ಸಕೃಚ್ಚಾಪಿ ಪಾತಾಲಂ ಪ್ರತಿಪತ್ಸ್ಯಥ ॥೨೧೫॥**

**ಪ್ರಾಪ್ತೇ ಪರ್ಯಾಯಕಾಲೇ ಚ ಹೀತಿ ಬ್ರಹ್ಮಾಭ್ಯಭಾಷತ ।**
**ಮತ್ಪ್ರಸಾದಾಚ್ಚ ತ್ರೈಲೋಕ್ಯಂ ಭುಕ್ತಂ ಯುಷ್ಮಾಭಿರೂರ್ಜಿತಂ ॥೨೧೬॥**

**ಯುಗಾಖ್ಯಾ ದಶ ಸಂಪೂರ್ಣಾ ದೇವಾನಾಕ್ರಮ್ಯ ಮೂರ್ಧನಿ ।**
**ಏತಾವಂತಂ ಚ ಕಾಲಂ ವೈ ಬ್ರಹ್ಮಾ ರಾಜ್ಯಮಭಾಷತ ॥೨೧೭॥**

**ರಾಜ್ಯಂ ಸಾವರ್ಣಿಕೇ ತುಭ್ಯಂ ಪುನಃ ಕಿಲ ಭವಿಷ್ಯತಿ ।**
**ಲೋಕಾನಾಮೀಶ್ವರೋ ಭಾವ್ಯಸ್ತವ ಪೌತ್ರಃ ಪುನರ್ಬಲಿಃ ॥೨೧೮॥**

**ಏವಂ ಕಿಲ ಮಿಥಃ ಪ್ರೋಕ್ತಃ ಪೌತ್ರಸ್ತೇ ವಿಷ್ಣುನಾ ಸ್ವಯಂ ।**
**ವಾಚಾ ಹೃತೇಷು ಲೋಕೇಷು ತಾಸ್ತಾಸ್ತಸ್ಯಾಭವರ್ನ ಕಿಲ ॥೨೧೯॥**

---

೨೧೫. ನಿಮಗೆ ಕಳೆದು ಹೋಗಿದ್ದ ಬುದ್ಧಿಶಕ್ತಿಯು ಈಗ ಮರಳಿ ಬರುವುದು. ಒಂದು ಸಲವಾದರೂ ದೇವತೆಗಳನ್ನು ಜಯಿಸಿ ಬಳಿಕ ಪಾತಾಲಕ್ಕೆ ಹೋಗುವಿರಂತೆ.

೨೧೬. ಬ್ರಹ್ಮನು ಹೇಳಿದ್ದುದು ಹೀಗೆಯೇ ಅಲ್ಲವೇ? ನಿಮ್ಮ ಸರದಿಯ ಕಾಲವು ಬಂದಾಗ ನನ್ನ ಅನುಗ್ರಹದಿಂದ ಸಂಪತ್ಸಮೃದ್ಧವಾದ ಮೂರುಲೋಕಗಳನ್ನೂ ಅನುಭವಿಸಿದಿರಿ.

೨೧೭. ಹತ್ತು ಯುಗಗಳು ಪೂರ್ಣವಾಗುವಷ್ಟು ಕಾಲ ನೀವು ದೇವತೆಗಳನ್ನು ತಲೆಮೆಟ್ಟಿ ಆಳಿದಿರಿ. ಇಷ್ಟುಕಾಲ ತಾನೇ ನಿಮಗೆ ರಾಜ್ಯಾಧಿಪತ್ಯವೆಂದು ಬ್ರಹ್ಮನು ಹೇಳಿದ್ದುದು?

೨೧೮. ಸಾವರ್ಣಿಕಮನ್ವಂತರದಲ್ಲಿ ಮತ್ತೆ ನಿಮಗೆ ರಾಜ್ಯವು ಬರುವುದು. ನಿನ್ನ ಮೊಮ್ಮಗನಾದ ಬಲಿಯು ಮರಳಿ ಲೋಕಗಳ ಅಧಿಪತಿಯಾಗುವನು.

೨೧೯. ಯುಕ್ತಿ ವಚನಗಳಿಂದ ಲೋಕಗಳನ್ನು ಅಪಹರಿಸಿದಾಗ, ನಿನ್ನ ಮೊಮ್ಮಗನಾದ ಬಲಿಗೆ ವಿಷ್ಣುವು ರಹಸ್ಯವಾಗಿ ತಾನೇ ಹೀಗೆ ಹೇಳಲಿಲ್ಲವೇ? ಆ ಮಾತುಗಳು ನಡೆದುದು ಹಾಗೆಯೇ ತಾನೇ?

**ಯಸ್ಮಾತ್ಪ್ರವೃತ್ತಯಶ್ಚಾಸ್ಯ ಸಕಾಶಾದಭಿಸಂಧಿತಾಃ ।**
**ತಸ್ಮಾದ್ವೃತ್ತೇನ ಪ್ರೀತೇನ ತುಭ್ಯಂ ದತ್ತಂ ಸ್ವಯಂಭುವಾ ॥೨೨೦॥**

**ದೇವರಾಜ್ಯೇ ಬಲಿರ್ಭಾವ್ಯ ಇತಿ ಮಾಮೀಶ್ವರೋಽಬ್ರವೀತ್ ।**
**ತಸ್ಮಾದದೃಶ್ಯೋ ಭೂತಾನಾಂ ಕಾಲಾಪೇಕ್ಷಃ ಸ ತಿಷ್ಠತಿ ॥೨೨೧॥**

**ಪ್ರೀತೇನ ಚಾಪರೋ ದತ್ತೋ ವರಸ್ತುಭ್ಯಂ ಸ್ವಯಂಭುವಾ ।**
**ತಸ್ಮಾನ್ನಿರುತ್ಸುಕಸ್ತ್ವಂ ವೈ ಪರ್ಯಾಯಂ ಸಹಿತೋಽಸುರೈಃ ॥೨೨೨॥**

**ನ ಹಿ ಶಕ್ಯಂ ಮಯಾ ತುಭ್ಯಂ ಪುರಸ್ತಾದ್ವಿಪ್ರಭಾಷಿತುಂ ।**
**ಬ್ರಹ್ಮಣಾ ಪ್ರತಿಷಿದ್ಧೋಽಹಂ ಭವಿಷ್ಯಂ ಜಾನತಾ ವಿಭೋ ॥೨೨೩॥**

**ಇಮೌ ಚ ಶಿಷ್ಯೌ ದ್ವೌ ಮಹ್ಯಂ ಸಮಾವೇತೌ ಬೃಹಸ್ಪತೇಃ ।**
**ದೈವತೈಃ ಸಹ ಸಂಸೃಷ್ಟಾನ್ ಸರ್ವಾನ್ ವೋ ಧಾರಯಿಷ್ಯತಃ ॥೨೨೪॥**

---

೨೨೦. ವಿಷ್ಣು ವಿನ ತಂತ್ರದಿಂದ ಮೋಸಹೋದ ಬಲಿಯ ಪ್ರಯತ್ನಗಳೆಲ್ಲವೂ ವ್ಯರ್ಥವಾದುವು. ಆದುದರಿಂದ ಅವನ ನಡತೆಗೆ ಸಂತೋಷಪಟ್ಟು ಬ್ರಹ್ಮನು ನಿನಗೆ ಹಿಂದೆ ಹೇಳಿದಂತೆ ವರವನ್ನಿತ್ತನು.

೨೨೧. "ದೇವತೆಗಳ ರಾಜ್ಯದಲ್ಲಿ ಮುಂದೆ ಬಲಿಯು ಅರಸಾಗುವನು" ಎಂದು ಈಶ್ವರನು ನನ್ನೊಡನೆ ಹೇಳಿದನು. ಆದಕಾರಣ ಅವನು ಅದೃಶ್ಯನಾಗಿ ಅನುಕೂಲವಾದ ಕಾಲವನ್ನು ಕಾಯುತ್ತಿದ್ದಾನೆ.

೨೨೨. ಪ್ರೀತನಾದ ಬ್ರಹ್ಮನು ನಿನಗೆ ಮತ್ತೊಂದು ವರವನ್ನು ಕರುಣಿಸಿದ್ದಾನೆ. ಆದುದರಿಂದ ನೀನೂ ಮಿಕ್ಕ ಅಸುರರೂ ಈಗ ನಿಮ್ಮ ರಾಜ್ಯಭಾರದ ಸರದಿಯ ವಿಚಾರದಲ್ಲಿ ಆತಂಕಪಡಬೇಡಿರಿ.

೨೨೩. ಬ್ರಹ್ಮನು ಕೊಟ್ಟಿರುವ ವರವನ್ನು ನಿನ್ನೆದುರಿಗೆ ಈಗ ನಾನು ಹೇಳಲು ಸಾಧ್ಯವಿಲ್ಲ. ಏಕೆಂದರೆ, ರಾಜಾ, ಮುಂದಾಗುವುದನ್ನು ತಿಳಿದು ಅದನ್ನು ಹೇಳಕೂಡದೆಂದು ಅವನು ನನ್ನನ್ನು ಅಡ್ಡಿಪಡಿಸಿದ್ದಾನೆ.

೨೨೪. ಬೃಹಸ್ಪತಿಗೆ ಸಮಾನರಾದ ಈ ಇಬ್ಬರು ಶಿಷ್ಯರೂ ದೇವತೆಗಳೊಡನೆ ಬೆರೆತಿದ್ದ ನಿಮ್ಮೆಲ್ಲರನ್ನೂ ನನ್ನ ಪರವಾಗಿ ಸಲಹುವರು.''

**ಇತ್ಯುಕ್ತಾ ಹ್ಯಸುರಾಃ ಸರ್ವೇ ಕಾವ್ಯೇನಾಕ್ಲಿಷ್ಟಕರ್ಮಣಾ।**
**ಹೃಷ್ಟಾಸ್ತೇನ ಯಯುಯುಸ್ಸಾರ್ಧಂ ಪ್ರಹ್ಲಾದೇನ ಮಹಾತ್ಮನಾ ॥೨೨೫॥**

**ಅವಶ್ಯಂ ಭಾವ್ಯಮರ್ಥಂ ತು ಶ್ರುತ್ವಾ ಶುಕ್ರೇಣ ಭಾಷಿತಂ।**
**ಸಕೃದಾಶಂಸಮಾನಾಸ್ತು ಜಯಂ ಶುಕ್ರೇಣ ಭಾಷಿತಂ।**
**ದಂಶಿತಾಃ ಸಾಯುಧಾಃ ಸರ್ವೇ ತತೋ ದೇವಾನ್ ಸಮಾಹ್ವಯನ್ ॥೨೨೬॥**

**ದೇವಾಸ್ತದಾಽಸುರಾನ್ ದೃಷ್ಟ್ವಾ ಸಂಗ್ರಾಮೇ ಸಮುಪಸ್ಥಿತಾನ್ ।**
**ಸರ್ವೇ ಸಂಭೃತಸಂಭಾರಾ ದೇವಾಸ್ತಾನ್ ಸಮಯೋಧಯನ್ ॥೨೨೭॥**

**ದೇವಾಸುರೇ ತದಾ ತಸ್ಮಿನ್ ವರ್ತಮಾನೇ ಶತಂ ಸಮಾಃ ।**
**ಅಜಯನ್ನಸುರಾ ದೇವಾಂಸ್ತತೋ ದೇವಾ ಹ್ಯಮಂತ್ರಯನ್ ॥೨೨೮॥**

---

೨೨೫. ಅನುಕೂಲ ಕಾರ್ಯಾಚರಣೆಯಲ್ಲಿ ತೊಡಗಿದ ಶುಕ್ರಾಚಾರ್ಯನು ಹೀಗೆ ಹೇಳಲು, ಅಸುರರೆಲ್ಲರೂ ಸಂತುಷ್ಟರಾಗಿ, ಮಹಾತ್ಮನಾದ ಪ್ರಹ್ಲಾದನೊಡನೆ ಹೋದರು.

೨೨೬. ಮುಂದೆ ಅವಶ್ಯವಾಗಿ ನಡೆಯುವ ಸಂಗತಿಯನ್ನು ಶುಕ್ರಾಚಾರ್ಯನಿಂದ ಕೇಳಿ, ಅವನು ಹೇಳಿದಂತೆ ಒಂದು ಸಾರಿಯಾದರೂ ಜಯ ಪಡೆಯಬೇಕೆಂಬ ಆಸೆಯಿಂದ ದೈತ್ಯರು ಕವಚಗಳನ್ನು ಧರಿಸಿ, ಆಯುಧ ಸಮೇತರಾಗಿ ಹೋಗಿ ದೇವತೆಗಳನ್ನು ಯುದ್ಧಕ್ಕೆ ಕರೆದರು.

೨೨೭. ಅಸುರರು ಯುದ್ಧಕ್ಕೆ ಬಂದುದನ್ನು ನೋಡಿ, ದೇವತೆಗಳು ಸಕಲ ಸಾಮಗ್ರಿಗಳನ್ನೂ ಸಿದ್ಧಪಡಿಸಿಕೊಂಡು ಯುದ್ಧಕ್ಕೆ ಹೊರಟರು. ಮತ್ತು ಅವರೊಡನೆ ಕಾದಿದರು.

೨೨೮. ದೇವಾಸುರರ ಯುದ್ಧವು ಒಂದುನೂರು ವರ್ಷಗಳ ಕಾಲ ನಡೆಯಿತು. ಆಗ ಅಸುರರು ಸುರರನ್ನು ಗೆದ್ದರು. ಬಳಿಕ ದೇವತೆಗಳು ತಮ್ಮಲ್ಲಿ ಆಲೋಚನೆ ಮಾಡಿದರು.

**ಯಜ್ಞೇನೋಪಾಹ್ವಯಾಮಸ್ತೌ ತತೋ ಜೇಷ್ಯಾಮಹೇ ಸುರಾನ್ ।**
**ತದೋಪಾಮಂತ್ರಯನ್ ದೇವಾಃ ಶಂಡಾಮರ್ಕೌ ತು ತಾವುಭೌ ॥೨೨೯॥**

**ಯಜ್ಞೇ ಚಾಹೂಯ ತೌ ಪ್ರೋಕ್ತೌ ತ್ಯಜೇಥಾಮಸುರಾನ್ ದ್ವಿಜೌ ।**
**ವಯಂ ಯುವಾಂ ಭಜಿಷ್ಯಾಮಃ ಸಹ ಜಿತ್ವಾ ತು ದಾನವಾನ್ ॥೨೩೦॥**

**ಏವಂ ಕೃತಾಭಿಸಂಧೀ ತೌ ಶಂಡಾಮರ್ಕೌ ಸುರಾಸ್ತಥಾ ।**
**ತತೋ ದೇವಾ ಜಯಂ ಪ್ರಾಪುರ್ದಾನವಾಶ್ಚ ಪರಾಜಿತಾಃ ॥೨೩೧॥**

**ಶಂಡಾಮರ್ಕಪರಿತ್ಯಕ್ತಾ ದಾನವಾ ಹ್ಯಬಲಾಸ್ತಥಾ ।**
**ಏವಂ ದೈತ್ಯಾಃ ಪುರಾ ಕಾವ್ಯಶಾಪೇನಾಭಿಹತಾಸ್ತದಾ ॥೨೩೨॥**

**ಕಾವ್ಯಶಾಪಾಭಿಭೂತಾಸ್ತೇ ನಿರಾಧಾರಾಶ್ಚ ಸರ್ವಶಃ ।**
**ನಿರಸ್ಯಮಾನಾ ದೇವೈಶ್ಚ ವಿವಿಶುಸ್ತೇ ರಸಾತಲಂ ॥೨೩೩॥**

---

೨೨೯. “ಅಸುರ ಪಕ್ಷೀಯರಾದ ಅವರಿಬ್ಬರನ್ನೂ ನಾವು ಯಜ್ಞವನ್ನು ನಡೆಸಿ ಆಹ್ವಾನ ಮಾಡೋಣ. ಬಳಿಕ ದೈತ್ಯರನ್ನು ಗೆಲ್ಲುವೆವು” ಎಂದು ಯೋಚಿಸಿ, ದೇವತೆಗಳು ಶಂಡ ಮತ್ತು ಅಮರ್ಕರೆಂಬ ಶುಕ್ರಾಚಾರ್ಯನ ಶಿಷ್ಯರಿಬ್ಬರಿಗೂ ಆಹ್ವಾನವನ್ನು ಕೊಟ್ಟರು.

೨೩೦. ಅವರನ್ನು ಯಜ್ಞದಲ್ಲಿ ಕರೆದು “ಓ ಬ್ರಾಹ್ಮಣರೇ, ದೈತ್ಯರ ಪಕ್ಷವನ್ನು ಬಿಡಿ, ನಾವು ಅವರನ್ನು ಗೆದ್ದು ನಿಮ್ಮ ಸೇವೆಯನ್ನು ಮಾಡುವೆವು” ಎಂದರು.

೨೩೧. ಹೀಗೆ ಶಂಡಾಮರ್ಕರೂ ದೇವತೆಗಳೂ ಒಳಸಂಚುಮಾಡಿದರು. ಬಳಿಕ ದೇವತೆಗಳು ಗೆದ್ದರು; ಅಸುರರು ಸೋತರು.

೨೩೨. ಶಂಡಾಮರ್ಕರು ತಮ್ಮನ್ನು ತೊರೆದ ಬಳಿಕ ದಾನವರು ದುರ್ಬಲರಾದರು. ಹೀಗೆ ದೈತ್ಯರು ಶುಕ್ರಶಾಪದಿಂದ ಕೆಟ್ಟುಹೋದರು.

೨೩೩. ಭಾರ್ಗವನ ಶಾಪದಿಂದ ಪೀಡಿತರಾದ ಅವರಿಗೆ ಎಲ್ಲ ಕಡೆಯೂ ಆಸರೆ ತಪ್ಪಿತು. ದೇವತೆಗಳು ಓಡಿಸಲು ಅವರು ಪಾತಾಲಲೋಕವನ್ನು ಸೇರಿದರು.

ಏವಂ ನಿರುದ್ಯಮಾ ದೇವೈಃ ಕೃತಾಃ ಕೃಚ್ಛ್ರೇಣ ದಾನವಾಃ ।
ತತಃ ಪ್ರಭೃತಿ ಶಾಪೇನ ಭೃಗೋರ್ನೈಮಿತ್ತಿಕೇನ ತು ॥೨೩೪॥

ಜಜ್ಞೇ ಪುನಃ ಪುನರ್ವಿಷ್ಣುರ್ಧರ್ಮೇ ಪ್ರಶಿಥಿಲೇ ಪ್ರಭುಃ ।
ಕುರ್ವನ್ ಧರ್ಮವ್ಯವಸ್ಥಾನಮಸುರಾಣಾಂ ಪ್ರಣಾಶನಂ ॥೨೩೫॥

ಪ್ರಹ್ಲಾದಸ್ಯ ನಿದೇಶೇ ತು ನ ಸ್ಥಾಸ್ಯಂತ್ಯಸುರಾಶ್ಚ ಯೇ ।
ಮನುಷ್ಯವಧ್ಯಾಸ್ತೇ ಸರ್ವೇ ಬ್ರಹ್ಮೇತಿ ವ್ಯಾಹರತ್ಪ್ರಭುಃ ॥೨೩೬॥

ಧರ್ಮಾನ್ನಾರಾಯಣಸ್ಯಾಂಶಃ ಸಂಭೂತಶ್ಚಾಕ್ಷುಷೇಽಂತರೇ ।
ಯಜ್ಞಂ ವೈ ವರ್ತಯಾಮಾಸುರ್ದೇವಾ ವೈವಸ್ವತೇಽಂತರೇ ॥೨೩೭॥

ಪ್ರಾದುರ್ಭಾವೇ ತತಸ್ತಸ್ಯ ಬ್ರಹ್ಮಾ ಹ್ಯಾಸೀತ್ಪುರೋಹಿತಃ ।
ಯುಗಾಖ್ಯಾಯಾಂ ಚತುರ್ಥ್ಯಾಂ ತು ಆಪನ್ನೇಷು ಸುರೇಷು ವೈ ॥೨೩೮॥

ಸಂಭೂತಸ್ತು ಸಮುದ್ರಾಂತೇ ಹಿರಣ್ಯಕಶಿಪೋರ್ವಧೇ ।
ದ್ವಿತೀಯೋ ನಾರಸಿಹ್ಮಾಖ್ಯೇ ರುದ್ರೋ ಹ್ಯಾಸೀತ್ಪುರೋಹಿತಃ ॥೨೩೯॥

---

೨೩೪-೨೩೫. ಹೀಗೆ ದೇವತೆಗಳು ಅತಿ ಪ್ರಯಾಸದಿಂದ ದಾನವರ ಪ್ರಯತ್ನಗಳನ್ನು ವ್ಯರ್ಥಗೊಳಿಸಿದರು. ಅದು ಮೊದಲು ಭೃಗುಮಹರ್ಷಿಯ ಶಾಪವನ್ನು ಕಾರಣಮಾಡಿಕೊಂಡು ವಿಷ್ಣುವು ಧರ್ಮವು ಶಿಥಿಲವಾದಾಗ ಪದೇ ಪದೇ ಅವತರಿಸಿ, ಧರ್ಮ ಸಂಸ್ಥಾಪನವನ್ನೂ ಅಸುರ ನಿಗ್ರಹವನ್ನೂ ಮಾಡುತ್ತಿರುವನು.

೨೩೬. ಅಸುರರಲ್ಲಿ ಯಾರು ಪ್ರಹ್ಲಾದನ ಅಪ್ಪಣೆಯಂತೆ ನಡೆಯುವುದಿಲ್ಲವೋ ಅವರೆಲ್ಲರೂ ಮನುಷ್ಯರಿಂದ ವಧಿಸಲ್ಪಡುವರೆಂದು ಬ್ರಹ್ಮದೇವನು ಹೇಳಿದನು.

೨೩೭. ಚಾಕ್ಷುಷ ಮನ್ವಂತರದಲ್ಲಿ ಶ್ರೀಮನ್ನಾರಾಯಣನು ಧರ್ಮನಲ್ಲಿ ತನ್ನ ಅಂಶದಿಂದ ಅವತರಿಸಿದನು. ವೈವಸ್ವತ ಮನ್ವಂತರದಲ್ಲಿ ದೇವತೆಗಳು ಯಜ್ಞವನ್ನು ನೆರವೇರಿಸಿದರು. ವಿಷ್ಣುವಿನ ಆ ಅವತಾರ ಕಾಲದಲ್ಲಿ ಬ್ರಹ್ಮನು ಪುರೋಹಿತನಾದನು.

೨೩೮-೨೩೯. ನಾಲ್ಕನೆಯ ಯುಗದಲ್ಲಿ ದೇವತೆಗಳು ಕಷ್ಟಕ್ಕೆ ಸಿಕ್ಕಿದರು. ಆಗ ಹಿರಣ್ಯಕಶಿಪುವಿನ ವಧೆಗಾಗಿ ವಿಷ್ಣುವು ಸಮುದ್ರ ಪ್ರಾಂತದಲ್ಲಿ ಅವತರಿಸಿದನು. ಎರಡನೆಯದಾದ ಈ ನರಸಿಂಹಾವತಾರದಲ್ಲಿ ರುದ್ರನು ಪುರೋಹಿತನಾದನು.

**ಬಲಿಸಂಸ್ಥೇಷು ಲೋಕೇಷು ತ್ರೇತಾಯಾಂ ಸಪ್ತಮಂ ಪ್ರತಿ ।**
**ತೃತೀಯೋ ವಾಮನಸ್ಯಾರ್ಥೇ ಧರ್ಮೇಣ ತು ಪುರೋಧಸಾ ॥೨೪೦॥**

**ಏತಾಸ್ತಿಸ್ರಃ ಸ್ಮೃತಾಸ್ತಸ್ಯ ದಿವ್ಯಾಃ ಸಂಭೂತಯೋ ದ್ವಿಜಾಃ ।**
**ಮಾನುಷಾಃ ಸಪ್ತ ಯಾನ್ಯಾಸ್ತು ಶಾಪಜಾಸ್ತಾ ನಿಬೋಧತ ॥೨೪೧॥**

**ತ್ರೇತಾಯುಗೇ ತು ಪ್ರಥಮೋ ದತ್ತಾತ್ರೇಯೋ ಬಭೂವ ಹ ।**
**ನಷ್ಟೇ ಧರ್ಮೇ ಚತುರ್ಥಾಂಶೇ ಮಾರ್ಕಂಡೇಯಪುರಸ್ಸರಃ ॥೨೪೨॥**

**ಪಂಚಮಃ ಪಂಚದಶ್ಯಾಂ ಚ ತ್ರೇತಾಯಾಂ ಸಂಬಭೂವ ಹ ।**
**ಮಾಂಧಾತಾ ಚಕ್ರವರ್ತೀ ತು ತದೋತ್ತಂಕಪುರಸ್ಸರಃ ॥೨೪೩॥**

**ಏಕೋನವಿಂಶ್ಯಾಂ ತ್ರೇತಾಯಾಂ ಸರ್ವಕ್ಷತ್ರಾಂತಕೃದ್ವಿಭುಃ ।**
**ಜಾಮದಗ್ನ್ಯಸ್ತಥಾ ಷಷ್ಠೋ ವಿಶ್ವಾಮಿತ್ರಪುರಸ್ಸರಃ ॥೨೪೪॥**

---

೨೪೦. ಲೋಕಗಳೆಲ್ಲವೂ ಬಲಿಚಕ್ರವರ್ತಿಯ ಅಧೀನವಾದುವು. ಆಗ ಏಳನೆಯ ತ್ರೇತಾಯುಗದ ಮೂರನೆಯ ಪಾದದಲ್ಲಿ ವಿಷ್ಣುವು ವಾಮನರೂಪದಿಂದ ಅವತರಿಸಿದನು. ಈ ಅವತಾರದಲ್ಲಿ ಧರ್ಮನು ಪುರೋಹಿತನಾಗಿದ್ದನು.

೨೪೧. ಮೇಲೆ ಹೇಳಿದುವು ಮಹಾವಿಷ್ಣುವಿನ ಮೂರು ದಿವ್ಯಾವತಾರಗಳು. ಓ ದ್ವಿಜರೇ, ಭೃಗುಮಹರ್ಷಿಯ ಶಾಪದಿಂದ ಪ್ರಾಪ್ತವಾದ ಇನ್ನು ಉಳಿದ ಏಳು ಮಾನುಷಾವತಾರಗಳನ್ನು ಹೇಳುವೆನು ಕೇಳಿರಿ.

೨೪೨. ಧರ್ಮವು ಲುಪ್ತವಾಗಲು, ಮೊದಲನೆಯ ತ್ರೇತಾಯುಗದ ನಾಲ್ಕನೆಯ ಪಾದದಲ್ಲಿ ದತ್ತಾತ್ರೇಯ ರೂಪದಿಂದ ಮಾರ್ಕಂಡೆಯ ಪುರಸ್ಸರನಾಗಿ ಕೇಶವನು ಜನಿಸಿದನು.

೨೪೩. ಹದಿನೈದನೆಯ ತ್ರೇತಾಯುಗದಲ್ಲಿ ಮಾಂಧಾತ ಚಕ್ರವರ್ತಿಯು ಉತ್ತಂಕನನ್ನು ಮುಂದಿಟ್ಟುಕೊಂಡು ಉದಿಸಿದನು. ವಿಷ್ಣುವಿನ ಐದನೆಯ ಮಾನುಷಜನ್ಮವಿದು.

೨೪೪. ಹತ್ತೊಂಬತ್ತನೆಯ ತ್ರೇತಾಯುಗದಲ್ಲಿ ವಿಷ್ಣುವು ಕ್ಷತ್ರಿಯ ಕುಲವನ್ನೆಲ್ಲ ನಿರ್ಮೂಲಮಾಡಿದ ಪರಶುರಾಮನಾಗಿ ಹುಟ್ಟಿದನು. ಇದು ಆರನೆಯ ರೂಪವು. ವಿಶ್ವಾಮಿತ್ರ ಮಹರ್ಷಿಯು ಆಗ ಪುರೋಹಿತನಾದನು.

**ಚತುರ್ವಿಂಶೇ ಯುಗೇ ರಾಮೋ ವಸಿಷ್ಠೇನ ಪುರೋಧಸಾ ।**
**ಸಪ್ತಮೋ ರಾವಣಸ್ಯಾರ್ಥೇ ಜಜ್ಞೇ ದಶರಥಾತ್ಮಜಃ** ॥೨೪೫॥

**ಅಷ್ಟಮೋ ದ್ವಾಪರೇ ವಿಷ್ಣುರಷ್ಟಾವಿಂಶೇ ಪರಾಶರಾತ್ ।**
**ವೇದವ್ಯಾಸಸ್ತಥಾ ಜಜ್ಞೇ ಜಾತೂಕರ್ಣ್ಯಪುರಸ್ಸರಃ** ॥೨೪೬॥

**ಕರ್ತುಂ ಧರ್ಮವ್ಯವಸ್ಥಾನಮಸುರಾಣಾಂ ಪ್ರಣಾಶನಂ ।**
**ಬುದ್ಧೋ ನವಮಕೋ ಜಜ್ಞೇ ತಪಸಾ ಪುಷ್ಕರೇಕ್ಷಣಃ ।**
**ದೇವಸುಂದರರೂಪೇಣ ದ್ವೈಪಾಯನಪುರಸ್ಸರಃ** ॥೨೪೭॥

**ತಸ್ಮಿನ್ನೇವ ಯುಗೇ ಕ್ಷೀಣೇ ಸಂಧ್ಯಾಶಿಷ್ಟೇ ಭವಿಷ್ಯತಿ ।**
**ಕಲ್ಕೀ ತು ವಿಷ್ಣುಯಶಸಃ ಪಾರಾಶರ್ಯಪುರಸ್ಸರಃ ।**
**ದಶಮೋ ಭಾವ್ಯಸಂಭೂತೋ ಯಾಜ್ಞವಲ್ಕ್ಯಪುರಸ್ಸರಃ** ॥೨೪೮॥

---

೨೪೫. ಇಪ್ಪತ್ತನಾಲ್ಕನೆಯ ತ್ರೇತಾಯುಗದಲ್ಲಿ ರಾವಣವಧೆಗೋಸ್ಕರ ದಶರಥನ ಪುತ್ರನಾಗಿ ನಾರಾಯಣನು ಉದಿಸಿದನು. ಆಗ ಪುರೋಹಿತನು ವಸಿಷ್ಠನು. ಇದು ಏಳನೆಯ ಅವತಾರವು.

೨೪೬. ಇಪ್ಪತ್ತೆಂಟನೆಯ ದ್ವಾಪರಯುಗದಲ್ಲಿ ವಿಷ್ಣುವು ಪರಾಶರ ಪುತ್ರನಾದ ವೇದವ್ಯಾಸನ ರೂಪದಿಂದ ಜಾತೂಕರ್ಣ್ಯಪುರಸ್ಸರನಾಗಿ ಜನಿಸಿದನು. ಇದು ಎಂಟನೆಯ ಅವತಾರವು.

೨೪೭. ತಪೋಬಲದಿಂದ ಧರ್ಮಸ್ಥಾಪನವನ್ನೂ, ಅಸುರರ ನಾಶವನ್ನೂ ಮಾಡುವುದಕ್ಕಾಗಿ, ಪುಂಡರೀಕಾಕ್ಷನು ದೇವನಂತೆ ಸುಂದರ ರೂಪವನ್ನು ಧರಿಸಿ, ದ್ವೈಪಾಯನ ಪುರಸ್ಸರನಾಗಿ ಒಂಬತ್ತನೆಯದಾದ ಬುದ್ಧಾವತಾರವನ್ನು ಮಾಡಿದನು.

೨೪೮. ಅದೇ ಯುಗವು ಮುಗಿದು ಸಂಧ್ಯಾಂಶವು ಮಾತ್ರ ಉಳಿದಿರುವ ವೇಳೆಯಲ್ಲಿ ವಿಷ್ಣು, ವಿಷ್ಣುಯಶಸ್ಸೆಂಬ ಬ್ರಾಹ್ಮಣನ ಮಗನಾಗಿ, ವ್ಯಾಸಮಹರ್ಷಿ ಪುರಸ್ಸರನಾಗಿ ಕಲ್ಕಿರೂಪದಿಂದ ಜನಿಸುವನು. ಈ ಹತ್ತನೆಯ ಅವತಾರವು ಮುಂದೆ ಆಗತಕ್ಕದ್ದು. ಆಗ ಪುರೋಹಿತನು ಯಾಜ್ಞವಲ್ಕ್ಯ.

**ಸರ್ವಾಂಶ್ಚ ಭೂತಾಂಸ್ತ್ರಿಮಿತಾನ್ ಪಾಷಂಡಾಂಶ್ಚೈವ ಸರ್ವಶಃ ।**
**ಪ್ರಗೃಹೀತಾಯುಧೈರ್ವಿಪ್ರೈರ್ವೃತಃ ಶತಸಹಸ್ರಶಃ ॥೨೪೯॥**

**ನಿಶ್ಶೇಷಾಞ್ಛೂದ್ರರಾಜ್ಞಸ್ತು ತದಾ ಸ ತು ಕರಿಷ್ಯತಿ ।**
**ಬ್ರಹ್ಮದ್ವಿಷಃ ಸಪತ್ನಾಂಸ್ತು ಸಂಹೃತ್ಯೈವ ಚ ತದ್ವಪುಃ ॥೨೫೦॥**

**ಅಷ್ಟಾವಿಂಶೇ ಸ್ಥಿತಃ ಕಲ್ಕಿಶ್ಚರಿತಾರ್ಥಃ ಸಸೈನಿಕಃ ।**
**ಶೂದ್ರಾನ್ ಸಂಶೋಧಯಿತ್ವಾ ತು ಸಮುದ್ರಾಂತಂ ಚ ವೈ ಸ್ವಯಂ ॥೨೫೧॥**

**ಪ್ರವೃತ್ತಚಕ್ರೋ ಬಲವಾನ್ ಸಂಹಾರಂ ತು ಕರಿಷ್ಯತಿ ।**
**ಉತ್ಸಾದಯಿತ್ವಾ ವೃಷಲಾನ್ ಪ್ರಾಯಶಸ್ತಾನಧಾರ್ಮಿಕಾನ್ ॥೨೫೨॥**

**ತತಸ್ತದಾ ಸ ವೈ ಕಲ್ಕಿಶ್ಚರಿತಾರ್ಥಃ ಸಸೈನಿಕಃ ।**
**ಪ್ರಜಾಸ್ತಂ ಸಾಧಯಿತ್ವಾ ತು ಸಮೃದ್ಧಾಸ್ತೇನ ವೈ ಸ್ವಯಂ ॥೨೫೩॥**

**ಅಕಸ್ಮಾತ್ಕೋಪಿತಾನ್ಯೋನ್ಯಂ ಭವಿಷ್ಯಂತೀಹ ಮೋಹಿತಾಃ ।**
**ಕ್ಷಪಯಿತ್ವಾ ತು ತೇಽನ್ಯೋನ್ಯಂ ಭಾವಿನಾರ್ಥೇನ ಚೋದಿತಾಃ ॥೨೫೪॥**

---

೨೪೯-೨೫೦. ಕಲ್ಕಿರೂಪನಾದ ವಿಷ್ಣುವು, ಆಯುಧ ಧಾರಿಗಳಾದ ಲಕ್ಷೋಪಲಕ್ಷ ಬ್ರಾಹ್ಮಣರು ಬಳಸಿ ಬರುತ್ತಿರಲು, ಎಲ್ಲ ಭೂತಗಳನ್ನೂ, ನೆಲೆ ನಿಂತ ಧರ್ಮದ್ರೋಹಿಗಳನ್ನೂ, ಶೂದ್ರರಾಜರನ್ನೂ ನಿರ್ಮೂಲಮಾಡುವನು. ಬ್ರಹ್ಮದ್ವೇಷಿಗಳನ್ನೂ ಬ್ರಹ್ಮಶತ್ರುಗಳನ್ನೂ ಸಂಹರಿಸುವನು.

೨೫೧-೨೫೨. ಇಪ್ಪತ್ತೆಂಟು ವಯಸ್ಸಿನವನೂ, ಬಲಶಾಲಿಯೂ ಆದ ಕಲ್ಕಿಯು ತನ್ನ ಉದ್ದೇಶವನ್ನು ನೆರವೇರಿಸುತ್ತ, ಧರ್ಮಕಂಟಕರನ್ನು ಅಡಗಿಸುತ್ತ, ಸಮುದ್ರದ ವರೆಗೆ ಸೈನ್ಯವನ್ನು ನಿಲ್ಲಿಸುವನು. ಆ ಧರ್ಮ ದ್ರೋಹಿಗಳನ್ನು ವಿಶೇಷವಾಗಿ ಅಡಗಿಸಿ ಸಂಹರಿಸುವನು.

೨೫೩-೨೫೪. ಬಳಿಕ ಆ ದೇವನು ಸೈನಿಕರೊಡನೆ ಕೂಡಿ ತನ್ನ ಉದ್ದೇಶವನ್ನು ಸಾಧಿಸುವನು. ಪ್ರಜೆಗಳು ಅವನ ಬೆಂಬಲವನ್ನು ಪಡೆದು ಸುಖಸಂಪತ್ತುಗಳಿಂದ ಪೂರ್ಣರಾಗುವರು. ಆದರೆ ಇದ್ದಕ್ಕಿದ್ದಂತೆ ಒಬ್ಬರ ಮೇಲೊಬ್ಬರು ಕೋಪಿಸಿಕೊಂಡು, ಒಬ್ಬರನ್ನೊಬ್ಬರು ಧ್ವಂಸಮಾಡುವರು. ಮುಂದೆ ಹಾಗಾಗಬೇಕೆಂಬುದು ದೈವ ಸಂಕಲ್ಪ; ಅದರ ಪ್ರೇರಣೆಯಿಂದಲೇ ಅವರು ಹಾಗೆ ನಡೆಯುವರು.

**ತತಃ ಕಾಲೇ ವ್ಯತೀತೇ ತು ಸ ದೇವೋऽಂತರಧೀಯತ ।**
**ನೃಪೇಷ್ವಥ ಪ್ರನಷ್ಟೇಷು ಪ್ರಜಾನಾಂ ಸಂಗ್ರಹಾತ್ತದಾ ॥೨೫೫॥**

**ರಕ್ಷಣೇ ವಿನಿವೃತ್ತೇ ತು ಹತ್ವಾ ಚಾನ್ಯೋನ್ಯಮಾಹವೇ ।**
**ಪರಸ್ಪರಂ ನಿಹತ್ವಾ ತು ನಿರಾಕ್ರಂದಾಃ ಸುದುಃಖಿತಾಃ ॥೨೫೬॥**

**ಪುರಾಣಿ ಹಿತ್ವಾ ಗ್ರಾಮಾಂಶ್ಚ ತುಲ್ಯತ್ವೇ ನಿಷ್ಪರಿಗ್ರಹಾಃ ।**
**ಪ್ರನಷ್ಟಾಶ್ರಮಧರ್ಮಾಶ್ಚ ನಷ್ಟವರ್ಣಾಶ್ರಮಾಸ್ತಥಾ ॥೨೫೭॥**

**ಅಟ್ಟಶೂಲಾ ಜನಪದಾಃ ಶಿವಶೂಲಾಶ್ಚತುಷ್ಪಥಾಃ ।**
**ಪ್ರಮದಾಃ ಕೇಶಶೂಲಾಶ್ಚ ಭವಿಷ್ಯಂತಿ ಯುಗಕ್ಷಯೇ ॥೨೫೮॥**

**ಹ್ರಸ್ವದೇಹಾಯುಷಶ್ಚೈವ ಭವಿಷ್ಯಂತಿ ವನೌಕಸಃ ।**
**ಸರಿತ್ಪರ್ವತವಾಸಿನ್ಯೋ ಮೂಲಪತ್ರಫಲಾಶನಾಃ ॥೨೫೯॥**

---

೨೫೫–೨೫೬. ಬಳಿಕ ಕಾಲವು ಕಳೆಯಲು ಆ ಕಲ್ಕಿ ಭಗವಂತನು ಅದೃಶ್ಯನಾಗುವನು. ದೇಶದಲ್ಲಿ ರಾಜರಿಲ್ಲ; ಜನಗಳು ಗುಂಪು ಗುಂಪಾಗಿ ನೆರೆಯುವರು. ಅವರಿಗೆ ರಕ್ಷಣೆಯಿಲ್ಲ; ತಮ್ಮ ತಮ್ಮಲ್ಲಿ ಹೋರಾಡಿ ಒಬ್ಬರನ್ನೊಬ್ಬರು ಕೊಲ್ಲುವರು. ಅವರ ಗೋಳನ್ನು ಕೇಳುವವರಿಲ್ಲ. ದೇಶದಲ್ಲೆಲ್ಲಾ ದುಃಖವು ತುಂಬಿರುವುದು.

೨೫೭. ಜನರು ಪಟ್ಟಣಗಳನ್ನೂ ಹಳ್ಳಿಗಳನ್ನೂ ತೊರೆಯುವರು. ಸಮಾನವಾದ ವರ್ಣದಲ್ಲೂ, ಕುಲದಲ್ಲೂ ಕನ್ಯೆಯನ್ನು ತಂದುಕೊಳ್ಳರು. ಆಶ್ರಮಧರ್ಮಗಳು ಲುಪ್ತವಾಗುವುವು. ಅಷ್ಟೇ ಅಲ್ಲ; ವರ್ಣಾಶ್ರಮಗಳ ಹೆಸರೇ ಉಳಿಯುವುದಲ್ಲ.

೨೫೮. ಕಲಿಯುಗದ ಕೊನೆಯಲ್ಲಿ ಜನರು ಅನ್ನವನ್ನು ವಿಕ್ರಯಿಸುವರು. ಬ್ರಾಹ್ಮಣರು ದುಡ್ಡು ತೆಗೆದುಕೊಂಡು ವೇದವನ್ನು ಹೇಳಿಕೊಡುವರು. ಸ್ತ್ರೀಯರು ವ್ಯಭಿಚಾರದಿಂದ ಜೀವಿಸುವರು.

೨೫೯. ಪ್ರಜೆಗಳ ದೇಹವೂ ಆಯುಸ್ಸೂ ಪ್ರಮಾಣದಲ್ಲಿ ಕುಗ್ಗುವುವು. ಅವರು ಕಾಡು, ನದಿ, ಪರ್ವತ ಇವುಗಳಲ್ಲಿ ವಾಸಮಾಡುವರು. ಗೆಡ್ಡೆಗೆಣಸುಗಳನ್ನೂ ಎಲೆಗಳನ್ನೂ ತಿಂದು ಹೊಟ್ಟೆ ಹೊರೆಯುವರು.

**ಚೀರಚರ್ಮಾಜಿನಧರಾಃ ಸಂಕರಂ ಘೋರಮಾಶ್ರಿತಾಃ ।**
**ಉತ್ಪಾತದುಃಖಾಃ ಸ್ವಲ್ಪಾರ್ಥಾ ಬಹುಬಾಧಾಶ್ಚ ತಾಃ ಪ್ರಜಾಃ ॥೨೬೦॥**

**ಏವಂ ಕಷ್ಟಮನುಪ್ರಾಪ್ತಾಃ ಕಾಲೇ ಸಂಧ್ಯಂಶಕೇ ತದಾ ।**
**ತತಃ ಕ್ಷಯಂ ಗಮಿಷ್ಯಂತಿ ಸಾರ್ಧಂ ಕಲಿಯುಗೇನ ತು**
**ಕ್ಷೀಣೇ ಕಲಿಯುಗೇ ತಸ್ಮಿಂಸ್ತತಃ ಕೃತಮವರ್ತತ । ॥೨೬೧॥**

**ಇತ್ಯೇತತ್ಕೀರ್ತಿತಂ ಸಮ್ಯಗ್ದೇವಾಸುರವಿಚೇಷ್ಟಿತಂ ।**
**ಯದುವಂಶಪ್ರಸಂಗೇನ ಸಮಾಸಾದ್ವೈಷ್ಣವಂ ಯಶಃ ।**
**ತುರ್ವಸೋಸ್ತು ಪ್ರವಕ್ಷ್ಯಾಮಿ ಪೂರೋರ್ದ್ರುಹ್ಯೋಸ್ತಥಾ ಹ್ಯನೋಃ ॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇಽಸುರಶಾಪೋ ನಾಮ**
**ಸಪ್ತಚತ್ವಾರಿಂಶೋಽಧ್ಯಾಯಃ**

---

೨೬೦. ಜನರು ನಾರು ಬಟ್ಟೆಗಳನ್ನೂ, ಚರ್ಮವನ್ನೂ ಹೊದೆಯುವರು. ಜಾತಿ ಸಾಂಕರ್ಯವು ಮಿತಿಯಿಲ್ಲದಷ್ಟು ನಡೆಯುವುದು. ಸಿಡಿಲು, ಭೂಕಂಪ ಮುಂತಾದ ಉತ್ಪಾತಗಳಿಂದ ದುಃಖವು ಒದಗುತ್ತಲೇ ಇರುವುದು. ಪ್ರಜೆಗಳಿಗೆ ಐಶ್ವರ್ಯವು ಸ್ವಲ್ಪ. ಕಷ್ಟವಾದರೋ ಅತ್ಯಧಿಕ.

೨೬೧. ಸಂಧಿಕಾಲದಲ್ಲಿ ಹೀಗೆ ಕಷ್ಟವನ್ನನುಭವಿಸುತ್ತ, ಕಲಿಯುಗವು ಮುಗಿದಾಗ ತಾವೂ ನಾಶವನ್ನೈದುವರು. ಆ ಕಲಿಯುಗವು ಮುಗಿದ ಬಳಿಕ ಕೃತಯುಗವು ಬಂತೆಂದರಿಯಿರಿ.

೬೬೨. ಯದುವಿನ ವಂಶವನ್ನು ವರ್ಣಿಸುವ ಪ್ರಸಂಗದಿಂದ ದೇವಾಸುರರ ವೃತ್ತಾಂತವನ್ನು ವಿಸ್ತಾರವಾಗಿ ತಿಳಿಸಿದೆನು. ಇನ್ನು ತುರ್ವಸು, ಪೂರು, ದ್ರುಹ್ಯು, ಮತ್ತು ಅನು ಇವರ ವಂಶ ವೃತ್ತಾಂತವನ್ನು ಅರುಹುವೆನು.

ಅಧ್ಯಾಯ ೪೭

## ಅಧ್ಯಾಯದ ಸಾರಾಂಶ

ವಸುದೇವನ ಪತ್ನಿಯಾದ ದೇವಕಿಯ ಗರ್ಭದಲ್ಲಿ ಶ್ರೀಕೃಷ್ಣನು ಜನಿಸಿದನು. ಇವನಿಗೆ ರುಕ್ಮಿಣಿ, ಸತ್ಯಭಾಮೆ ಮೊದಲಾದ ಹದಿನಾರುಸಾವಿರ ಜನ ಪತ್ನಿಯರು. ಇವರಲ್ಲಿ ಲಕ್ಷಗಟ್ಟಲೆ ಮಕ್ಕಳು ಹುಟ್ಟಿದರು. ಹೀಗೆ ವೃಷ್ಣಿವಂಶವು ಶಾಖೋಪಶಾಖೆಗಳಾಗಿ ಬೆಳೆಯುತ್ತ ಬಂದಿತು.

ದೇವತೆಗಳಿಗೂ ಅಸುರರಿಗೂ ಘೋರಯುದ್ಧವು ನಡೆದು ಅಸುರರು ದುರ್ಬಲರಾದರು. ತಮ್ಮ ಗುರುವಾದ ಶುಕ್ರಾಚಾರ್ಯನ ಹಿತೋಪದೇಶದಂತೆ ಅವರು ದೇವತೆಗಳಿಗೆ ಶರಣಾಗತರಾದರು. ಶುಕ್ರಾಚಾರ್ಯನೂ ಸಹ ಮಹಾದೇವನನ್ನು ಮೆಚ್ಚಿಸಿ ಅವನಿಂದ ದಿವ್ಯಮಂತ್ರಗಳನ್ನು ಪಡೆದು ಬರುವುದಕ್ಕಾಗಿ ಅತಿ ಭೀಷಣವಾದ ತಪಸ್ಸನ್ನು ಕೈಗೊಂಡನು. ಈಶ್ವರನು ಮೆಚ್ಚಿ ಅವನ ಕೋರಿಕೆಯನ್ನು ಸಲ್ಲಿಸಿದನು. ಭಕ್ತಿಪರವಶನಾಗಿ ಭಾರ್ಗವನು ಅವನನ್ನು ಹಲವು ವಿಧವಾಗಿ ಸ್ತುತಿಸಿದನು.

ಈ ನಡುವೆ ದೇವತೆಗಳು ಅಸುರರ ಮೇಲೆ ಬೀಳಲು, ಅನಾಥರಾದ ಅವರು ಭೃಗುಪತ್ನಿಯನ್ನು ಮರೆಹೊಕ್ಕರು. ಆಗಲೂ ಅವರಿಗೆ ದೇವತೆಗಳ ಕಾಟ ತಪ್ಪಲಿಲ್ಲ. ಅವಳು ಕುಪಿತಳಾಗಿ ಇಂದ್ರನು ಅಲುಗಾಡದಂತೆ ತನ್ನ ತಪಶ್ಶಕ್ತಿಯಿಂದ ಸ್ತಂಭನ ಮಾಡಿದಳು. ದೇವತೆಗಳು ವಿಷ್ಣುವಿನಲ್ಲಿ ಮೊರೆಯಿಡಲು ಆತನು ಭೃಗುಪತ್ನಿಯಿಂದ ಒದಗುವುದರಲ್ಲಿದ್ದ ದೊಡ್ಡ ವಿಪತ್ತನ್ನು ತಪ್ಪಿಸುವುದಕ್ಕಾಗಿ ಅವಳನ್ನು ಸಂಹರಿಸಿದನು. ಪತ್ನೀವಧದಿಂದ ಕುಪಿತನಾದ ಭೃಗುಮಹರ್ಷಿಯು ವಿಷ್ಣುವಿಗೆ ಏಳು ಸಾರಿ ಮನುಷ್ಯ ಜನ್ಮವನ್ನೆತ್ತುವಂತೆ ಶಾಪಕೊಟ್ಟನು. ಇದರಿಂದ ಅವನು ರಾಮಾದ್ಯವತಾರಗಳನ್ನು ಎತ್ತಿದನು.

ದೈತ್ಯರ ಹಿತಕ್ಕಾಗಿ ಶುಕ್ರಾಚಾರ್ಯನು ಘೋರವಾದ ತಪಸ್ಸನ್ನು ಕೈಗೊಂಡಿರುವನೆಂದು ತಿಳಿದು, ಇಂದ್ರನು ಹೆದರಿ, ತನ್ನ ಮಗಳಾದ ಜಯಂತಿಯನ್ನು ಯಾವ ಪ್ರಯತ್ನದಿಂದಲಾದರೂ ತನಗೆ ಹಿತವನ್ನು ಮಾಡಿಕೊಡಬೇಕೆಂದು ಹೇಳಿ ಕಳುಹಿಸಿಕೊಟ್ಟನು. ಅವಳು ವ್ರತದಲ್ಲಿದ್ದ ಭಾರ್ಗವನಿಗೆ ಬಗೆ ಬಗೆಯಾಗಿ ಸೇವೆ ಸಲ್ಲಿಸಿದಳು. ನಿಯಮವು ಪೂರ್ಣವಾದ ಬಳಿಕ ಅವಳ ಸೇವೆಗಾಗಿ ಮೆಚ್ಚಿ, ಶುಕ್ರಾಚಾರ್ಯನು ಅವಳ ಕೋರಿಕೆಯನ್ನು ನೆರವೇರಿಸಿಕೊಡಲು ಒಪ್ಪಿ, ಅವಳೊಡನೆ ಹತ್ತು ವರ್ಷಗಳ ಕಾಲ ಸಕಲ ಜಂತುಗಳಿಗೂ ಅದೃಶ್ಯನಾಗಿ ಸುಖಿಸಿದನು. ದೇವಯಾನಿಯು ಹುಟ್ಟಿದುದು ಈ ಕಾಲದಲ್ಲಿಯೇ.

ಈ ಸಮಯವನ್ನು ಸಾಧಿಸಿ ದೇವಗುರುವಾದ ಬೃಹಸ್ಪತಿಯು ಶುಕ್ರಾಚಾರ್ಯನ ರೂಪದಿಂದ ದೈತ್ಯರ ಬಳಿಗೆ ಬಂದು, ಅವರ ಮನಸ್ಸನ್ನೊಲಿಸಿ, ಎಲ್ಲರನ್ನೂ ತನ್ನ ಶಿಷ್ಯರನ್ನಾಗಿ ಮಾಡಿಕೊಂಡನು. ಶುಕ್ರಾಚಾರ್ಯನು ಬಂದು ಇದನ್ನು ನೋಡಿ, ಅಸುರರಿಗೆ ವಾಸ್ತವಾಂಶವನ್ನು ಎಷ್ಟೋ ವಿಧದಲ್ಲಿ ತಿಳಿಯಪಡಿಸಿದನು. ಆದರೂ ಅವರು ಅವನನ್ನು ತಮ್ಮ ಗುರುವೆಂದು ನಂಬಲಿಲ್ಲ. ಅವನಿಗೆ ಕೋಪ ಬಂದಿತು. ಬುದ್ಧಿಹೀನರಾಗಿ ಅವರು ಪರಾಭವಹೊಂದುವಂತೆ ಶಾಪಕೊಟ್ಟು ಹೊರಟು ಹೋದನು. ಇದರಿಂದ ಬೃಹಸ್ಪತಿಗೆ ಸಂತೋಷವಾಯಿತು. ತನ್ನ ಸಹಜರೂಪವನ್ನು ತಾಳಿ ಅವನು ಸ್ವರ್ಗಲೋಕಕ್ಕೆ ಹೊರಟುಹೋದನು.

ತಮ್ಮ ಅವಿವೇಕಕ್ಕಾಗಿ ಮರುಗುತ್ತ ದೈತ್ಯರು ಪ್ರಹ್ಲಾದನನ್ನು ಮುಂದೆ ಬಿಟ್ಟುಕೊಂಡು, ಶುಕ್ರಾಚಾರ್ಯನ ಬಳಿಗೆ ಹೋಗಿ, ತಮ್ಮನ್ನು ಕೈಬಿಡದೆ ಸಲಹಬೇಕೆಂದು ಬೇಡಿಕೊಂಡರು. ಅವನಿಗೆ ಕನಿಕರ ಹುಟ್ಟಿತು. ಸಾವರ್ಣಿಕಮನ್ವಂತರದಲ್ಲಿ ಅವರಿಗೆ ಮತ್ತೆ ರಾಜ್ಯವು ಬರುವುದೆಂದೂ, ಅದುವರೆಗೂ ಹೇಗೋ ಕಾಲಹರಣಮಾಡಬೇಕೆಂದೂ ಅವನು ಹೇಳಿದನು. ಅದರಂತೆ ಅವರು ಒಪ್ಪಿ ಪಾತಾಳಕ್ಕೆ ತೆರಳಿದರು.

ವಿಷ್ಣುವು ಭೃಗುಮುನಿಯ ಶಾಪವನ್ನು ನಿಮಿತ್ತಮಾಡಿಕೊಂಡು, ಧರ್ಮವು ಖಿಲವಾದಾಗಲೆಲ್ಲ ಪದೇ ಪದೇ ಲೋಕದಲ್ಲಿ ಅವತಾರಮಾಡಿದನು. ದತ್ತಾತ್ರೇಯ, ಪರಶುರಾಮ, ವೇದವ್ಯಾಸ, ಬುದ್ಧ ಮುಂತಾದ ರೂಪಗಳಲ್ಲಿ ಅವನು ಜನಿಸಿ ಧರ್ಮವನ್ನು ನೆಲೆಗೊಳಿಸಿದನು. ಕಲಿಯುಗಾಂತದಲ್ಲಿ ವಿಷ್ಣುಯಶಸ್ಸೆಂಬ ಬ್ರಾಹ್ಮಣನ ಮಗನಾಗಿ ಕಲ್ಕಿಯೆಂಬ ರೂಪದಿಂದ ಅವತರಿಸಿ ಧರ್ಮದ್ರೋಹಿಗಳನ್ನಡಗಿಸಿ ಧರ್ಮವನ್ನು ಸಾಧಿಸುವನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಅಸುರಶಾಪವೆಂಬ ನಾಲ್ವತ್ತೇಳನೆಯ ಅಧ್ಯಾಯವು ಮುಗಿದುದು



## ಅಥ ಶ್ರೀಮತ್ಸ್ಯಮಹಾಪುರಾಣೇ ಅಷ್ಟಚತ್ವಾರಿಂಶೋಽಧ್ಯಾಯಃ

॥ ಸೂತ ಉವಾಚ ॥

ತುರ್ವಸೋಸ್ತು ಸುತೋ ಗರ್ಭೋ ಗೋಭಾನುಸ್ತಸ್ಯ ಚಾತ್ಮಜಃ ।
ಗೋಭಾನೋಸ್ತು ಸುತೋ ವೀರಸ್ತ್ರಿಸಾರಿರಪರಾಜಿತಃ ॥ ೧ ॥

ಕರಂಧಮಸ್ತು ತ್ರೈಸಾರಿರ್ಭರತಸ್ತಸ್ಯ ಚಾತ್ಮಜಃ ।
ದುಷ್ಯಂತಃ ಪೌರವಸ್ಯಾಪಿ ತಸ್ಯ ಪುತ್ರೋ ಹ್ಯಕಲ್ಮಷಃ ॥ ೨ ॥

ಏವಂ ಯಯಾತಿಶಾಪೇನ ಜರಾಸಂಕ್ರಮಣೇ ಪುರಾ ।
ತುರ್ವಸೋಃ ಪೌರವಂ ವಂಶಂ ಪ್ರವಿವೇಶ ಪುರಾ ಕಿಲ ॥ ೩ ॥

ದುಷ್ಯಂತಸ್ಯ ತು ದಾಯಾದೋ ವರೂಥೋ ನಾಮ ಪಾರ್ಥಿವಃ ।
ವರೂಥಾತ್ತು ತಥಾಂಽಡೀರಃ ಸಂಧಾನಸ್ತಸ್ಯ ಚಾತ್ಮಜಃ ॥ ೪ ॥

ಪಾಂಡ್ಯಶ್ಚ ಕೇರಲಶ್ಚೈವ ಚೋಲಃ ಕರ್ಣಸ್ತಥೈವ ಚ ।
ತೇಷಾಂ ಜನಪದಾಃ ಸ್ಫೀತಾಃ ಪಾಂಡ್ಯಾಶ್ಚೋಲಾಸ್ಸಕೇರಲಾಃ ॥ ೫ ॥

---

೧. ಸೂತಪೌರಾಣಿಕನು ಹೇಳಿದನು.—ತುರ್ವಸುವಿನ ಮಗ ಗರ್ಭ ; ಅವನ ಮಗ ಗೋಭಾನು. ಅವನಿಗೆ ವೀರನೂ ಯುದ್ಧದಲ್ಲಿ ಸೋಲಿಲ್ಲದವನೂ ಆದ ತ್ರಿಸಾರಿಯು ಮಗನಾದನು.

೨. ತ್ರಿಸಾರಿಪುತ್ರನು ಕರಂಧಮನು. ಅವನ ಪುತ್ರನು ಭರತ. ಈ ಭರತನು ಪೂರುವಂಶದವನೂ ಹೌದು. ಕಲ್ಮಷರಹಿತನಾದ ಇವನ ಮಗನೇ ದುಷ್ಯಂತ.

೩. ಹಿಂದೆ ಯಯಾತಿ ಮಹಾರಾಜನ ಶಾಪದಿಂದ ತುರ್ವಸುವಿನ ವಂಶಕ್ಕೆ ಮುಪ್ಪು ಆವರಿಸಿಕೊಳ್ಳಲು, ಭರತನು ಆ ವಂಶದಿಂದ ಪೌರವ ವಂಶವನ್ನು ಸೇರಿದನು.

೪. ವರೂಥನೆಂಬ ರಾಜನು ದುಷ್ಯಂತನ ಪುತ್ರನು. ವರೂಥನಿಂದ ಆಂಡೀರನೂ ಅವನಿಂದ ಸಂಧಾನನೂ ಜನಿಸಿದರು.

೫. ಪಾಂಡ್ಯ, ಕೇರಲ, ಚೋಲ ಮತ್ತು ಕರ್ಣರೆಂಬವರೂ ಸಹ ಆಂಡೀರನ ಮಕ್ಕಳೇ. ಇವರ ದೇಶಗಳು ವಿಸ್ತಾರವಾದವುಗಳು. ಅವುಗಳಿಗೆ ಪಾಂಡ್ಯ, ಚೋಲ, ಕೇರಲಗಳೆಂದೇ ಹೆಸರು.

**ದ್ರುಹ್ಯೋಸ್ತು ತನಯೌ ಶೂರೌ ಸೇತುಃ ಕೇತುಸ್ತಥೈವ ಚ ।**
**ಸೇತುಪುತ್ರಃ ಶರದ್ವಾಂಸ್ತು ಗಾಂಧಾರಸ್ತಸ್ಯ ಚಾತ್ಮಜಃ ॥ ೬ ॥**

**ಖ್ಯಾಯತೇ ಯಸ್ಯ ನಾಮ್ನಾಽಸೌ ಗಾಂಧಾರವಿಷಯೋ ಮಹಾನ್ ।**
**ಆರಟ್ಟದೇಶಜಾಸ್ತಸ್ಯ ತುರಗಾ ವಾಜಿನಾಂ ವರಾಃ ॥ ೭ ॥**

**ಗಾಂಧಾರಪುತ್ರೋ ಧರ್ಮಸ್ತು ಘೃತಸ್ತಸ್ಯಾತ್ಮಜೋಽಭವತ್ ।**
**ಘೃತಾಚ್ಚ ವಿದುಷೋ ಜಜ್ಞೇ ಪ್ರಚೇತಾಸ್ತಸ್ಯ ಚಾತ್ಮಜಃ ॥ ೮ ॥**

**ಪ್ರಚೇತಸಃ ಪುತ್ರಶತಂ ರಾಜಾನಃ ಸರ್ವ ಏವ ತೇ ।**
**ಮ್ಲೇಚ್ಛರಾಷ್ಟ್ರಾಧಿಪಾಃ ಸರ್ವೇ ಉದೀಚೀಂ ದಿಶಮಾಶ್ರಿತಾಃ ॥ ೯ ॥**

**ಅನೋಶ್ಚೈವ ಸುತಾ ವೀರಾಸ್ತ್ರಯಃ ಪರಮಧಾರ್ಮಿಕಾಃ ।**
**ಸಭಾನರಶ್ಚಾಕ್ಷುಷಶ್ಚ ಪರಮೇಷುಸ್ತಥೈವ ಚ ॥೧೦॥**

---

೬. ಶೂರರಾದ ಸೇತು ಮತ್ತು ಕೇತುಗಳೆಂಬವರು ದ್ರುಹ್ಯುವಿನ ಮಕ್ಕಳು. ಸೇತುಪುತ್ರನಿಗೆ ಶರದ್ವಂತನೆಂದೂ ಅವನ ಮಗನಿಗೆ ಗಾಂಧಾರನೆಂದೂ ಹೆಸರು.

೭. ಅವನ ಹೆಸರಿನಿಂದಲೇ ಗಾಂಧಾರವೆಂಬ ದೊಡ್ಡದೇಶವು ಪ್ರಖ್ಯಾತಿಗೆ ಬಂದಿದೆ. ಅವನ ಬಳಿಯಲ್ಲಿ ಆರಟ್ಟದೇಶದ ಪ್ರಸಿದ್ಧವಾದ ಕುದುರೆಗಳುಂಟು. ಅವು ಅಶ್ವಗಳಲ್ಲಿ ಉತ್ತಮವಾದುವು.

೮. ಗಾಂಧಾರನ ಮಗ ಧರ್ಮ; ಇವನ ಮಗ ಘೃತ. ವಿದ್ಯಾವಂತನಾದ ಈತನಿಗೆ ಪ್ರಚೇತಸ್ ಎಂಬ ಪುತ್ರನು ಜನಿಸಿದನು.

೯. ಪ್ರಚೇತಸ್ಸಿಗೆ ನೂರ್ವರು ಮಕ್ಕಳು ಹುಟ್ಟಿದರು. ಅವರೆಲ್ಲರೂ ರಾಜರೇ ಆದರು. ಅವರು ಉತ್ತರ ದಿಕ್ಕಿಗೆ ಹೋಗಿ ಅಲ್ಲಿ ಮ್ಲೇಚ್ಛರಾಷ್ಟ್ರಗಳಿಗೆ ಅಧಿಪತಿಗಳಾದರು.

೧೦. ಅವನಿಗೆ ವೀರರೂ ಪರಮಧಾರ್ಮಿಕರೂ ಆದ ಮೂವರು ಮಕ್ಕಳಿದ್ದರು. ಸಭಾನರ, ಚಾಕ್ಷುಷ ಮತ್ತು ಪರಮೇಷುಗಳೆಂದು ಅವರ ಹೆಸರು.

**ಸಭಾನರಸ್ಯ ಪುತ್ರಸ್ತು ವಿದ್ವಾನ್ ಕೋಲಾಹಲೋ ನೃಪಃ |**
**ಕೋಲಾಹಲಸ್ಯ ಧರ್ಮಾತ್ಮಾ ಸಂಜಯೋ ನಾಮ ವಿಶ್ರುತಃ ||೧೧||**

**ಸಂಜಯಸ್ಯಾಭವತ್ಪುತ್ರೋ ವೀರೋ ನಾಮ ಪುರಂಜಯಃ |**
**ಜನಮೇಜಯೋ ಮಹಾರಾಜ ಪುರಂಜಯಸುತೋಽಭವತ್ ||೧೨||**

**ಜನಮೇಜಯಸ್ಯ ರಾಜರ್ಷೇರ್ಮಹಾಶಾಲೋಽಭವತ್ಸುತಃ |**
**ಆಸೀದಿಂದ್ರಸಮೋ ರಾಜಾ ಪ್ರತಿಷ್ಠಿತಯಶಾಽಭವತ್ ||೧೩||**

**ಮಹಾಮನಾಃ ಸುತಸ್ತಸ್ಯ ಮಹಾಶಾಲಸ್ಯ ಧಾರ್ಮಿಕಃ |**
**ಸಪ್ತದ್ವೀಪೇಶ್ವರೋ ಜಜ್ಞೇ ಚಕ್ರವರ್ತೀ ಮಹಾಮನಾಃ ||೧೪||**

**ಮಹಾಮನಾಸ್ತು ದ್ವೌ ಪುತ್ರೌ ಜನಯಾಮಾಸ ವಿಶ್ರುತೌ |**
**ಉಶೀನರಂ ಚ ಧರ್ಮಜ್ಞಂ ತಿತಿಕ್ಷುಂ ಚೈವ ತಾವುಭೌ ||೧೫||**

---

೧೧. ವಿದ್ವಾಂಸನಾದ ಕೋಲಾಹಲನೆಂಬ ರಾಜನು ಸಭಾನರನ ಪುತ್ರನು. ಇವನಿಗೆ ಧರ್ಮಾತ್ಮನೆಂದು ಪ್ರಸಿದ್ಧನಾದ ಸಂಜಯನು ಮಗನಾದನು.

೧೨. ಸಂಜಯನಿಗೆ ವೀರನೆಂದು ಪ್ರಖ್ಯಾತಿಪಡೆದ ಪುರಂಜಯನು ಪುತ್ರನೆನಿಸಿದನು. ಓ ಮಹಾರಾಜಾ, ಇವನ ಮಗನು ಜನಮೇಜಯನು.

೧೩. ರಾಜರ್ಷಿಯಾದ ಜನಮೇಜಯನಿಗೆ ಮಹಾಶಾಲನೆಂಬವನು ಮಗನಾದನು. ಈ ರಾಜನು ತನ್ನ ಕೀರ್ತಿಯನ್ನು ನೆಲೆಗೊಳಿಸಿ ಇಂದ್ರನಿಗೆ ಸಮನೆನಿಸಿಕೊಂಡಿದ್ದನು.

೧೪. ಧಾರ್ಮಿಕನೂ, ಸಪ್ತದ್ವೀಪಗಳ ಅಧಿಪತಿಯೂ, ಚಕ್ರವರ್ತಿಯೂ ಆದ ಮಹಾಮನನೆಂಬವನು ಮಹಾಶಾಲನಿಗೆ ಮಗನಾದನು.

೧೫. ಕೀರ್ತಿವಂತರಾದ ಮಕ್ಕಳಿಬ್ಬರನ್ನು ಮಹಾಮನನು ಪಡೆದನು. ಧರ್ಮಜ್ಞನಾದ ಉಶೀನರ ಮತ್ತು ತಿತಿಕ್ಷು ಎಂದು ಅವರ ಹೆಸರು.

**ಉಶೀನರಸ್ಯ ಪತ್ನ್ಯಸ್ತು ಪಂಚ ರಾಜರ್ಷಿಸಂಭವಾಃ ।**
**ಭೃಶಾ ಕೃಶಾ ನವಾ ದರ್ಶಾ ಯಾ ಚ ದೇವೀ ದೃಷದ್ವತೀ ॥೧೬॥**

**ಉಶೀನರಸ್ಯ ಪುತ್ರಾಸ್ತು ತಾಸು ಜಾತಾಃ ಕುಲೋದ್ವಹಾಃ ।**
**ತಪಸಾ ತೇ ತು ಮಹತಾ ಜಾತಾ ವೃದ್ಧಸ್ಯ ಧಾರ್ಮಿಕಾಃ ॥೧೭॥**

**ಭೃಶಾಯಾಂ ತು ನೃಗಃ ಪುತ್ರೋ ನವಾಯಾ ನವ ಏವ ಚ ।**
**ಕೃಶಾಯಾಸ್ತು ಕೃಶೋ ಜಜ್ಞೇ ದರ್ಶಾಯಾಃ ಸುವ್ರತೋಽಭವತ್ ।**
**ದೃಷದ್ವತ್ಯಾಃ ಸುತಶ್ಚಾಪಿ ಶಿಬಿರೌಶೀನರೋ ನೃಪಃ ॥೧೮॥**

**ಶಿಬೇಸ್ತು ಶಿಬಯಃ ಪುತ್ರಾಶ್ಚತ್ವಾರೋ ಲೋಕವಿಶ್ರುತಾಃ ।**
**ಪೃಥುದರ್ಭಃ ಸುವೀರಶ್ಚ ಕೇಕಯೋ ಭದ್ರಕಸ್ತಥಾ ॥೧೯॥**

**ತೇಷಾಂ ಜನಪದಾಃ ಸ್ಫೀತಾಃ ಕೇಕಯಾ ಭದ್ರಕಾಸ್ತಥಾ ।**
**ಸೌವೀರಾಶ್ಚೈವ ಪೌರಾಶ್ಚ ನೃಗಸ್ಯ ಕೇಕಯಾಸ್ತಥಾ ॥೨೦॥**

---

೧೬. ಉಶೀನರನಿಗೆ ಐವರು ಪತ್ನಿಯರಿದ್ದರು. ಅವರು ರಾಜರ್ಷಿಯ ಕನ್ಯೆಯರು. ಭೃಶಾ, ಕೃಶಾ, ನವಾ, ದರ್ಶಾ ಮತ್ತು ದೃಷದ್ವತೀ ಎಂದು ಅವರ ಹೆಸರು.

೧೭. ಉಶೀನರನು ವೃದ್ಧನಾದ ಮೇಲೆ ಎಷ್ಟೋ ತಪಸ್ಸನ್ನು ಮಾಡಿ, ವಂಶವರ್ಧಕರೂ ಧಾರ್ಮಿಕರೂ ಆದ ಪುತ್ರರನ್ನು ಆ ಪತ್ನಿಯರಲ್ಲಿ ಪಡೆದನು.

೧೮. ಭೃಶೆಯಲ್ಲಿ ನೃಗನು ಹುಟ್ಟಿದನು; ನವೆಯಲ್ಲಿ ನವನೂ, ಕೃಶೆಯಲ್ಲಿ ಕೃಶನೂ ಜನಿಸಿದರು. ಸುವ್ರತನೆಂಬವನು ದರ್ಶೆಯ ಪುತ್ರನು. ಔಶೀನರನೆಂದು ಪ್ರಸಿದ್ಧನಾದ ಶಿಬಿ ಚಕ್ರವರ್ತಿಯು ದೃಷದ್ವತಿಯಲ್ಲಿ ಉದಿಸಿದನು.

೧೯. ಶಿಬಿಗೆ ಲೋಕಪ್ರಸಿದ್ಧರಾದ ಪೃಥುದರ್ಭ, ಸುವೀರ, ಕೇಕಯ, ಭದ್ರಕ ಎಂಬ ನಾಲ್ವರು ಮಕ್ಕಳಾದರು. ಇವರೆಲ್ಲರಿಗೂ ಶಿಬಿಗಳೆಂದೇ ಹೆಸರು ಬಂದಿತು.

೨೦. ಕೇಕಯ, ಭದ್ರಕ, ಸೌವೀರ, ಪೌರ ಎಂಬವು ಇವರ ದೇಶಗಳು. ಇವು ವಿಸ್ತಾರವಾಗಿದ್ದುವು. ನೃಗನ ದೇಶಕ್ಕೂ ಕೇಕಯವೆಂದೇ ಹೆಸರು.

**ಸುವ್ರತಸ್ಯ ತಥಾಂಬಷ್ಠಾ ಕೃಶಸ್ಯ ವೃಷಲಾ ಪುರೀ ।**
**ನವಸ್ಯ ನವರಾಷ್ಟ್ರಂ ತು ತಿತಿಕ್ಷ್ಯೋಸ್ತು ಪ್ರಜಾಂ ಶೃಣು ॥೨೧॥**
**ತಿತಿಕ್ಷುರಭವದ್ರಾಜಾ ಪೂರ್ವಸ್ಯಾಂ ದಿಶಿ ವಿಶ್ರುತಃ ।**
**ವೃಷದ್ರಥಃ ಸುತಸ್ತಸ್ಯ ತಸ್ಯ ಸೇನೋಽಭವತ್ಸುತಃ ॥೨೨॥**
**ಸೇನಸ್ಯ ಸುತಪಾ ಜಜ್ಞೇ ಸುತಪಸ್ತನಯೋ ಬಲಿಃ ।**
**ಜಾತೋ ಮಾನುಷಯೋನ್ಯಾಂ ತು ಕ್ಷೀಣೇ ವಂಶೇ ಪ್ರಜೇಚ್ಛಯಾ ॥೨೩॥**
**ಮಹಾಯೋಗೀ ತು ಸ ಬಲಿರ್ಬದ್ಧೋ ಬಂಧೈರ್ಮಹಾತ್ಮನಾ ।**
**ಪುತ್ರಾನುತ್ಪಾದಯಾಮಾಸ ಕ್ಷೇತ್ರಜಾನ್ ಪಂಚ ಪಾರ್ಥಿವಾನ್ ॥೨೪॥**
**ಅಂಗಂ ಸ ಜನಯಾಮಾಸ ವಂಗಂ ಸುಹ್ಮಂ ತಥೈವ ಚ ।**
**ಪುಂಡ್ರಂ ಕಲಿಂಗಂ ಚ ತಥಾ ಬಾಲೇಯಂ ಕ್ಷೇತ್ರಮುಚ್ಯತೇ ।**
**ಬಾಲೇಯಾ ಬ್ರಾಹ್ಮಣಾಶ್ಚೈವ ತಸ್ಯ ವಂಶಕರಾಃ ಪ್ರಭೋಃ ॥೨೫॥**

---

೨೧. ಸುವ್ರತನ ರಾಜಧಾನಿಗೆ ಅಂಬಷ್ಠೆಯೆಂದೂ, ವೃಷಲನ ರಾಜಧಾನಿಗೆ ವೃಷಲಾಪುರಿಯೆಂದೂ ಹೆಸರು. ನವನ ಪಟ್ಟಣವು ನವರಾಷ್ಟ್ರ. ಇನ್ನು ತಿತಿಕ್ಷುವಿನ ಸಂತತಿಯನ್ನು ಕೇಳು.

೨೨. ತಿತಿಕ್ಷುವು ಪೂರ್ವದಿಕ್ಕಿನಲ್ಲಿ ಪ್ರಸಿದ್ಧನಾದ ಅರಸನಾಗಿದ್ದನು. ಅವನ ಮಗನು ವೃಷದ್ರಥನು. ಅವನಿಗೆ ಸೇನನೆಂಬ ಮಗನು ಹುಟ್ಟಿದನು.

೨೩. ಸೇನನಿಗೆ ಸುತಪಸ್ಸೆಂಬವನು ಪುತ್ರನಾದನು. ಅವನ ಮಗನು ಬಲಿ. ದಾನವಚಕ್ರವರ್ತಿಯಾದ ವಿರೋಚನನು ಮಕ್ಕಳಿಲ್ಲದೆ ತನ್ನ ವಂಶವು ಕ್ಷೀಣವಾಗುವುದನ್ನು ಕಂಡು ಮನುಷ್ಯಸ್ತ್ರೀಯಲ್ಲಿ ಬಲಿಯನ್ನು ಪಡೆದನು. ಆಕೆಯು ಸುತಪಸ್ಸಿನ ಪತ್ನಿ. ಆದುದರಿಂದ ಬಲಿಯು ಇವನಿಗೂ ಮಗನಾದಂತಾಯಿತು.

೨೪. ಆ ಬಲಿಚಕ್ರವರ್ತಿಯು ಶ್ರೇಷ್ಠನಾದ ಯೋಗಿಯೆನಿಸಿದ್ದನು. ಮಹಾವಿಷ್ಣು ಅವನನ್ನು ಧರ್ಮಪಾಶದಿಂದ ಕಟ್ಟಿದನು. ಸಂತತಿಯಿಲ್ಲದಿರಲು ಈತನು ಮಹಾತಮಸ್ಸೆಂಬ ಮುನಿಯಿಂದ ತನ್ನ ಪತ್ನಿಯಲ್ಲಿ ಕ್ಷೇತ್ರಜರಾದ ಐವರು ಮಕ್ಕಳನ್ನು ಪಡೆದನು.

೨೫. ಅಂಗ, ವಂಗ, ಸುಹ್ಮ, ಪುಂಡ್ರ, ಕಲಿಂಗ ಎಂಬ ಐವರು ಬಲಿಚಕ್ರವರ್ತಿಯ ಪತ್ನಿಯ ಗರ್ಭದಲ್ಲಿ ಮುನಿಯ ಅನುಗ್ರಹದಿಂದ ಜನಿಸಿದ ಕ್ಷೇತ್ರಜರು. ಬ್ರಾಹ್ಮಣೋತ್ತಮನಿಂದ ಜನ್ಮವನ್ನು ತಾಳಿದ ಕಾರಣ ಇವರು ಬ್ರಾಹ್ಮಣರೂ ಅಹುದು. ಬಲಿಯ ವಂಶವನ್ನು ಇವರು ಅಭಿವೃದ್ಧಿಗೆ ತಂದರು.

**ಬಲೇಶ್ಚ ಬ್ರಹ್ಮಣಾ ದತ್ತೋ ವರಃ ಪ್ರೀತೇನ ಧೀಮತಃ ।**
**ಮಹಾಯೋಗಿತ್ವಮಾಯುಶ್ಚ ಕಲ್ಪಸ್ಯ ಪರಿಮಾಣಕಂ । ॥೨೬॥**

**ಸಂಗ್ರಾಮೇ ಚಾಪ್ಯಜೇಯತ್ವಂ ಧರ್ಮೇ ಚೈವೋತ್ತಮಾ ಮತಿಃ ।**
**ತ್ರೈಕಾಲ್ಯದರ್ಶನಂ ಚೈವ ಪ್ರಾಧಾನ್ಯಂ ಪ್ರಸವೇ ತಥಾ ॥೨೭॥**

**ಜಯಂ ಚಾಪ್ರತಿಮಂ ಯುದ್ಧೇ ಧರ್ಮೇ ತತ್ತ್ವಾರ್ಥದರ್ಶನಂ ।**
**ಚತುರೋ ನಿಯತಾನ್ ವರ್ಣಾನ್ ಸ ವೈ ಸ್ಥಾಪಯಿತಾ ಪ್ರಭುಃ ॥೨೮॥**

**ತೇಷಾಂ ಚ ಪಂಚ ದಾಯಾದಾ ವಂಗಾಂಗಾಃ ಸುಹ್ಮಕಾಸ್ತಥಾ ।**
**ಪುಂಡ್ರಾಃ ಕಲಿಂಗಾಶ್ಚ ತಥಾ ಅಂಗಸ್ಯ ತು ನಿಭೋಧತ ॥೨೯॥**

**॥ ಮುನಯ ಊಚುಃ ॥**

**ಕಥಂ ಬಲೇಃ ಸುತಾ ಜಾತಾಃ ಪಂಚ ತಸ್ಯ ಮಹಾತ್ಮನಃ ।**
**ಕಿಂನಾಮ್ನೀ ಮಹಿಷೀ ತಸ್ಯ ಜನಿತಾ ಕತಮೋ ಋಷಿಃ ॥೩೦॥**

---

೨೬. ಪ್ರಾಜ್ಞನಾದ ಬಲಿಯ ವಿಷಯದಲ್ಲಿ ಪ್ರೀತಿಗೊಂಡ ಬ್ರಹ್ಮನು ಅವನಿಗೆ ಅತ್ಯುತ್ತಮವಾದ ಯೋಗಸಿದ್ಧಿಯನ್ನೂ, ಪ್ರಳಯಕಾಲದವರಗಿನ ದೀರ್ಘಾಯುಸ್ಸನ್ನೂ ಕರುಣಿಸಿದನು.

೨೭-೨೮. ಬ್ರಹ್ಮದೇವನ ಅನುಗ್ರಹದಿಂದ ಬಲಿಯು ಯುದ್ಧದಲ್ಲಿ ಅಜೇಯನೆನಿಸಿದನು. ಧರ್ಮದಲ್ಲಿ ಅವನಿಗೆ ದೃಢವಾದ ಬುದ್ಧಿಯಿತ್ತು. ಭೂತಭವಿಷ್ಯದ್ವರ್ತಮಾನಗಳನ್ನು ಅವನು ಅರಿತಿದ್ದನು. ತನ್ನ ತಂದೆಯ ಮಕ್ಕಳಲ್ಲೆಲ್ಲ ಮುಖ್ಯನೆನಿಸಿದನು. ಸಮರದಲ್ಲಿ ಅಸಮಾನವಾದ ಜಯವನ್ನು ಪಡೆಯುತ್ತಿದ್ದನು. ಧರ್ಮದ ಸ್ವರೂಪವನ್ನೂ ರಹಸ್ಯವನ್ನೂ ಅರಿತಿದ್ದನು. ನಾಲ್ಕು ವರ್ಣದವರನ್ನೂ ಅವರವರ ಧರ್ಮದಲ್ಲಿ ನೆಲೆಗೊಳಿಸಿದ್ದನು.

೨೯. ಬಲಿಯ ಮಕ್ಕಳೈವರಿಗೂ ಐದೈದು ಜನ ಮಕ್ಕಳಾದರು. ಅವರಿಗೆ ವಂಗರು, ಅಂಗರು, ಸುಹ್ಮಕರು, ಪುಂಡ್ರರು ಮತ್ತು ಕಲಿಂಗರೆಂದು ಹೆಸರು. ಇನ್ನು ಅಂಗನ ಸಂತತಿಯನ್ನು ಕೇಳಿರಿ.

೩೦. ಮುನಿಗಳು ಹೇಳಿದರು.—ಮಹಾತ್ಮನಾದ ಬಲಿಗೆ ಐವರು ಮಕ್ಕಳು ಹುಟ್ಟಿದುದು ಹೇಗೆ? ಅವನ ರಾಣಿಯ ಹೆಸರೇನು? ಅವರಲ್ಲಿ ಪುತ್ರರನ್ನು ಉತ್ಪಾದನಮಾಡಿದ ಋಷಿ ಯಾರು?

**ಕಥಂ ಚೋತ್ಪಾದಿತಾಸ್ತೇನ ತನ್ನಃ ಪ್ರಬ್ರೂಹಿ ಪೃಚ್ಛತಾಂ ।**
**ಮಾಹಾತ್ಮ್ಯಂ ಚ ಪ್ರಭಾವಂ ಚ ನಿಖಿಲೇನ ವದಸ್ವ ತತ್** ||೩೧||

**|| ಸೂತ ಉವಾಚ ||**

**ಅಥೋಶಿಜ ಇತಿ ಖ್ಯಾತ ಆಸೀದ್ವಿದ್ವಾನೃಷಿಃ ಪುರಾ ।**
**ಪತ್ನೀ ವೈ ಮಮತಾ ನಾಮ ಬಭೂವಾಸ್ಯ ಮಹಾತ್ಮನಃ** ||೩೨||

**ಉಶಿಜಸ್ಯ ಯವೀಯಾನ್ವೈ ಭ್ರಾತೃಪತ್ನೀಮಕಾಮಯತ್ ।**
**ಬೃಹಸ್ಪತಿರ್ಮಹಾತೇಜಾ ಮಮತಾಮೇತ್ಯ ಕಾಮತಃ** ||೩೩||

**ಉವಾಚ ಮಮತಾ ತಂ ತು ದೇವರಂ ವರವರ್ಣಿನೀ ।**
**ಅಂತರ್ವತ್ನ್ಯಸ್ಮಿ ತೇ ಭ್ರಾತುರ್ಜ್ಯೇಷ್ಠಸ್ಯ ತು ವಿರಮ್ಯತಾಂ** ||೩೪||

**ಅಯಂ ತು ಮೇ ಮಹಾಭಾಗ ಗರ್ಭಃ ಕುಪ್ಯೇದ್ಬೃಹಸ್ಪತೇ।**
**ಔಶಿಜೋ ಭ್ರಾತೃಜನ್ಯಸ್ತೇ ಸೋಪಾಂಗಂ ವೇದಮುದ್ಗಿರ‍್ನ್** ||೩೫||

---

೩೧. ಅವನು ಉತ್ಪಾದನಮಾಡಿದ ರೀತಿಯೆಂದು? ಅವನ ಮಾಹಾತ್ಮ್ಯವೂ ಪ್ರಭಾವವೂ ಯಾವುವು? ಇದೆಲ್ಲವನ್ನೂ ವಿವರಿಸಿ ಹೇಳು. ಇದಕ್ಕಾಗಿಯೇ ನಾವು ನಿನ್ನನ್ನು ಕೇಳುತ್ತಿದ್ದೇವೆ.

೩೨. ಸೂತಮಹರ್ಷಿ ಹೇಳಿದನು.—ಹಿಂದೆ ಸಕಲ ಶಾಸ್ತ್ರಜ್ಞನಾದ ಉಶಿಜ ನೆಂಬ ಒಬ್ಬ ಋಷಿಯಿದ್ದನು. ಆ ಮಹಾತ್ಮನಿಗೆ ಮಮತೆಯೆಂಬ ಪತ್ನಿಯಿದ್ದಳು.

೩೩. ಉಶಿಜನ ತಮ್ಮನೂ ಅತಿ ತೇಜಸ್ವಿಯೂ ಆದ ಬೃಹಸ್ಪತಿಯು ಕಾಮ ವಶನಾಗಿ, ಅತ್ತಿಗೆಯಾದ ಮಮತೆಯ ಬಳಿಗೆ ಹೋಗಿ ಅವಳನ್ನು ಮೋಹಿಸಿದನು.

೩೪. ನಾರೀಮಣಿಯಾದ ಮಮತೆಯು ಮೈದುನನಿಗೆ ಹೇಳಿದಳು. “ನಿಮ್ಮ ಅಣ್ಣನ ವೀರ್ಯದಿಂದ ನಾನು ಗರ್ಭವನ್ನು ಧರಿಸಿರುವೆನು. ನಿನ್ನ ಈ ಅಭಿಲಾಷೆಯನ್ನು ಬಿಡು.

೩೫. ಮಹಾಮಹಿಮನಾದ ಎಲೈ ಬೃಹಸ್ಪತಿಯೇ, ನನ್ನ ಗರ್ಭದಲ್ಲಿರುವ ನಿಮ್ಮಣ್ಣನ ಮಗನಾದ ಔಶಿಜಿಯು (ಉಶಿಜಪುತ್ರನು) ಕೋಪಿಸಿಕೊಂಡಾನು. ಅವನು ಅಂಗೋಪಾಂಗ ಸಹಿತವಾದ ವೇದವನ್ನು ಉಚ್ಚರಿಸುತ್ತಿರುವನು.

**ಅಮೋಘರೇತಾಸ್ತ್ವಂ ಚಾಪಿ ನ ಮಾಂ ಭಜಿತುಮರ್ಹಸಿ ।**
**ಅಸ್ಮಿನ್ನೇವಂ ಗತೇ ಕಾಲೇ ಯಥಾ ವಾ ಮನ್ಯಸೇ ಪ್ರಭೋ ॥೩೬॥**

**ಏವಮುಕ್ತಸ್ತಥಾ ಸಮ್ಯಗ್ಬೃಹತ್ತೇಜಾ ಬೃಹಸ್ಪತಿಃ ।**
**ಕಾಮಾತ್ಮಾ ಸ ಮಹಾತ್ಮಾಪಿ ನ ಮನಃ ಸೋಽಭ್ಯವಾರಯತ್ ॥೩೭॥**

**ಸಂಬಭೂವೈವ ಧರ್ಮಾತ್ಮಾ ತಯಾ ಸಾರ್ಧಮಕಾಮಯಾ ।**
**ಉತ್ಸೃಜಂತಂ ತು ತದ್ರೇತೋ ವಾಚಂ ಗರ್ಭೋಽಭ್ಯಭಾಷತ ॥೩೮॥**

**ಭೋ ತಾತ ವಾಚಾಮಧಿಪ ದ್ವಯೋರ್ನಾಸ್ತೀಹ ಸಂಸ್ಥಿತಿಃ ।**
**ಅಮೋಘರೇತಾಸ್ತ್ವಂ ಚಾಪಿ ಪೂರ್ವಂ ಚಾಹಮಿಹಾಗತಃ ॥೩೯॥**

**ಸೋಽಶಪತ್ತಂ ತತಃ ಕ್ರುದ್ಧ ಏವಮುಕ್ತೋ ಬೃಹಸ್ಪತಿಃ ।**
**ಪುತ್ರಂ ಜ್ಯೇಷ್ಠಸ್ಯ ವೈ ಭ್ರಾತುರ್ಗರ್ಭಸ್ಥಂ ಭಗವಾನೃಷಿಃ ॥೪೦॥**

---

೩೬. ನಿನ್ನ ರೇತಸ್ಸೂ ಸಹ ವ್ಯರ್ಥವಾಗದು. ಆದುದರಿಂದ ನನ್ನನ್ನು ನೀನು ಸೇರುವುದು ಯುಕ್ತವಲ್ಲ. ಕಾಲದ ಸ್ಥಿತಿಯು ಈ ರೀತಿಯಾಗಿದೆ. ಪ್ರಭೋ, ನಿನ್ನ ಮನಸ್ಸಿಗೇನು ತೋರುವುದು ?"

೩೭. ಮಮತೆಯು ಹೀಗೆ ನೀತಿಯುಕ್ತವಾದ ಒಳ್ಳೆಯ ಮಾತನ್ನಾಡಿದಳು. ಬೃಹಸ್ಪತಿಯು ಅಧಿಕ ತೇಜಸ್ವಿ, ಮಹಾತ್ಮ; ಆದರೂ ಅವನು ಕಾಮವಶನಾಗಿ ತನ್ನ ಮನಸ್ಸನ್ನು ತಡೆಯಲಾರದೆ ಹೋದನು.

೩೮. ಧರ್ಮಜ್ಞಾನಿಯಾದ ಅವನು ಕಾಮದಲ್ಲಿ ಆಸಕ್ತಿಯಿಲ್ಲದ ಆ ಮಮತೆಯೊಡನೆ ಕೂಡಿಯೇ ಬಿಟ್ಟನು. ಅವನು ವೀರ್ಯವನ್ನು ಉತ್ಸರ್ಜನಮಾಡುತ್ತಿರುವಾಗ ಗರ್ಭದಲ್ಲಿದ್ದ ಶಿಶುವು ಇಂತೆಂದಿತು.

೩೯. "ಅಪ್ಪಾ, ಸಕಲಶಾಸ್ತ್ರಜ್ಞಾ, ಇಲ್ಲಿ ಇಬ್ಬರಿಗೆ ಸ್ಥಳವಿಲ್ಲ ; ನಿನ್ನ ವೀರ್ಯವೂ ಸಹ ವ್ಯರ್ಥವಾಗತಕ್ಕುದಲ್ಲ. ನಾನಾದರೋ ಇಲ್ಲಿಗೆ ಮೊದಲು ಬಂದವನು."

೪೦. ಈ ಮಾತನ್ನು ಕೇಳಿ ಬೃಹಸ್ಪತಿಗೆ ಕೋಪ ಬಂದಿತು. ಗರ್ಭದಲ್ಲಿರುವ ತನ್ನ ಅಣ್ಣನ ಮಗನನ್ನು ಆ ಪೂಜ್ಯನಾದ ಋಷಿಯು ಶಪಿಸಿದನು.

**ಯಸ್ಮಾತ್ತ್ವಮೀದೃಶೇ ಕಾಲೇ ಗರ್ಭಸ್ಥೋಽಪಿ ನಿಷೇಧಸಿ ।**
**ಮಾಮೇವಮುಕ್ತವಾಂಸ್ತಸ್ಮಾತ್ತಮೋಧೀರ್ಘಂ ಪ್ರವೇಕ್ಷ್ಯಸಿ ||೪೧||**

**ತತೋ ದೀರ್ಘತಮಾ ನಾಮ ಶಾಪಾದೃಷಿರಜಾಯತ ।**
**ಅಥೌಶಿಜೋ ಬೃಹತ್ಕೀರ್ತಿರ್ಬೃಹಸ್ಪತಿರಿವೌಜಸಾ ||೪೨||**

**ಊರ್ಧ್ವರೇತಾಸ್ತತೋಽಸೌ ವೈ ವಸತೇ ಭ್ರಾತುರಾಶ್ರಮೇ ।**
**ಸ ಧರ್ಮಾನ್ ಸೌರಭೇಯಾಂಸ್ತು ವೃಷಭಾಚ್ಛ್ರುತವಾಂಸ್ತತಃ ||೪೩||**

**ತಸ್ಯ ಭ್ರಾತಾ ಪಿತೃವ್ಯೋ ಯಶ್ಚಕಾರ ಭರಣಂ ತದಾ ।**
**ತಸ್ಮಿನ್ನಿವಸತಸ್ತಸ್ಯ ಯದೃಚ್ಛಯಾಗತೋ ವೃಷಃ ||೪೪||**

**ಯಜ್ಞಾರ್ಥಮಾಹೃತಾನ್ ದರ್ಭಾಂಶ್ಚಚಾರ ಸುರಭೀಸುತಃ ।**
**ಜಗ್ರಾಹ ತಂ ದೀರ್ಘತಮಾಃ ಶೃಂಗಯೋಸ್ತು ಚತುಷ್ಪದಂ ||೪೫||**

---

೪೧. "ಇನ್ನೂ ನೀನು ಗರ್ಭದಲ್ಲಿರುವೆ. ಆಗಲೇ ಇಂತಹ ಸಮಯದಲ್ಲಿ ನನ್ನನ್ನು ತಡೆಯುತ್ತೀಯೆ. ಅಷ್ಟೇ ಅಲ್ಲ; ನನಗೆ ಹೀಗೆ ಹೇಳಿವೆ. ಆದುದರಿಂದ ನೀನು ಚಿರಕಾಲ ಕತ್ತಲೆಯಲ್ಲೇ ಇರು ಎಂದರೆ ಕುರುಡನಾಗು."

೪೨. ತರುವಾಯ ಶಾಪದಿಂದ ದೀರ್ಘತಮಸ್ಸೆಂಬ ಋಷಿಯು ಹುಟ್ಟಿದನು. ಉಶಿಜಪುತ್ರನಾದ ಅವನು ಬೃಹಸ್ಪತಿಯಂತೆ ತೇಜಸ್ವಿಯೂ ಅತಿಶಯಕೀರ್ತಿಶಾಲಿಯೂ ಆದನು.

೪೩. ಬಳಿಕ ಇವನು ಜಿತೇಂದ್ರಿಯನಾಗಿ ತನ್ನ ಸಹೋದರನ ಆಶ್ರಮದಲ್ಲಿ ವಾಸಿಸುತ್ತ ವೃಷಭದಿಂದ ಗೋಧರ್ಮಗಳನ್ನು ಕೇಳಿ ತಿಳಿದುಕೊಂಡನು.

೪೪. ಅವನ ಚಿಕ್ಕಪ್ಪನ ಮಗನು ಅವನನ್ನು ಸಾಕುತ್ತಿದ್ದನು. ಅವನ ಆಶ್ರಮದಲ್ಲಿ ವಾಸಿಸುತ್ತಿರುವಾಗ ಇದ್ದಕ್ಕಿದ್ದಂತೆ ಒಂದು ಎತ್ತು ಬಂದಿತು.

೪೫. ಯಜ್ಞಕ್ಕೋಸ್ಕರವಾಗಿ ತಂದಿದ್ದ ದರ್ಭೆಗಳನ್ನು ಕಾಮಧೇನು ಪುತ್ರನಾದ ಆ ಎತ್ತು ತಿಂದುಬಿಟ್ಟಿತು. ದೀರ್ಘತಮನು ಅದರ ಕೊಂಬುಗಳೆರಡನ್ನೂ ಹಿಡಿದುಕೊಂಡನು.

**ತೇನಾಸೌ ನಿಗೃಹೀತಶ್ಚ ನ ಚಚಾಲ ಪದಾತ್ಪದಂ।**
**ತತೋಽಬ್ರವೀದ್ವೃಷಸ್ತಂ ವೈ ಮುಂಚ ಮಾಂ ಬಲಿನಾಂ ವರ ॥೪೬॥**

**ನ ಮಯಾಽಽಸಾದಿತಸ್ತಾತ ಬಲವಾಂಸ್ತ್ವತ್ಸಮಃ ಕ್ವಚಿತ್ ।**
**ಮಮ ಚಾನ್ಯಃ ಸಮೋ ವಾಪಿ ನ ಹಿ ಮೇ ಬಲಸಂಖ್ಯಯಾ।**
**ಮುಂಚ ತಾತೇತಿ ಚ ಪುನಃ ಪ್ರೀತಸ್ತೇಽಹಂ ವರಂ ವೃಣು ॥೪೭॥**

**ಏವಮುಕ್ತೋಽಬ್ರವೀದೇನಂ ಜೀವನ್ಮೇ ತ್ವಂ ಕ್ವ ಯಾಸ್ಯಸಿ ।**
**ಏಷ ತ್ವಾಂ ನ ವಿಮೋಕ್ಷ್ಯಾಮಿ ಪರಸ್ವಾದಂ ಚತುಷ್ಪದಂ ॥೪೮॥**

**॥ ವೃಷಭ ಉವಾಚ ॥**

**ನಾಸ್ಮಾಕಂ ವಿದ್ಯತೇ ತಾತ ಪಾತಕಂ ಸ್ತೇಯಮೇವ ಚ।**
**ಭಕ್ಷ್ಯಾಭಕ್ಷ್ಯಂ ತಥಾ ಚೈವ ಪೇಯಾಪೇಯಂ ತಥೈವ ಚ ॥೪೯॥**

---

೪೬. ಅವನ ಹಿಡಿತಕ್ಕೆ ಸಿಕ್ಕಿದ ಆ ಪ್ರಾಣಿ ಒಂದು ಹೆಜ್ಜೆಯನ್ನೂ ಸಹ ಮುಂದೆ ಇಡಲಾರದೆ ಹೋಯಿತು. ಬಳಿಕ ಅವನನ್ನು ನೋಡಿ ಅದು ಇಂತೆಂದಿತು. " ಬಲಿಷ್ಠನೇ, ನನ್ನನ್ನು ಬಿಡು.

೪೭. ಅಪ್ಪಾ, ನಿನ್ನಂತಹ ಬಲಶಾಲಿಯನ್ನು ನಾನೆಲ್ಲೂ ಕಂಡಿಲ್ಲ. ಈ ವರೆಗೆ ನನಗೂ ಸಹ ಬಲದಲ್ಲಿ ಸಮನಾದವನು ಯಾವನೂ ಇರಲಿಲ್ಲ. ಮತ್ತೆ ಬೇಡುವೆನು. ನನ್ನನ್ನು ಬಿಡು; ತಂದೇ, ನಿನ್ನಲ್ಲಿ ನಾನು ಪ್ರೀತನಾಗಿರುವೆನು. ಬೇಕಾದ ವರವನ್ನು ಬೇಡು.''

೪೮. ಎತ್ತು ಇಂತೆನಲು ದೀರ್ಘತಮಸ್ಸು ಅದರೊಡನೆ ಹೇಳಿದನು. "ಎಲೈ ಪಶೂ, ನನ್ನ ಕೈಯಿಂದ ಬದುಕಿಕೊಂಡು ನೀನೆಲ್ಲಿಗೆ ಹೋಗುವೆ? ಕಂಡವರ ಪದಾರ್ಥವನ್ನು ತಿಂದ ನಿನ್ನನ್ನು ನಾನೇನೂ ಬಿಡುವುದಿಲ್ಲ.''

೪೯. ಎತ್ತು ಹೇಳಿತು. "ಅಪ್ಪಾ, ನಮಗೆ ಪಾಪವಿಲ್ಲ; ಕಳ್ಳತನವೆಂಬುದೂ ಇಲ್ಲ. ಇವನ್ನು ತಿನ್ನಬಹುದು, ಇದನ್ನು ಕೂಡದು; ಇದನ್ನು ಕುಡಿಯಬಹುದು, ಇವನ್ನು ಬಾರದು ಎಂಬ ನಿಯಮವೂ ಸಹ ಇಲ್ಲ.

ದ್ವಿಪದಾಂ ಬಹವೋ ಹ್ಯೇತೇ ಧರ್ಮಾ ಏಷ ಗವಾಂ ಸ್ಮೃತಃ।
ಕಾರ್ಯಾಕಾರ್ಯೇ ನ ವಾ ಗಮ್ಯಾಗಮನಂ ಚ ತಥೈವ ಚ ॥೫೦॥

॥ ಸೂತ ಉವಾಚ ॥

ಗವಾಂ ಧರ್ಮಂ ತು ವೈ ಶ್ರುತ್ವಾ ಸಂಭ್ರಾಂತಸ್ತು ವಿಸೃಜ್ಯ ತಂ।
ಶಕ್ತ್ಯಾನ್ನಪಾನದಾನಾತ್ತು ಗೋಪತಿಂ ಸಂಪ್ರಸಾದಯತ್ ॥೫೧॥

ಪ್ರಸಾದಿತೇ ಗತೇ ತಸ್ಮಿನ್ ಗೋಧರ್ಮಂ ಭಕ್ತಿತಸ್ತು ಸಃ।
ಮನಸೈವ ಸಮಾದಧ್ಯೌ ತನ್ನಿಷ್ಠಸ್ತತ್ಪರೋ ಹಿ ಸಃ ॥೫೨॥

ತತೋ ಯವೀಯಸಃ ಪತ್ನೀಂ ಗೌತಮಸ್ಯಾಭ್ಯಪದ್ಯತ।
ಕೃತಾವಲೇಪಾಂ ತಾಂ ಮತ್ವಾ ಸೋಽನಡ್ವಾನಿವ ನ ಕ್ಷಮೇ ॥೫೩॥

---

೫೦. ಈ ನಿಯಮಗಳನ್ನು ಆಚರಿಸುವುದು ಮನುಷ್ಯರ ಧರ್ಮ. ಇದನ್ನು ಮಾಡಬೇಕು; ಇದನ್ನು ಮಾಡಬಾರದು. ಇಲ್ಲಿಗೆ ಹೋಗಬೇಕು; ಇಲ್ಲಿಗೆ ಹೋಗಬಾರದು ಎಂಬ ವಿವೇಚನವಿಲ್ಲದಿರುವುದೇ ಗೋಧರ್ಮವು."

೫೧. ಸೂತ ಪೌರಾಣಿಕನು ಹೇಳಿದನು.—ಗೋವುಗಳ ಧರ್ಮವನ್ನು ಕೇಳಿ ದೀರ್ಘತಮನು ಬೆರಗಾಗಿ ಅದನ್ನು ಬಿಟ್ಟುಬಿಟ್ಟನು. ತನ್ನ ಕೈಲಾದಷ್ಟು ಆಹಾರವನ್ನೂ ನೀರನ್ನೂ ಕೊಟ್ಟು ಅದನ್ನು ಉಪಚರಿಸಿದನು.

೫೨. ಎತ್ತು ಸಮಾಧಾನಗೊಂಡು ಹೊರಟುಹೋಯಿತು. ಅವನು ಭಕ್ತಿಯಿಂದ ಗೋಧರ್ಮವನ್ನು ಮನಸ್ಸಿನಲ್ಲಿ ಅನುಸಂಧಾನಮಾಡುತ್ತಾ ಅದನ್ನೇ ನಿಷ್ಠೆಯಿಂದ ಆಚರಿಸತೊಡಗಿದನು.

೫೩. ಬಳಿಕ ಗೌತಮನೆಂಬ ತನ್ನ ತಮ್ಮನ ಪತ್ನಿಯ ಬಳಿಗೆ ಹೋದನು. ಅವಳು ಅವನನ್ನು ಅಲಕ್ಷ್ಯವಾಗಿ ಕಂಡಳು. ಅದನ್ನು ನೋಡಿ ಅವನು ಎತ್ತಿನಂತೆಯೇ ತಾಳ್ಮೆಗೆಟ್ಟನು.

**ಗೋಧರ್ಮಂ ತು ಪರಂ ಮತ್ವಾ ಸ್ನುಷಾಂ ತಾಮಭ್ಯಪದ್ಯತ ।**
**ನಿರ್ಭರ್ತ್ಸ್ಯ ಚೈನಂ ರುದ್ಧ್ವಾ ಚ ಬಾಹುಭ್ಯಾಂ ಸಂಪ್ರಗೃಹ್ಯ ಚ ॥೫೪॥**
**ಭಾವ್ಯಮರ್ಥಂ ತು ತಂ ಜ್ಞಾತ್ವಾ ಮಹಾತ್ಮ್ಯಾತ್ತಮುವಾಚ ಸಾ ।**
**ವಿಪರ್ಯಯಂ ತು ತ್ವಂ ಲಬ್ಧ್ವಾ ಅನಡ್ವಾನಿವ ವರ್ತಸೇ ॥೫೫॥**
**ಗಮ್ಯಾಗಮ್ಯಂ ನ ಜಾನೀಷೇ ಗೋಧರ್ಮಾತ್ಪ್ರಾರ್ಥಯನ್ ಸುತಾಂ ।**
**ದುರ್ವೃತ್ತಂ ತ್ವಾಂ ತ್ಯಜಾಮ್ಯದ್ಯ ಗಚ್ಛ ತ್ವಂ ಸ್ವೇನ ಕರ್ಮಣಾ ॥೫೬॥**
**ಕಾಷ್ಠೇ ಸಮುದ್ಗೇ ಪ್ರಕ್ಷಿಪ್ಯ ಗಂಗಾಂಭಸಿ ಸಮುತ್ಸೃಜತ್ ।**
**ತಸ್ಮಾತ್ತ್ವಮಂಧೋ ವೃದ್ಧಶ್ಚ ಭರ್ತವ್ಯೋ ದುರಧಿಷ್ಠಿತಃ ॥೫೭॥**
**ತಮುಹ್ಯಮಾನಂ ವೇಗೇನ ಸ್ರೋತಸೋಽಭ್ಯಾಶಮಾಗತಃ ।**
**ಜಗ್ರಾಹ ತಂ ಸ ಧರ್ಮಾತ್ಮಾ ಬಲಿರ್ವೈರೋಚನಿಸ್ತದಾ ॥೫೮॥**

---

೫೪. ಗೋಧರ್ಮವೇ ಶ್ರೇಷ್ಠವೆಂದು ತಿಳಿದು ಸೊಸೆಯಂತಿದ್ದ ತನ್ನ ತಮ್ಮನ ಹೆಂಡತಿಯ ಬಳಿಗೆ ಮತ್ತೆ ಹೋದನು. ಅವಳು ಅವನನ್ನು ಬೈದು ತೋಳುಗಳಿಂದ ಬಿಗಿಯಾಗಿ ಹಿಡಿದು ನಿಲ್ಲಿಸಿದಳು. ಮುಂದೆ ಒದಗಬೇಕಾಗಿರುವ ವೃತ್ತಾಂತವನ್ನು ತನ್ನ ಮಹಿಮೆಯಿಂದ ಅರಿತು ಅವನಿಗಿಂತೆಂದಳು.

೫೫-೫೬. "ನಿನಗೆ ಬುದ್ಧಿ ತಲೆಕೆಳಕಾಗಿದೆ. ಎತ್ತಿನಂತೆ ವರ್ತಿಸುತ್ತೀಯೆ. ಹೋಗಬಹುದಾದ ಅಥವಾ ಹೋಗಬಾರದ ಸ್ಥಳವು ಕೂಡ ನಿನಗೆ ಗೊತ್ತಿಲ್ಲ. ಗೋಧರ್ಮವನ್ನಾಶ್ರಯಿಸಿ ನಿನ್ನ ಮಗಳಂತಿರುವ ನನ್ನನ್ನು ಸೇರಬಯಸುತ್ತೀಯೆ. ನಡತೆಗೆಟ್ಟ ನಿನ್ನನ್ನು ಈಗಲೇ ತೊಲಗಿಸುತ್ತೇನೆ. ನಿನ್ನ ಕರ್ಮಾನುಸಾರವಾಗಿ ಹೋಗು.

೫೭. ಆದುದರಿಂದ ನೀನು ಕುರುಡನೂ ಮುದುಕನೂ ಆಗಿ ಕಷ್ಟಕ್ಕೆ ನೆಲೆಯೆನಿಸು. ಇತರರು ನಿನ್ನನ್ನು ಸಲಹುವಂತಾಗಲಿ" ಎಂದು ಹೇಳಿ, ಅವನನ್ನು ಮರದ ಪೆಟ್ಟಿಗೆಯಲ್ಲಿ ಹಾಕಿ ಗಂಗಾನದಿಯ ನೀರಿನಲ್ಲಿ ತೇಲಿಬಿಟ್ಟಳು.

೫೮. ಧರ್ಮಾತ್ಮನೂ ವಿರೋಚನನ ಪುತ್ರನೂ ಆದ ಬಲಿಚಕ್ರವರ್ತಿಯು ಗಂಗಾನದಿಯ ಬಳಿಗೆ ಬಂದಿದ್ದನು. ಪ್ರವಾಹದ ವೇಗದಿಂದ ತೇಲಿಹೋಗುತ್ತಿದ್ದ ಆ ಪೆಟ್ಟಿಗೆಯನ್ನು ಅವನು ಹಿಡಿದುಕೊಂಡನು.

ಅಂತಃಪುರೇ ಜುಗೋಪೈನಂ ಭಕ್ಷ್ಯಭೋಜ್ಯೈಶ್ಚ ತರ್ಪಯನ್ ।
ಪ್ರೀತಶ್ಚೈವಂ ವರೇಣೈವ ಚ್ಛಂದಯಾಮಾಸ ವೈ ಬಲಿಂ ॥೫೯॥

ತಸ್ಮಾಚ್ಚ ಸ ವರಂ ವವ್ರೇ ಪುತ್ರಾರ್ಥೇ ದಾನವರ್ಷಭಃ ।
ಸಂತಾನಾರ್ಥಂ ಮಹಾಭಾಗ ಭಾರ್ಯಾಯಾಂ ಮಮ ಮಾನದ ।
ಪುತ್ರಾನ್ ಧರ್ಮಾರ್ಥತತ್ವಜ್ಞಾನುತ್ಪಾದಯಿತುಮರ್ಹಸಿ ॥೬೦॥

ಏವಮುಕ್ತೋಽಥ ದೇವರ್ಷಿಸ್ತಥಾಸ್ತ್ವಿತ್ಯುಕ್ತವಾನ್ ಪ್ರಭುಃ ।
ಸ ತಸ್ಯ ರಾಜಾ ಸ್ವಾಂ ಭಾರ್ಯಾಂ ಸುದೇಷ್ಣಾಂ ನಾಮ ಪ್ರಾಹಿಣೋತ್ ।
ಅಂಧಂ ವೃದ್ಧಂ ಚ ತಂ ಜ್ಞಾತ್ವಾ ನ ಸಾ ದೇವೀ ಜಗಾಮ ಹ ॥೬೧॥

ಶೂದ್ರಾಂ ಧಾತ್ರೇಯಿಕಾಂ ತಸ್ಮಾವಂಧಾಯ ಪ್ರಾಹಿಣೋತ್ತದಾ ।
ತಸ್ಯಾಂ ಕಾಕ್ಷೀವದಾದೀಂಶ್ಚ ಶೂದ್ರಯೋನಾವೃಷಿರ್ವಶೀ ॥೬೨॥

---

೫೯. ಭಕ್ಷ್ಯಭೋಜ್ಯಗಳಿಂದ ತೃಪ್ತಿಪಡಿಸುತ್ತ ಅವನನ್ನು ಅಂತಃಪುರದಲ್ಲಿ ರಕ್ಷಿಸುತ್ತಿದ್ದನು. ಋಷಿಯು ಇದರಿಂದ ಪ್ರೀತನಾಗಿ ಇಷ್ಟವಾದ ವರವನ್ನು ಬೇಡುವಂತೆ ಬಲಿಗೆ ಹೇಳಿದನು.

೬೦. ದಾನವಶ್ರೇಷ್ಠನಾದ ಬಲಿಯು ಅವನಿಂದ ಸಂತಾನಾರ್ಥವಾಗಿ ವರವನ್ನು ಬೇಡಿದನು. "ಮಹಾಮಹಿಮನೇ, ನನ್ನ ವಂಶವು ಬೆಳೆಯುವುದಕ್ಕಾಗಿ ನನ್ನ ಭಾರ್ಯೆಯಲ್ಲಿ ಧರ್ಮಾರ್ಥಗಳ ರಹಸ್ಯವನ್ನು ಬಲ್ಲ ಮಕ್ಕಳನ್ನು ಉತ್ಪಾದನಮಾಡಿ ನನ್ನ ಖ್ಯಾತಿಯನ್ನು ಹೆಚ್ಚಿಸು."

೬೧. ಬಲಿಯು ಹೀಗೆ ಬೇಡಿದ ಬಳಿಕ ಸಮರ್ಥನಾದ ಆ ದೇವರ್ಷಿಯು ಹಾಗೆಯೇ ಆಗಲೆಂದನು. ರಾಜನು ಸುದೇಷ್ಣೆಯೆಂಬ ತನ್ನ ಭಾರ್ಯೆಯನ್ನು ಅವನ ಬಳಿಗೆ ಕಳುಹಿಸಿದನು. ಅವನು ಕುರುಡನೆಂದೂ ಮುದುಕನೆಂದೂ ತಿಳಿದು ಆ ರಾಣಿಯು ಹೋಗಲಿಲ್ಲ.

೬೨-೬೩. ದಾದಿಯಾದ ಶೂದ್ರಸ್ತ್ರೀಯೊಬ್ಬಳನ್ನು ಆ ಕುರುಡನ ಸಮೀಪಕ್ಕೆ ಅವಳು ಕಳುಹಿಸಿದಳು. ಧರ್ಮಾತ್ಮನೂ ಜಿತೇಂದ್ರಿಯನೂ ಆದ ಆ ಋಷಿಯು

**ಜನಯಾಮಾಸ ಧರ್ಮಾತ್ಮಾ ಶೂದ್ರಾನಿತ್ಯೇವಮಾದಿಕಾನ್ ।**
**ಉವಾಚ ತಂ ಬಲೀ ರಾಜಾ ದೃಷ್ಟ್ವಾ ಕಾಕ್ಷೀವದಾದಿಕಾನ್ ॥೬೩॥**

**॥ ರಾಜೋವಾಚ ॥**

**ಪ್ರವೀಣಾನೃಷಿಧರ್ಮಸ್ಯ ಚೇಶ್ವರಾನ್ ಬ್ರಹ್ಮವಾದಿನಃ ।**
**ವಿದುಷಃ ಸರ್ವಧರ್ಮಾಣಾಂ ಶುಚಿಮದ್ಬುದ್ಧಿಸಂಯುತಾನ್ ॥೬೪॥**

**ಮಮೈವ ಚೇತಿ ಹೋವಾಚ ತಂ ದೀರ್ಘತಮಸಂ ಬಲಿಃ ।**
**ನೇತ್ಯುವಾಚ ಮುನಿಸ್ತಂ ವೈ ಮಮೈವಮಿತಿ ಚಾಬ್ರವೀತ್ ॥೬೫॥**

**ಉತ್ಪನ್ನಾಃ ಶೂದ್ರಯೋನೌ ತು ನ ತೇ ಕ್ಷೇತ್ರೇऽಸುರೋತ್ತಮ ।**
**ಅಂಧಂ ವೃದ್ಧಂ ಚ ಮಾಂ ಜ್ಞಾತ್ವಾ ಸುದೇಷ್ಣಾ ಮಹಿಷೀ ತವ ।**
**ಪ್ರಾಹಿಣೋದವಮಾನಾನ್ಮೇ ಶೂದ್ರಾಂ ಧಾತ್ರೇಯಿಕಾಂ ನೃಪ ॥೬೬॥**

**ತತಃ ಪ್ರಸಾದಯಾಮಾಸ ಬಲಿಸ್ತಮೃಷಿಸತ್ತಮಂ ।**
**ಬಲಿಃ ಸುದೇಷ್ಣಾಂ ತಾಂ ಭಾರ್ಯಾಂ ಭರ್ತ್ಸಯಾಮಾಸ ದಾನವಃ ॥೬೭॥**

---

ಅವಳಲ್ಲಿ ಕಾಕ್ಷೀವಂತನೇ ಮೊದಲಾದ ಮಕ್ಕಳನ್ನು ಪಡೆದನು. ಅವರು ಶೂದ್ರಾದಿಗಳು. ಆ ಮಕ್ಕಳನ್ನು ನೋಡಿ ಬಲಿರಾಜನು ಋಷಿಗೆ ಹೇಳಿದನು.

೬೪–೬೫. ರಾಜನು ಹೇಳಿದನು.—“ಋಷಿಧರ್ಮದಲ್ಲಿ ಪ್ರವೀಣರೂ, ಪ್ರಭುಗಳೂ, ಬ್ರಹ್ಮಜ್ಞಾನಿಗಳೂ, ಸರ್ವಧರ್ಮಗಳನ್ನು ಬಲ್ಲವರೂ, ಬುದ್ಧಿವಂತರೂ, ಶುಚಿಗಳೂ ಆದ ಇವರು ನನ್ನ ಮಕ್ಕಳೇ ಸರಿ” ಎಂದು ಬಲಿನೃಪತಿಯು ದೀರ್ಘತಮಸ್ಸಿಗೆ ಹೇಳಿದನು.” “ಅಲ್ಲ; ಇವರು ನನ್ನವರು, ಖಂಡಿತ” ಎಂದು ಮುನಿಯು ಉತ್ತರವಿತ್ತನು.

೬೬. “ಇವರು ಶೂದ್ರಯೋನಿಯಲ್ಲಿ ಜನಿಸಿದವರು; ನಿನ್ನ ಹೆಂಡತಿಯಲ್ಲ. ಎಲೈ ಬಲಿಚಕ್ರವರ್ತಿಯೇ, ನನ್ನನ್ನು ಕುರುಡನೆಂದೂ ಮುದುಕನೆಂದೂ ತಿಳಿದು ನಿನ್ನ ರಾಣಿಯಾದ ಸುದೇಷ್ಣೆಯು ನನ್ನಲ್ಲಿ ತಿರಸ್ಕಾರಬುದ್ಧಿಯಿಂದ ತನ್ನ ದಾಸಿಯಾದ ಶೂದ್ರಸ್ತ್ರೀಯನ್ನು ನನ್ನಲ್ಲಿಗೆ ಕಳುಹಿಸಿದಳು.”

೬೭. ಬಳಿಕ ದಾನವಚಕ್ರವರ್ತಿಯಾದ ಬಲಿಯು ಆ ಋಷಿವರ್ಯನನ್ನು ಸಂತೈಸಿ, ತನ್ನ ಭಾರ್ಯೆಯಾದ ಸುದೇಷ್ಣೆಯನ್ನು ಜರೆದನು.

ಪುನಶ್ಚೈನಾಮಲಂಕೃತ್ಯ ಋಷಯೇ ಪ್ರತ್ಯಪಾದಯತ್ ।
ತಾಂ ಸ ದೀರ್ಘತಮಾ ದೇವೀಂ ತಥಾ ಕೃತವತೀಂ ತದಾ ॥೬೮॥

ದಧ್ನಾ ಲವಣಮಿಶ್ರೇಣ ತ್ವಭ್ಯಕ್ತಂ ಮಧುಕೇನ ತು ।
ಲಿಹ ಮಾಮಜುಗುಪ್ಸಂತೀ ಆಪಾದತಲಮಸ್ತಕಂ ।
ತತಸ್ತ್ವಂ ಪ್ರಾಪ್ಸ್ಯಸೇ ದೇವಿ ಪುತ್ರಾನ್ಸ್ವೈ ಮನಸೇಪ್ಸಿತಾನ್ ॥೬೯॥

ತಸ್ಯ ಸಾ ತದ್ವಚೋ ದೇವೀ ಸರ್ವಂ ಕೃತವತೀ ತದಾ ।
ತಸ್ಯ ಸಾಽಪಾನಮಾಸಾದ್ಯ ದೇವೀ ಪರ್ಯಹರತ್ತದಾ ॥೭೦॥

ತಾಮುವಾಚ ತತಃ ಸೋಽಥ ಯತ್ತೇ ಪರಿಹೃತಂ ಶುಭೇ ।
ವಿನಾಽಪಾನಂ ಕುಮಾರಂ ತು ಜನಯಿಷ್ಯಸಿ ಪೂರ್ವಜಂ ॥೭೧॥

॥ ಸುದೇಷ್ಣೋವಾಚ ॥

ನಾರ್ಹಸಿ ತ್ವಂ ಮಹಾಭಾಗ ಪುತ್ರಂ ಮೇ ದಾತುಮೀದೃಶಂ ।
ತೋಷಿತಶ್ಚ ಯಥಾಶಕ್ತಿ ಪ್ರಸಾದಂ ಕುರು ಮೇ ಪ್ರಭೋ ॥೭೨॥

---

೬೮. ಪುನಃ ಅವಳನ್ನು ಅಲಂಕರಿಸಿ ಋಷಿಗೆ ಒಪ್ಪಿಸಿದನು. ಹೀಗೆ ಭೂಷಿತಳಾಗಿ ತನ್ನ ಬಳಿಗೆ ಬಂದ ದೇವಿಯನ್ನು ನೋಡಿ ದೀರ್ಘತಮನು ಇಂತು ಹೇಳಿದನು.

೬೯. "ದೇವೀ, ಉಪ್ಪು ಬೆರೆತ ಮೊಸರನ್ನೂ ಜೇನುತುಪ್ಪವನ್ನೂ ನನ್ನ ಶರೀರಕ್ಕೆ ಲೇಪನಮಾಡಿ, ಅಸಹ್ಯಪಟ್ಟುಕೊಳ್ಳದೆ ಕಾಲಿನಿಂದ ತಲೆಯವರೆಗೂ ನೆಕ್ಕು. ಬಳಿಕ ನಿನ್ನ ಮನಸ್ಸಿಗೆ ಒಪ್ಪುವಂತಹ ಪುತ್ರರನ್ನು ಪಡೆಯುವೆ."

೭೦. ರಾಣಿಯು ಆ ಮುನಿಯ ಮಾತಿನಂತೆ ಎಲ್ಲವನ್ನೂ ನಡೆಸಿದಳು. ನೆಕ್ಕುತ್ತಿರುವಾಗ ಅಪಾನಸ್ಥಲವು ಸಿಕ್ಕಲು ಅದನ್ನು ಅವಳು ಬಿಟ್ಟುಬಿಟ್ಟಳು.

೭೧. "ಶುಭಾಂಗೀ, ನೀನು ನನ್ನ ಯಾವ ಅವಯವವನ್ನು ನೆಕ್ಕದೆ ಬಿಟ್ಟಿಯೋ ಆ ಅಪಾನಸ್ಥಲವು ಇಲ್ಲದಿರುವ ಕುಮಾರನು ನಿನಗೆ ಹಿರಿಯಮಗನಾಗಿ ಹುಟ್ಟುವನು" ಎಂದು ಋಷಿಯು ಹೇಳಿದನು.

೭೨. ಸುದೇಷ್ಣೆ ಹೇಳಿದಳು.—"ಓ ಮಹಾನುಭಾವಾ, ನನಗೆ ಇಂತಹ ಮಗನನ್ನು ಕೊಡಬೇಡ. ನನ್ನ ಕೈಲಾದಷ್ಟುಮಟ್ಟಿಗೆ ನಿನ್ನನ್ನು ತೃಪ್ತಿಪಡಿಸಿದ್ದೇನೆ. ಪ್ರಭೂ, ನನ್ನಲ್ಲಿ ಅನುಗ್ರಹವನ್ನು ತೋರಿಸು."

|| ದೀರ್ಘತಮಾ ಉವಾಚ ||

ತವಾಪಚಾರಾದ್ದೇವ್ಯೇಷ ನಾನ್ಯಥಾ ಭವಿತಾ ಶುಭೇ ।
ನೈವ ದಾಸ್ಯತಿ ಪುತ್ರಸ್ತೇ ಪೌತ್ರೋ ವೈ ದಾಸ್ಯತೇ ಫಲಂ ||೭೩||

ತಸ್ಯಾಽಪಾನಂ ವಿನಾ ಚೈವ ಯೋಗ್ಯಭಾವೋ ಭವಿಷ್ಯತಿ ।
ತಸ್ಮಾದ್ದೀರ್ಘತಮಾಂಗೇಷು ಕುಕ್ಷೌ ಸ್ಪೃಷ್ಟ್ವೇದಮಬ್ರವೀತ್ ||೭೪||

ಪ್ರಾಶಿತಂ ಯದ್ಯದಂಗೇಷು ನ ಸೋಪಸ್ಥಂ ಶುಚಿಸ್ಮಿತೇ ।
ತೇನ ತಿಷ್ಠಂತಿ ತೇ ಗರ್ಭೇ ಪೌರ್ಣಮಾಸ್ಯಾಮಿವೋಡುರಾಟ್ ||೭೫||

ಭವಿಷ್ಯಂತಿ ಕುಮಾರಾಸ್ತು ಪಂಚ ದೇವಸುತೋಪಮಾಃ ।
ತೇಜಸ್ವಿನಃ ಸುವೃತ್ತಾಶ್ಚ ಯಜ್ವಾನೋ ಧಾರ್ಮಿಕಾಶ್ಚ ತೇ ||೭೬||

---

೭೩. ದೀರ್ಘತಮಸ್ಸು ಹೇಳಿದನು.—“ ದೇವೀ, ಎಲೌ ಮಂಗಳಾಂಗೀ, ನಿನ್ನ ತಪ್ಪಿನಿಂದ ಹೀಗಾಯಿತು. ನನ್ನ ಮಾತು ವ್ಯತ್ಯಾಸವಾಗಲಾರದು. ಮಗನಿಂದ ನಿನಗೆ ಯಾವ ಫಲವೂ ಇಲ್ಲ; ಆದರೆ ನಿನ್ನ ಮೊಮ್ಮಗನು ನಿನಗೆ ಇಷ್ಟಾರ್ಥವನ್ನು ಸಲ್ಲಿಸುವನು.

೭೪. ಅವನಿಗೆ ಅಪಾನವು ಇಲ್ಲದ್ದಿದ್ದರೂ ಬಾಳ್ವಿಕೆಯು ಸರಿಯಾಗಿಯೇ ಇರುವುದು.” ಬಳಿಕ ದೀರ್ಘತಮಸ್ಸು ಅವಳ ಹೊಟ್ಟೆಯನ್ನು ಮುಟ್ಟಿ ಇಂತು ಹೇಳಿದನು.

೭೫. “ ಎಲೌ ಮಂದಹಾಸಿನೀ, ನೀನು ನನ್ನ ಉಪಸ್ಥಾವಯವವೊಂದನ್ನು ಬಿಟ್ಟು ಮಿಕ್ಕ ಅಂಗಗಳೆಲ್ಲವನ್ನೂ ನೆಕ್ಕಿದೆ. ಆದುದರಿಂದ ಹುಣ್ಣಿಮೆಯಲ್ಲಿ ಚಂದ್ರನು ಉದಿಸುವಂತೆ ನಿನ್ನ ಗರ್ಭದಲ್ಲಿ ಮಕ್ಕಳು ಜನಿಸುವರು.

೭೬. ದೇವಕುಮಾರರಿಗೆ ಸದೃಶರಾದ ಐವರು ಪುತ್ರರು ನಿನಗೆ ಹುಟ್ಟುವರು. ಅವರು ತೇಜಸ್ವಿಗಳು; ಒಳ್ಳೆಯ ನಡತೆವಂತರು; ಯಾಗಮಾಡುವವರು, ಮತ್ತು ಧಾರ್ಮಿಕರು.

ಅಧ್ಯಾಯ ೪೮

॥ ಸೂತ ಉವಾಚ ॥

ತದಂಶಸ್ತು ಸುದೇಷ್ಣಾಯಾ ಜ್ಯೇಷ್ಠಃ ಪುತ್ರೋ ವ್ಯಜಾಯತ ।
ಅಂಗಸ್ತಥಾ ಕಲಿಂಗಶ್ಚ ಪುಂಡ್ರಃ ಸುಹ್ಮಸ್ತಥೈವ ಚ ॥೭೭॥

ವಂಗರಾಜಸ್ತು ಪಂಚೈತೇ ಬಲೇಃ ಪುತ್ರಾಸ್ತು ಕ್ಷೇತ್ರಜಾಃ ।
ಇತ್ಯೇತೇ ದೀರ್ಘತಮಸಾ ಬಲೇರ್ದತ್ತಾಃ ಸುತಾಸ್ತಥಾ ॥೭೮॥

ಪ್ರತಿಷ್ಠಾಮಾಗತಾನಾಂ ಹಿ ಬ್ರಾಹ್ಮಣ್ಯಂ ಕಾರಯಂಸ್ತತಃ ।
ತತೋ ಮಾನುಷಯೋನ್ಯಾಂ ಸ ಜನಯಾಮಾಸ ವೈ ಪ್ರಜಾಃ ॥೭೯॥

ತತಸ್ತಂ ದೀರ್ಘತಮಸಂ ಸುರಭಿರ್ವಾಕ್ಯಮಬ್ರವೀತ್ ।
ವಿಚಾರ್ಯ ಯಸ್ಮಾದ್ಗೋಧರ್ಮಂ ಪ್ರಮಾಣಂ ತೇ ಕೃತಂ ವಿಭೋ ॥೮೦॥

ಭಕ್ತ್ಯಾ ಚಾನನ್ಯಯಾಸ್ಮಾಸು ತೇನ ಪ್ರೀತಾಸ್ಮಿತೇಽನಘ ।
ತಸ್ಮಾತ್ತುಭ್ಯಂ ತಮೋ ದೀರ್ಘಮಾಘ್ರಾಯಾಪನುದಾಮಿ ವೈ ॥೮೧॥

---

೭೭-೭೮. ಸೂತಪೌರಾಣಿಕನು ಹೇಳಿದನು.—ಆ ಮುನಿಯ ಅಂಶದಿಂದ ಸುದೇಷ್ಣೆಯಲ್ಲಿ ಜ್ಯೇಷ್ಠನಾದ ಅಂಗರಾಜನೂ, ಕಲಿಂಗ, ಪುಂಡ್ರ, ಸುಹ್ಮ, ವಂಗ ಎಂಬ ಮಿಕ್ಕ ನಾಲ್ವರೂ ಜನಿಸಿದರು. ಈ ಐದು ಜನ ಮಕ್ಕಳನ್ನೂ ಬಲಿ ಚಕ್ರವರ್ತಿಗೆ ದೀರ್ಘತಮಸ್ಸು ಉತ್ಪಾದನಮಾಡಿಕೊಟ್ಟನು.

೭೯. ಉಪನಯನಾರ್ಹತೆಯನ್ನು ಪಡೆದ ಬಳಿಕ ಅವರಿಗೆ ಬ್ರಾಹ್ಮಣ್ಯಸಿದ್ಧಿಗೆ ತಕ್ಕ ಸಂಸ್ಕಾರಗಳನ್ನು ಮಾಡಿಸಿದನು. ಹೀಗೆ ಬಲಿಚಕ್ರವರ್ತಿಯು ಮನುಷ್ಯ ಸ್ತ್ರೀಯಲ್ಲಿ ಸಂತತಿಯನ್ನು ಪಡೆದನು.

೮೦-೮೧. ಬಳಿಕ ಕಾಮಧೇನುವು ದೀರ್ಘತಮಸ್ಸಿಗಿಂತೆಂದಳು. “ಎಲೈ ಪೂಜ್ಯನೇ, ನೀನು ವಿಚಾರಮಾಡಿ ಗೋಧರ್ಮವೇ ಪ್ರಮಾಣವೆಂದು ನಂಬಿದೆ. ನಮ್ಮಲ್ಲಿ ದೃಢವಾದ ಭಕ್ತಿಯನ್ನು ಪ್ರಕಟಿಸಿದೆ. ಓ ಪಾಪರಹಿತನೇ, ನಿನ್ನಲ್ಲಿ ನಾನು ಪ್ರೀತಳಾಗಿರುವೆನು. ಆದುದರಿಂದ ನಿನ್ನನ್ನು ಆಘ್ರಾಣಮಾಡಿ ನಿನ್ನ ಕಣ್ಣಿಗೆ ಕವಿದಿರುವ ಕಗ್ಗತ್ತಲೆಯನ್ನು ಹೋಗಲಾಡಿಸುವೆನು.

**ಬಾರ್ಹಸ್ಪತ್ಯಸ್ತಥೈವೈಷ ಪಾಪ್ಮಾ ವೈ ತಿಷ್ಠತಿ ತ್ವಯಿ ।**
**ಜರಾಂ ಮೃತ್ಯುಂ ತಮಶ್ಚೈವ ಆಘ್ರಾಯಾಪನುದಾಮಿ ತೇ ॥೮೨॥**

**ಸದ್ಯಃ ಸ ಘ್ರಾತಮಾತ್ರಸ್ತು ಅಸಿತೋ ಮುನಿಸತ್ತಮಃ ।**
**ಆಯುಷ್ಮಾಂಶ್ಚ ವಪುಷ್ಮಾಂಶ್ಚ ಚಕ್ಷುಷ್ಮಾಂಶ್ಚ ತತೋಽಭವತ್ ॥೮೩॥**

**ಗೋಽಭ್ಯಾಹತೇ ತಮಸಿ ವೈ ಗೌತಮಸ್ತು ತತೋಽಭವತ್ ।**
**ಕಾಕ್ಷೀವಾಂಸ್ತು ತತೋ ಗತ್ವಾ ಸಹ ಪಿತ್ರಾ ಗಿರಿವ್ರಜಂ ॥೮೪॥**

**ದೃಷ್ಟ್ವಾ ಸ್ಪೃಷ್ಟ್ವಾ ಪಿತುರ್ವೈ ಸ ಹ್ಯುಪವಿಷ್ಟಶ್ಚಿರಂ ತಪಃ ।**
**ತತಃ ಕಾಲೇನ ಮಹತಾ ತಪಸಾ ಭಾವಿತಸ್ತು ಸಃ ॥೮೫॥**

**ವಿಧೂಯ ಮಾತೃಜಂ ಕಾಯಂ ಬ್ರಾಹ್ಮಣ್ಯಂ ಪ್ರಾಪ್ತವಾನ್ ವಿಭುಃ ।**
**ತತೋಽಬ್ರವೀತ್ಪಿತಾ ತಂ ವೈ ಪುತ್ರವಾನಸ್ಮ್ಯಹಂ ತ್ವಯಾ ॥೮೬॥**

---

೮೨. ಬೃಹಸ್ಪತಿಯ ಶಾಪದಿಂದ ಬಂದು ನಿನ್ನಲ್ಲಿ ನೆಲೆಗೊಂಡಿರುವ ಪಾಪರೂಪವಾದ ಮುಪ್ಪು, ಮೃತ್ಯು, ತಮಸ್ಸು ಎಂಬ ಈ ಮೂರನ್ನೂ ಆಘ್ರಾಣಮಾಡಿ ಕಳೆಯುವೆನು.''

೮೩. ಕಾಮಧೇನುವು ಆಘ್ರಾಣಮಾಡಿದ ಮಾತ್ರದಿಂದಲೇ ಕರಿಯ ಮೈಯ ಆ ಮುನಿವರ್ಯನು ಯುವಕನೂ, ಸುಂದರನೂ, ಕಣ್ಣುಗಳಿಂದ ನೋಡಬಲ್ಲವನೂ ಆದನು.

೮೪. ಗೋವಿನಿಂದ ಮೈಕಪ್ಪು, ಕಣ್ಣುಕತ್ತಲೆಯೂ ಹೋದ ಕಾರಣ ದೀರ್ಘತಮಸ್ಸಿಗೆ ಗೌತಮನೆಂದೂ ಹೆಸರು ಬಂದಿತು. ಬಳಿಕ ಕಾಕ್ಷೀವಂತನು ತಂದೆಯೊಡನೆ ಗಿರಿವ್ರಜಕ್ಕೆ ಹೋದನು.

೮೫. ತಂದೆಯ ಬಳಿ ಕುಳಿತು ಅವನು ಮಾಡುವ ತಪಸ್ಸನ್ನು ಗಮನಿಸುತ್ತಿದ್ದನು. ಅವನು ಹೋಮಕಾರ್ಯಕ್ಕೆ ಉಪಯೋಗಿಸುವ ಸಾಧನಗಳನ್ನು ಮುಟ್ಟಿ ನೋಡುತ್ತಿದ್ದನು. ಬಳಿಕ ಬಹಳ ಕಾಲವಾದಮೇಲೆ ತಾನೂ ಸಹ ತಪಸ್ಸು ಮಾಡಿ ಗೌರವವನ್ನು ಪಡೆದನು.

೮೬. ತಪಸ್ಸಿನಿಂದ ಶಕ್ತಿಯನ್ನು ಸಂಪಾದಿಸಿದ ಕಾಕ್ಷೀವಂತನು ತಾಯಿಯ ಸಂಬಂಧದಿಂದ ತನ್ನ ದೇಹದಲ್ಲಿ ಬಂದಿದ್ದ ಶೂದ್ರಾಂಶವನ್ನು ತೊರೆದು ಬ್ರಾಹ್ಮಣ್ಯವನ್ನು ಪಡೆದನು. " ಈಗ ನೀನು ನನಗೆ ಸತ್ಪುತ್ರನಾದೆ " ಎಂದು ತಂದೆಯು ಅವನಿಗೆ ಹೇಳಿದನು.

**ಸತ್ಪುತ್ರೇಣ ತು ಧರ್ಮಜ್ಞ ಕೃತಾರ್ಥೋಽಹಂ ಯಶಸ್ವಿನಾ ।**
**ಮುಕ್ತ್ವಾತ್ಮಾನಂ ತತೋಽಸೌ ವೈ ಪ್ರಾಪ್ತವಾನ್ ಬ್ರಹ್ಮಣಃ ಕ್ಷಯಂ ॥೮೭॥**

**ಬ್ರಾಹ್ಮಣ್ಯಂ ಪ್ರಾಪ್ಯ ಕಾಕ್ಷೀವಾನ್ ಸಹಸ್ರಮಸೃಜತ್ಸುತಾನ್ ।**
**ಕೌಷ್ಮಾಂಡಾ ಗೌತಮಾಶ್ಚೈವ ಸ್ಮೃತಾಃ ಕಾಕ್ಷೀವತಃ ಸುತಾಃ ॥೮೮॥**

**ಇತ್ಯೇಷ ದೀರ್ಘತಮಸೋ ಬಲೇರ್ವೈರೋಚನಸ್ಯ ಚ ।**
**ಸಮಾಗಮೋ ವಃ ಕಥಿತಃ ಸಂತತಿಶ್ಚೋಭಯೋಸ್ತಥಾ ॥೮೯॥**

**ಬಲಿಸ್ತಾನಭಿನಂದ್ಯಾಹ ಪಂಚ ಪುತ್ರಾನಕಲ್ಮಷಾನ್ ।**
**ಕೃತಾರ್ಥಃ ಸೋಽಪಿ ಧರ್ಮಾತ್ಮಾ ಯೋಗಮಾಯಾವೃತಃ ಸ್ವಯಂ ॥೯೦॥**

**ಅದೃಶ್ಯಃ ಸರ್ವಭೂತಾನಾಂ ಕಾಲಾಪೇಕ್ಷಃ ಸ ವೈ ಪ್ರಭುಃ ।**
**ತತ್ರಾಂಗಸ್ಯ ತು ದಾಯಾದೋ ರಾಜಾಸೀದ್ದಧಿವಾಹನಃ ॥೯೧॥**

**ದಧಿವಾಹನಪುತ್ರಸ್ತು ರಾಜಾ-ದಿವಿರಥಃ ಸ್ಮೃತಃ ।**
**ಆಸೀದ್ದಿವಿರಥಾಪತ್ಯಂ ವಿದ್ವಾನ್ ಧರ್ಮರಥೋ ನೃಪಃ ॥೯೨॥**

---

೮೭. ಓ ಧರ್ಮಜ್ಞನೇ, ಯಶಸ್ವಿಯೂ ಸತ್ಪುತ್ರನೂ ಆದ ನಿನ್ನಿಂದ ನಾನು ಕೃತಾರ್ಥನಾದೆನು" ಎಂದು ಹೇಳಿ, ಗೌತಮನು ತನ್ನ ದೇಹವನ್ನು ತೊರೆದು ಪರಬ್ರಹ್ಮದಲ್ಲಿ ಐಕ್ಯವಾದನು.

೮೮. ಕಾಕ್ಷೀವಂತನು ಬ್ರಾಹ್ಮಣ್ಯವನ್ನು ಸಂಪಾದಿಸಿ ಸಾವಿರ ಜನ ಮಕ್ಕಳನ್ನು ಪಡೆದನು. ಅವರಿಗೆ ಕೌಷ್ಮಾಂಡರು, ಗೌತಮರು ಎಂದು ಪ್ರಖ್ಯಾತಿ ಬಂದಿತು.

೮೯. ಹೀಗೆ ದೀರ್ಘತಮಸ್ಸು ಮತ್ತು ವಿರೋಚನಪುತ್ರನಾದ ಬಲಿ ಇವರಿಬ್ಬರ ಸಮಾಗಮವನ್ನೂ ಇವರ ಸಂತತಿಯನ್ನೂ ನಿಮಗೆ ಹೇಳಿರುವೆನು.

೯೦. ಧರ್ಮಾತ್ಮನಾದ ಬಲಿಚಕ್ರವರ್ತಿಯು ನಿರ್ದೋಷಿಗಳಾದ ಐವರು ಪುತ್ರರನ್ನೂ ಶ್ಲಾಘಿಸಿ, "ನಿಮ್ಮಿಂದ ನಾನು ಕೃತಾರ್ಥನಾದೆನು" ಎಂದು ಹೇಳಿ, ಯೋಗಾಭ್ಯಾಸದಲ್ಲಿ ಆಸಕ್ತನಾದನು. ಸಮರ್ಥನಾದ ಆತನು ಯಾವ ಪ್ರಾಣಿಯ ದೃಷ್ಟಿಗೂ ಬೀಳದೆ ಅನುಕೂಲ ಕಾಲವನ್ನು ನಿರೀಕ್ಷಿಸುತ್ತಿರುವನಷ್ಟೆ.

೯೧-೯೨. ಬಲಿಯ ಮಕ್ಕಳಲ್ಲಿ ಅಂಗನ ಮಗನು ದಧಿವಾಹನನೆಂಬ ರಾಜನು. ಅವನ ಮಗನಿಗೆ ದಿವಿರಥನೆಂದು ಹೆಸರು. ವಿದ್ವಾಂಸನಾದ ಧರ್ಮರಥಭೂಪಾಲನು ದಿವಿರಥನ ಪುತ್ರನೆನಿಸಿದನು.

ಸ ಹಿ ಧರ್ಮರಥಃ ಶ್ರೀಮಾಂಸ್ತೇನ ವಿಷ್ಣುಪದೇ ಗಿರೌ ।
ಸೋಮಃ ಶುಕ್ರೇಣ ವೈ ರಾಜ್ಞಾ ಸಹ ಪೀತೋ ಮಹಾತ್ಮನಾ ॥೯೩॥

ಅಥ ಧರ್ಮರಥಸ್ಯಾಭೂತ್ಪುತ್ರಶ್ಚಿತ್ರರಥಃ ಕಿಲ ।
ತಸ್ಯ ಸತ್ಯರಥಃ ಪುತ್ರಸ್ತಸ್ಮಾದ್ದಶರಥಃ ಕಿಲ ॥೯೪॥

ಲೋಮಪಾದ ಇತಿ ಖ್ಯಾತಸ್ತಸ್ಯ ಶಾಂತಾ ಸುತಾಽಭವತ್ ।
ಅಥ ದಾಶರಥಿರ್ವೀರಶ್ಚತುರಂಗೋ ಮಹಾಯಶಾಃ ॥೯೫॥

ಋಷ್ಯಶೃಂಗಪ್ರಸಾದೇನ ಜಜ್ಞೇ ಸ್ವಕುಲವರ್ಧನಃ ।
ಚತುರಂಗಸ್ಯ ಪುತ್ರಸ್ತು ಪೃಥುಲಾಕ್ಷ ಇತಿ ಸ್ಮೃತಃ ॥೯೬॥

ಪೃಥುಲಾಕ್ಷಸುತಶ್ಚಾಪಿ ಚಂಪನಾಮಾ ಬಭೂವ ಹ ।
ಚಂಪಸ್ಯ ತು ಪುರೀ ಚಂಪಾ ಪೂರ್ವಂ ಯಾ ಮಾಲಿನೀ ಭವತ್ ॥೯೭॥

---

೯೩. ಆ ಧರ್ಮರಥನು ಶ್ರೀಮಂತನೆಂದು ಪ್ರಸಿದ್ಧನಾಗಿದ್ದನು. ಅವನು ವಿಷ್ಣುಪದವೆಂಬ ಗಿರಿಯಲ್ಲಿ ಮಹಾತ್ಮನಾದ ಶುಕ್ರರಾಜನೊಡನೆ ಸೋಮರಸವನ್ನು ಪಾನಮಾಡಿದನು.

೯೪. ಧರ್ಮರಥನಿಗೆ ಚಿತ್ರರಥನೂ, ಚಿತ್ರರಥನಿಗೆ ಸತ್ಯರಥನೂ, ಅವನಿಗೆ ದಶರಥನೂ ಮಕ್ಕಳಾದರು.

೯೫. ಪ್ರಖ್ಯಾತನಾದ ಲೋಮಪಾದನಿಗೆ ಶಾಂತೆಯೆಂಬ ಮಗಳಾದಳು. ವೀರನೂ ಮಹಾಯಶಸ್ವಿಯೂ ಆದ ಚತುರಂಗನು ದಶರಥನ ಪುತ್ರನು.

೯೬. ವಂಶವರ್ಧಕನಾದ ಇವನು ಋಷ್ಯಶೃಂಗ ಮಹರ್ಷಿಯ ಅನುಗ್ರಹದಿಂದ ಜನಿಸಿದನು. ಚತುರಂಗನ ಮಗನಿಗೆ ಪೃಥುಲಾಕ್ಷನೆಂದು ಹೆಸರು.

೯೭. ಪೃಥುಲಾಕ್ಷನಿಗೆ ಚಂಪನೆಂಬವನು ಮಗನಾದನು. ಇವನ ಪಟ್ಟಣಕ್ಕೆ ಚಂಪೆಯೆಂದು ಹೆಸರಾಯಿತು. ಪೂರ್ವದಲ್ಲಿ ಇದನ್ನು ಮಾಲಿನಿ ಎಂದು ಕರೆಯುತ್ತಿದ್ದರು.

ಪೂರ್ಣಭದ್ರಪ್ರಸಾದೇನ ಹರ್ಯಂಗೋಽಸ್ಯ ಸುತೋಽಭವತ್ ।
ಯಜ್ಞೇ ವಿಭಾಂಡಕಾಚ್ಚಾಸ್ಯ ವಾರಣಃ ಶತ್ರುವಾರಣಃ ॥೯೮॥

ಅವತಾರಯಾಮಾಸ ಮಹೀಂ ಮಂತ್ರೈರ್ವಾಹನಮುತ್ತಮಂ ।
ಹರ್ಯಂಗಸ್ಯ ತು ದಾಯಾದೋ ಜಾತೋ ಭದ್ರರಥಃ ಕಿಲ ॥೯೯॥

ಅಥ ಭದ್ರರಥಸ್ಯಾಸೀದ್ಬೃಹತ್ಕರ್ಮಾ ಜನೇಶ್ವರಃ ।
ಬೃಹದ್ಭಾನುಃ ಸುತಸ್ತಸ್ಯ ತಸ್ಮಾಜ್ಜಜ್ಞೇ ಮಹಾತ್ಮವಾನ್ ॥೧೦೦॥

ಬೃಹದ್ಭಾನುಸ್ತು ರಾಜೇಂದ್ರೋ ಜನಯಾಮಾಸ ವೈ ಸುತಂ ।
ನಾಮ್ನಾ ಜಯದ್ರಥಂ ನಾಮ ತಸ್ಮಾದ್ಬೃಹದ್ರಥೋ ನೃಪಃ ॥೧೦೧॥

ಆಸೀದ್ಬೃಹದ್ರಥಾಚ್ಚೈವ ವಿಶ್ವಜಿಜ್ಜನಮೇಜಯಃ ।
ದಾಯಾದಸ್ತಸ್ಯ ಚಾಂಗೋ ವೈ ತಸ್ಮಾತ್ಕರ್ಣೋಽಭವನ್ನೃಪಃ ॥೧೦೨॥

---

೯೮. ಪೂರ್ಣಭದ್ರನೆಂಬ ಮಹರ್ಷಿಯ ಪ್ರಸಾದದಿಂದ ಇವನಿಗೆ ಹರ್ಯಂಗನೆಂಬ ಮಗನು ಹುಟ್ಟಿದನು. ಇವನು ವಿಭಾಂಡಕನನ್ನು ಪುರೋಹಿತನನ್ನಾಗಿ ವರಿಸಿ ಯಾಗಕ್ಕೆ ತೊಡಗಿದನು. ಮಂತ್ರಗಳ ಬಲದಿಂದ ಶತ್ರುನಾಶಕವೂ, ಇಂದ್ರನ ಉತ್ತಮ ವಾಹನವೂ ಆದ ಐರಾವತವು ಭೂಮಿಗೆ ಇಳಿದು ಬಂದಿತು.

೯೯-೧೦೦. ಹರ್ಯಂಗನಿಗೆ ಭದ್ರರಥನು ಪುತ್ರನಾಗಿ ಜನಿಸಿದನು. ಇವನಿಗೆ ಬೃಹತ್ಕರ್ಮನೆಂಬ ರಾಜನು ಮಗನಾದನು. ಅವನಿಗೆ ಬೃಹದ್ಭಾನುವೂ, ಬೃಹದ್ಭಾನುವಿಗೆ ಮಹಾತ್ಮವಂತನೂ ಸುತರೆನಿಸಿದರು.

೧೦೧. ರಾಜೇಂದ್ರನಾದ ಬೃಹದ್ಭಾನುವಿಗೆ ಜಯದ್ರಥನೆಂಬ ಮತ್ತೊಬ್ಬ ಮಗನಿದ್ದನು. ಅವನಿಗೆ ಬೃಹದ್ರಥನೆಂಬ ಮಗನು ಹುಟ್ಟಿದನು.

೧೦೨. ಜಗತ್ತೆಲ್ಲವನ್ನೂ ಗೆದ್ದ ಜನಮೇಜಯನೇ ಈ ಬೃಹದ್ರಥನ ಪುತ್ರನು. ಜನಮೇಜಯನಿಗೆ ಅಂಗನೂ, ಅವನಿಗೆ ಕರ್ಣಭೂಪಾಲನೂ ಮಕ್ಕಳಾದರು.

**ಕರ್ಣಸ್ಯ ವೃಷಸೇನಸ್ತು ಪೃಥುಸೇನಸ್ತಥಾತ್ಮಜಃ ।**
**ಏತೇಽಂಗಸ್ಯಾತ್ಮಜಾಃ ಸರ್ವೇ ರಾಜಾನಃ ಕೀರ್ತಿತಾ ಮಯಾ।**
**ವಿಸ್ತರೇಣಾನುಪೂರ್ವ್ಯಾಚ್ಚ ಪೂರೋಸ್ತು ಶೃಣುತ ದ್ವಿಜಾಃ ॥೧೦೩॥**

**॥ ಋಷಯ ಊಚುಃ ॥**

**ಕಥಂ ಸೂತಾತ್ಮಜಃ ಕರ್ಣಃ ಕಥಮಂಗಸ್ಯ ಚಾತ್ಮಜಃ ।**
**ಏತದಿಚ್ಛಾಮಹೇ ಶ್ರೋತುಮತ್ಯಂತಕುಶಲೋ ಹ್ಯಸಿ ॥೧೦೪॥**

**॥ ಸೂತ ಉವಾಚ ॥**

**ಬೃಹದ್ಭಾನುಸುತೋ ಜಜ್ಞೇ ರಾಜಾ ನಾಮ್ನಾ ಬೃಹನ್ಮನಾಃ ।**
**ತಸ್ಯ ಪತ್ನೀದ್ವಯಂ ಹ್ಯಾಸೀಚ್ಛೈಬ್ಯಸ್ಯ ತನಯೇ ಹ್ಯುಭೇ ।**
**ಯಶೋದೇವೀ ಚ ಸತ್ಯಾ ಚ ತಯೋರ್ವಂಶಂ ಚ ಮೇ ಶೃಣು ॥೧೦೫॥**

**ಜಯದ್ರಥಂ ತು ರಾಜಾನಂ ಯಶೋದೇವೀ ಹ್ಯಜೀಜನತ್ ।**
**ಸಾ ಬೃಹನ್ಮನಸಃ ಸತ್ಯಾ ವಿಜಯಂ ನಾಮ ವಿಶ್ರುತಂ ॥೧೦೬॥**

---

೧೦೩. ವೃಷಸೇನನೂ ಪೃಥುಸೇನನೂ ಕರ್ಣನ ಮಕ್ಕಳು. ಹೀಗೆ ಅಂಗನ ಮಕ್ಕಳೂ, ಅವನ ವಂಶದವರೂ ಆದ ರಾಜರ ಹೆಸರೆಲ್ಲವನ್ನೂ ಹೇಳಿರುವೆನು. ಎಲೈ ದ್ವಿಜರೇ, ಇನ್ನು ಪೂರುವಿನ ವಂಶವನ್ನು ಕ್ರಮವಾಗಿ ವಿಸ್ತರಿಸಿ ಹೇಳುವೆನು ಕೇಳಿರಿ.

೧೦೪. ಋಷಿಗಳು ಹೇಳಿದರು.—ಸೂತಪುತ್ರನೆನಿಸಿದ ಕರ್ಣನು ಅಂಗನಿಗೂ ಮಗನಾದುದು ಹೇಗೆ? ಇದನ್ನು ಕೇಳಿ ತಿಳಿದುಕೊಳ್ಳಲು ಬಯಸುತ್ತೇವೆ. ಎಲೈ ಸೂತಮಹರ್ಷೀ, ಸಂದೇಹವನ್ನು ಪರಿಹರಿಸಬಲ್ಲ ಚತುರನೆಂದರೆ ನೀನೇ ಸರಿ.

೧೦೫. ಸೂತಪೌರಾಣಿಕನು ಹೇಳಿದನು—ಬೃಹದ್ಭಾನುವಿಗೆ ಬೃಹನ್ಮನನೆಂಬ ದೊರೆಯು ಮಗನಾದನು. ಅವನಿಗೆ ಹೆಂಡತಿಯರಿಬ್ಬರು. ಇಬ್ಬರೂ ಶೈಬ್ಯನ ಮಕ್ಕಳು. ಯಶೋದೇವಿ ಮತ್ತು ಸತ್ಯಾ ಎಂದು ಅವರ ಹೆಸರು. ಅವರ ವಂಶವನ್ನು ಕೇಳಿರಿ.

೧೦೬. ಯಶೋದೇವಿಯು ರಾಜನಾದ ಜಯದ್ರಥನನ್ನು ಹೆತ್ತಳು. ಬೃಹನ್ಮನನ ಎರಡನೆಯ ಹೆಂಡತಿಯಾದ ಸತ್ಯೆಯಲ್ಲಿ ಪ್ರಖ್ಯಾತನಾದ ವಿಜಯನು ಜನಿಸಿದನು.

**ವಿಜಯಸ್ಯ ಬೃಹತ್ಪುತ್ರಸ್ತಸ್ಯ ಪುತ್ರೋ ಬೃಹದ್ರಥಃ।**
**ಬೃಹದ್ರಥಸ್ಯ ಪುತ್ರಸ್ತು ಸತ್ಯಕರ್ಮಾ ಮಹಾಮನಾಃ ॥೧೦೭॥**

**ಸತ್ಯಕರ್ಮಣೋಽಧಿರಥಃ ಸೂತಶ್ಚಾಧಿರಥಃ ಸ್ಮೃತಃ।**
**ಯಃ ಕರ್ಣಂ ಪ್ರತಿಜಗ್ರಾಹ ತೇನ ಕರ್ಣಸ್ತು ಸೂತಜಃ।**
**ತಚ್ಚೇದಂ ಸರ್ವಮಾಖ್ಯಾತಂ ಕರ್ಣಂ ಪ್ರತಿ ಯಥೋದಿತಂ। ॥೧೦೮॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ**
**ಸೋಮವಂಶೇಽಷ್ಟಚತ್ವಾರಿಂಶೋಽಧ್ಯಾಯಃ**

---

೧೦೭. ವಿಜಯನಿಗೆ ಬೃಹತ್ಪುತ್ರನೂ, ಅವನಿಗೆ ಬೃಹದ್ರಥನೂ ಪುತ್ರರಾದರು. ಬೃಹದ್ರಥನ ಮಗನಿಗೆ ಸತ್ಯಕರ್ಮನೆಂದು ಹೆಸರು. ಅವನು ಬಲು ದೊಡ್ಡ ಮನಸ್ಸಿನವನು.

೧೦೮. ಸತ್ಯಕರ್ಮನಿಂದ ಅಧಿರಥನು ಜನಿಸಿದನು. ಇವನಿಗೆ ಸೂತನೆಂದೂ ಹೆಸರು. ಕರ್ಣನನ್ನು ಎತ್ತಿಕೊಂಡವನು ಇವನೇ. ಆದುದರಿಂದ ಕರ್ಣನನ್ನು ಸೂತ ಪುತ್ರನೆನ್ನುವರು. ಇಲ್ಲಿಗೆ ಕರ್ಣನನ್ನು ಕುರಿತ ವೃತ್ತಾಂತವೆಲ್ಲವೂ ಯಥಾಕ್ರಮವಾಗಿ ಹೇಳಲ್ಪಟ್ಟಿತು.

## ಅಧ್ಯಾಯದ ಸಾರಾಂಶ

ಯಯಾತಿ ಮಹಾರಾಜನ ಮಕ್ಕಳಾದ ತುರ್ವಸು, ದ್ರುಹ್ಯು ಇವರ ಸಂತತಿಯು ವಿಸ್ತಾರವಾಗಿ ಬೆಳೆಯಿತು. ಅನುವಿನ ವಂಶದಲ್ಲಿ ಬಲಿಯು ಹುಟ್ಟಿದನು. ಇವನು ನಿಜವಾಗಿ ದಾನವನು. ವಿರೋಚನನ ಪುತ್ರನು. ವಿರೋಚನನಿಗೆ ಮಕ್ಕಳಾಗಲಿಲ್ಲ. ಸಂತತಿಯು ನಿಂತುಹೋಗುವುದಲ್ಲಾ ಎಂಬ ದುಃಖದಿಂದ ಮನುಷ್ಯ ಸ್ತ್ರೀಯಲ್ಲಿ ಬಲಿಯನ್ನು ಪಡೆದನು. ಬಲಿಚಕ್ರವರ್ತಿಗೂ ಇದೇ ಸ್ಥಿತಿಯೊದಗಿತು. ಮಕ್ಕಳಿಲ್ಲದೆ ಅವನು ದುಃಖಿತನಾಗಿದ್ದನು. ಅಕಸ್ಮಾತ್ತಾಗಿ ದೀರ್ಘತಮಸ್ಸೆಂಬ ಮಹಾಮುನಿಯ ಸಮಾಗಮವೊದಗಿತು. ತನಗೆ ಪುತ್ರರನ್ನು ಕರುಣಿಸಬೇಕೆಂದು

ಅವನನ್ನು ಬೇಡಿದನು. ಋಷಿಯು ಸಮ್ಮತಿಸಿದನು. ರಾಣಿಯಾದ ಸುದೇಷ್ಣೆಯಲ್ಲಿ ಅಂಗ, ವಂಗ, ಕಲಿಂಗ ಮುಂತಾದ ಐವರು ಮಕ್ಕಳು ಮುನಿಯ ಅನುಗ್ರಹದಿಂದ ಜನಿಸಿದರು. ಇವರು ಬಲಿಚಕ್ರವರ್ತಿಯ ಕ್ಷೇತ್ರಜರಾದರು. ಇವರಲ್ಲಿ ಹಿರಿಯವನಾದ ಅಂಗನ ಸಂತತಿಯಲ್ಲಿ ಅಂಗನೆಂಬ ರಾಜನು ಜನಿಸಿದನು. ಇವನ ಮಗನೇ ಕರ್ಣ. ಇದೇ ಅಂಗವಂಶದಲ್ಲಿ ಹುಟ್ಟಿದವನು ಅಧಿರಥನೆಂಬ ರಾಜನೊಬ್ಬನು. ಇವನಿಗೆ ಸೂತನೆಂದೂ ಹೆಸರಿತ್ತು. ಗಂಗಾನದಿಯಲ್ಲಿ ತೇಲಿಹೋಗುತ್ತಿದ್ದ ಕರ್ಣನು ಇವನಿಗೆ ಸಿಕ್ಕಿದನು. ಆದುದರಿಂದಲೇ ಕರ್ಣನಿಗೆ ಸೂತಜನೆಂದು ಹೆಸರು ಬಂದಿತು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಸೋಮವಂಶದೊಳಗೆ
ನಾಲ್ವತ್ತೆಂಟನೆಯ ಅಧ್ಯಾಯವು ಮುಗಿದುದು



## ಅಥ ಶ್ರೀಮತ್ಸ್ಯಮಹಾಪುರಾಣೇ ಏಕೋನಪಂಚಾಶತ್ತಮೋಽಧ್ಯಾಯಃ

|| ಸೂತ ಉವಾಚ ||

ಪೂರೋಃ ಪುತ್ರೋಮಹಾತೇಜಾ ರಾಜಾ ಸ ಜನಮೇಜಯಃ ।
ಪ್ರಾಚೀತ್ವತಃ ಸುತಸ್ತಸ್ಯ ಯಃ ಪ್ರಾಚೀಮಕರೋದ್ದಿಶಂ || ೧ ||

ಪ್ರಾಚೀತ್ವತಸ್ಯ ತನಯೋ ಮನಸ್ಯುಶ್ಚ ತಥಾಽಭವತ್ ।
ರಾಜಾ ಪೀತಾಯುಧೋ ನಾಮ ಮನಸ್ಯೋರಭವತ್ಸುತಃ || ೨ ||

ದಾಯಾದಸ್ತಸ್ಯ ಚಾಪ್ಯಾಸೀದ್ಧುಂಧುರ್ನಾಮ ಮಹೀಪತಿಃ ।
ಧುಂಧೋರ್ಬಹುವಿಧಃ ಪುತ್ರಃ ಸಂಪಾತಿಸ್ತಸ್ಯ ಚಾತ್ಮಜಃ || ೩ ||

ಸಂಪಾತೇಸ್ತು ರಹಂವರ್ಚಾ ಭದ್ರಾಶ್ವಸ್ತಸ್ಯ ಚಾತ್ಮಜಃ ।
ಭದ್ರಾಶ್ವಸ್ಯ ಧೃತಾಯಾಂ ತು ದಶಾಪ್ಸರಸಿ ಸೂನವಃ || ೪ ||

---

೧. ಸೂತಪೌರಾಣಿಕನು ಹೇಳಿದನು.—ಮಹಾತೇಜಸ್ವಿಯಾದ ಜನಮೇಜಯರಾಜನು ಪೂರುವಿನ ಮಗನು. ಅವನ ಮಗನಿಗೆ ಪ್ರಾಚೀತ್ವತನೆಂದು ಹೆಸರು. ಅವನು ಪೂರ್ವದಿಕ್ಕನ್ನು ಕಲ್ಪಿಸಿದನು.

೨. ಪ್ರಾಚೀತ್ವತನ ತನಯನು ಮನಸ್ಯುವೆಂಬವನು. ಇವನಿಗೆ ಪೀತಾಯುಧನೆಂಬ ರಾಜನು ಮಗನಾದನು.

೩. ಧುಂಧುವೆಂದು ಪ್ರಸಿದ್ಧನಾದ ರಾಜನು ಅವನ ಮಗನು. ಧುಂಧುವಿಗೆ ಬಹುವಿಧನೂ ಅವನನಿಗೆ ಸಂಪಾತಿಯೂ ಪುತ್ರರಾದರು.

೪. ರಹಂವರ್ಚನೆಂಬವನು ಸಂಪಾತಿಯ ಮಗ. ಇವನ ಪುತ್ರನಿಗೆ ಭದ್ರಾಶ್ವನೆಂದು ಹೆಸರು. ಇವನಿಗೆ ಧೃತೆಯೆಂಬ ಅಪ್ಸರಸ್ತ್ರೀಯು ಪತ್ನಿಯಾದಳು. ಅವಳಲ್ಲಿ ಹತ್ತು ಜನ ಮಕ್ಕಳು ಹುಟ್ಟಿದರು.

**ಔಚೇಯುಶ್ಚ ಹೃಷೇಯುಶ್ಚ ಕಕ್ಷೇಯುಶ್ಚ ಸನೇಯುಕಃ ।**
**ಧೃತೇಯುಶ್ಚ ವಿನೇಯುಶ್ಚ ಸ್ಥಲೇಯುಶ್ಚೈವ ಸತ್ತಮಃ ॥ ೫ ॥**

**ಧರ್ಮೇಯುಃ ಸನ್ನತೇಯುಶ್ಚ ಪುಣ್ಯೇಯುಶ್ಚೇತಿ ತೇ ದಶ ।**
**ಔಚೇಯೋರ್ಜ್ವಲನಾ ನಾಮ ಭಾರ್ಯಾ ವೈ ತಕ್ಷಕಾತ್ಮಜಾ ॥ ೬ ॥**

**ತಸ್ಯಾಂ ಸ ಜನಯಾಮಾಸ ರಂತಿನಾರಂ ಮಹೀಪತಿಂ ।**
**ರಂತಿನಾರೋ ಮನಸ್ವಿನ್ಯಾಂ ಪುತ್ರಾಂಜ್ಜಜ್ಞೇ ಪರಾಞ್ಛುಭಾನ್ ॥ ೭ ॥**

**ಅಮೂರ್ತರಯಸಂ ವೀರಂ ತ್ರಿವನಂ ಚೈವ ಧಾರ್ಮಿಕಂ ।**
**ಗೌರೀ ಕನ್ಯಾ ತೃತೀಯಾ ಚ ಮಾಂಧಾತುರ್ಜನನೀ ಶುಭಾ ॥ ೮ ॥**

**ಇಲಿನಾ ತು ಯಮಸ್ಯಾಸೀತ್ಕನ್ಯಾ ಯಾಽಜನಯತ್ಸುತಾನ್ ।**
**ಬ್ರಹ್ಮವಾದಪರಾಕ್ರಾಂತಾಞ್ಛುಭದಾ ತ್ವಿಲಿನಾ ಹ್ಯಭೂತ್ ॥ ೯ ॥**

---

೫. ಔಚೇಯು, ಹೃಷೇಯು, ಕಕ್ಷೇಯು, ಸನೇಯು, ಧೃತೇಯು, ವಿನೇಯು, ಸ್ಥಲೇಯು, ಧರ್ಮೇಯು, ಸನ್ನತೇಯು, ಪುಣ್ಯೇಯು ಎಂದು ಆ ಹತ್ತು ಜನರ ಹೆಸರು.

೬-೭. ತಕ್ಷಕ ಪುತ್ರಿಯಾದ ಜ್ವಲನೆಯು ಔಚೇಯುವಿನ ಪತ್ನಿ. ಅವಳಲ್ಲಿ ರಂತಿನಾರನೆಂಬ ಭೂಪತಿಯು ಜನಿಸಿದನು. ಇವನಿಗೆ ಮನಸ್ವಿನಿಯೆಂಬ ಹೆಂಡತಿಯ ಹೊಟ್ಟೆಯಲ್ಲಿ ಶ್ರೇಷ್ಠರೂ ಮಂಗಳಸ್ವರೂಪರೂ ಆದ ಮಕ್ಕಳು ಹುಟ್ಟಿದರು.

೮. ಮೊದಲನೆಯವನು ವೀರನಾದ ಅಮೂರ್ತರಯನೆಂಬವನು. ಎರಡನೆಯವನು ಧಾರ್ಮಿಕನಾದ ತ್ರಿವನ. ಮಾಂಧಾತಚಕ್ರವರ್ತಿಯ ತಾಯಿಯೂ, ಶುಭಾಂಗಿಯೂ ಆದ ಗೌರಿಯೆಂಬವಳು ಮೂರನೆಯ ಕನ್ಯೆ.

೯. ಶುಭಕರಿಯಾದ ಇಲಿನೆಯೆಂಬ ಮಗಳು ಯಮನನ್ನು ವರಿಸಿದಳು. ಬ್ರಹ್ಮಜ್ಞಾನನಿರತರೂ ಬ್ರಹ್ಮವಿಚಾರವಾದಿಗಳೂ ಆದ ಪುತ್ರರನ್ನು ಇವಳು ಪಡೆದಳು.

**ಉಪದಾನವೀ ಸುತಾನ್ ಲೇಭೇ ಚತುರಸ್ತ್ವೈಲಿನಾತ್ಮಜಾತ್ ।**
**ಋಷ್ಯಂತಮಥ ದುಷ್ಯಂತಂ ಪ್ರವೀರಮನಘಂ ತಥಾ ॥೧೦॥**

**ಚಕ್ರವರ್ತೀ ತತೋ ಜಜ್ಞೇ ದುಷ್ಯಂತಾತ್ಸಮಿತಿಂಜಯಃ ।**
**ಶಕುಂತಲಾಯಾಂ ಭರತೋ ಯಸ್ಯ ನಾಮ್ನಾ ಚ ಭಾರತಾಃ ॥೧೧॥**

**ದೌಷ್ಯಂತಿಂ ಪ್ರತಿ ರಾಜಾನಂ ವಾಗೂಚೇ ಚಾಶರೀರಿಣೀ ।**
**ಮಾತಾ ಭಸ್ತ್ರಾ ಪಿತುಃ ಪುತ್ರೋ ಯೇನ ಜಾತಃ ಸ ಏವ ಸಃ ॥೧೨॥**

**ಭರಸ್ವ ಪುತ್ರಂ ದುಷ್ಯಂತ ಮಾವಮಂಸ್ಥಾಃ ಶಕುಂತಲಾಂ ।**
**ರೇತೋಧಾಃ ನಯತೇ ಪುತ್ರಃ ಪರೇತಂ ಯಮಸಾದನಾತ್ ।**
**ತ್ವಂ ಚಾಸ್ಯ ಧಾತಾ ಗರ್ಭಸ್ಯ ಸತ್ಯಮಾಹ ಶಕುಂತಲಾ ॥೧೩॥**

**ಭರತಸ್ಯ ವಿನಷ್ಟೇಷು ತನಯೇಷು ಪುರಾ ಕಿಲ ।**
**ಪುತ್ರಾಣಾಂ ಮಾತೃಕಾತ್ಕೋಪಾತ್ಸುಮಹಾನ್ ಸಂಕ್ಷಯಃ ಕೃತಃ ॥೧೪॥**

---

೧೦. ಇಲಿನೆಯ ಮಗನನ್ನು ಉಪದಾನವಿಯೆಂಬವಳು ಮದುವೆಯಾದಳು. ಅವಳಿಗೆ ಋಷ್ಯಂತ, ದುಷ್ಯಂತ, ಪ್ರವೀರ, ಅನಘ ಎಂಬ ನಾಲ್ವರು ಮಕ್ಕಳು ಹುಟ್ಟಿದರು.

೧೧. ದುಷ್ಯಂತನ ಪತ್ನಿಯಾದ ಶಕುಂತಲೆಯಲ್ಲಿ ರಣಪಂಡಿತನೂ, ಚಕ್ರವರ್ತಿಯೂ ಆದ ಭರತನು ಜನಿಸಿದನು. ಇವನ ಹೆಸರಿನಿಂದಲೇ ಈ ವಂಶದವರಿಗೆ ಭಾರತರೆಂದು ಪ್ರಖ್ಯಾತಿ ಬಂದಿತು.

೧೨. ದುಷ್ಯಂತನ ಪುತ್ರನನ್ನು ಕುರಿತು ಅಶರೀರವಾಣಿ ಹೀಗೆ ನುಡಿಯಿತು. " ತಾಯಿಯು ಬರಿಯ ಚರ್ಮದ ಚೀಲವಿದ್ದಂತೆ. ಮಗನು ಯಾರ ರೇತಸ್ಸಿನಿಂದ ಹುಟ್ಟಿದನೋ ಆ ತಂದೆಗೇ ಸೇರಿದವನು.

೧೩. ಓ ದುಷ್ಯಂತಾ, ನಿನ್ನ ಮಗನನ್ನು ಸಲಹು. ಶಕುಂತಲೆಯನ್ನು ಅವಮಾನಪಡಿಸಬೇಡ. ಪುತ್ರನು ತಾನು ಯಾರ ವೀರ್ಯದಿಂದ ಉತ್ಪನ್ನನಾದನೋ ಆ ತಂದೆಯನ್ನು ಮರಣಾನಂತರ ನರಕದಿಂದ ಉದ್ಧರಿಸುವನು. ಇವನ ಗರ್ಭವನ್ನು ಉತ್ಪಾದನಮಾಡಿದವನು ನೀನು. ಶಕುಂತಲೆಯು ಹೇಳಿದುದು ಸತ್ಯ."

೧೪. ಪೂರ್ವದಲ್ಲಿ ಭರತನ ಮಕ್ಕಳೆಲ್ಲರೂ ನಷ್ಟರಾದರು. ಮಾತೃಕೆಯರ ಕೋಪದಿಂದ ಅವರೆಲ್ಲರಿಗೂ ಹಾನಿ ಸಂಭವಿಸಿತು.

ತತೋ ಮರುದ್ಭಿರಾನೀಯ ಪುತ್ರಃ ಸ ತು ಬೃಹಸ್ಪತೇಃ ।
ಸಂಕ್ರಾಮಿತೋ ಭರದ್ವಾಜೋ ಮರುದ್ಭಿರ್ಭರತಸ್ಯ ತು ॥೧೫॥

॥ ಋಷಯ ಊಚುಃ ॥

ಭರತಸ್ಯ ಭರದ್ವಾಜಃ ಪುತ್ರಾರ್ಥಂ ಮಾರುತೈಃ ಕಥಂ ।
ಸಂಕ್ರಾಮಿತೋ ಮಹಾತೇಜಾಸ್ತನ್ನೋ ಬ್ರೂಹಿ ಯಥಾತಥಂ ॥೧೬॥

॥ ಸೂತ ಉವಾಚ ॥

ಪತ್ನ್ಯಾಮಾಪನ್ನಸತ್ವಾಯಾಮುಶಿಜಃ ಸ ಸ್ಥಿತೋ ಭುವಿ ।
ಭ್ರಾತುರ್ಭಾರ್ಯಾಂ ಸ ದೃಷ್ಟ್ವಾ ತು ಬೃಹಸ್ಪತಿರುವಾಚ ಹ ॥೧೭॥

ಉಪತಿಷ್ಠ ಸ್ವಲಂಕೃತ್ಯ ಮೈಥುನಾಯ ಚ ಮಾಂ ಶುಭೇ ।
ಏವಮುಕ್ತಾಽಬ್ರವೀದೇನಂ ಸ್ವಯಮೇವ ಬೃಹಸ್ಪತಿಂ ॥೧೮॥

ಗರ್ಭಃ ಪರಿಣತಶ್ಚಾಯಂ ಬ್ರಹ್ಮ ವ್ಯಾಹರತೇ ಗಿರಾ ।
ಅಮೋಘರೇತಾಸ್ತ್ವಂ ಚಾಪಿ ಧರ್ಮಂ ಚೈವಂ ವಿಗರ್ಹಿತಂ ॥೧೯॥

---

೧೫. ಬಳಿಕ ಮರುದ್ದೇವತೆಗಳು ಬೃಹಸ್ಪತಿಯ ಪುತ್ರನಾದ ಭರದ್ವಾಜನನ್ನು ತಂದು ಭರತನ ವಶಕ್ಕೆ ಒಪ್ಪಿಸಿ ಅವನ ಮಗನಾಗಿ ಮಾರ್ಪಡಿಸಿದರು.

೧೬. ಋಷಿಗಳು ಹೇಳಿದರು.—ಮಹಾ ತೇಜಸ್ವಿಯಾದ ಭರದ್ವಾಜನನ್ನು ಮರುದ್ದೇವತೆಗಳು ಭರತಪುತ್ರನೆಂದು ಮಾರ್ಪಡಿಸಿದ ಬಗೆ ಹೇಗೆ? ಇದನ್ನು ನಮಗೆ ವಿಸ್ತಾರವಾಗಿ ತಿಳಿಸು.

೧೭. ಸೂತಮುನಿ ಹೇಳಿದನು.—ತನ್ನ ಪತ್ನಿಯು ಗರ್ಭಿಣಿಯಾಗಿದ್ದಾಗ ಉಶಿಜನು ಭೂಲೋಕಕ್ಕೆ ಹೋಗಿದ್ದನು. ಅವನ ತಮ್ಮನಾದ ಬೃಹಸ್ಪತಿಯು ಅತ್ತಿಗೆಯನ್ನು ನೋಡಿ ಹೀಗೆಂದನು.

೧೮. "ಓ ಶುಭಾಂಗೀ, ಸುಂದರವಾಗಿ ಅಲಂಕರಿಸಿಕೊಂಡು ನನ್ನೊಡನೆ ಸಂಭೋಗಕ್ಕೆ ಸಿದ್ಧಳಾಗು" ಎಂದೆನಲು ಅವಳು ಅಂತಹ ಪ್ರಾಜ್ಞನಾದ ಬೃಹಸ್ಪತಿಗೆ ಉತ್ತರವಿತ್ತಳು.

೧೯. "ಈ ನನ್ನ ಗರ್ಭಕ್ಕೆ ದಿನಗಳು ಪೂರ್ಣವಾಗಿವೆ. ಅದು ವೇದವನ್ನು ಉಚ್ಚರಿಸುತ್ತಿದೆ. ನಿನ್ನ ವೀರ್ಯವಾದರೋ ವ್ಯರ್ಥವಾಗತಕ್ಕುದಲ್ಲ. ನಿನ್ನ ಆಲೋಚನೆಯು ಧರ್ಮವಿರುದ್ಧವಾದುದು."

ಏವಮುಕ್ತೋಽಬ್ರವೀದೇನಾಂ ಸ್ವಯಮೇವ ಬೃಹಸ್ಪತಿಃ ।
ನೋಪದೇಷ್ಟವ್ಯೋ ವಿನಯಸ್ತ್ವಯಾ ಮೇ ವರವರ್ಣಿನಿ ॥೨೦॥

ಧರ್ಷಮಾಣಃ ಪ್ರಸಹ್ಯೈನಾಂ ಮೈಥುನಾಯೋಪಚಕ್ರಮೇ ।
ತತೋ ಬೃಹಸ್ಪತಿಂ ಗರ್ಭೋ ಧರ್ಷಮಾಣಮುವಾಚ ಹ ॥೨೧॥

ಸನ್ನಿವಿಷ್ಟೋ ಹ್ಯಹಂ ಪೂರ್ವಮಿಹ ನಾಮ ಬೃಹಸ್ಪತೇ ।
ಅಮೋಘರೇತಾಶ್ಚ ಭವಾನ್ನಾವಕಾಶ ಇಹ ದ್ವಯೋಃ ॥೨೨॥

ಏವಮುಕ್ತಃ ಸ ಗರ್ಭೇಣ ಕುಪಿತಃ ಪ್ರತ್ಯುವಾಚ ಹ ।
ಯಸ್ಮಾತ್ತ್ವಮೀದೃಶೇ ಕಾಲೇ ಸರ್ವಭೂತೇಪ್ಸಿತೇ ಸತಿ ।
ಅಭಿಷೇಧಸಿ ತಸ್ಮಾತ್ತ್ವಂ ತಮೋದೀರ್ಘಂ ಪ್ರವೇಕ್ಷ್ಯಸಿ ॥೨೩॥

ತತಃ ಕಾಮಂ ಸಂನಿವರ್ತ್ಯ ತಸ್ಯಾನಂದಾದ್ಬೃಹಸ್ಪತೇಃ ।
ತದ್ರೇತಸ್ತ್ವಪತದ್ಭೂಮೌ ನಿವೃತ್ತಂ ಶಿಶುಕೋಽಭವತ್ ॥೨೪॥

---

೨೦. ಅತ್ತಿಗೆಯು ಹೀಗೆ ಹೇಳಲು ತಾನೇ ಸಕಲಶಾಸ್ತ್ರಪಂಡಿತನಾದ ಬೃಹಸ್ಪತಿಯು, "ಓ ಸುಂದರೀ ನನಗೆ ನೀನು ನೀತಿಯನ್ನುಪದೇಶಿಸಬೇಡ" ಎಂದನು.

೨೧. ಅವಳನ್ನು ನಿರ್ಬಂಧದಿಂದ ಆಕ್ರಮಿಸಿ ಮೈಥುನಕ್ಕೆ ತೊಡಗಿದನು. ಹೀಗೆ ಬಲಾತ್ಕಾರಪಡಿಸುತ್ತಿರುವ ಅವನಿಗೆ ಗರ್ಭದಲ್ಲಿನ ಶಿಶುವು ಹೇಳಿತು.

೨೨. "ಎಲೈ ಬೃಹಸ್ಪತಿಯೇ, ನಾನು ಮೊದಲೇ ಇಲ್ಲಿ ನೆಲೆಸಿದ್ದೇನೆ. ನಿನ್ನ ರೇತಸ್ಸೂ ಸಹ ವ್ಯರ್ಥವಾಗದು. ಇಲ್ಲಿ ಇಬ್ಬರಿಗೆ ಸ್ಥಳವಿಲ್ಲ."

೨೩. ಗರ್ಭವು ಹೀಗೆನಲು ಬೃಹಸ್ಪತಿಯು ಕೋಪಗೊಂಡು ಉತ್ತರ ವಿತ್ತನು. "ಎಲ್ಲ ಪ್ರಾಣಿಗಳಿಗೂ ಸಂತೋಷಕರವಾದ ಇಂತಹ ಸಮಯದಲ್ಲಿ ನೀನು ನನ್ನನ್ನು ಅಡ್ಡಿಪಡಿಸುತ್ತಿರುವೆ. ಆದ್ದರಿಂದ ನೀನು ಗಾಢಾಂಧಕಾರದಲ್ಲಿಳಿ."

೨೪. ಬಳಿಕ ಬೃಹಸ್ಪತಿಯ ವೀರ್ಯವು ಆನಂದಾವಯವದಲ್ಲಿ ಬೀಳದೆ ಹಿಂತಿರುಗಿ ನೆಲದ ಮೇಲೆ ಬಿದ್ದಿತು. ಕೂಡಲೆ ಅದು ಒಂದು ಮಗುವಿನ ರೂಪವಾಯಿತು.

**ಸದ್ಯೋಜಾತಂ ಕುಮಾರಂ ತು ದೃಷ್ಟ್ವಾ ತಂ ಮಮತಾಬ್ರವೀತ್ ।**
**ಗಮಿಷ್ಯಾಮಿ ಗೃಹಂ ಸ್ವಂ ವೈ ಭರಸ್ವೈನಂ ಬೃಹಸ್ಪತೇ ॥೨೫॥**

**ಏವಮುಕ್ತ್ವಾ ಗತಾ ಸಾ ತು ಗತಾಯಾಂ ಸೋಽಪಿ ತಂ ತ್ಯಜತ್ ।**
**ಮಾತಾಪಿತೃಭ್ಯಾಂ ತ್ಯಕ್ತಂ ತು ದೃಷ್ಟ್ವಾ ತಂ ಮರುತಃ ಶಿಶುಂ**
**ಜಗೃಹುಸ್ತಂ ಭರದ್ವಾಜಂ ಮರುತಃ ಕೃಪಯಾ ಸ್ಥಿತಾಃ ॥೨೬॥**

**ತಸ್ಮಿನ್ ಕಾಲೇ ತು ಭರತೋ ಬಹುಭಿರ್ಕ್ರತುಭಿರ್ವಿಭುಃ ।**
**ಪುತ್ರನೈಮಿತ್ತಿಕೈರ್ಯಜ್ಞೈರಯಜತ್ಪುತ್ರಲಿಪ್ಸಯಾ ॥೨೭॥**

**ಯದಾ ಸ ಯಜಮಾನಸ್ತು ಪುತ್ರಂ ನಾಸಾದಯತ್ಪ್ರಭುಃ ।**
**ತತಃ ಕ್ರತುಂ ಮರುತ್ಸ್ತೋಮಂ ಪುತ್ರಾರ್ಥೇ ಸಮುಪಾಹರತ್ ॥೨೮॥**

**ತೇನ ತೇ ಮರುತಸ್ತಸ್ಯ ಮರುತ್ಸ್ತೋಮೇನ ತುಷ್ಟುವುಃ ।**
**ಉಪನಿನ್ಯುರ್ಭರದ್ವಾಜಂ ಪುತ್ರಾರ್ಥಂ ಭರತಾಯ ವೈ ॥೨೯॥**

---

೨೫. ಆ ಕೂಡಲೆ ಹುಟ್ಟಿದ ಕುಮಾರನನ್ನು ಕಂಡು ಮಮತೆಯು ಹೇಳಿದಳು. ''ಎಲೈ ಬೃಹಸ್ಪತಿಯೇ, ನಾನು ನನ್ನ ಮನೆಗೆ ಹೋಗುವೆನು. ನೀನು ಈ ಮಗುವನ್ನು ಸಾಕು.

೨೬. ಹೀಗೆ ಹೇಳಿ ಅವಳು ಹೊರಟು ಹೋಗಲು ಬೃಹಸ್ಪತಿಯೂ ಸಹ ಅದನ್ನು ಬಿಟ್ಟಗಲಿದನು. ತಂದೆತಾಯಿಗಳಿಬ್ಬರೂ ತೊರೆದ ಆ ಭರದ್ವಾಜನೆಂಬ ಹೆಸರಿನ ಮಗುವನ್ನು ಮರುದ್ದೇವತೆಗಳು ಕಂಡರು. ಕನಿಕರದಿಂದ ಎತ್ತಿಕೊಂಡರು.

೨೭. ಅದೇ ಸಮಯದಲ್ಲಿ ಭರತ ಚಕ್ರವರ್ತಿಯು ಪುತ್ರಾಪೇಕ್ಷೆಯಿಂದ, ಪುತ್ರಪ್ರದಗಳಾದ ಹಲವು ಯಜ್ಞಗಳನ್ನು ಎಷ್ಟೋ ಋತುಗಳ ಕಾಲ ನಡೆಸಿದನು.

೨೮. ಹೀಗೆ ಯಜ್ಞಮಾಡಿದರೂ ಆ ರಾಜನಿಗೆ ಮಕ್ಕಳಾಗದಿರಲು ಅವನು ಮರುತ್ಸ್ತೋಮವೆಂಬ ಕ್ರತುವನ್ನು ಪುತ್ರಾರ್ಥವಾಗಿ ಆಚರಿಸಿದನು.

೨೯. ಮರುದ್ದೇವತೆಗಳು ಭರತನ ಆ ಮರುತ್ಸ್ತೋಮಯಾಗದಿಂದ ತೃಪ್ತರಾಗಿ, ಅವನಿಗೆ ಮಗನನ್ನು ಕರುಣಿಸುವುದಕ್ಕೆಂದು ಭರದ್ವಾಜನನ್ನು ಕರೆತಂದರು.

ದಾಯಾದೋಽಂಗಿರಸಃ ಸೂನೋರೌರಸಸ್ತು ಬೃಹಸ್ಪತೇಃ ।
ಸಂಕ್ರಾಮಿತೋ ಭರದ್ವಾಜೋ ಮರುದ್ಭಿರ್ಭರತಂ ಪ್ರತಿ ॥೩೦॥

ಭರತಸ್ತು ಭರದ್ವಾಜಂ ಪುತ್ರಂ ಪ್ರಾಪ್ಯ ವಿಭುರ್ಬ್ರವೀತ್ ।
ಆದಾವಾತ್ಮಹಿತಾಯ ತ್ವಂ ಕೃತಾರ್ಥೋಽಹಂ ತ್ವಯಾ ವಿಭೋ ॥೩೧॥

ಪೂರ್ವಂ ತು ವಿತಥೇ ತಸ್ಮಿನ್ ಕೃತೇ ವೈ ಪುತ್ರಜನ್ಮನಿ ।
ತತಸ್ತು ವಿತಥೋ ನಾಮ ಭರದ್ವಾಜೋ ನೃಪೋಽಭವತ್ ॥೩೨॥

ತಸ್ಮಾದಪಿ ಭರದ್ವಾಜಾದ್ಬ್ರಾಹ್ಮಣಾಃ ಕ್ಷತ್ರಿಯಾ ಭುವಿ ।
ದ್ವ್ಯಾಮುಷ್ಯಾಯಣಕೌಲೀನಾಃ ಸ್ಮೃತಾಸ್ತೇ ದ್ವಿವಿಧೇನ ಚ ॥೩೩॥

ತತೋ ಜಾತೇ ಹಿ ವಿತಥೇ ಭರತಶ್ಚ ದಿವಂ ಯಯೌ ।
ಭರದ್ವಾಜೋ ದಿವಂ ಯಾತೋ ಹ್ಯಭಿಷಿಚ್ಯ ಸುತಂ ಋಷಿಃ ॥೩೪॥

---

೩೦. ಅಂಗಿರಸಸುತನಾದ ಬೃಹಸ್ಪತಿಯ ಔರಸಪುತ್ರನೆನಿಸಿದ ಭರದ್ವಾಜನನ್ನು ಮರುದ್ದೇವತೆಗಳು ಭರತನಿಗೆ ಮಗನಾಗಿ ಕೊಟ್ಟರು.

೩೧. ಭರದ್ವಾಜನು ತನಗೆ ಮಗನಾಗಿ ದೊರೆತ ಮೇಲೆ ಭರತ ಚಕ್ರವರ್ತಿಯು ಅವನಿಗೆ ಹೇಳಿದನು. "ಮೊತ್ತಮೊದಲು ನೀನು ನಿನ್ನ ಹಿತದ ಸಲುವಾಗಿ ಕೃತಾರ್ಥನಾದೆ. ವಿಭೂ, ನಿನ್ನಿಂದ ನಾನು ಈಗ ಧನ್ಯನಾದೆನು."

೩೨. ಬೃಹಸ್ಪತಿ ಪುತ್ರರೂಪವಾದ ಭರದ್ವಾಜನ ಹಿಂದಿನ ಜನ್ಮವು ವಿತಥ ಎಂದರೆ ವ್ಯರ್ಥವಾದಕಾರಣ, ಭರತ ಚಕ್ರವರ್ತಿಯ ಮಗನೆನಿಸಿದ ಬಳಿಕ ಅವನಿಗೆ ವಿತಥರಾಜನೆಂದು ಹೆಸರು ಬಂದಿತು.

೩೩. ಭರದ್ವಾಜನ ವಂಶದಲ್ಲಿ ಉತ್ಪನ್ನರಾದವರು ಬ್ರಾಹ್ಮಣರೂ ಉಂಟು. ಕ್ಷತ್ರಿಯರೂ ಉಂಟು. ಅವರಿಗೆ ದ್ವ್ಯಾಮುಷ್ಯಾಯಣಕುಲದವರೆಂದು ಹೆಸರು. (ಎಂದರೆ ಬ್ರಾಹ್ಮಣ ಕ್ಷತ್ರಿಯ ಕುಲಗಳೆರಡಕ್ಕೂ ಸಂಬಂಧಿಸಿದವರೆಂದು ಅರ್ಥ.)

೩೪. ಪುತ್ರನಾದ ವಿತಥನು ದೊರೆತ ಬಳಿಕ ಭರತನು ಸ್ವರ್ಗವನ್ನೇರಿದನು. ಭರದ್ವಾಜಋಷಿಯೂ ಸಹ ತನ್ನ ಮಗನಿಗೆ ರಾಜ್ಯಾಭಿಷೇಕವನ್ನು ಮಾಡಿ ದಿವ್ಯ ಲೋಕಕ್ಕೆ ಹೋದನು.

**ದಾಯಾದೋ ವಿತಥಸ್ಯಾಸೀದ್ಭುವಮನ್ಯುರ್ಮಹಾಯಶಾಃ ।**
**ಮಹಾಭೂತೋಪಮಾಃ ಪುತ್ರಾಶ್ಚತ್ವಾರೋ ಭುವಮನ್ಯವಃ ॥೩೫॥**

**ಬೃಹತ್ಕ್ಷತ್ರೋ ಮಹಾವೀರ್ಯೋ ನರೋ ಗರ್ಗಶ್ಚ ವೀರ್ಯವಾನ್ ।**
**ನರಸ್ಯ ಸಂಕೃತಿಃ ಪುತ್ರಸ್ತಸ್ಯ ಪುತ್ರೋ ಮಹಾಯಶಾಃ ॥೩೬॥**

**ಗುರುಧೀ ರಂತಿದೇವಶ್ಚ ಸತ್ಕೃತ್ಯಾಂ ತಾವುಭೌ ಸ್ಮೃತೌ ।**
**ಗರ್ಗಸ್ಯ ಚೈವ ದಾಯಾದಃ ಶಿಬಿರ್ವಿದ್ವಾನಜಾಯತ ॥೩೭॥**

**ಸ್ಮೃತಾಃ ಶೈಬ್ಯಾಸ್ತತೋ ಗರ್ಗಾಃ ಕ್ಷತ್ರೋಪೇತಾ ದ್ವಿಜಾತಯಃ ।**
**ಆಹಾರ್ಯತನಯಶ್ಚೈವ ಧೀಮಾನಾಸೀದುರುಕ್ಷವಃ ॥೩೮॥**

**ತಸ್ಯ ಭಾರ್ಯಾ ವಿಶಾಲಾ ತು ಸುಷುವೇ ಪುತ್ರಕತ್ರಯಂ ।**
**ತ್ರ್ಯುಷಣಂ ಪುಷ್ಕರಿಂ ಚೈವ ಕವಿಂ ಚೈವ ಮಹಾಯಶಾಃ ॥೩೯॥**

---

೩೫. ವಿತಥನಿಗೆ ಮಹಾ ಕೀರ್ತಿವಂತನಾದ ಭುವಮನ್ಯುವೆಂಬ ಪುತ್ರನುದಿಸಿದನು. ಭುವಮನ್ಯುವಿಗೆ ನಾಲ್ವರು ಮಕ್ಕಳು. ಅವರು ಪಂಚಮಹಾಭೂತಗಳಂತೆ ಲೋಕೋಪಕಾರಿಗಳೂ, ಪ್ರಸಿದ್ಧರೂ ಆಗಿದ್ದರು.

೩೬. ಬೃಹತ್‌ಕ್ಷತ್ರ, ಮಹಾವೀರ್ಯ, ನರ, ವೀರನಾದ ಗರ್ಗ ಇವರೇ ಆ ನಾಲ್ವರು. ನರನ ಮಗ ಸಂಕೃತಿ. ಇವನಿಗೆ ಮಹಾಯಶ ಮತ್ತು ಮಹಾ ಮೇಧಾವಿಯಾದ ರಂತಿದೇವ ಎಂಬ ಇಬ್ಬರು ಮಕ್ಕಳಿದ್ದರು. ಇವರು ಸಂಕೃತಿಯಲ್ಲಿ ಜನಿಸಿದವರು.

೩೭-೩೮. ಗರ್ಗನಿಗೆ ವಿದ್ವಾಂಸನಾದ ಶಿಬಿಯು ಮಗನಾದನು. ಆ ಬಳಿಕ ಗರ್ಗವಂಶದವರಿಗೆ ಶೈಬ್ಯರೆಂದು ಹೆಸರು ಬಂದಿತು. ಅವರು ಕ್ಷತ್ರಿಯವರ್ಣ ಸಂಬಂಧವುಳ್ಳ ಬ್ರಾಹ್ಮಣರಾದರು. ಆಹಾರ್ಯನಿಗೆ ಬುದ್ಧಿವಂತನಾದ ಉರುಕ್ಷವನೆಂಬ ಮಗನು ಹುಟ್ಟಿದನು.

೩೯. ಯಶಸ್ವಿನಿಯಾದ ಅವನ ಭಾರ್ಯೆ ವಿಶಾಲೆಯು ತ್ರ್ಯುಷಣ, ಪುಷ್ಕರಿ, ಕವಿ ಎಂಬ ಮೂರು ಜನ ಮಕ್ಕಳನ್ನು ಹೆತ್ತಳು.

ಉರುಕ್ಷವಾಃ ಸ್ಮೃತಾ ಹ್ಯೇತೇ ಸರ್ವೇ ಬ್ರಾಹ್ಮಣತಾಂ ಗತಾಃ ।
ಕಾವ್ಯಾನಾಂ ತು ವರಾ ಹ್ಯೇತೇ ತ್ರಯಃ ಪ್ರೋಕ್ತಾ ಮಹರ್ಷಯಃ ॥೪೦॥

ಗರ್ಗಾಃ ಸಂಕೃತಯಃ ಕಾವ್ಯಾಃ ಕ್ಷತ್ರೋಪೇತಾ ದ್ವಿಜಾತಯಃ ।
ಸಂವೃತಾಂಗಿರಸಃ ಪುತ್ರಃ ಬೃಹತ್‌ಕ್ಷತ್ರಸ್ಯ ವಕ್ಷ್ಯತೇ ॥೪೧॥

ಬೃಹತ್‌ಕ್ಷತ್ರಸ್ಯ ದಾಯಾದೋ ಹಸ್ತಿನಾಮಾ ಬಭೂವ ಹ ।
ತೇನೇದಂ ನಿರ್ಮಿತಂ ಪೂರ್ವಂ ಪುರಂ ತು ಗಜಸಾಹ್ವಯಂ ॥೪೨॥

ಹಸ್ತಿನಶ್ಚೈವ ದಾಯಾದಾಸ್ತ್ರಯಃ ಪರಮಕೀರ್ತಯಃ ।
ಅಜಮೀಢೋ ದ್ವಿಮೀಢಶ್ಚ ಪುರುಮೀಢಸ್ತಥೈವ ಚ ॥೪೩॥

ಅಜಮೀಢಸ್ಯ ಪತ್ನ್ಯಸ್ತು ತಿಸ್ರಃ ಕುರುಕುಲೋದ್ವಹಾಃ ।
ನೀಲಿನೀ ಧೂಮಿನೀ ಚೈವ ಕೇಶಿನೀ ಚೈವ ವಿಶ್ರುತಾಃ ॥೪೪॥

---

೪೦. ಇವರಿಗೆ ಉರುಕ್ಷವರೆಂದು ಹೆಸರು. ಇವರೆಲ್ಲರೂ ಬ್ರಾಹ್ಮಣ್ಯವನ್ನು ಪಡೆದರು. ಕವಿಯ ವಂಶಜರಲ್ಲಿ ಈ ಮೂವರು ಶ್ರೇಷ್ಠರಾದವರು. ಇವರನು ಮಹರ್ಷಿಗಳೆನ್ನುವರು.

೪೧. ಗರ್ಗರು, ಸಂಕೃತಿಗಳು, ಕಾವ್ಯರು ಇವರು ಕ್ಷತ್ರಿಯ ಧರ್ಮಸಹಿತ ರಾದ ಬ್ರಾಹ್ಮಣರು. ಸಂವೃತನು ಅಂಗಿರಸನ ಮಗನು. ಬೃಹತ್‌ಕ್ಷತ್ರನ ವಂಶವನ್ನು ಮುಂದೆ ಹೇಳುವೆನು.

೪೨. ಬೃಹತ್‌ಕ್ಷತ್ರನಿಗೆ ಹಸ್ತಿಯೆಂಬ ಮಗನಿದ್ದನು. ಇವನು ಹಸ್ತಿನಾವತಿ ನಗರವನ್ನು ಪೂರ್ವದಲ್ಲಿ ಕಟ್ಟಿಸಿದನು.

೪೩. ಹಸ್ತಿಗೆ ಬಹುಕೀರ್ತಿವಂತರಾದ ಅಜಮೀಢ, ದ್ವಿಮೀಢ ಮತ್ತು ಪುರುಮೀಢರೆಂಬ ಮೂರು ಜನ ಪುತ್ರರು ಹುಟ್ಟಿದರು.

೪೪. ಅಜಮೀಢನಿಗೆ ಕುರುಕುಲವನ್ನು ಬೆಳೆಸಿದ ಮೂವರು ಪತ್ನಿಯ ರಿದ್ದರು. ನೀಲಿನಿ, ಧೂಮಿನಿ, ಮತ್ತು ಕೇಶಿನಿಯರೆಂದು ಅವರ ಹೆಸರು.

**ಸ ತಾಸು ಜನಯಾಮಾಸ ಪುತ್ರಾನ್ ವೈ ದೇವವರ್ಚಸಃ ।**
**ತಪಸೋಽಂತೇ ಮಹಾತೇಜಾ ಜಾತಾ ವೃದ್ಧಸ್ಯ ಧಾರ್ಮಿಕಾಃ ॥೪೫॥**

**ಭರದ್ವಾಜಪ್ರಸಾದೇನ ವಿಸ್ತರಂ ತೇಷು ಮೇ ಶೃಣು ।**
**ಅಜಮೀಢಸ್ಯ ಕೇಶಿನ್ಯಾಂ ಕಣ್ವಃ ಸಮಭವತ್ಕಿಲ ॥೪೬॥**

**ಮೇಧಾತಿಥಿಃ ಸುತಸ್ತಸ್ಯ ತಸ್ಮಾತ್ಕಾಣ್ವಾಯನಾ ದ್ವಿಜಾಃ ।**
**ಅಜಮೀಢಸ್ಯ ಭೂಮಿನ್ಯಾಂ ಜಜ್ಞೇ ಬೃಹದನುರ್ನೃಪಃ ॥೪೭॥**

**ಬೃಹದನೋರ್ಬೃಹಂತೋಽಥ ಬೃಹಂತಸ್ಯ ಬೃಹನ್ಮನಾಃ ।**
**ಬೃಹನ್ಮನಸ್ಸುತಶ್ಚಾಪಿ ಬೃಹದ್ಧನುರಿತಿ ಶ್ರುತಃ ॥೪೮॥**

**ಬೃಹದ್ಧನೋರ್ಬೃಹದಿಷುಃ ಪುತ್ರಸ್ತಸ್ಯ ಜಯದ್ರಥಃ ।**
**ಅಶ್ವಜಿತ್ತನಯಸ್ತಸ್ಯ ಸೇನಜಿತ್ತಸ್ಯ ಚಾತ್ಮಜಃ ॥೪೯॥**

---

೪೫-೪೬. ಅವನು ಆ ಪತ್ನಿಯರಲ್ಲಿ ದೇವತೆಗಳಂತೆ ಕಾಂತಿವಂತರಾದ ಮಕ್ಕಳನ್ನು ಪಡೆದನು. ಮಹಾತೇಜಸ್ವಿಗಳೂ ಧಾರ್ಮಿಕರೂ ಆದ ಪುತ್ರರು, ಭರದ್ವಾಜನ ಅನುಗ್ರಹದಿಂದ ವೃದ್ಧನಾದ ಅಜಮೀಢನ ತಪಸ್ಸು ಮುಗಿದ ಬಳಿಕ ಹುಟ್ಟಿದರು. ಅದರ ವಿವರವನ್ನು ಹೇಳುವೆನು ಕೇಳು. ಅಜಮೀಢನ ಪತ್ನಿಯಾದ ಕೇಶಿನಿಯಲ್ಲಿ ಕಣ್ವನು ಜನಿಸಿದನಷ್ಟೆ.

೪೭. ಅವನಿಗೆ ಮೇಧಾತಿಥಿಯು ಮಗನಾದನು. ಕಣ್ವವಂಶೀಯರಾದ ಬ್ರಾಹ್ಮಣರಿಗೆ ಅವನಿಂದ ಕಾಣ್ವಾಯನರೆಂಬ ಹೆಸರು ಬಂದಿತು. ಅಜಮೀಢನಿಗೆ ಭೂಮಿನಿಯೆಂಬ ಪತ್ನಿಯಲ್ಲಿ ಬೃಹದನುವೆಂಬ ರಾಜನು ಹುಟ್ಟಿದನು.

೪೮. ಬೃಹದನುವಿಗೆ ಬೃಹಂತನೂ, ಅವನಿಗೆ ಬೃಹನ್ಮನನೂ ಪುತ್ರರಾದರು. ಬೃಹನ್ಮನನ ಮಗನಿಗೆ ಬೃಹದ್ಧನುವೆಂಬ ಹೆಸರು.

೪೯. ಬೃಹದ್ಧನುವಿನಿಂದ ಬೃಹದಿಷುವೂ, ಅವನಿಂದ ಜಯದ್ರಥನೂ ಜನಿಸಿದರು. ಜಯದ್ರಥನಿಗೆ ಅಶ್ವಜಿತ್ತೂ, ಅಶ್ವಜಿತ್ತಿಗೆ ಸೇನಜಿತ್ತೂ ಉದಿಸಿದರು.

ಅಥ ಸೇನಜಿತಃ ಪುತ್ರಾಶ್ಚತ್ವಾರೋ ಲೋಕವಿಶ್ರುತಾಃ ।
ರುಚಿರಾಶ್ವಶ್ಚ ಕಾವ್ಯಶ್ಚ ರಾಜಾ ದೃಢರಥಸ್ತಥಾ ॥೫೦॥

ವತ್ಸಶ್ಚಾವಂತಿಕೋ ರಾಜಾ ಯಸ್ಯೈತೇ ಪರಿವತ್ಸಕಾಃ ।
ರುಚಿರಾಶ್ವಸ್ಯ ದಾಯಾದಃ ಪೃಥುಸೇನೋ ಮಹಾಯಶಾಃ ॥೫೧॥

ಪೃಥುಸೇನಸ್ಯ ಪೌರಸ್ತು ಪೌರಾನ್ನೀಪೋಥ ಜಜ್ಞಿವಾನ್ ।
ನೀಪಸ್ಯೈಕಶತಂ ತ್ವಾಸೀತ್ಪುತ್ರಾಣಾಮಮಿತೌಜಸಾಂ ॥೫೨॥

ನೀಪಾ ಇತಿ ಸಮಾಖ್ಯಾತಾ ರಾಜಾನಸ್ಸರ್ವ ಏವ ತೇ ।
ತೇಷಾಂ ವಂಶಕರಃ ಶ್ರೀಮಾನ್ನೀಪಾನಾಂ ಕುಲವರ್ಧನಃ ॥೫೩॥

ಕಾವ್ಯಾಚ್ಚ ಸಮರೋ ನಾಮ ಸದೇಷ್ಟಸಮರೋಽಭವತ್ ।
ಸಮರಸ್ಯ ಪಾರಸಂಪಾರೌ ಸದಶ್ವ ಇತಿ ತೇ ತ್ರಯಃ ॥೫೪॥

ಪುತ್ರಾಃ ಸರ್ವಗುಣೋಪೇತಾ ಜಾತಾ ವೈ ವಿಶ್ರುತಾ ಭುವಿ ।
ಪಾರಪುತ್ರಃ ಪೃಥುರ್ಜಾತಃ ಪೃಥೋಸ್ತು ಸುಕೃತೋಽಭವತ್ ॥೫೫॥

---

೫೦. ತರುವಾಯ ಸೇನಜಿತ್ತಿಗೆ ಲೋಕಪ್ರಖ್ಯಾತರಾದ ರುಚಿರಾಶ್ವ, ಕಾವ್ಯ, ದೃಢರಥ ಮತ್ತು ವತ್ಸ ಎಂಬ ನಾಲ್ವರು ಮಕ್ಕಳು ಹುಟ್ಟಿದರು. ವತ್ಸನು ಆವಂತೀ ನಗರದ ಅರಸನು. ಪರಿವತ್ಸಕರೆಂಬವರು ಇವನ ವಂಶದವರೇ.

೫೧. ರುಚಿರಾಶ್ವನ ಮಗನು ಮಹಾಕೀರ್ತಿವಂತನಾದ ಪೃಥುಸೇನ.

೫೨. ಪೃಥುಸೇನನ ಪುತ್ರನು ಪೌರ. ಅವನ ಮಗನು ನೀಪ. ನೀಪನಿಗೆ ಅಪರಿಮಿತ ತೇಜೋವಂತರಾದ ನೂರು ಜನ ಮಕ್ಕಳಾದರು.

೫೩. ಆ ರಾಜರೆಲ್ಲರೂ ನೀಪರೆಂದೇ ಪ್ರಖ್ಯಾತರಾಗಿರುವರು. ಅವರ ವಂಶಕ್ಕೆ ಕೀರ್ತಿಯನ್ನು ತಂದು ಅದನ್ನು ಬೆಳೆಸಿದವನು ಶ್ರೀಮಾನ್ ಎಂಬುವನು.

೫೪. ಕಾವ್ಯನಿಂದ ಪ್ರಖ್ಯಾತನಾದ ಸಮರನು ಹುಟ್ಟಿದನು. ಯುದ್ಧವೆಂದರೆ ಯಾವಾಗಲೂ ಅವನಿಗೆ ಇಷ್ಟ. ಸಮರನಿಗೆ ಪಾರ, ಸಂಪಾರ, ಸದಶ್ವ ಎಂಬ ಸರ್ವಗುಣಸಂಪನ್ನರಾದ ಮೂವರು ಪ್ರಸಿದ್ಧರಾದ ಮಕ್ಕಳು ಜನಿಸಿದರು.

೫೫. ಪಾರನಿಗೆ ಪೃಥುವೆಂಬ ಮಗನಾದನು. ಪೃಥುವಿಗೆ ಸುಕೃತನು ಜನಿಸಿದನು.

ಜಜ್ಞೇ ಸರ್ವಗುಣೋಪೇತೋ ವಿಭ್ರಾಜಸ್ತಸ್ಯ ಚಾತ್ಮಜಃ ।
ವಿಭ್ರಾಜಸ್ಯ ತು ದಾಯಾದಸ್ತ್ವಣುಹೋ ನಾಮ ವೀರ್ಯವಾನ್ ||೫೬||

ಬಭೂವ ಶುಕಜಾಮಾತಾ ಕೃತ್ವೀಭರ್ತಾ ಮಹಾಯಶಾಃ ।
ಅಣುಹಸ್ಯ ತು ದಾಯಾದೋ ಬ್ರಹ್ಮದತ್ತೋ ಮಹೀಪತಿಃ ||೫೭||

ಯುಗದತ್ತಃ ಸುತಸ್ತಸ್ಯ ವಿಷ್ವಕ್ಸೇನೋ ಮಹಾಯಶಾಃ ।
ವಿಭ್ರಾಜಃ ಪುನರಾಜಾತೋ ಸುಕೃತೇನೇಹ ಕರ್ಮಣಾ ||೫೮||

ವಿಷ್ವಕ್ಸೇನಸ್ಯ ಪುತ್ರಸ್ತು ಉದಕ್ಸೇನೋ ಬಭೂವ ಹ ।
ಭಲ್ಲಾಟಸ್ತಸ್ಯ ಪುತ್ರಸ್ತು ತಸ್ಯಾಸೀಜ್ಜನಮೇಜಯಃ ।
ಉಗ್ರಾಯುಧೇನ ತಸ್ಯಾರ್ಥೇ ಸರ್ವೇ ನೀಪಾಃ ಪ್ರಣಾಶಿತಾಃ ||೫೯||

|| ಋಷಯ ಊಚುಃ ||

ಉಗ್ರಾಯುಧಃ ಕಸ್ಯ ಸುತಃ ಕಸ್ಯ ವಂಶೇ ಸ ಕಥ್ಯತೇ ।
ಕಿಮರ್ಥಂ ತೇನ ತೇ ನೀಪಾಃ ಸರ್ವೇ ಚೈವ ಪ್ರಣಾಶಿತಾಃ ||೬೦||

---

೫೬. ಸರ್ವಗುಣ ಪೂರ್ಣನಾದ ವಿಭ್ರಾಜನು ಅವನ ಪುತ್ರನಾದನು. ವೀರ್ಯವಂತನಾದ ಅಣುಹನು ವಿಭ್ರಾಜನ ಮಗನೆನಿಸಿದನು.

೫೭. ಬಹುಕೀರ್ತಿವಂತನಾದ ಇವನು ಶುಕನ ಮಗಳಾದ ಕೃತ್ವಿಯೆಂಬುವಳನ್ನು ಪಾಣಿಗ್ರಹಣ ಮಾಡಿಕೊಂಡನು. ಬ್ರಹ್ಮದತ್ತ ಮಹೀಪತಿಯು ಅಣುಹನ ಮಗನು.

೫೮. ಅವನ ಮಗನು ಯುಗದತ್ತ. ವಿಭ್ರಾಜನು ತನ್ನ ಪುಣ್ಯಕರ್ಮದ ಫಲದಿಂದ ಮಹಾ ಕೀರ್ತಿವಂತನಾದ ವಿಷ್ವಕ್ಸೇನ ರಾಜನಾಗಿ ಭೂಮಿಯಲ್ಲಿ ಮತ್ತೆ ಜನಿಸಿದನು.

೫೯. ವಿಷ್ವಕ್ಸೇನನ ಮಗ ಉದಕ್ಸೇನ. ಅವನ ಪುತ್ರನು ಭಲ್ಲಾಟ. ಅವನ ಮಗನೇ ಜನಮೇಜಯನು. ಇವನಿಗಾಗಿ ಉಗ್ರಾಯುಧನು ನೀಪರನ್ನೆಲ್ಲ ನಿರ್ಮೂಲ ಮಾಡಿದನು.

೬೦. ಋಷಿಗಳು ಹೇಳಿದರು.—ಉಗ್ರಾಯುಧನು ಯಾರ ಮಗ? ಅವನನ್ನು ಯಾರ ವಂಶದವನೆಂದು ಹೇಳುತ್ತಾರೆ? ಏತಕ್ಕಾಗಿ ಅವನು ನೀಪರನ್ನೆಲ್ಲ ಧ್ವಂಸ ಮಾಡಿದನು?

## ಅಧ್ಯಾಯ ೪೯

### ॥ ಸೂತ ಉವಾಚ ॥

**ಉಗ್ರಾಯುಧಃ ಸೂರ್ಯವಂಶ್ಯಸ್ತಪಸ್ತೇಪೇ ವರಾಶ್ರಮೇ ।**
**ಸ್ಥಾಣುಭೂತೋಽಬ್ದಸಾಹಸ್ರಂ ತಂ ಭೇಜೇ ಜನಮೇಜಯಃ** ॥೬೧॥

**ತಸ್ಯ ರಾಜ್ಯಂ ಪ್ರತಿಶ್ರುತ್ಯ ನೀಪಾನಾಜಘ್ನಿವಾನ್ ಪ್ರಭುಃ ।**
**ಉವಾಚ ಸಾಂತ್ವಂ ವಿವಿಧಂ ಜಘ್ನುಸ್ತೇ ವೈ ಹ್ಯುಭಾವಪಿ** ॥೬೨॥

**ಹನ್ಯಮಾನಾಗತಾನೂಚೇ ಯಸ್ಮಾದ್ಧೇತೋರ್ನ ಮೇ ವಚಃ ।**
**ಶರಣಾಗತರಕ್ಷಾರ್ಥಂ ತಸ್ಮಾದೇವಂ ಶಪಾಮಿ ವಃ** ॥೬೩॥

**ಯದಿ ಮೇಽಸ್ತಿ ತಪಸ್ತಪ್ತಂ ಸರ್ವಾನ್ನಯತು ವೋ ಯಮಃ ।**
**ತತಸ್ತಾನ್ ಕೃಷ್ಯಮಾಣಾಂಸ್ತು ಯಮೇನ ಪುರತಃ ಸ ತು** ॥೬೪॥

---

೬೧. ಸೂತಮುನಿ ಹೇಳಿದನು.—ಉಗ್ರಾಯುಧನು ಸೂರ್ಯವಂಶದಲ್ಲಿ ಹುಟ್ಟಿದವನು. ಅವನು ಶ್ರೇಷ್ಠವಾದ ತಪೋವನದಲ್ಲಿ ಮೋಟುಮರದಂತೆ ಅಲುಗಾಡದೆ ನಿಂತು ಸಾವಿರ ವರ್ಷಗಳ ಕಾಲ ತಪಸ್ಸುಮಾಡಿದನು. ಜನಮೇಜಯನು ಬಂದು ಅವನನ್ನು ಸೇವಿಸಿದನು.

೬೨. ತಪಸ್ಸಿನ ಬಲದಿಂದ ಸರ್ವಶಕ್ತನೆನಿಸಿದ್ದ ಉಗ್ರಾಯುಧನು ಜನಮೇಜಯನಿಗೆ ರಾಜ್ಯವನ್ನು ಕೊಡುವುದಾಗಿ ವಾಗ್ದಾನಮಾಡಿ ನೀಪರನ್ನು ಪ್ರಹರಿಸಿದನು. ಅವರಿಗೆ ಬಗೆಬಗೆಯ ಸಮಾಧಾನೋಕ್ತಿಗಳನ್ನು ಹೇಳಿದನು. ಅವರು ಕೇಳದಿರಲು ಇಬ್ಬರೂ ಸೇರಿ ಅವರನ್ನು ಸಂಹರಿಸತೊಡಗಿದರು.

೬೩. ಕೊಲೆಗೆ ತುತ್ತಾಗುವುದಕ್ಕಾಗಿ ತನ್ನ ಕಡೆಗೆ ಬರುತ್ತಿರುವ ಅವರಿಗೆ ಉಗ್ರಾಯುಧನು ಹೇಳಿದನು. "ನನ್ನ ಮಾತನ್ನು ನೀವು ಕೇಳಲಿಲ್ಲ; ಅದರಿಂದ ಶರಣಾಗತ ರಕ್ಷಣೆಗಾಗಿ ನಿಮಗೆ ಹೀಗೆ ಶಾಪವನ್ನು ಕೊಡುವೆನು.

೬೪. ನಾನು ತಪಸ್ಸನ್ನು ಮಾಡಿದ್ದರೆ ನಿಮ್ಮೆಲ್ಲರನ್ನೂ ಯಮನು ಕರೆದೊಯ್ಯಲಿ" ಎಂದು ಶಪಿಸಿದನು. ಬಳಿಕ ಅವನ ಕಣ್ಣುಮುಂದೆಯೇ ಯಮನು ಅವರನ್ನು ಎಳೆದೊಯ್ದನು.

**ಕೃಪಯಾ ಪರಯಾऽऽವಿಷ್ಟೋ ಜನಮೇಜಯಮಬ್ರವೀತ್ ।**
**ಗತಾನೇತಾನಿಮಾನ್ವೀರಾಂಸ್ತ್ವಂ ಮೇ ರಕ್ಷಿತುಮರ್ಹಸಿ ॥೬೫॥**

**॥ ಜನಮೇಜಯ ಉವಾಚ ॥**

**ಅರೇ ಪಾಪಾ ದುರಾಚಾರಾ ಭವಿತಾರೋऽಸ್ಯ ಕಿಂಕರಾಃ ।**
**ತಥೇತ್ಯುಕ್ತಸ್ತತೋ ರಾಜಾ ಯಮೇನ ಯುಯುಧೇ ಚಿರಂ ॥೬೬॥**

**ವ್ಯಾಧಿಭಿರ್ನಾರಕೈರ್ಘೋರೈರ್ಯಮೇನ ಸಹ ತಾನ್ ಬಲಾತ್ ।**
**ವಿಜಿತ್ಯ ಮುನಯೇ ಪ್ರಾದಾತ್ತದದ್ಭುತಮಿವಾऽಭವತ್ ॥೬೭॥**

**ಯಮಸ್ತುಷ್ಟಸ್ತತಸ್ತಸ್ಮೈ ಮುಕ್ತಿಜ್ಞಾನಂ ದದೌ ಪರಂ ।**
**ಸರ್ವೇ ಯಥೋಚಿತಂ ಕೃತ್ವಾ ಜಗ್ಮುಸ್ತೇ ಕೃಷ್ಣಮವ್ಯಯಂ ॥೬೮॥**

**ಯೇಷಾಂ ತು ಚರಿತಂ ಗೃಹ್ಯ ಹನ್ಯತೇ ನಾಪಮೃತ್ಯುಭಿಃ ।**
**ಇಹಲೋಕೇ ಪರೇ ಚೈವ ಸುಖಮಕ್ಷಯಮಶ್ನುತೇ ॥೬೯॥**

---

೬೫. ಇದನ್ನು ನೋಡಿ ಉಗ್ರಾಯುಧನಿಗೆ ಬಹಳ ಕನಿಕರ ಹುಟ್ಟಿತು. ಇಗೋ! "ಇಲ್ಲಿ ಸತ್ತಿರುವ ಈ ವೀರರನ್ನು ನನಗೋಸ್ಕರವಾಗಿ ನೀನು ರಕ್ಷಿಸು" ಎಂದು ಜನಮೇಜಯನಿಗೆ ಹೇಳಿದನು.

೬೬. ಜನಮೇಜಯನು ಹೇಳಿದನು.—ಜನಮೇಜಯರಾಯನು ಹಾಗೆಯೇ ಆಗಲೆಂದು ಒಪ್ಪಿಕೊಂಡು "ನಡತೆಗೆಟ್ಟ ಎಲೈ ಪಾಪಿಗಳೇ, ಇವನಿಗೆ ನೀವು ಸೇವಕರಾಗುವಿರಿ" ಎಂದು ಘರ್ಜಿಸುತ್ತ ಯಮನೊಡನೆ ಬಹು ಕಾಲ ಯುದ್ಧ ಮಾಡಿದನು.

೬೭. ಭಯಂಕರರಾದ ನರಕವಾಸಿಗಳೊಡನೆಯೂ, ವ್ಯಾಧಿಗಳೊಡನೆಯೂ ಕೂಡಿಬಂದ ಯಮನೊಡನೆ ಹೋರಾಡಿ, ತನ್ನ ಬಲದಿಂದ ಆ ವೀರರನ್ನು ವಶಪಡಿಸಿಕೊಂಡು ಅವರನ್ನು ಮುನಿಗೆ ಒಪ್ಪಿಸಿದನು. ಅದೊಂದು ಆಶ್ಚರ್ಯದಂತಿದ್ದಿತು.

೬೮. ಬಳಿಕ ಯಮನು ಸಂತೋಷಗೊಂಡು ಅವನಿಗೆ ಮೋಕ್ಷಸಾಧಕವಾದ ದಿವ್ಯಜ್ಞಾನವನ್ನಿತ್ತನು. ಎಲ್ಲರೂ ಯುಕ್ತರೀತಿಯಲ್ಲಿ ವರ್ತಿಸಿ ಶಾಶ್ವತನಾದ ಶ್ರೀಕೃಷ್ಣನ ಸನ್ನಿಧಾನವನ್ನು ಸೇರಿದರು.

೬೯. ಇವರೆಲ್ಲರ ಚರಿತ್ರೆಯನ್ನೂ ಕೇಳಿ ತಿಳಿದುಕೊಂಡರೆ ಅಪಮೃತ್ಯುಗಳ ಬಾಧೆಯಿಲ್ಲ. ಈ ಲೋಕದಲ್ಲೂ ಪರಲೋಕದಲ್ಲೂ ಅಕ್ಷಯ ಸುಖವು ಲಭಿಸುವುದು.

**ಅಜಮೀಢಸ್ಯ ಧೂಮಿನ್ಯಾಂ ವಿದ್ವಾಞ್ಜಜ್ಞೇ ಯವೀನರಃ ।**
**ಧೃತಿಮಾಂಸ್ತಸ್ಯ ಪುತ್ರಸ್ತು ತಸ್ಯ ಸತ್ಯಧೃತಿಃ ಸ್ಮೃತಃ ।**
**ಅಥ ಸತ್ಯಧೃತೇಃ ಪುತ್ರೋ ದೃಢನೇಮಿಃ ಪ್ರತಾಪವಾನ್** ॥೭೦॥

**ದೃಢನೇಮಿಸುತಶ್ಚಾಪಿ ಸುಧರ್ಮಾ ನಾಮ ಪಾರ್ಥಿವಃ ।**
**ಆಸೀತ್ಸುಧರ್ಮತನಯಃ ಸಾರ್ವಭೌಮಃ ಪ್ರತಾಪವಾನ್** ॥೭೧॥

**ಸಾರ್ವಭೌಮೇತಿ ವಿಖ್ಯಾತಃ ಪೃಥಿವ್ಯಾಮೇಕರಾಡ್ವಭೌ ।**
**ತಸ್ಯಾನ್ವವಾಯೇ ಮಹತಿ ಮಹಾಪೌರವನಂದನಃ** ॥೭೨॥

**ಮಹಾಪೌರವಪುತ್ರಸ್ತು ರಾಜಾ ರುಕ್ಮರಥಃ ಸ್ಮೃತಃ ।**
**ಅಥ ರುಕ್ಮರಥಸ್ಯಾಸೀತ್ಸುಪಾರ್ಶ್ವೋ ನಾಮ ಪಾರ್ಥಿವಃ** ॥೭೩॥

**ಸುಪಾರ್ಶ್ವತನಯಶ್ಚಾಪಿ ಸುಮತಿರ್ನಾಮ ಧಾರ್ಮಿಕಃ ।**
**ಸುಮತೇರಪಿ ಧರ್ಮಾತ್ಮಾ ರಾಜಾ ಸನ್ನತಿಮಾನಪಿ** ॥೭೪॥

---

೭೦. ಅಜಮೀಢನಿಗೆ ಧೂಮಿನಿಯೆಂಬ ಭಾರ್ಯೆಯಲ್ಲಿ ವಿದ್ವಾಂಸನಾದ ಯವೀನರನು ಜನಿಸಿದನು. ಅವನ ಮಗನು ಧೃತಿಮಂತನು. ಅವನಿಗೆ ಸತ್ಯಧೃತಿಯೆಂಬ ಮಗನಾದನು. ತರುವಾಯ ಸತ್ಯಧೃತಿಗೆ ದೃಢನೇಮಿಯು ಹುಟ್ಟಿದನು. ಇವನು ಪ್ರತಾಪಶಾಲಿ.

೭೧. ದೃಢನೇಮಿಗೆ ಸುಧರ್ಮನೆಂಬ ರಾಜನು ಮಗನಾದನು. ಪ್ರತಾಪವಂತನೆಂಬ ಚಕ್ರವರ್ತಿಯು ಈ ಸುಧರ್ಮನ ಮಗನು.

೭೨. ಪ್ರತಾಪವಂತನು ಭೂಮಂಡಲಕ್ಕೆಲ್ಲ ಚಕ್ರವರ್ತಿಯಾಗಿ ಏಕಾಧಿಪತ್ಯವನ್ನು ನಡೆಸಿದನು. ಅವನ ಪ್ರಸಿದ್ಧವಾದ ವಂಶದಲ್ಲಿ ಮಹಾಪೌರವನೆಂಬವನು ಜನಿಸಿದನು.

೭೩. ಮಹಾಪೌರವನ ಮಗನು ರುಕ್ಮರಥನೆಂಬ ರಾಜನು. ಅವನಿಗೆ ಸುಪಾರ್ಶ್ವ ಭೂಪತಿಯು ಮಗನಾದನು.

೭೪. ಸುಪಾರ್ಶ್ವನ ಪುತ್ರನು ಧಾರ್ಮಿಕನಾದ ಸುಮತಿ. ಸನ್ನತಿಮಂತನೆಂಬ ರಾಜನು ಸುಮತಿಯ ಮಗನು. ಇವನೂ ಸಹ ಧರ್ಮಶೀಲನು.

**ತಸ್ಯಾಸೀತ್ಸಂನತಿಮತಃ ಕೃತೋ ನಾಮ ಸುತೋ ಮಹಾನ್ ।**
**ಹಿರಣ್ಯನಾಭಿನಃ ಶಿಷ್ಯಃ ಕೌಶಲ್ಯಸ್ಯ ಮಹಾತ್ಮನಃ ॥೭೫॥**

**ಚತುರ್ವಿಂಶತಿಧಾ ಯೇನ ಪ್ರೋಕ್ತಾ ವೈ ಸಾಮಸಂಹಿತಾಃ ।**
**ಸ್ಮೃತಾಸ್ತೇ ಪ್ರಾಚ್ಯಸಾಮಾನಃ ಕಾರ್ತಾ ನಾಮೇಹ ಸಾಮಗಾಃ ॥೭೬॥**

**ಕಾರ್ತಿರುಗ್ರಾಯುಧೋಽಸೌ ವೈ ಮಹಾಪೌರವವರ್ಧನಃ ।**
**ಬಭೂವ ಯೇನ ವಿಕ್ರಮ್ಯ ಪೃಥುಕಸ್ಯ ಪಿತಾ ಹತಃ ॥೭೭॥**

**ನೀಲೋ ನಾಮ ಮಹಾರಾಜಃ ಪಾಂಚಾಲಾಧಿಪತಿರ್ವಶೀ ।**
**ಉಗ್ರಾಯುಧಸ್ಯ ದಾಯಾದಃ ಕ್ಷೇಮೋ ನಾಮ ಮಹಾಯಶಾಃ ॥೭೮॥**

---

೭೫. ಆ ಸನ್ನತಿಮಂತನಿಗೆ ಕೃತನೆಂಬ ಶ್ಲಾಘ್ಯನಾದ ಕುಮಾರನು ಉದಿಸಿದನು. ಇವನು ಕುಶಲನ ಪುತ್ರನೂ, ಮಹಾತ್ಮನೂ ಆದ ಹಿರಣ್ಯನಾಭಿಯ ಶಿಷ್ಯನು.

೭೬. ಅವನು ಸಾಮಸಂಹಿತೆಗಳನ್ನು ಇಪ್ಪತ್ತು ನಾಲ್ಕು ಭಾಗವಾಗಿ ವಿಂಗಡಿಸಿದನು. ಅವುಗಳಿಗೆ ಪ್ರಾಚ್ಯಸಾಮಗಳೆಂಬ ವ್ಯವಹಾರವು ಬಂದಿತು. ಸಾಮವೇದವನ್ನು ಅಧ್ಯಯನ ಮಾಡುವವರಿಗೆ ಅವನ ಹೆಸರನ್ನನುಸರಿಸಿ ಕಾರ್ತರೆಂಬ ಪ್ರಖ್ಯಾತಿ ಲೋಕದಲ್ಲಿ ಬಂದಿದೆ.

೭೭. ಕೃತನ ಮಗನಾದ ಉಗ್ರಾಯುಧನು ಮಹಾಪೌರವನ ವಂಶಕ್ಕೆ ಕೀರ್ತಿಯನ್ನು ತಂದು ಬೆಳೆಸಿದನು. ತನ್ನ ಪರಾಕ್ರಮದಿಂದ ಅವನು ಪೃಥುಕನ ತಂದೆಯೂ, ಪಾಂಚಾಲಾಧಿಪತಿಯೂ, ವೀರನೂ ಆದ ನೀಲನೆಂಬ ಮಹಾರಾಜನನ್ನು ಸಂಹರಿಸಿದನು.

೭೮. ಉಗ್ರಾಯುಧನಿಗೆ ವಿಶೇಷ ಕೀರ್ತಿಶಾಲಿಯಾದ ಕ್ಷೇಮನೆಂಬ ಮಗನು ಜನಿಸಿದನು.

**ಕ್ಷೇಮಾತ್ಸುನೀಥಃ ಸಂಜಜ್ಞೇ ಸುನೀಥಸ್ಯ ನೃಪಂಜಯಃ ।**
**ನೃಪಂಜಯಾಚ್ಚ ವಿರಥ ಇತ್ಯೇತೇ ಪೌರವಾಃ ಸ್ಮೃತಾಃ ॥೭೯॥**

**ಇತಿ ಶ್ರೀಮತ್ಸ್ಯೇ ಮಹಾಪುರಾಣೇ ಸೋಮವಂಶೇ ಪೌರವವಂಶ ಕೀರ್ತನಂ ನಾಮೈಕೋನಪಂಚಾಶತ್ತಮೋಽಧ್ಯಾಯಃ**

---

೭೯. ಕ್ಷೇಮನಿಂದ ಸುನೀಥನು ಹುಟ್ಟಿದನು. ಸುನೀಥನ ಮಗನು ನೃಪಂಜಯ ನೆಂಬುವನು. ನೃಪಂಜಯನ ಪುತ್ರನಿಗೆ ವಿರಥನೆಂದು ಹೆಸರು. ಇವರೆಲ್ಲರೂ ಪೂರುವಿನ ವಂಶದಲ್ಲಿ ಹುಟ್ಟಿದವರೆಂದು ತಿಳಿಯಿರಿ.

## ಅಧ್ಯಾಯದ ಸಾರಾಂಶ

ಪೂರುವಿನ ವಂಶದಲ್ಲಿ ದುಷ್ಯಂತನು ಜನಿಸಿದನು. ಇವನ ಪತ್ನಿ ಶಕುಂತಲೆ. ಅವಳಲ್ಲಿ ಭರತನು ಜನಿಸಿದನು. ಏನೋ ಕಾರಣದಿಂದ ದುಷ್ಯಂತನಿಗೆ ತನ್ನ ಪತ್ನೀ ಪುತ್ರರ ನೆನಪು ಮರೆತುಹೋಯಿತು. ಅವರು ಇವನ ಬಳಿಗೆ ಬಂದಾಗ ಇವನು ತಿರಸ್ಕರಿಸಿದನು. ಆಗ ಅವರನ್ನು ಸ್ವೀಕರಿಸುವಂತೆ ಅಶರೀರವಾಣಿಯು ನುಡಿಯಿತು. ಬಳಿಕ ರಾಜನು ಆ ವಚನವನ್ನು ಗೌರವಿಸಿ ಶಕುಂತಲೆಯನ್ನೂ, ಭರತನನ್ನೂ ಅಂಗೀಕರಿಸಿದನು.

ಬೃಹಸ್ಪತಿಯು ಗರ್ಭಿಣಿಯಾಗಿದ್ದ ತನ್ನ ಅತ್ತಿಗೆಯಲ್ಲಿ ಮೋಹಗೊಂಡನು. ಅವಳು ಸಮ್ಮತಿಸದೆ ಇವನಿಗೆ ನೀತಿಯನ್ನು ಹೇಳಿದಳು. ಇವನ ವೀರ್ಯವು ನೆಲದ ಮೇಲೆ ಬಿದ್ದು ತತ್‌ಕ್ಷಣವೇ ಭರದ್ವಾಜನೆಂಬ ಕುಮಾರನುದಿಸಿದನು. ಬೃಹಸ್ಪತಿ ಯಾಗಲೀ ಅವನ ಅತ್ತಿಗೆಯಾಗಲೀ ಆ ಮಗುವನ್ನು ತೆಗೆದುಕೊಂಡುಹೋಗಿ ಸಾಕಲಿಲ್ಲ. ಆ ತಬ್ಬಲಿಯನ್ನು ಮರುದ್ದೇವತೆಗಳು ಸಲಹಿದರು.

ಅದೇ ವೇಳೆಯಲ್ಲಿ ಭರತಚಕ್ರವರ್ತಿಯು ಸಂತಾನಾಪೇಕ್ಷೆಯಿಂದ ಮರು ತ್ಸೋಮವೆಂಬ ಯಾಗವನ್ನು ಮಾಡಿದನು. ಮರುದ್ದೇವತೆಗಳು ತಾವು ಸಲಹುತ್ತಿದ್ದ ಭರಧ್ವಾಜನನ್ನು ಭರತನಿಗೆ ಒಪ್ಪಿಸಿದರು. ಅವನಿಂದಲೇ ಭರತನ ವಂಶವು ಬೆಳೆಯಿತು. ಭರತನು ಮಹಾವೀರ. ಅವನಿಂದಲೇ ಅವರ ವಂಶದವರಿಗೆ ಭಾರತ ರೆಂಬ ಹೆಸರು ಬಂದಿತು.

ಪೌರವವಂಶದಲ್ಲಿ ಅಜಮೀಢ, ಮಹಾಪೌರವ ಮುಂತಾದ ವೀರಭೂಪತಿಗಳು ಜನಿಸಿ ಕೀರ್ತಿಶಾಲಿಗಳಾದರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಸೋಮವಂಶದೊಳಗೆ ಪೌರವವಂಶಕೀರ್ತನವೆಂಬ ನಾಲ್ವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

## ಅಥ ಶ್ರೀಮತ್ಸ್ಯಮಹಾಪುರಾಣೇ ಪಂಚಾಶತ್ತಮೋಽಧ್ಯಾಯಃ

॥ ಸೂತ ಉವಾಚ ॥

ಅಜಮೀಢಸ್ಯ ನೀಲಿನ್ಯಾಂ ನೀಲಃ ಸಮಭವನ್ನೃಪಃ ।
ನೀಲಸ್ಯ ತಪಸೋಗ್ರೇಣ ಸುಶಾಂತಿರುದಪದ್ಯತ ॥ ೧ ॥

ಪುರಜಾನುಃ ಸುಶಾಂತೇಸ್ತು ಪೃಥುಸ್ತು ಪುರುಜಾನುತಃ ।
ಭದ್ರಾಶ್ವಃ ಪೃಥುದಾಯಾದೋ ಭದ್ರಾಶ್ವತನಯಾಞ್ಛೃಣು ॥ ೨ ॥

ಮುದ್ಗಲಶ್ಚ ಜಯಶ್ಚೈವ ರಾಜಾ ಬೃಹದಿಷುಸ್ತಥಾ ।
ಜವೀನರಶ್ಚ ವಿಕ್ರಾಂತಃ ಕಪಿಲಶ್ಚೈವ ಪಂಚಮಃ ॥ ೩ ॥

ಪಂಚಾನಾಂ ಚೈವ ಪಂಚಾಲಾನೇತಾಞ್ಜನಪದಾನ್ವಿದುಃ ।
ಪಂಚಾಲಂ ರಕ್ಷಣೋ ಹ್ಯೇತೇ ದೇಶಾನಾಮಿತಿ ನಃ ಶ್ರುತಂ ॥ ೪ ॥

---

೧. ಸೂತಪೌರಾಣಿಕನು ಹೇಳಿದನು.—ಅಜಮೀಢನಿಗೆ ನೀಲಿನಿಯಲ್ಲಿ ನೀಲನೆಂಬ ಅರಸನು ಮಗನಾಗಿ ಹುಟ್ಟಿದನು. ಅವನ ಉಗ್ರತಪಸ್ಸಿನ ಫಲವಾಗಿ ಸುಶಾಂತಿಯೆಂಬ ಪುತ್ರನು ಜನಿಸಿದನು.

೨. ಸುಶಾಂತಿಗೆ ಪುರುಜಾನುವೂ, ಪುರುಜಾನುವಿಗೆ ಪೃಥುವೂ ಮಕ್ಕಳಾದರು. ಪೃಥುವಿಗೆ ಭದ್ರಾಶ್ವನೆಂಬುವನು ಜನಿಸಿದನು. ಇನ್ನು ಭದ್ರಾಶ್ವನ ಮಕ್ಕಳನ್ನು ಹೇಳುವೆನು ಕೇಳು.

೩. ಮುದ್ಗಲ, ಜಯ, ಅರಸಾದ ಬೃಹದಿಷು, ಪರಾಕ್ರಮಶಾಲಿಯಾದ ಜವೀನರ, ಕಪಿಲ ಇವರೇ ಆ ಐದು ಜನ ಮಕ್ಕಳು.

೪. ಈ ಐವರು ನೆಲೆಸಿದ ದೇಶಗಳಿಗೆ ಪಂಚಾಲ ದೇಶಗಳೆಂದು ಹೆಸರು. ಇವರು ಸಾಮರ್ಥ್ಯದಿಂದ ತಮ್ಮತಮ್ಮ ನಾಡುಗಳನ್ನು ಆಳುತ್ತಿದ್ದರೆಂದು ಕೇಳಿದ್ದೇವೆ. ಪಂಚ ಎಂದರೆ ಐವರು, ಅಲಂ ಎಂದರೆ ಶಕ್ತಿ. ಐವರೂ ಶಕ್ತಿಯಿಂದ ಆಳುತ್ತಿದ್ದ ದೇಶಕ್ಕೆ ಪಂಚಾಲದೇಶವೆಂದೂ, ಅಲ್ಲಿನ ಅರಸರಿಗೆ ಪಾಂಚಾಲರೆಂದೂ ಹೆಸರು ಬಂದಿತು.

ಮುದ್ಗಲಸ್ಯಾಪಿ ಮೌದ್ಗಲ್ಯಾಃ ಕ್ಷತ್ರೋಪೇತಾ ದ್ವಿಜಾತಯಃ ।
ಏತೇ ಹ್ಯಂಗಿರಸಃ ಪಕ್ಷಂ ಸಂಶ್ರಿತಾಃ ಕಾಣ್ವಮುದ್ಗಲಾಃ ॥ ೫ ॥

ಮುದ್ಗಲಸ್ಯ ಸುತೋ ಜಜ್ಞೇ ಬ್ರಹ್ಮಿಷ್ಠಃ ಸುಮಹಾಯಶಾಃ ।
ಇಂದ್ರಸೇನಃ ಸುತಸ್ತಸ್ಯ ವಿಂಧ್ಯಾಶ್ವಸ್ತಸ್ಯ ಚಾತ್ಮಜಃ ॥ ೬ ॥

ವಿಂಧ್ಯಾಶ್ವಾನ್ಮಿಥುನಂ ಜಜ್ಞೇ ಮೇನಕಾಯಾಮಿತಿ ಶ್ರುತಿಃ ।
ದಿವೋದಾಸಶ್ಚ ರಾಜರ್ಷಿರಹಲ್ಯಾ ಚ ಯಶಸ್ವಿನೀ ॥ ೭ ॥

ಶರದ್ವತಸ್ತು ದಾಯಾದಮಹಲ್ಯಾ ಸಂಪ್ರಸೂಯತ ।
ಶತಾನಂದಮೃಷಿಶ್ರೇಷ್ಠಂ ತಸ್ಯಾಪಿ ಸುಮಹಾತಪಾಃ ॥ ೮ ॥

ಸುತಃ ಸತ್ಯಧೃತಿರ್ನಾಮ ಧನುರ್ವೇದಸ್ಯ ಪಾರಗಃ ।
ಆಸೀತ್ಸತ್ಯಧೃತೇಃ ಶುಕ್ರಮಮೋಘಂ ಧಾರ್ಮಿಕಸ್ಯ ತು ॥ ೯ ॥

---

೫. ಮುದ್ಗಲನ ಮಕ್ಕಳಿಗೆ ಮೌದ್ಗಲ್ಯರೆಂದು ಹೆಸರು. ಇವರು ಕ್ಷತ್ರಧರ್ಮ ಸಹಿತರಾದ ಬ್ರಾಹ್ಮಣರು. ಇವರು ಅಂಗಿರಸನ ಪಕ್ಷವನ್ನು ಆಶ್ರಯಿಸಿದವರು. ಇವರಿಗೆ ಕಾಣ್ವಮುದ್ಗಲರೆಂದು ಹೆಸರು.

೬. ಮುದ್ಗಲನಿಗೆ ಅತಿಶಯ ಕೀರ್ತಿಶಾಲಿಯಾದ ಬ್ರಹ್ಮಿಷ್ಠನೆಂಬ ಮಗನು ಹುಟ್ಟಿದನು. ಅವನ ಮಗನು ಇಂದ್ರಸೇನನು. ಅವನ ಪುತ್ರನಿಗೆ ವಿಂಧ್ಯಾಶ್ವನೆಂದು ಹೆಸರು.

೭. ವಿಂಧ್ಯಾಶ್ವನಿಂದ ಮೇನಕೆಯಲ್ಲಿ ಅವಳಿ ಮಕ್ಕಳು ಹುಟ್ಟಿದರು. ರಾಜರ್ಷಿಯಾದ ದಿವೋದಾಸ ಮತ್ತು ಯಶಸ್ವಿನಿಯಾದ ಅಹಲ್ಯೆಯೆಂದು ಅವರ ಹೆಸರು.

೮. ಶರದ್ವಂತನ ಪತ್ನಿಯಾದ ಅಹಲ್ಯೆಯು ಋಷಿಶ್ರೇಷ್ಠನಾದ ಶತಾನಂದನನ್ನು ಹೆತ್ತಳು. ಶತಾನಂದನಿಗೂ ಸಹ ಮಹಾತಪಸ್ವಿಯೂ, ಧನುರ್ವೇದ ಪಾರಂಗತನೂ ಆದ ಸತ್ಯಧೃತಿಯೆಂಬ ಕುಮಾರನು ಜನಿಸಿದನು.

೯-೧೦. ಧಾರ್ಮಿಕನಾದ ಸತ್ಯಧೃತಿಯ ರೇತಸ್ಸು ಅಮೋಘವಾದದು. ಒಬ್ಬ ಅಪ್ಸರ ಸ್ತ್ರೀಯನ್ನು ಕಂಡಾಗ ಅವನ ವೀರ್ಯವು ಸೀರಿನಲ್ಲಿ ಬಿದ್ದಿತು.

ಸ್ಕನ್ನಂ ರೇತಃ ಸತ್ಯಧೃತೇರ್ದೃಷ್ಟ್ವಾ ಚಾಪ್ಸರಸಂ ಜಲೇ ।
ಮಿಥುನಂ ತತ್ರ ಸಂಭೂತಂ ತಸ್ಮಿನ್ ಸರಸಿ ಸಂಭೃತಂ ॥೧೦॥

ತತಃ ಸರಸಿ ತಸ್ಮಿಂಸ್ತು ಕ್ರಮಮಾಣಂ ಮಹೀಪತಿಃ ।
ದೃಷ್ಟ್ವಾ ಜಗ್ರಾಹ ಕೃಪಯಾ ಶಂತನುರ್ಮೃಗಯಾಂ ಗತಃ । ॥೧೧॥

ಏತೇ ಶರದ್ವತಃ ಪುತ್ರಾ ಆಖ್ಯಾತಾ ಗೌತಮಾ ವರಾಃ ।
ಅತ ಊರ್ಧ್ವಂ ಪ್ರವಕ್ಷ್ಯಾಮಿ ದಿವೋದಾಸಸ್ಯ ವೈ ಪ್ರಜಾಃ ॥೧೨॥

ದಿವೋದಾಸಸ್ಯ ದಾಯಾದೋ ಧರ್ಮಿಷ್ಠೋ ಮಿತ್ರಯುರ್ನೃಪಃ ।
ಮೈತ್ರಾಯಣಾವರಃ ಸೋಽಥ ಮೈತ್ರೇಯಸ್ತು ತತಃ ಸ್ಮೃತಃ ॥೧೩॥

ಏತೇ ವಂಶ್ಯಾ ಯತೇಃ ಪಕ್ಷಾಃ ಕ್ಷತ್ರೋಪೇತಾಸ್ತು ಭಾರ್ಗವಾಃ ।
ರಾಜಾ ಚೈದ್ಯವರೋ ನಾಮ ಮೈತ್ರೇಯಸ್ಯ ಸುತಃ ಸ್ಮೃತಃ ॥೧೪॥

---

ಬಳಿಕ ಆ ಸರೋವರದಲ್ಲಿ ಪರಿಪುಷ್ಟಾವಯವದ ಒಂದು ಗಂಡೂ ಒಂದು ಹೆಣ್ಣೂ ಉತ್ಪನ್ನವಾದುವು.

೧೧. ತರುವಾಯ ಬೇಟೆಗಾಗಿ ಹೋಗಿದ್ದ ಶಂತನು ಮಹಾರಾಜನು ಸರೋವರದಲ್ಲಿ ಆವೆರಡು ಮಕ್ಕಳೂ ಓಡಾಡುತ್ತಿರುವುದನ್ನು ಕಂಡು ಕನಿಕರದಿಂದ ಎತ್ತಿಕೊಂಡು ಬಂದನು.

೧೨. ಈಗ ಹೇಳಿದವರೆಲ್ಲರೂ ಶರದ್ವಂತನ ಪುತ್ರಸಂತತಿಯವರು. ಇವರಿಗೆ ಶ್ರೇಷ್ಠರಾದ ಗೌತಮರೆಂದು ಹೆಸರು. ಇನ್ನು ಮುಂದೆ ದಿವೋದಾಸನ ಸಂತತಿಯನ್ನು ಹೇಳುವೆನು.

೧೩. ಧರ್ಮಿಷ್ಠನಾದ ಮಿತ್ರಯುವೆಂಬ ರಾಜನು ದಿವೋದಾಸನ ಪುತ್ರನು. ಇವನು ಮೈತ್ರಾಯಣನ ತಮ್ಮ. ಇವನಿಂದ ಮೈತ್ರೇಯನೆಂಬವನು ಜನಿಸಿದನು.

೧೪. ಈ ವಂಶದವರು ಯತಿಯ ಪಕ್ಷದವರು. ಭಾರ್ಗವರಾದರೋ ಕ್ಷತ್ರಿಯ ವರ್ಣಸಂಬಂಧವುಳ್ಳವರು. ಮೈತ್ರೇಯನಿಗೆ ಚೈದ್ಯವರನೆಂಬ ರಾಜನು ಮಗನಾದನು.

ಅಥ ಚೈದ್ಯವರಾದ್ವಿದ್ವಾ೯ ಸುದಾಸಸ್ತಸ್ಯ ಚಾತ್ಮಜಃ ।
ಅಜಮೀಢಃ ಪುನರ್ಜಾತಃ ಕ್ಷೀಣೇ ವಂಶೇ ತು ಸೋಮಕಃ ॥೧೫॥

ಸೋಮಕಸ್ಯ ಸುತೋ ಜಂತುರ್ಹತೇ ತಸ್ಮಿನ್ಛತಂ ಬಭೌ ।
ಪುತ್ರಾಣಾಮಜಮೀಢಸ್ಯ ಸೋಮಕಸ್ಯ ಮಹಾತ್ಮನಃ ॥೧೬॥

ಮಹಿಷೀ ತ್ವಜಮೀಢಸ್ಯ ಧೂಮಿನೀ ಪುತ್ರಗೃದ್ಧಿನೀ ।
ಪುತ್ರಾಭಾವೇ ತಪಸ್ತೇಪೇ ಶತಂ ವರ್ಷಾಣಿ ದುಶ್ಚರಂ ॥೧೭॥

ಹುತ್ವಾಗ್ನಿಂ ವಿಧಿವತ್ಸಮ್ಯಕ್ಪವಿತ್ರೀಕೃತಭೋಜನಾ ।
ಅಗ್ನಿಹೋತ್ರೇ ಕುಶೇಷ್ವೇವ ಸಾ ಸುಷ್ವಾಪ ಮಹಾವ್ರತಾ ॥೧೮॥

ತಸ್ಯಾಂ ವೈ ಧೂಮವರ್ಣಾಯಾಮಜಮೀಢಃ ಸಮೀಯಿವಾ೯ ।
ಋಕ್ಷಂ ಸಾ ಜನಯಾಮಾಸ ಧೂಮವರ್ಣಂ ಶತಾಗ್ರಜಂ ॥೧೯॥

---

೧೫. ಚೈದ್ಯವರನಿಂದ ವಿದ್ವಾ೯ ಎಂಬವನೂ, ಅವನಿಂದ ಸುದಾಸನೂ ಜನಿಸಿದರು. ತನ್ನ ವಂಶವು ಕ್ಷೀಣವಾಗುವುದನ್ನು ಕಂಡು ಅಜಮೀಢನು ಸೋಮಕನೆಂಬ ಹೆಸರಿನಿಂದ ಮತ್ತೆ ಹುಟ್ಟಿದನು.

೧೬. ಸೋಮಕನಿಗೆ ಜಂತುವೆಂಬವನು ಮಗನಾದನು. ಅವನು ಮೃತಿ ಹೊಂದಲು, ಅಜಮೀಢನ ರೂಪಾಂತರವೆನಿಸಿದ್ದ ಮಹಾತ್ಮನಾದ ಆ ಸೋಮಕನಿಗೆ ನೂರು ಜನ ಮಕ್ಕಳಾದರು.

೧೭. ಮಕ್ಕಳಿಲ್ಲದಿರಲು ಅಜಮೀಢನ ರಾಣಿಯಾದ ಧೂಮಿನಿಯು ಸಂತಾನಾಪೇಕ್ಷೆಯಿಂದ ನೂರು ವರ್ಷಗಳ ಕಾಲ ತೀವ್ರವಾದ ತಪಸ್ಸನ್ನು ಮಾಡಿದಳು.

೧೮. ಅವಳು ಶಾಸ್ತ್ರೋಕ್ತವಾಗಿ ಅಗ್ನಿಯಲ್ಲಿ ಹೋಮವನ್ನು ಮಾಡಿ, ಪರಿಶುದ್ಧವಾದ ಆಹಾರವನ್ನು ಸ್ವೀಕರಿಸಿ, ಅಗ್ನಿಹೋತ್ರ ಗೃಹದಲ್ಲಿ ದರ್ಭಾಸ್ತರಣದ ಮೇಲೆಯೇ ಮಹಾ ವ್ರತನಿಷ್ಠಳಾಗಿ ಮಲಗುತ್ತಿದ್ದಳು.

೧೯. ಮೈಯೆಲ್ಲ ಹೊಗೆಯ ಬಣ್ಣವಾಗಿದ್ದ ಅವಳೊಡನೆ ಅಜಮೀಢನು ಕೂಡಿದನು. ಅವಳು ಧೂಮವರ್ಣದವನಾದ ಋಕ್ಷನನ್ನು ಹೆತ್ತಳು. ಇವನೇ ನೂರು ಜನ ಮಕ್ಕಳಲ್ಲಿ ಹಿರಿಯವನು.

**ಋಕ್ಷಾತ್ಸಂವರಣೋ ಜಜ್ಞೇ ಕುರುಃ ಸಂವರಣಾತ್ತತಃ ।**
**ಯಃ ಪ್ರಯಾಗಮತಿಕ್ರಮ್ಯ ಕುರುಕ್ಷೇತ್ರಮಕಲ್ಪಯತ್ ॥೨೦॥**

**ಕೃಷ್ಯತಸ್ತು ಮಹಾರಾಜೋ ವರ್ಷಾಣಿ ಸುಬಹೂನ್ಯಥ ।**
**ಕೃಷ್ಯಮಾಣಸ್ತತಃ ಶಕ್ರೋ ಭಯಾತ್ತಸ್ಮೈ ವರಂ ದದೌ ॥೨೧॥**

**ಪುಣ್ಯಂ ಚ ರಮಣೀಯಂ ಚ ಕುರುಕ್ಷೇತ್ರಂ ತು ತತ್ಸ್ಮೃತಂ ।**
**ತಸ್ಯಾನ್ವವಾಯಃ ಸುಮಹಾನ್ಯಸ್ಯ ನಾಮ್ನಾ ತು ಕೌರವಾಃ ॥೨೨॥**

**ಕುರೋಸ್ತು ದಯಿತಾಃ ಪುತ್ರಾಃ ಸುಧನ್ವಾ ಜಹ್ನುರೇವ ಚ ।**
**ಪರೀಕ್ಷಿಚ್ಚ ಮಹಾತೇಜಾಃ ಪ್ರಜನಶ್ಚಾರಿಮರ್ದನಃ ॥೨೩॥**

**ಸುಧನ್ವನಸ್ತು ದಾಯಾದಃ ಪುತ್ರೋ ಮತಿಮತಾಂ ವರಃ ।**
**ಚ್ಯವನಸ್ತಸ್ಯ ಪುತ್ರಸ್ತು ರಾಜಾ ಧರ್ಮಾರ್ಥತತ್ತ್ವವಿತ್ ॥೨೪॥**

---

೨೦. ಋಕ್ಷನಿಂದ ಸಂವರಣನೂ ಅವನಿಂದ ಕುರುವೂ ಜನಿಸಿದರು. ಕುರುವು ಪ್ರಯಾಗ ಕ್ಷೇತ್ರಕ್ಕಿಂತಲೂ ಅತಿಶಯವೆನಿಸಿದ ಕುರುಕ್ಷೇತ್ರವನ್ನು ನಿರ್ಮಿಸಿದನು.

೨೧. ಆ ಮಹಾರಾಜನು ಯಜ್ಞಾರ್ಥವಾಗಿ ಎಷ್ಟೋ ವರ್ಷಗಳ ಕಾಲ ನೆಲವನ್ನು ಉಳುತ್ತಿದ್ದನು. ಇಂದ್ರನು " ಅವನೆಲ್ಲಿ ತನ್ನ ಸ್ಥಾನವನ್ನಾಕ್ರಮಿಸುವನೋ " ಎಂದು ಹೆದರಿ ಅವನಿಗೆ ವರವನ್ನು ಕೊಟ್ಟನು.

೨೨. ಬಳಿಕ ಆ ಸ್ಥಳವು ಪುಣ್ಯವೂ ರಮಣೀಯವೂ ಆದ ಕುರುಕ್ಷೇತ್ರವೆಂಬ ಪವಿತ್ರಸ್ಥಲವಾಯಿತು. ಆ ಕುರುವಿನ ವಂಶವು ಅತಿ ವಿಸ್ತೃತವಾದುದು. ಇವನಿಂದಲೇ ಆ ವಂಶದವರಿಗೆ ಕೌರವರೆಂಬ ಹೆಸರು ಬಂದಿತು.

೨೩. ಕುರುವಿಗೆ ಸುಧನ್ವ, ಜಹ್ನು, ಅತಿತೇಜಸ್ವಿಯಾದ ಪರೀಕ್ಷಿತ್ತು, ಶತ್ರುನಾಶಕನಾದ ಪ್ರಜನ ಎಂಬ ಪ್ರಿಯಪುತ್ರರು ಜನಿಸಿದರು.

೨೪. ಸುಧನ್ವನಿಗೆ ಪ್ರಾಜ್ಞರಲ್ಲಿ ಅಗ್ರೇಸರನಾದ ಪುತ್ರನೆಂಬ ಮಗನು ಹುಟ್ಟಿದನು. ಧರ್ಮಾರ್ಥರಹಸ್ಯವನ್ನು ಚೆನ್ನಾಗಿ ಬಲ್ಲ ಚ್ಯವನನೆಂಬ ರಾಜನು ಅವನ ಮಗನಾದನು.

ಚ್ಯವನಸ್ಯ ಕೃಮಿಃ ಪುತ್ರ ಋಕ್ಷ್ಯಾಜ್ಜಜ್ಞೇ ಮಹಾತಪಾಃ ।
ಕೃಮೇಃ ಪುತ್ರೋ ಮಹಾವೀರ್ಯಃ ಖ್ಯಾತಸ್ತ್ವಿಂದ್ರಸಮೋ ವಿಭುಃ ॥೨೫॥
ಚೈದ್ಯೋಪರಿಚರೋ ವೀರೋ ವಸುರ್ನಾಮಾಂತರಿಕ್ಷಗಃ ।
ಚೈದ್ಯೋಪರಿಚರಾಜ್ಜಜ್ಞೇ ಗಿರಿಕಾ ಸಪ್ತ ವೈ ಸುತಾನ್ ॥೨೬॥
ಮಹಾರಥೋ ಮಗಧರಾಡ್ವಿಶ್ರುತೋ ಯೋ ಬೃಹದ್ರಥಃ ।
ಪ್ರತ್ಯಶ್ರವಾಃ ಕುಶಶ್ಚೈವ ಚತುರ್ಥೋ ಹರಿವಾಹನಃ ॥೨೭॥
ಪಂಚಮಶ್ಚ ಯಜುಶ್ಚೈವ ಮತ್ಸ್ಯಃ ಕಾಲೀ ಚ ಸಪ್ತಮೀ ।
ಬೃಹದ್ರಥಸ್ಯ ದಾಯಾದಃ ಕುಶಾಗ್ರೋ ನಾಮ ವಿಶ್ರುತಃ ॥೨೮॥
ಕುಶಾಗ್ರಸ್ಯಾತ್ಮಜಶ್ಚೈವ ವೃಷಭೋ ನಾಮ ವೀರ್ಯವಾನ್ ।
ವೃಷಭಸ್ಯ ತು ದಾಯಾದಃ ಪುಣ್ಯವಾನ್ನಾಮ ಪಾರ್ಥಿವಃ ॥೨೯॥
ಪುಣ್ಯಃ ಪುಣ್ಯವತಶ್ಚೈವ ರಾಜಾ ಸತ್ಯಧೃತಿಸ್ತತಃ ।
ದಾಯಾದಸ್ತಸ್ಯ ಧನುಷಸ್ತಸ್ಮಾತ್ಸರ್ವಶ್ಚ ಜಜ್ಞಿವಾನ್ ॥೩೦॥

---

೨೫. ಚ್ಯವನನಿಗೆ ಋಕ್ಷನ ಅನುಗ್ರಹದಿಂದ ಕೃಮಿಯೆಂಬ ಮಹಾತಪಸ್ವಿಯಾದ ಪುತ್ರನುದಿಸಿದನು. ಕೃಮಿಗೆ ಬಹು ಪರಾಕ್ರಮಶಾಲಿಯೂ, ಇಂದ್ರನಿಗೆ ಸಮಾನನೂ, ಸರ್ವವ್ಯಾಪಕನೂ ಆದ ಚೈದ್ಯೋಪರಿಚರನೆಂಬ ವಸುವು ಮಗನಾದನು. ಇವನಿಗೆ ಅಂತರಿಕ್ಷಗಮನ ಸಾಮರ್ಥ್ಯವಿದ್ದಿತು.

೨೬–೨೭. ಚೈದ್ಯೋಪರಿಚರನಿಂದ ಅವನ ಪತ್ನಿಯಾದ ಗಿರಿಕೆಯು ಏಳು ಜನ ಮಕ್ಕಳನ್ನು ಪಡೆದಳು. ಮಗಧರಾಜನಾಗಿ ಮಹಾರಥನೆಂದು ಪ್ರಸಿದ್ಧಿಪಡೆದ ಬೃಹದ್ರಥ, ಪ್ರತ್ಯಶ್ರವ, ಕುಶ ಮತ್ತು ನಾಲ್ಕನೆಯವನು ಹರಿವಾಹನ.

೨೮. ಐದನೆಯವನು ಯಜು, ಮುಂದಿನವನು ಮತ್ಸ್ಯ. ಏಳನೆಯವಳು ಕಾಲಿಯೆಂಬ ಕನ್ಯೆ. ಬೃಹದ್ರಥನ ಮಗನಿಗೆ ಕುಶಾಗ್ರನೆಂದು ಹೆಸರು.

೨೯. ಕುಶಾಗ್ರನ ಮಗನು ವೀರನಾದ ವೃಷಭನೆಂಬವನು. ವೃಷಭನಿಗೆ ಪುಣ್ಯವಂತನೆಂದು ಪ್ರಸಿದ್ಧನಾದ ರಾಜನು ಮಗನಾದನು.

೩೦. ಪುಣ್ಯವಂತನಿಂದ ಪುಣ್ಯನೂ ಅವನಿಂದ ಸತ್ಯಧೃತಿಯೂ ಜನಿಸಿದರು. ಅವನ ಮಗನಿಗೆ ಧನುಷನೆಂದು ಹೆಸರು. ಅವನಿಂದ ಸರ್ವನೆಂಬ ರಾಜನು ಹುಟ್ಟಿದನು.

ಸರ್ವಸ್ಯ ಸಂಭವಃ ಪುತ್ರಸ್ತಸ್ಮಾದ್ರಾಜಾ ಬೃಹದ್ರಥಃ ।
ದ್ವೇ ತಸ್ಯ ಶಕಲೇ ಜಾತೇ ಜರಯಾ ಸಂಧಿತಶ್ಚ ಸಃ ॥೩೧॥

ಜರಯಾ ಸಂಧಿತೋ ಯಸ್ಮಾಜ್ಜರಾಸಂಧಸ್ತತಃ ಸ್ಮೃತಃ ।
ಜೇತಾ ಸರ್ವಸ್ಯ ಕ್ಷತ್ರಸ್ಯ ಜರಾಸಂಧೋ ಮಹಾಬಲಃ ॥೩೨॥

ಜರಾಸಂಧಸ್ಯ ಪುತ್ರಸ್ತು ಸಹದೇವಃ ಪ್ರತಾಪವಾನ್ ।
ಸಹದೇವಾತ್ಮಜಃ ಶ್ರೀಮಾನ್ ಸೋಮವಿತ್ಸುಮಹಾತಪಾಃ ॥೩೩॥

ಶ್ರುತಶ್ರವಾಃ ಸೋಮವಿದೋ ಮಾಗಧಾಃ ಪರಿಕೀರ್ತಿತಾಃ ।
ಯಜುಸ್ತ್ವಜನಯತ್ಪುತ್ರಂ ಸುರಥಂ ನಾಮ ಭೂಮಿಪಂ ॥೩೪॥

ಸುರಥಸ್ಯ ತು ದಾಯಾದೋ ವೀರೋ ರಾಜಾ ವಿದೂರಥಃ ।
ವಿದೂರಥಸುತಶ್ಚಾಪಿ ಸಾರ್ವಭೌಮ ಇತಿ ಸ್ಮೃತಃ ॥೩೫॥

ಸಾರ್ವಭೌಮಾಜ್ಜಯತ್ಸೇನೋ ರುಚಿರಸ್ತಸ್ಯ ಚಾತ್ಮಜಃ ।
ರುಚಿರಾತ್ತು ತತೋ ಭೌಮಸ್ತ್ವರಿತಾಯುಸ್ತತೋಽಭವತ್ ॥೩೬॥

---

೩೧. ಸರ್ವನ ಪುತ್ರನಿಗೆ ಸಂಭವನೆಂದು ಹೆಸರು. ಅವನಿಂದ ಬೃಹದ್ರಥನೆಂಬ ಅರಸು ಹುಟ್ಟಿದನು. ಅವನ ಹೆಂಡತಿಯ ಹೊಟ್ಟೆಯಲ್ಲಿ ಒಂದು ದೇಹದ ಎರಡು ಹೋಳುಗಳು ಹುಟ್ಟಿದುವು. ಜರೆಯೆಂಬ ರಾಕ್ಷಸಿಯು ಅವೆರಡನ್ನೂ ಒಂದುಗೂಡಿಸಿದಳು.

೩೨. ಜರೆಯಿಂದ ಸೇರಿಸಲ್ಪಟ್ಟ ಕಾರಣದಿಂದ ಅವನಿಗೆ ಜರಾಸಂಧನೆಂದು ಹೆಸರಾಯಿತು. ಅವನು ಮಹಾ ಬಲಿಷ್ಠನು. ಕ್ಷತ್ರಿಯರನ್ನೆಲ್ಲ ಗೆದ್ದನು.

೩೩. ಜರಾಸಂಧನಿಗೆ ಪ್ರತಾಪಶಾಲಿಯಾದ ಸಹದೇವನೆಂಬವನು ಪುತ್ರನಾದನು. ಅವನ ಮಗನು ಉಗ್ರತಪಸ್ವಿಯೂ, ಶ್ರೀಮಂತನೂ ಆದ ಸೋಮವಿತ್ತು.

೩೪. ಶ್ರುತಶ್ರವನು ಸೋಮವಿತ್ತಿನ ಮಗನು. ಇವರೆಲ್ಲರಿಗೂ ಮಾಗಧರೆಂಬ ಹೆಸರು ಬಂದಿತು.

೩೫. ಸುರಥನ ಮಗನು ವೀರನಾದ ವಿದೂರಥನೆಂಬ ರಾಜನು. ವಿದೂರಥನ ಮಗನಿಗೆ ಸಾರ್ವಭೌಮನೆಂದು ಹೆಸರು.

೩೬. ಸಾರ್ವಭೌಮನಿಗೆ ಜಯತ್ಸೇನನೂ, ಅವನಿಗೆ ರುಚಿರನೂ, ರುಚಿರನಿಗೆ ಭೌಮನೂ ಅವನಿಗೆ ತ್ವರಿತಾಯುವೂ ಮಕ್ಕಳಾದರು.

ಅಕ್ರೋಧನಸ್ತ್ವಾಯುಸುತಸ್ತಸ್ಮಾದ್ದೇವಾತಿಥಿಃ ಸ್ಮೃತಃ ।
ದೇವಾತಿಥೇಸ್ತು ದಾಯಾದೋ ದಕ್ಷ ಏವ ಬಭೂವ ಹ ॥೩೭॥

ಭೀಮಸೇನಸ್ತತೋ ದಕ್ಷಾದ್ದಿಲೀಪಸ್ತಸ್ಯ ಚಾತ್ಮಜಃ ।
ದಿಲೀಪಸ್ಯ ಪ್ರತೀಪಸ್ತು ತಸ್ಯ ಪುತ್ರಾಸ್ತ್ರಯಃ ಸ್ಮೃತಾಃ ॥೩೮॥

ದೇವಾಪಿಃ ಶಂತನುಶ್ಚೈವ ಬಾಹ್ಲೀಕಶ್ಚೈವ ತೇ ತ್ರಯಃ ।
ಬಾಹ್ಲೀಕಸ್ಯ ತು ದಾಯಾದಾಃ ಸಪ್ತ ಬಾಹ್ಲೀಶ್ವರಾ ನೃಪ ।
ದೇವಾಪಿಸ್ತು ಹ್ಯಪಧ್ಯಾತಃ ಪ್ರಜಾಭಿರಭವನ್ಮುನಿಃ ॥೩೯॥

॥ ಮುನಯ ಊಚುಃ ॥

ಪ್ರಜಾಭಿಸ್ತು ಕಿಮರ್ಥಂ ವೈ ಹ್ಯಪಧ್ಯಾತೋ ಜನೇಶ್ವರಃ ।
ಕೋ ದೋಷೋ ರಾಜಪುತ್ರಸ್ಯ ಪ್ರಜಾಭಿಃ ಸಮುದಾಹೃತಃ ॥೪೦॥

॥ ಸೂತ ಉವಾಚ ।

ಕಿಲಾಸೀದ್ರಾಜಪುತ್ರಸ್ತು ಕುಷ್ಠೀ ತಂ ನಾಭ್ಯಪೂಜಯನ್ ।
ಭವಿಷ್ಯಂ ಕೀರ್ತಯಿಷ್ಯಾಮಿ ಶಂತನೋಸ್ತು ನಿಬೋಧತ ॥೪೧॥

---

೩೭. ಅಕ್ರೋಧನನು ಆಯುವಿನ ಮಗನು. ಅವನಿಂದ ದೇವಾತಿಥಿರಾಜನು ಉದಿಸಿದನು. ದೇವಾತಿಥಿಗೆ ದಕ್ಷನೆಂಬ ಮಗನು ಹುಟ್ಟಿದನು.

೩೮. ದಕ್ಷನಿಂದ ಭೀಮಸೇನನು ಉದಿಸಿದನು. ಅವನ ಮಗನು ದಿಲೀಪನು. ದಿಲೀಪನ ಪುತ್ರನ ಹೆಸರು ಪ್ರತೀಪ. ಇವನಿಗೆ ಮೂವರು ಮಕ್ಕಳು ಇದ್ದರು.

೩೯. ದೇವಾಪಿ, ಶಂತನು ಮತ್ತು ಬಾಹ್ಲೀಕರೆಂಬವರೇ ಅವರು. ಬಾಹ್ಲೀಕನಿಗೆ ಮಕ್ಕಳು ಏಳುಜನ. ಅವರೆಲ್ಲರಿಗೂ ಬಾಹ್ಲೀಶ್ವರರೆಂದು ಪ್ರಸಿದ್ಧಿ. ದೇವಾಪಿಯನ್ನು ಅವನ ಪ್ರಜೆಗಳು ಓಡಿಸಿಬಿಡಲು ಅವನು ಮುನಿಯಾದನು.

೪೦. ಮುನಿಗಳು ಹೇಳಿದರು.—ರಾಜನಾದ ದೇವಾಪಿಯನ್ನು ಪ್ರಜೆಗಳು ಏಕೆ ಓಡಿಸಿದರು? ರಾಜಪುತ್ರನಲ್ಲಿ ಅವರು ಹೇಳಿದ ದೋಷವಾವುದು?

೪೧. ಸೂತ ಪೌರಾಣಿಕನು ಹೇಳಿದನು.—ಆ ರಾಜಪುತ್ರನು ಕುಷ್ಠರೋಗಿಯಾಗಿದ್ದನಲ್ಲವೇ? ಆದಕಾರಣ ಪ್ರಜೆಗಳು ಅವನನ್ನು ಗೌರವಿಸಲಿಲ್ಲ. ಇನ್ನು ಮುಂದಣ ವೃತ್ತಾಂತವನ್ನು ಹೇಳುವೆನು. ಶಂತನುವಿನ ಸಂತತಿಯನ್ನು ಕೇಳಿರಿ.

**ಶಂತನುಸ್ತ್ವಭವದ್ರಾಜಾ ವಿದ್ವಾನ್ ಸೋ ವೈ ಮಹಾಭಿಷಕ್ ।**
**ಇದಂ ಚೋದಾಹರಂತ್ಯತ್ರ ಶ್ಲೋಕಂ ಪ್ರತಿ ಮಹಾಭಿಷಕ್** ॥೪೨॥

**ಯಂ ಯಂ ಕರಾಭ್ಯಾಂ ಸ್ಪೃಶತಿ ಜೀರ್ಣಂ ರೋಗಿಣಮೇವ ಚ ।**
**ಪುನರ್ಯುವಾ ಚ ಭವತಿ ತಸ್ಮಾತ್ತಂ ಶಂತನುಂ ವಿದುಃ** ॥೪೩॥

**ತತ್ತಸ್ಯ ಶಂತನುತ್ವಂ ಹಿ ಪ್ರಜಾಭಿರಿಹ ಕೀರ್ತ್ಯತೇ ।**
**ತತೋಽವೃಣುತ ಭಾರ್ಯಾರ್ಥಂ ಶಂತನುರ್ಜಾಹ್ನವೀಂ ನೃಪ** ॥೪೪॥

**ತಸ್ಯಾಂ ದೇವವ್ರತಂ ನಾಮ ಕುಮಾರಂ ಜನಯದ್ವಿಭುಃ ।**
**ಕಾಲೀ ವಿಚಿತ್ರವೀರ್ಯಂ ತು ದಾಶೇಯೀ ಜನಯತ್ಸುತಂ** ॥೪೫॥

---

೪೨. ಪ್ರಾಜ್ಞನಾದ ಶಂತನುವು ರಾಜನಾಗಿದ್ದನು. ಅವನು ಸುಪ್ರಸಿದ್ಧನಾದ ವೈದ್ಯಶ್ರೇಷ್ಠ. ಅವನ ವೈದ್ಯಶಾಸ್ತ್ರ ಪಾಂಡಿತ್ಯದ ವಿಚಾರವಾಗಿ ಈ ಶ್ಲೋಕವನ್ನು ಹೇಳುತ್ತಾರೆ.

೪೩. "ಅವನು ಯಾವ ಯಾವನನ್ನು ತನ್ನ ಕೈಗಳಿಂದ ಮುಟ್ಟುತ್ತಾನೋ ಅವನು ಮುದುಕನಾಗಿರಲಿ, ರೋಗಿಯಾಗಿರಲಿ ಮತ್ತೆ ಯುವಕನಾಗುವನು. ಆದ ಕಾರಣ ಅವನನ್ನು ಶಂತನು ಎಂದರೆ ಶುಭವನ್ನುಂಟುಮಾಡುವವನು ಎಂದು ಹೇಳುತ್ತಾರೆ."

೪೪. ಓ ರಾಜಾ, ಅವನ ಈ ಶುಭಕರವಾದ ಸ್ವಭಾವವನ್ನು ಪ್ರಜೆಗಳು ಈ ಲೋಕದಲ್ಲಿ ಹೊಗಳುತ್ತಾರೆ. ಅವನು ಗಂಗಾದೇವಿಯನ್ನು ತನ್ನ ಪತ್ನಿಯನ್ನಾಗಿ ಸ್ವೀಕರಿಸಿದನು.

೪೫. ಅವಳಲ್ಲಿ ಆ ರಾಜನಿಂದ ದೇವವ್ರತನೆಂಬ ಕುಮಾರನು ಉದಿಸಿದನು. ದಾಶರಾಜನ ಮಗಳಾದ ಕಾಲಿಯೂ ಸಹ ಶಂತನುವಿನ ಮತ್ತೊಬ್ಬ ಪತ್ನಿ. ಅವಳು ವಿಚಿತ್ರವೀರ್ಯನೆಂಬ ಮಗನನ್ನು ಹೆತ್ತಳು. ಅವನು ಶಂತನುವಿನ ಪ್ರಿಯಪುತ್ರ; ಶಾಂತಾತ್ಮ; ಮತ್ತು ಯಾವ ದೋಷವೂ ಇಲ್ಲದವನು.

ಶಂತನೋರ್ದಯಿತಂ ಪುತ್ರಂ ಶಾಂತಾತ್ಮಾನಮಕಲ್ಮಷಂ ।
ಕೃಷ್ಣದ್ವೈಪಾಯನೋ ನಾಮ ಕ್ಷೇತ್ರೇ ವೈಚಿತ್ರವೀರ್ಯಕೇ ॥೪೬॥

ಧೃತರಾಷ್ಟ್ರಂ ಚ ಪಾಂಡುಂ ಚ ವಿದುರಂ ಚಾಪ್ಯಜೀಜನತ್ ।
ಧೃತರಾಷ್ಟ್ರಸ್ತು ಗಾಂಧಾರ್ಯಾಂ ಪುತ್ರಾನಜನಯಚ್ಛತಂ ॥೪೭॥

ತೇಷಾಂ ದುರ್ಯೋಧನಃ ಶ್ರೇಷ್ಠಃ ಸರ್ವಕ್ಷತ್ರಸ್ಯ ವೈ ಪ್ರಭುಃ ।
ಮಾದ್ರೀ ಕುಂತೀ ತಥಾ ಚೈವ ಪಾಂಡೋರ್ಭಾರ್ಯೇ ಬಭೂವತುಃ ॥೪೮॥

ದೇವದತ್ತಾಃ ಸುತಾಃ ಪಂಚ ಪಾಂಡೋರರ್ಥೇಽಭಿಜಜ್ಞಿರೇ ।
ಧರ್ಮಾದ್ಯುಧಿಷ್ಠಿರೋ ಜಜ್ಞೇ ಮಾರುತಾಚ್ಚ ವೃಕೋದರಃ ॥೪೯॥

ಇಂದ್ರಾದ್ಧನಂಜಯಶ್ಚೈವ ಇಂದ್ರತುಲ್ಯಪರಾಕ್ರಮಃ ।
ನಕುಲಂ ಸಹದೇವಂ ಚ ಮಾದ್ರ್ಯಶ್ವಿಭ್ಯಾಮಜೀಜನತ್ ॥೫೦॥

ಪಂಚೈತೇ ಪಾಂಡವೇಭ್ಯಸ್ತು ದ್ರೌಪದ್ಯಾಂ ಜಜ್ಞಿರೇ ಸುತಾಃ ।
ದ್ರೌಪದ್ಯಜನಯಚ್ಛ್ರೇಷ್ಠಂ ಪ್ರತಿವಿಂಧ್ಯಂ ಯುಧಿಷ್ಠಿರಾತ್ ॥೫೧॥

---

೪೬-೪೭. ಕೃಷ್ಣದ್ವೈಪಾಯನನೆಂಬ ಮಹರ್ಷಿಯು ವಿಚಿತ್ರವೀರ್ಯನ ಪತ್ನಿಯಲ್ಲಿ ಧೃತರಾಷ್ಟ್ರ, ಪಾಂಡು, ವಿದುರ ಎಂಬ ಮೂವರು ಮಕ್ಕಳನ್ನು ಉತ್ಪಾದನ ಮಾಡಿದನು. ಧೃತರಾಷ್ಟ್ರನಿಗೆ ಗಾಂಧಾರಿಯಲ್ಲಿ ನೂರುಜನ ಮಕ್ಕಳಾದರು.

೪೮. ಅವರಲ್ಲಿ ದುರ್ಯೋಧನನು ಶ್ರೇಷ್ಠನು. ಅವನು ಎಲ್ಲ ಕ್ಷತ್ರಿಯರಿಗೂ ಅಧಿಪತಿಯೆನಿಸಿದ್ದನು. ಪಾಂಡುರಾಜನಿಗೆ ಮಾದ್ರಿ ಮತ್ತು ಕುಂತಿಯೆಂಬ ಇಬ್ಬರು ಪತ್ನಿಯರಿದ್ದರು.

೪೯. ಪಾಂಡುವಿಗಾಗಿ ದೇವತೆಗಳು ಅನುಗ್ರಹಿಸಿದ ಐವರು ಮಕ್ಕಳು ಅವನ ಪತ್ನಿಯರಲ್ಲಿ ಹುಟ್ಟಿದರು. ಯಮಧರ್ಮರಾಜನಿಂದ ಧರ್ಮರಾಜನೂ, ವಾಯುವಿನಿಂದ ಭೀಮಸೇನನೂ ಜನಿಸಿದರು.

೫೦. ಪರಾಕ್ರಮದಲ್ಲಿ ಇಂದ್ರನಿಗೆ ಸಮಾನನಾದ ಅರ್ಜುನನು ಇಂದ್ರನಿಂದ ಹುಟ್ಟಿದನು. ಅಶ್ವಿನೀದೇವತೆಗಳ ಅನುಗ್ರಹದಿಂದ ಮಾದ್ರಿಯು ನಕುಲನನ್ನೂ, ಸಹದೇವನನ್ನೂ ಪಡೆದಳು.

೫೧. ಪಾಂಡವರೈವರಿಂದಲೂ ದ್ರೌಪತಿಗೆ ಐವರು ಮಕ್ಕಳು ಜನಿಸಿದರು. ಯುಧಿಷ್ಠಿರನಿಂದ ಅವಳು ಹಿರಿಯಮಗನಾದ ಪ್ರತಿವಿಂಧ್ಯನನ್ನು ಹೆತ್ತಳು.

**ಶ್ರುತಸೇನಂ ಭೀಮಸೇನಾಚ್ಛ್ರುತಕೀರ್ತಿಂ ಧನಂಜಯಾತ್ ।**
**ಚತುರ್ಥಂ ಶ್ರುತಕರ್ಮಾಣಂ ಸಹದೇವಾದಜಾಯತ ॥೫೨॥**

**ನಕುಲಾಚ್ಚ ಶತಾನೀಕಂ ದ್ರೌಪದೇಯಾಃ ಪ್ರಕೀರ್ತಿತಾಃ ।**
**ತೇಭ್ಯೋಽಪರೇ ಪಾಂಡವೇಯಾಃ ಷಡೇವಾನ್ಯೇ ಮಹಾರಥಾಃ ॥೫೩॥**

**ಹೈಡಂಬೋ ಭೀಮಸೇನಾತ್ತು ಪುತ್ರೋ ಜಜ್ಞೇ ಘಟೋತ್ಕಚಃ ।**
**ಕಾಶೀ ಬಲಧರಾದ್ಭೀಮಾಜ್ಜಜ್ಞೇ ವೈ ಸರ್ವಗಂ ಸುತಂ ॥೫೪॥**

**ಸುಹೋತ್ರಂ ತನಯಂ ಮಾದ್ರೀ ಸಹದೇವಾದಸೂಯತ ।**
**ಕರೇಣುಮತ್ಯಾಂ ಚೈದ್ಯಾಯಾಂ ನಿರಮಿತ್ರಸ್ತು ನಾಕುಲಿಂ ॥೫೫॥**

**ಸುಭದ್ರಾಯಾಂ ರಥೀ ಪಾರ್ಥಾದಭಿಮನ್ಯುರಜಾಯತ ।**
**ಯೌಧೇಯಂ ದೇವಕೀ ಚೈವ ಪುತ್ರಂ ಜಜ್ಞೇ ಯುಧಿಷ್ಠಿರಾತ್ ॥೫೬॥**

---

೫೨. ಭೀಮಸೇನನಿಂದ ಶ್ರುತಸೇನನನ್ನೂ, ಅರ್ಜುನನಿಂದ ಶ್ರುತಕೀರ್ತಿಯನ್ನೂ, ಸಹದೇವನಿಂದ ನಾಲ್ಕನೆಯವನಾದ ಶ್ರುತಕರ್ಮನನ್ನೂ ಆಕೆ ಪಡೆದಳು.

೫೩. ಶತಾನೀಕನು ನಕುಲನಿಂದ ಜನಿಸಿದನು. ಈ ಐವರೂ ದ್ರೌಪದಿಯ ಮಕ್ಕಳು. ಇವರಲ್ಲದೆ ಪಾಂಡವರ ಪುತ್ರರು ಇನ್ನೂ ಆರು ಜನರುಂಟು. ಅವರೆಲ್ಲರೂ ಮಹಾರಥರೆನಿಸಿದವರು.

೫೪. ಭೀಮಸೇನನಿಂದ ಹಿಡಂಬಿಯ ಉದರದಲ್ಲಿ ಘಟೋತ್ಕಚನೆಂಬ ಪುತ್ರನು ಜನಿಸಿದನು. ಕಾಶಿಯೆಂಬವಳು ಬಲಾಢ್ಯನಾದ ಆ ಭೀಮನಿಂದ ಸರ್ವಗನೆಂಬ ಮಗನನ್ನು ಪಡೆದಳು.

೫೫. ಸಹದೇವನ ಪತ್ನಿಯಾದ ಮಾದ್ರಿಯು ಸುಹೋತ್ರನನ್ನು ಹೆತ್ತಳು. ಚೇದಿರಾಜನ ಮಗಳಾದ ಕರೇಣುಮತಿಯಲ್ಲಿ ನಕುಲನಿಂದ ನಿರಮಿತ್ರನು ಜನಿಸಿದನು.

೫೬. ಅರ್ಜುನನಿಂದ ಸುಭದ್ರೆಯಲ್ಲಿ ವೀರರಥಿಕನೆನಿಸಿದ ಅಭಿಮನ್ಯು ಕುಮಾರನು ಜನಿಸಿದನು. ಯುಧಿಷ್ಠಿರನ ಪತ್ನಿಯಾದ ದೇವಕಿಯು ಯೌಧೇಯನೆಂಬ ಪುತ್ರನನ್ನು ಪ್ರಸವಿಸಿದಳು.

ಅಭಿಮನ್ಯೋಃ ಪರೀಕ್ಷಿತ್ತು ಪುತ್ರಃ ಪರಪುರಂಜಯಃ ।
ಜನಮೇಜಯಃ ಪರೀಕ್ಷಿತಃ ಪುತ್ರಃ ಪರಮಧಾರ್ಮಿಕಃ ॥೫೭॥

ಬ್ರಹ್ಮಾಣಂ ಕಾರಯಾಮಾಸ ಮಖೇ ವಾಜಸನೇಯಕಂ ।
ಸ ವೈಶಂಪಾಯನೇನೈವ ಶಪ್ತಃ ಕಿಲ ಮಹರ್ಷಿಣಾ ॥೫೮॥

ನ ಸ್ಥಾಸ್ಯತೀಹ ದುರ್ಬುದ್ಧೇ ತವೈತದ್ವಚನಂ ಭುವಿ ।
ಯಾವತ್ ಸ್ಥಾಸ್ಯಸಿ ತ್ವಂ ಲೋಕೇ ತಾವದೇವ ಪ್ರವತ್ಸ್ಯತಿ ॥೫೯॥

ಕ್ಷತ್ರಸ್ಯ ವಿಜಯಂ ಜ್ಞಾತ್ವಾ ತತಃ ಪ್ರಭೃತಿ ಸರ್ವಶಃ ।
ಅಭಿಗಮ್ಯ ಸ್ಥಿತಾಶ್ಚೈವ ನೃಪಂ ಚ ಜನಮೇಜಯಂ ॥೬೦॥

ತತಃ ಪ್ರಭೃತಿ ಶಾಪೇನ ಕ್ಷತ್ರಿಯಸ್ಯ ತು ಯಾಜಿನಃ ।
ಉತ್ಸನ್ನಾ ಯಾಜಿನೋ ಯಜ್ಞೇ ತತಃ ಪ್ರಭೃತಿ ಸರ್ವಶಃ ॥೬೧॥

---

೫೭. ಶತ್ರುನಗರಗಳನ್ನು ಗೆಲ್ಲುವ ಪರೀಕ್ಷಿನ್ಮಹಾರಾಜನು ಅಭಿಮನ್ಯುವಿಗೆ ಪುತ್ರನಾದನು. ಪರಮಧಾರ್ಮಿಕನಾದ ಜನಮೇಜಯನು ಪರೀಕ್ಷಿತ್ತಿನ ಮಗನು.

೫೮. ಅವನು ಯಾಜ್ಞವಲ್ಕ್ಯಮಹಷಿಯನ್ನು ಯಾಗದಲ್ಲಿ ಬ್ರಹ್ಮನನ್ನಾಗಿ ವರಿಸಿದನು. ಆಗ ವೈಶಂಪಾಯನ ಮುನಿಯು ಯಾಜ್ಞವಲ್ಕ್ಯನನ್ನು ಶಪಿಸಿದನು.

೫೯. "ಎಲೈ ದುರ್ಬುದ್ಧಿಯೇ, ನೀನು ಪ್ರಚಾರಮಾಡುವ ಈ ಶುಕ್ಲಯಜು ರ್ವೇದ ಸಂಹಿತೆಯು ಭೂಮಿಯಲ್ಲಿ ಸ್ಥಿರವಾಗಿ ನಿಲ್ಲವುದಿಲ್ಲ. ಎಷ್ಟುಕಾಲ ನೀನು ಈ ಲೋಕದಲ್ಲಿ ಬದುಕಿರುವೆಯೋ ಅಷ್ಟುಕಾಲ ಮಾತ್ರವೇ ಅದೂ ಉಳಿದಿರುವುದು."

೬೦. ಆ ಬಳಿಕ ಎಲ್ಲ ಕಡೆಯಲ್ಲೂ ಕ್ಷತ್ರಿಯರು ಏಳಿಗೆಗೆ ಬರುತ್ತಿರವುದನ್ನು ತಿಳಿದು, ಯಾಜಕರು ಜನಮೇಜಯಮಹಾರಾಜನ ಬಳಿಗೆ ಬಂದು ಅವನ ಆಶ್ರಯ ದಲ್ಲಿ ನೆಲೆಸಿದರು.

೬೧. ಅಲ್ಲಿಂದ ಮೊದಲುಗೊಂಡು ವೈಶಂಪಾಯನ ಮಹರ್ಷಿಯ ಶಾಪದಿಂದ ಕ್ಷತ್ರಿಯನು ಮಾಡುವ ಯಾಗದಲ್ಲಿ ಪೌರೋಹಿತ್ಯವನ್ನು ನಡೆಸುವ ಬ್ರಾಹ್ಮಣರು ಕ್ಷೀಣಗತಿಗೆ ಬಂದರು.

**ಕ್ಷತ್ರಸ್ಯ ಯಾಜಿನಃ ಕೇಚಿಚ್ಛಾಪಾತ್ತಸ್ಯ ಮಹಾತ್ಮನಃ ।**
**ಪೌರ್ಣಮಾಸೇನ ಹವಿಷಾ ಇಷ್ಟ್ವಾ ತಸ್ಮಿನ್ ಪ್ರಜಾಪತಿಂ ।**
**ಸ ವೈಶಂಪಾಯನೇನೈವ ಪ್ರವಿಶನ್ ವಾರಿತಸ್ತತಃ ||೬೨||**

**ಪರೀಕ್ಷಿತಃ ಸುತೋಽಸೌ ವೈ ಪೌರವೋ ಜನಮೇಜಯಃ ।**
**ದ್ವಿರಶ್ವಮೇಧಮಾಹೃತ್ಯ ಮಹಾವಾಜಸನೇಯಕಃ ||೬೩||**

**ಪ್ರವರ್ತಯಿತ್ವಾ ತತ್ಸರ್ವಮೃಷಿರ್ವಾಜಸನೇಯಕಂ ।**
**ವಿವಾದೇ ಬ್ರಾಹ್ಮಣೈಃ ಸಾರ್ಧಮಭಿಶಪ್ತೋ ವನಂ ಯಯೌ ||೬೪||**

**ಜನಮೇಜಯಾಚ್ಛತಾನೀಕಸ್ತಸ್ಮಾಜ್ಜಜ್ಞೇ ಸ ವೀರ್ಯವಾನ್ ।**
**ಜನಮೇಜಯಃ ಶತಾನೀಕಂ ಪುತ್ರಂ ರಾಜ್ಯೇಽಭಿಷಿಕ್ತವಾನ್ ||೬೫||**

**ಅಥಾಶ್ವಮೇಧೇನ ತತಃ ಶತಾನೀಕಸ್ಯ ವೀರ್ಯವಾನ್ ।**
**ಜಜ್ಞೇಽಧಿಸೋಮಕೃಷ್ಣಾಖ್ಯಃ ಸಾಂಪ್ರತಂ ಯೋ ಮಹಾಯಶಾಃ ||೬೬||**

---

೬೨. ಆ ಮಹಾತ್ಮನ ಶಾಪಕ್ಕೊಳಗಾದ ಕೆಲವರು ಕ್ಷತ್ರಿಯಯಾಜಕರು ಪೌರ್ಣಮಾಸೇಷ್ಟಿಯನ್ನುಮಾಡಿ, ಬ್ರಹ್ಮನಿಗೆ ಹವಿಸ್ಸನ್ನು ಅರ್ಪಿಸಿದರು. ಯಾಜ್ಞವಲ್ಕ್ಯನು ಪ್ರವೇಶಿಸಲು, ವೈಶಂಪಾಯನನು ಅವನನ್ನು ಒಳಗೆ ಹೋಗಗೊಡಿಸಲಿಲ್ಲ ; ತಡೆದುಬಿಟ್ಟನು.

೬೩. ಶುಕ್ಲಯಜುರ್ವೇದ ಸಂಹಿತೆಯಲ್ಲಿ ಪಾರಂಗತನೂ, ಪುರುವಂಶೋತ್ಪನ್ನನೂ, ಪರೀಕ್ಷಿತ್ತಿನ ಪುತ್ರನೂ ಆದ ಜನಮೇಜಯರಾಜನು ಎರಡು ಸಾರಿ ಅಶ್ವಮೇಧಯಾಗವನ್ನು ಮಾಡಿ ಕೀರ್ತಿವಂತನಾದನು.

೬೪. ರಾಜರ್ಷಿಯಾಗಿದ್ದ ಅವನು ಶುಕ್ಲಯಜುರ್ವೇದವೆಲ್ಲವನ್ನೂ ಲೋಕದಲ್ಲಿ ನೆಲೆಗೊಳಿಸಿ, ಬ್ರಾಹ್ಮಣರೊಡನೆ ವಿವಾದ ಹುಟ್ಟಲು, ಅವರ ಶಾಪಕ್ಕೆ ಗುರಿಯಾಗಿ ವನಕ್ಕೆ ತೆರಳಿದನು.

೬೫. ಆ ಜನಮೇಜಯರಾಜನಿಗೆ ಶೂರನಾದ ಶತಾನೀಕನೆಂಬ ಮಗನು ಹುಟ್ಟಿದನು. ಜನಮೇಜಯನು ಅವನಿಗೆ ರಾಜ್ಯಾಭಿಷೇಕವನ್ನು ಮಾಡಿದನು.

೬೬. ಬಳಿಕ ವೀರನಾದ ಶತಾನೀಕನು ಅಶ್ವಮೇಧಯಾಗವನ್ನು ಮಾಡಿದನು. ಅಧಿಸೋಮಕೃಷ್ಣನೆಂಬ ಪುತ್ರನು ಅವನಿಗೆ ಜನಿಸಿದನು. ಬಹು ಕೀರ್ತಿವಂತನಾದ ಅವನೇ ಈಗ ಅರಸಾಗಿರುವನು.

ತಸ್ಮಿಞ್ಛಾಸತಿ ರಾಷ್ಟ್ರಂ ತು ಯುಷ್ಮಾಭಿರಿದಮಾಹೃತಂ।
ದುರಾಪಂ ದೀರ್ಘಸತ್ರಂ ವೈ ತ್ರೀಣಿ ವರ್ಷಾಣಿ ಪುಷ್ಕರೇ।
ವರ್ಷದ್ವಯಂ ಕುರುಕ್ಷೇತ್ರೇ ದೃಷದ್ವತ್ಯಾಂ ದ್ವಿಜೋತ್ತಮಾಃ ॥೬೭॥

॥ ಮುನಯ ಊಚುಃ ॥

ಭವಿಷ್ಯಂ ಶ್ರೋತುಮಿಚ್ಛಾಮಃ ಪ್ರಜಾನಾಂ ಲೋಮಹರ್ಷಣಂ।
ಪುರಾ ಕಿಲ ಯದೇತದ್ವೈ ವ್ಯತೀತಂ ಕೀರ್ತಿತಂ ತ್ವಯಾ ॥೬೮॥

ಯೇಷು ವೈ ಸ್ಥಾಸ್ಯತೇ ಕ್ಷತ್ರಮುತ್ಪತ್ಸ್ಯಂತೇ ನೃಪಾಶ್ಚ ಯೇ।
ತೇಷಾಮಾಯುಷ್ಪ್ರಮಾಣಂ ಚ ನಾಮತಶ್ಚೈವ ತಾನ್ನೃಪಾನ್ ॥೬೯॥

ಕೃತಯುಗಪ್ರಮಾಣಂ ಚ ತ್ರೇತಾದ್ವಾಪರಯೋಸ್ತಥಾ।
ಕಲಿಯುಗಪ್ರಮಾಣಂ ಚ ಯುಗದೋಷಂ ಯುಗಕ್ಷಯಂ ॥೭೦॥

ಸುಖದುಃಖಪ್ರಮಾಣಂ ಚ ಪ್ರಜಾದೋಷಂ ಯುಗಸ್ಯ ತು।
ಏತತ್ಸರ್ವಂ ಪ್ರಸಂಖ್ಯಾಯ ಪೃಚ್ಛತಾಂ ಬ್ರೂಹಿ ನಃ ಪ್ರಭೋ ॥೭೧॥

---

೬೭. ಅವನು ಈಗ ರಾಷ್ಟ್ರವನ್ನು ಆಳುತ್ತಿರುವುದರಿಂದಲೇ ನೀವು ಕಷ್ಟಸಾಧ್ಯವಾದ ದೀರ್ಘಸತ್ರವೆಂಬ ಅತಿದೀರ್ಘಕಾಲದ ಈ ಯಾಗವನ್ನು ಮಾಡಿದಿರಿ. ಬ್ರಾಹ್ಮಣವರ್ಯರೇ, ಪುಷ್ಕರಕ್ಷೇತ್ರದಲ್ಲಿ ಮೂರುವರ್ಷ, ಕುರುಕ್ಷೇತ್ರದಲ್ಲಿ ದೃಷದ್ವತೀ ನದಿಯ ತೀರದಲ್ಲಿ ಎರಡುವರ್ಷ ಹೀಗೆ ಐದುವರ್ಷಕಾಲ ಯಜ್ಞವು ನಡೆಯಿತು.

೬೮. ಮುನಿಗಳು ಹೇಳಿದರು.—ಮುಂದೆ ನಡೆಯಲಿರುವ ಸಂಗತಿಯನ್ನು ಕೇಳಬಯಸುತ್ತೇವೆ. ಇದುವರೆಗೆ ಹಿಂದೆ ನಡೆದು ಹೋದ ವಿಚಾರಗಳನ್ನು ನೀನು ಹೇಳಿದೆ. ಅವುಗಳು ಕೇಳಿದವರನ್ನು ಆನಂದದಲ್ಲಿ ಮುಳುಗಿಸಿ ಅವರಿಗೆ ರೋಮಾಂಚವನ್ನು ಹುಟ್ಟಿಸುವುವು.

೬೯-೭೧. ಪ್ರಭೂ, ಸೂತಾ, ಕ್ಷತ್ರಿಯಧರ್ಮವು ಯಾರಲ್ಲಿ ನೆಲೆಸುವುದು? ಯಾವಯಾವ ರಾಜರು ಜನಿಸುವರು? ಅವರ ಆಯುಷ್ಪ್ರಮಾಣವೇನು? ಅವರ ಹೆಸರುಗಳಾವುವು? ಕೃತ, ತ್ರೇತಾ, ದ್ವಾಪರ ಮತ್ತು ಕಲಿಗಳೆಂಬ ನಾಲ್ಕು ಯುಗಗಳ ಪ್ರಮಾಣವೇನು? ಕಲಿಯುಗದಲ್ಲಿ ಉಂಟಾಗುವ ದೋಷವಾವುದು? ಆ ಯುಗವು ಕೊನೆಯಾಗುವುದು ಹೇಗೆ? ಆಯಾ ಯುಗಗಳ ಸುಖದುಃಖಗಳ ಅಳತೆ, ಪ್ರಜೆಗಳಲ್ಲಿ ಕಂಡುಬರುವ ದೋಷ ಇವುಗಳ ರೀತಿಯೇನು? ಇವೆಲ್ಲವನ್ನೂ ಒಂದೊಂದಾಗಿ ನಮಗೆ ತಿಳಿಯಹೇಳು.

॥ ಸೂತ ಉವಾಚ ॥

ಯಥಾ ಮೇ ಕೀರ್ತಿತಂ ಪೂರ್ವಂ ವ್ಯಾಸೇನಾಕ್ಲಿಷ್ಟಕರ್ಮಣಾ ।
ಭಾವ್ಯಂ ಕಲಿಯುಗಂ ಚೈವ ತಥಾ ಮನ್ವಂತರಾಣಿ ಚ ॥೭೨॥

ಅನಾಗತಾನಿ ಸರ್ವಾಣಿ ಬ್ರುವತೋ ಮೇ ನಿಬೋಧತ ।
ಅತ ಊರ್ಧ್ವಂ ಪ್ರವಕ್ಷ್ಯಾಮಿ ಭವಿಷ್ಯಾ ಯೇ ನೃಪಾಸ್ತಥಾ ॥೭೩॥

ಇಕ್ಷ್ವಾಕೋರನ್ವಯೇ ಚೈವ ಪೌರವೇ ಚಾನ್ವಯೇ ತಥಾ ।
ಯೇಷು ಸಂಸ್ಥಾಸ್ಯತೇ ತಚ್ಚ ಐಡೇಕ್ಷ್ವಾಕುಕುಲಂ ಶುಭಂ ।
ತಾನ್ ಸರ್ವಾನ್ ಕೀರ್ತಯಿಷ್ಯಾಮಿ ಭವಿಷ್ಯೇ ಕಥಿತಾನ್ನೃಪಾನ್ ॥೭೪॥

ತೇಭ್ಯೋಽಪರೇಽಪಿ ಯೇತ್ವನ್ಯೇ ಹ್ಯುತ್ಪತ್ಸ್ಯಂತೇ ನೃಪಾಃ ಪುನಃ ।
ಕ್ಷತ್ರಾಃ ಪಾರಶವಾಃ ಶೂದ್ರಾಸ್ತಥಾನ್ಯೇ ಯೇ ಬಹಿಶ್ಚರಾಃ ॥೭೫॥

---

೭೨-೭೩. ಸೂತಪೌರಾಣಿಕನು ಹೇಳಿದನು.—ಸರ್ವಜ್ಞನೂ ಸರ್ವಶಕ್ತನೂ ಆದ ವ್ಯಾಸಮಹಾಮುನಿಯು ನನಗೆ ಹಿಂದೆ ತಿಳಿಸಿದ ಕ್ರಮದಲ್ಲೇ, ಮುಂದೆ ಬರಲಿರುವ ಕಲಿಯುಗ, ಇನ್ನೂ ನಡೆಯದಿರುವ ಮನ್ವಂತರಗಳು ಇವುಗಳ ವಿಷಯವನ್ನೆಲ್ಲ ನಿಮಗೀಗ ನಾನು ಹೇಳುವೆನು ಕೇಳಿರಿ. ಇನ್ನು ಮುಂದೆ ಹುಟ್ಟುವ ರಾಜರುಗಳಾರೆಂಬುದನ್ನು ಮೊದಲು ತಿಳಿಸುವೆನು.

೭೪. ಇಕ್ಷ್ವಾಕುವಂಶದಲ್ಲೂ, ಪೌರವವಂಶದಲ್ಲೂ ಕ್ಷತ್ರಿಯಧರ್ಮವು ಯಾರು ಯಾರಲ್ಲಿ ನೆಲೆಗೊಳ್ಳುವುದೋ ಆ ರಾಜರೆಲ್ಲರ ಹೆಸರನ್ನೂ ಹೇಳುವೆನು. ಶುಭಕರವೂ, ಸುಪ್ರಸಿದ್ಧವೂ ಆದ ಐಲವಂಶವನ್ನೂ, ಇಕ್ಷ್ವಾಕುವಂಶವನ್ನೂ ವರ್ಣಿಸುವೆನು. ಇವರೆಲ್ಲರೂ ಮುಂದೆ ಉತ್ಪನ್ನರಾಗತಕ್ಕ ಭೂಪಾಲಕರು.

೭೫-೭೬. ಹಿಂದೆ ಹೇಳಿದವರಲ್ಲದೆ ಇನ್ನೂ ಎಷ್ಟೋ ಜನ ರಾಜರು ಹುಟ್ಟುವರು. ಕ್ಷತ್ರರು, ಪಾರಶವರು, ಶೂದ್ರರು, ಇನ್ನೂ ಉಳಿದ ಬಹಿರ್ವರ್ಣದವರು, ಆಂಧ್ರರು, ಶಕರು, ಪುಲಿಂದರು, ಚೂಲಿಕರು, ಯವನರು, ಕೈವರ್ತರು, ಆಭೀರರು, ಶಬರರು

ಆಂಧ್ರಾಃ ಶಕಾಃ ಪುಲಿಂದಾಶ್ಚ ಚೂಲಿಕಾ ಯವನಾಸ್ತಥಾ ।
ಕೈವರ್ತಾಭೀರಶಬರಾ ಯೇ ಚಾನ್ಯೇ ಮ್ಲೇಚ್ಛಸಂಭವಾಃ ।
ಪರ್ಯಾಯತಃ ಪ್ರವಕ್ಷ್ಯಾಮಿ ನಾಮತಶ್ಚೈವ ತಾನ್ನೃಪಾನ್ ॥೭೬॥

ಅಧಿಸೋಮಕೃಷ್ಣಶ್ಚೈತೇಷಾಂ ಪ್ರಥಮಂ ವರ್ತತೇ ನೃಪಃ ।
ತಸ್ಯಾನ್ವವಾಯೇ ವಕ್ಷ್ಯಾಮಿ ಭವಿಷ್ಯೇ ಕಥಿತಾನ್ನೃಪಾನ್ ॥೭೭॥

ಅಧಿಸೋಮಕೃಷ್ಣಪುತ್ರಸ್ತು ವಿವಕ್ಷುರ್ಭವಿತಾ ನೃಪಃ ।
ಗಂಗಯಾ ತು ಹೃತೇ ತಸ್ಮಿನ್ನಗರೇ ನಾಗಸಾಹ್ವಯೇ ॥೭೮॥

ತ್ಯಕ್ತ್ವಾ ವಿವಕ್ಷುರ್ನಗರಂ ಕೌಶಾಂಬ್ಯಾಂ ತು ನಿವತ್ಸ್ಯತಿ ।
ಭವಿಷ್ಯಾಷ್ಟೌ ಸುತಾಸ್ತಸ್ಯ ಮಹಾಬಲಪರಾಕ್ರಮಾಃ ॥೭೯॥

ಭೂರಿಜ್ಯೇಷ್ಠಃ ಸುತಸ್ತಸ್ಯ ತಸ್ಯ ಚಿತ್ರರಥಃ ಸ್ಮೃತಃ ।
ಶುಚಿದ್ರವಶ್ಚಿತ್ರರಥಾದ್ವೃಷ್ಣಿಮಾಂಶ್ಚ ಶುಚಿದ್ರವಾತ್ ॥೮೦॥

ವೃಷ್ಣಿಮತಃ ಸುಷೇಣಶ್ಚ ಭವಿಷ್ಯತಿ ಶುಚಿರ್ನೃಪಃ ।
ತಸ್ಮಾತ್ಸುಷೇಣಾದ್ಭವಿತಾ ಸುನೀಥೋ ನಾಮ ಪಾರ್ಥಿವಃ ॥೮೧॥

---

ಮತ್ತು ಉಳಿದ ಮ್ಲೇಚ್ಛಸಂಭವರು ಇವರೆಲ್ಲರನ್ನೂ ಅವರವರ ಹೆಸರಿನೊಡನೆ ಕ್ರಮವಾಗಿ ಹೇಳುವೆನು.

೭೭. ಇವರೆಲ್ಲರಿಗೂ ಮೊತ್ತಮೊದಲಿನ ರಾಜನು ಅಧಿಸೋಮಕೃಷ್ಣನೆಂಬಾತನು. ಅವನ ವಂಶದಲ್ಲಿ ಹುಟ್ಟುವ ಅರಸರನ್ನು ಹೇಳುವೆನು.

೭೮. ಅಧಿಸೋಮಕೃಷ್ಣನಿಗೆ ವಿವಕ್ಷುವೆಂಬ ಪುತ್ರನು ಉದಿಸುವನು. ಅವನ ರಾಜಧಾನಿಯಾದ ಹಸ್ತಿನಾವತಿಯನ್ನು ಗಂಗಾನದಿಯು ಕೊಚ್ಚಿಸಿಬಿಡುವುದು. ಆಗ ವಿವಕ್ಷುವು ತನ್ನ ನಗರವನ್ನು ಬಿಟ್ಟು ಕೌಶಾಂಬಿಯಲ್ಲಿ ವಾಸಮಾಡುವನು.

೭೯. ಅವನಿಗೆ ಬಹುಬಲವೂ ಪರಾಕ್ರಮವೂ ಉಳ್ಳ ಎಂಟು ಜನ ಮಕ್ಕಳು ಹುಟ್ಟುವರು.

೮೦. ಅವನ ಹಿರಿಯಮಗನು ಭೂತಿ. ಅವನ ಮಗನಿಗೆ ಚಿತ್ರರಥನೆಂದು ಹೆಸರು. ಅವನಿಂದ ಶುಚಿದ್ರವನೂ, ಅವನಿಂದ ವೃಷ್ಣಿಮಂತನೂ ಉದಿಸುವರು.

೮೧. ವೃಷ್ಣಿಮಂತನಿಗೆ ಪರಿಶುದ್ಧಾತ್ಮನಾದ ಸುಷೇಣನು ಪುತ್ರನಾಗುವನು. ಅವನಿಗೆ ಸುನೀಥನೆಂಬ ರಾಜನು ಮಗನಾಗುವನು.

**ನೃಪಾತ್ಸುನೀಥಾದ್ಭವಿತಾ ನೃಚಕ್ಷುಃ ಸುಮಹಾಯಶಾಃ ।**
**ನೃಚಕ್ಷುಷಸ್ತು ದಾಯಾದೋ ಭವಿತಾ ವೈ ಸುಖೀಬಲಃ ॥೮೨॥**

**ಸುಖೀಬಲಸುತಶ್ಚಾಪಿ ಭಾವೀ ರಾಜಾ ಪರಿಪ್ಲವಃ ।**
**ಪರಿಪ್ಲವಸುತಶ್ಚಾಪಿ ಭವಿತಾ ಸುತಪಾ ನೃಪಃ ॥೮೩॥**

**ಮೇಧಾವೀ ತಸ್ಯ ದಾಯಾದೋ ಭವಿಷ್ಯತಿ ನ ಸಂಶಯಃ ।**
**ಮೇಧಾವಿನಃ ಸುತಶ್ಚಾಪಿ ಭವಿಷ್ಯತಿ ಪುರಂಜಯಃ ॥೮೪॥**

**ಉರ್ವೋ ಭಾವ್ಯಃ ಸುತಸ್ತಸ್ಯ ತಿಗ್ಮಾತ್ಮಾ ತಸ್ಯ ಚಾತ್ಮಜಃ ।**
**ತಿಗ್ಮಾದ್ಬೃಹದ್ರಥೋ ಭಾವ್ಯೋ ವಸುದಾಮಾ ಬೃಹದ್ರಥಾತ್ ॥೮೫॥**

**ವಸುದಾಮ್ನಃ ಶತಾನೀಕೋ ಭವಿಷ್ಯೋದಯನಸ್ತತಃ ।**
**ಭವಿಷ್ಯತೇ ಚೋದಯನಾದ್ವೀರೋ ರಾಜಾ ವಹೀನರಃ ॥೮೬॥**

**ವಹೀನರಾತ್ಮಜಶ್ಚೈವ ದಂಡಪಾಣಿರ್ಭವಿಷ್ಯತಿ ।**
**ದಂಡಪಾಣೇರ್ನಿರಮಿತ್ರೋ ನಿರಮಿತ್ರಾತ್ತು ಕ್ಷೇಮಕಃ ॥೮೭॥**

---

೮೨. ಸುನೀಥರಾಜನಿಗೆ ಅತಿಶಯಕೀರ್ತಿವಂತನಾದ ನೃಚಕ್ಷುವು ಉದಿಸುವನು. ಸುಖೀಬಲನೆಂಬವನು ಈ ನೃಚಕ್ಷುವಿನ ಮಗನು.

೮೩. ಸುಖೀಬಲನಿಗೆ ಪರಿಪ್ಲವನೆಂಬ ರಾಜನು ಸುತನಾಗುವನು. ಇವನಿಗೆ ಸುತಪಸ್ಸೆಂಬ ಪುತ್ರನು ಹುಟ್ಟಿ ರಾಜನಾಗುವನು.

೮೪. ಅವನಿಗೆ ಮೇಧಾವಿಯೆಂಬ ಮಗನಾಗುವನು. ಮೇಧಾವಿಗೆ ಪುರಂಜಯನೆಂಬ ಪುತ್ರನು ಹುಟ್ಟುವನು.

೮೫. ಅವನ ಮಗನನ್ನು ಉರ್ವನೆನ್ನುವರು. ಅವನಿಗೆ ತಿಗ್ಮಾತ್ಮನೆಂಬ ಪುತ್ರನು ಜನಿಸುವನು. ತಿಗ್ಮನಿಂದ ಬೃಹದ್ರಥನೂ ಅವನಿಂದ ವಸುದಾಮನೂ ಉದಿಸುವರು.

೮೬. ವಸುದಾಮನಿಗೆ ಶತಾನೀಕನೂ ಅವನಿಗೆ ಉದಯನನೂ ಮಕ್ಕಳೆನಿಸುವರು. ಉದಯನನಿಗೆ ವೀರನಾದ ವಹೀನರನೆಂಬ ರಾಜಪುತ್ರನು ಜನಿಸುವನು.

೮೭. ದಂಡಪಾಣಿಯೆಂಬವನು ವಹೀನರನಿಗೆ ಪುತ್ರನಾಗಿ ಹುಟ್ಟುವನು. ಅವನಿಂದ ನಿರಮಿತ್ರನೂ, ನಿರಮಿತ್ರನಿಂದ ಕ್ಷೇಮಕನೂ ಜನಿಸುವರು.

ಅತ್ರಾನುವಂಶಶ್ಲೋಕೋಽಯಂ ಗೀತೋ ವಿಪ್ರೈಃ ಪುರಾತನೈಃ ।
ಬೃಹತ್‌ಕ್ಷತ್ರಸ್ಯ ಯೋ ಯೋನಿರ್ವಂಶೋ ದೇವರ್ಷಿಸತ್ಕೃತಃ ।
ಕ್ಷೇಮಕಂ ಪ್ರಾಪ್ಯ ರಾಜಾನಂ ಸಂಸ್ಥಾಸ್ಯತಿ ಕಲೌ ಯುಗೇ ॥೮೮॥

ಇತ್ಯೇಷ ಪೌರವೋ ವಂಶೋ ಯಥಾವದಿಹ ಕೀರ್ತಿತಃ ।
ಧೀಮತಃ ಪಾಂಡುಪುತ್ರಸ್ಯ ಚಾರ್ಜುನಸ್ಯ ಮಹಾತ್ಮನಃ ॥೮೯॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸೋಮವಂಶೇ
ಪೂರುವಂಶಾನುಕೀರ್ತನಂ ನಾಮ ಪಂಚಾಶತ್ತಮೋಽಧ್ಯಾಯಃ

---

೮೮. ಈ ವಂಶವನ್ನು ಕುರಿತ ಶ್ಲೋಕವೊಂದನ್ನು ಪುರಾತನರಾದ ಬ್ರಾಹ್ಮಣರು ಹೇಳುವರು. ದೇವತೆಗಳಿಂದಲೂ ಋಷಿಗಳಿಂದಲೂ ಗೌರವವನ್ನು ಪಡೆದ ಬೃಹತ್‌ಕ್ಷತ್ರನ ವಂಶವು ಬೆಳೆಬೆಳೆದು ಕಲಿಯುಗವು ಬರಲು ಕ್ಷೇಮಕರಾಜನಲ್ಲಿ ನಿಲ್ಲುವುದು.

೮೯. ಪೂರುವಿನ ವಂಶವನ್ನು ಯಥಾವತ್ತಾಗಿ ವರ್ಣಿಸಿದೆನು. ಹಾಗೆಯೇ ಪ್ರಾಜ್ಞನೂ, ಪಾಂಡುಪುತ್ರನೂ, ಮಹಾತ್ಮನೂ ಆದ ಅರ್ಜುನನ ಸಂತತಿಯನ್ನೂ ತಿಳಿಸಿದುದಾಯಿತು.

## ಅಧ್ಯಾಯದ ಸಾರಾಂಶ

ಅಜಮಿಾಢನಿಗೆ ಇಲಿನಿಯೆಂಬ ಪತ್ನಿಯ ಜಠರದಲ್ಲಿ ನೀಲನೆಂಬ ಮಹಾರಾಜನು ಜನಿಸಿದನು. ಇದೇ ವಂಶದಲ್ಲೇ ಮುಂದೆ ಕುರುಭೂಪಾಲನು ಉದಿಸಿದನು. ಇವನು ಯಜ್ಞಕ್ಕಾಗಿ ಭೂಶೋಧನೆ ಮಾಡಲೆಳಸಿ, ಎಷ್ಟೋ ವರ್ಷಗಳ ಕಾಲ ಯಜ್ಞಭೂಮಿಯನ್ನು ಉಳುತ್ತಿದ್ದನು. ಇವನು ಯಾಗಮಾಡಿದರೆ ತನ್ನ ಪದವಿಗೆ ಎಲ್ಲಿ ಲೋಪ ಬಂದೀತೋ ಎಂದು ಹೆದರಿ, ದೇವೇಂದ್ರನು ಇವನಿಗೆ ವರವನ್ನು ಕರುಣಿಸಿದನು. ಅದರಿಂದ ಕುರುಕ್ಷೇತ್ರವು ಪ್ರಯಾಗವನ್ನು ಮಿಾರಿಸಿದ ಪುಣ್ಯಸ್ಥಲವಾಯಿತು. ಇವರ ವಂಶದವರಿಗೆಲ್ಲ ಕೌರವರೆಂಬ ಪ್ರಖ್ಯಾತಿ ಬಂದಿತು.

ಬೃಹದ್ರಥರಾಜನ ಪತ್ನಿಯು ಗರ್ಭಿಣಿಯಾಗಿದ್ದು, ಒಂದು ದೇಹದ ಎರಡು ಹೋಳುಗಳನ್ನು ಹೆತ್ತಳು. ಜರೆಯೆಂಬ ರಾಕ್ಷಸಿಯು ಅವೆರಡನ್ನೂ ಕೂಡಿಸಲು ಮಗುವು ಬದುಕಿಕೊಂಡಿತು. ಆದುದರಿಂದ ಅದಕ್ಕೆ ಜರಾಸಂಧನೆಂದು ಹೆಸರಾಯಿತು.

ಪ್ರತೀಪನೆಂಬ ರಾಜನಿಗೆ ದೇವಾಪಿ, ಶಂತನು, ಬಾಹ್ಲೀಕ ಎಂಬ ಮೂವರು ಪುತ್ರರಾದರು. ದೇವಾಪಿಯು ಕುಷ್ಠರೋಗಿಯಾಗಿದ್ದುದರಿಂದ ಪ್ರಜೆಗಳು ಅವನನ್ನು ಗೌರವಿಸಲಿಲ್ಲ. ಅವನು ಕಾಡಿಗೆ ಹೋಗಿ ಮುನಿಯಾದನು.

ಶಂತನುವಿಗೆ ಮಹಾಭಿಷಕ್ಕೆಂದು ಮತ್ತೊಂದು ಹೆಸರು. ಯಾವ ರೋಗಿಯಾಗಲಿ ಇವನು ಮುಟ್ಟಿದರೆ ಸಾಕು; ಕೂಡಲೆ ತರುಣನಾಗುತ್ತಿದ್ದನು. ಇವನ ವಂಶದಲ್ಲೇ ಧೃತರಾಷ್ಟ್ರ, ಪಾಂಡು ಮೊದಲಾದವರೆಲ್ಲ ಜನಿಸಿದರು.

ಅಭಿಮನ್ಯುವಿನ ಪೌತ್ರನಾದ ಜನಮೇಜಯರಾಜನು ಶುಕ್ಲಯಜುರ್ವೇದ ಸಂಹಿತೆಗೆ ವಿಶೇಷವಾಗಿ ಪ್ರೋತ್ಸಾಹಕೊಟ್ಟನು. ಅದರ ಫಲವಾಗಿ ಅವನು ಬ್ರಾಹ್ಮಣರ ಶಾಪಕ್ಕೆ ಗುರಿಯಾಗಿ ತನ್ನ ಮಗನಾದ ಶತಾನೀಕನಿಗೆ ರಾಜ್ಯವನ್ನೊಪ್ಪಿಸಿ ವನಕ್ಕೆ ತೆರಳಿದನು.

ಪೌರವವಂಶದಲ್ಲಿ ಮುಂದೆ ಹಲವರು ರಾಜರು ಹುಟ್ಟುವರು. ಅವರು ಆ ವಂಶದ ಕೀರ್ತಿಯನ್ನು ಹೆಚ್ಚಿಸಿ ಅದನ್ನು ನೆಲೆಗೊಳಿಸುವರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಸೋಮವಂಶವರ್ಣನದೊಳಗೆ ಪೂರುವಂಶ
ವರ್ಣನವೆಂಬ ಐವತ್ತನೆಯ ಅಧ್ಯಾಯವು ಮುಗಿದುದು

---

ಮೊದಲನೆಯ ಸಂಪುಟವು ಸಮಾಪ್ತವಾಯಿತು



ಶ್ರೀನಿವಾಸ್ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.